# ಸಂಸ್ಕೃತ ಸಾಹಿತ್ಯ ಚರಿತ್ರೆ

ಎಸ್. ಸಂಪತ್ತೈಂಗಾರ್

# ಸಂಸ್ಕೃತ ಸಾಹಿತ್ಯ ಚರಿತ್ರೆ

ಎಸ್. ಸಂಪತ್ತ್ಯೈಂಗಾರ್ ಎಂ.ಎ.

ಹಂಸಧ್ವನಿ ಪ್ರಕಾಶನ
ರಾಜಾಜಿನಗರ, ಬೆಂಗಳೂರು—10

Samskrutha Sahitya Charitre—by S. Sampath Iyengar M.A., Published by Hamsa Dhwani Prakashana, 599, 75th A Cross, Rajajinagar, Bangalore-10.

First Edition : 1992

Copies : 1000





ಸಂಪಾದಕ : ಸು. ರಂಗಸ್ವಾಮಿ

ಬೆಲೆ : ರೂ. 60-00 ಸಾದಾ
ರೂ. 80-00 ಕ್ಯಾಲಿಕೊ

DTP by Byte Tracks
Bangalore-25

# ಮುನ್ನುಡಿ

ಈ ಗ್ರಂಥವನ್ನು ವಿದ್ಯಾರ್ಥಿಗಳ ದೃಷ್ಟಿಯಿಂದಲೂ ಸಂಸ್ಕೃತ ಅಭಿಮಾನಿಗಳಿಗಾಗಿ ಸಂಸ್ಕೃತ ಸಾಹಿತ್ಯದ ಇತಿಹಾಸವನ್ನು ತಿಳಿದುಕೊಳ್ಳಲು ಅಪೇಕ್ಷಿಸುವವರ ಪ್ರಯೋಜನ ದೃಷ್ಟಿಯಿಂದಲೂ ರಚಿಸಲ್ಪಟ್ಟಿದೆ.

ಈ ಗ್ರಂಥದಲ್ಲಿ ವೈದಿಕ ಸಾಹಿತ್ಯ, ಬ್ರಾಹ್ಮಣ ಸಾಹಿತ್ಯ, ಇತಿಹಾಸ, ಪುರಾಣ ಸಾಹಿತ್ಯ, ಶಾಸ್ತ್ರ ಸಾಹಿತ್ಯ, ದರ್ಶನ ಸಾಹಿತ್ಯ ಇತ್ಯಾದಿ ವಿಷಯಗಳ ಬಗ್ಗೆ ವ್ಯಾಪಕವಾಗಿ ಹಾಗೂ ಕೂಲಂಕುಷವಾಗಿ ವಿಷಯ ವಿವೇಚನೆ ಮಾಡಲಾಗಿದೆ. ಉಪಲಬ್ಧವಿರುವ ಕೆಲವು ಗ್ರಂಥಗಳಲ್ಲಿ ಕೇವಲ ಲೌಕಿಕಸಾಹಿತ್ಯ ಪರಿಚಯವಷ್ಟೇ ನಮಗೆ ದೊರೆಯುತ್ತದೆ. ಇನ್ನು ಕೆಲವು ಗ್ರಂಥಗಳಲ್ಲಿ ಕೇವಲ ವೈದಿಕ ಸಾಹಿತ್ಯ ಪರಿಚಯ ಮಾತ್ರ ದೊರೆಯುತ್ತದೆ. ಆದರೆ ಈ ಗ್ರಂಥದಲ್ಲಿ ಒಂದು ಕಡೆ ಸಮಗ್ರ ವೈದಿಕ-ಲೌಕಿಕ-ದರ್ಶನ ಸಾಹಿತ್ಯದ ವಿಷಯ ವಿವೇಚನೆ ಮಾಡಿರುವುದು ಗಮನಾರ್ಹವಾಗಿದೆ.

ಹೆಚ್ಚು ಹೆಚ್ಚು ವಿದ್ಯಾರ್ಥಿಗಳು ಹಾಗೂ ಸಂಸ್ಕೃತಾಭಿಮಾನಿಗಳು ಈ ಗ್ರಂಥದ ಉಪಯೋಗ ಪಡೆಯಲೆಂದು ಹಾರೈಸುತ್ತೇನೆ. ಈ ಗ್ರಂಥ ಪ್ರಕಟಣೆಯ ಸಂದರ್ಭದಲ್ಲಿ ಶ್ರೀ ಬಿ. ಗೋ. ರಮೇಶ್ ಅವರು ಪ್ರಕಾಶಕರಿಗೆ ನೀಡಿದ ಸಹಕಾರವನ್ನು ಮರೆಯುವಂತಿಲ್ಲ.

**ಡಾ. ಎಸ್. ರಂಗನಾಥ್.**

# ವಿಷಯ ಸೂಚಿ

## ಮೊದಲನೇ ಭಾಗ



## ಎರಡನೇ ಭಾಗ



## ಮೂರನೇ ಭಾಗ

# ಪ್ರಸ್ತಾವನೆ (INTRODUCTION)

ಕಳೆದ ಕೆಲವು ವರ್ಷಗಳಿಂದಲೂ ಸಂಸ್ಕೃತ ವಿದ್ವನ್ಮಧ್ಯಮ ಪರೀಕ್ಷೆಯಲ್ಲಿ ಪರೀಕ್ಷಕನಾಗಿ ನೋಡಿರುವಲ್ಲಿ ಕೇವಲ ಸಂಸ್ಕೃತವನ್ನೇ ಓದುತ್ತಿರುವ ವಿದ್ಯಾರ್ಥಿಗಳಲ್ಲಿ ಈ ಕಾಲದಲ್ಲೂ ಚಾರಿತ್ರಿಕ ದೃಷ್ಟಿಯು ಬೆಳೆಯದೆ ಸಂಸ್ಕೃತ ಸಾಹಿತ್ಯ ವಿಷಯದಲ್ಲಿ ಪ್ರಾಚೀನದಲ್ಲಿದ್ದು ನಾನು ವಿದ್ಯಾರ್ಥಿದೆಸೆಯಲ್ಲಿ ಕೇಳಿದ್ದ ಭಾವನೆಗಳ ಹೊರತಾಗಿ ಹೆಚ್ಚಾಗಿ ವಿಕಾಸವನ್ನು ಹೊಂದದೆ ಇರುವುದು ಕಂಡು ಬಂದಿತು. ಇದು ಅವರ ಮೌಢ್ಯವೆನ್ನುವುದಕ್ಕಿಂತಲೂ ಅವರಿಗೆ ತಿಳುವಳಿಕೆ ಕೊಡುವ ಗ್ರಂಥಗಳಿಲ್ಲದಿರುವುದೇ ಕಾರಣವೆಂದು ನಿಸ್ಸಂಶಯವಾಗಿ ಹೇಳಬಹುದು. ಇಂಗ್ಲೀಷು ಕಾಲೇಜುಗಳಲ್ಲಿ ಸಂಸ್ಕೃತವನ್ನು ಓದುವ ವಿದ್ಯಾರ್ಥಿಗಳಿಗೆ ಇಂಗ್ಲೀಷು ಭಾಷಾಜ್ಞಾನವಿದ್ದರೂ ಈಗಿರುವ ಇಂಗ್ಲೀಷ್ ಗ್ರಂಥಗಳಿಂದ ವಿಷಯ ಸಂಗ್ರಹಣಮಾಡಿ ಒಂದು ನಿರ್ದಿಷ್ಟ ಆಕಾರದಲ್ಲಿ ಜ್ಞಾನವನ್ನು ಸಂಪಾದಿಸುವುದು ಕಠಿಣವಾಗಿದೆ ಎಂದು ಕಂಡುಬಂದು ಡಾ. ಕುಮುದರಂಜನ್ ಎಂ.ಎ ಅವರು 1958ರಲ್ಲಿ ಸಂಗ್ರಹವನ್ನು A Short history of sanskrit literature ಎನ್ನುವ ಗ್ರಂಥದಲ್ಲಿ ಕೊಟ್ಟಿರುವರು. ಇದೂ ಕೂಡ ಪರೀಕ್ಷಾ ದೃಷ್ಟಿಯಿಂದ ಉಪಯುಕ್ತವಾಗಿ ಕಂಡುಬಂದಿಲ್ಲ. ಆದ್ದರಿಂದ ಇದೇ ಪಾಠವನ್ನು ಹೇಳುತ್ತಿರುವ ನನಗೆ ಮಿತ್ರರಿಂದ ಸಲಹೆ ಬಂದುದರಿಂದ ವಿದ್ಯಾರ್ಥಿಗಳ ದೃಷ್ಟಿಯಿಂದಲೂ, ಸಂಸ್ಕೃತಾಭಿಮಾನಿಗಳಾಗಿ ಸಂಸ್ಕೃತ ಸಾಹಿತ್ಯದ ಇತಿಹಾಸವನ್ನು ತಿಳಿದುಕೊಳ್ಳಲು ಅಪೇಕ್ಷಿಸುವವರ ಪ್ರಯೋಜನ ದೃಷ್ಟಿಯಿಂದಲೂ, ಈ ಗ್ರಂಥವನ್ನು ಕೊಟ್ಟಿರುತ್ತೇನೆ.

ಇದು ಕೇವಲ ವಿದ್ವನ್ಮಧ್ಯಮ ಮತ್ತು ಅಲಂಕಾರ ಉತ್ತಮ ವಿದ್ಯಾರ್ಥಿಗಳಿಗೆ ಸೀಮಿತವಾಗಿಲ್ಲ. ಇತರರಿಗೂ ಪ್ರಯೋಜನವುಂಟು. ವ್ಯಾಕರಣ ಮತ್ತು ತರ್ಕ ಸಾಹಿತ್ಯಗಳ ವಿಮರ್ಶೆಯನ್ನು ಎರಡನೇ ಮತ್ತು ಮೂರನೇ ಭಾಗದಲ್ಲಿ ಕೊಡಲಾಗಿದೆ.

ಇಲ್ಲಿ ಕೇವಲ ಸಂಸ್ಕೃತ ವಿದ್ಯಾರ್ಥಿಗಳಿಗೂ ಮತ್ತು ವಿದ್ವಾಂಸರಿಗೂ ಒಂದು ಮಾತು ಅವಶ್ಯವೆಂದು ಕಾಣುತ್ತದೆ. ಪ್ರಾಚೀನ ವಿದ್ಯಾಭ್ಯಾಸ ಕ್ರಮದಲ್ಲಿ ಆಳವಾದ ಜ್ಞಾನವನ್ನು ಸಂಪಾದಿಸಬಹುದು. ಆದರೆ ಅದಕ್ಕೆ ವೈಶಾಲ್ಯವು ಬಾರದಿದ್ದರೆ, ಕೆಲವು ಮೂಢಭಾವನೆಗಳು ಸಂಕುಚಿತ ಮನೋಧರ್ಮವು ಅದರೊಡನೆ ಬರುವುದು ಅನಿವಾರ್ಯವಾಗಿದೆ. ಇದನ್ನು ಅನೇಕ ಪಂಡಿತರು ಮನಗಂಡಂತೆ ತೋರುವುದಿಲ್ಲ. ನಮ್ಮಲ್ಲಿ ಚಾರಿತ್ರಿಕ ದೃಷ್ಟಿಯು ಬೆಳೆಯದಿರಲು ಅನೇಕ ಸತ್ಕಾರಣಗಳಿದ್ದರೂ, ಈಗ ಅಂತಹ ಜ್ಞಾನ ಸಂಪಾದನೆಗೆ ಅವಕಾಶವು ಸುಲಭವಾಗಿ ಸಿಗುವುದರಿಂದ ಅದರಿಂದ ನಮ್ಮ ಆಳವಾದ ಜ್ಞಾನವನ್ನು ಸರ್ವವ್ಯಾಪಿಯಾಗಿ ಮಾಡಿಕೊಳ್ಳಲು ಅವಕಾಶವಿದೆ. ನಮ್ಮ ಸಂಸ್ಕೃತಿಯು ಅತಿ ಪ್ರಾಚೀನ ಕಾಲದಿಂದಲೂ ಹೇಗೆ ಬೆಳೆದು ಬಂದಿದೆ ಎಂದು ತಿಳಿಯಲು ನಮ್ಮ ದೇಶದ ಚರಿತ್ರೆಯನ್ನು ಸ್ಥೂಲವಾಗಿಯಾದರೂ ತಿಳಿಯಲೇ ಬೇಕು.

ನಮ್ಮ ಹಿಂದೂ ದೇಶವು ಕ್ರಿ.ಪೂ. 5000ವರ್ಷಗಳಿಂದಲೂ ಉನ್ನತ ಮಟ್ಟದ ನಾಗರೀಕತೆಯನ್ನು ಕಾಪಾಡಿಕೊಂಡು ಬರುತ್ತಿರುವುದಕ್ಕೆ ಈಗ ನಮಗೆ ಲಭ್ಯವಾಗಿರುವ ಸಿಂಧು ನದೀ ತಪ್ಪಲಲ್ಲಿ ಸಿಕ್ಕಿರುವ ಮಹೆಂಜೋದಾರೊ ಮತ್ತು ಹರಪ್ಪ ಅವಶೇಷಗಳೇ ಸಾಕ್ಷಿಗಳಾಗಿವೆ. ಇದಕ್ಕಿಂತಲೂ

ಪ್ರಾಚೀನವಾದ ಸಂಸ್ಕೃತಿಯು ಇದ್ದುದಕ್ಕೆ ನಿದರ್ಶನವಿಲ್ಲ. ಪ್ರೊ.ವೆಬರ್ ಹೇಳಿರುವಂತೆ ನಮ್ಮ ವೇದವೇ ಅತಿ ಪ್ರಾಚೀನ ಗ್ರಂಥ. ಇದನ್ನು ನಾವು ಅಪೌರುಷೇಯವೆಂದು ನಂಬಿದ್ದರೂ, ನಾಗರೀಕರಲ್ಲಿ ನಾವೇ ಮೊದಲನೆಯವರೆಂದು ಸಾರುತ್ತಿರುವ ಈ ವೇದಗಳಿಗೆ ಕಾಲ ನಿರ್ದೇಶ ಮಾಡಿ ವಿಮರ್ಶಿಸುವುದರಿಂದ ಯಾವ ದೋಷವೂ ಬರಲಾರದು. ಕ್ರಿ.ಪೂ 4000 ವರ್ಷಕ್ಕೆ ಹಿಂದಿನದು ನಮ್ಮ ವೇದ ಎಂದು ಸಿದ್ಧವಾಗಿದೆ ಕ್ರಿ. ಪೂ. 3000 ವರ್ಷಗಳ ಅಂತರದಲ್ಲಿ ಪರ್ಷಿಯಾ ಮತ್ತು ಅದರ ಸುತ್ತಮುತ್ತಲು ಪ್ರದೇಶಗಳು ಒಂದು ಜಲಪ್ರಳಯವು ಮುಳುಗಿಸಿದ ವಿಷಯವು ನಿಶ್ಚಿತವಾಗಿ, ಅದು ವೇದದಲ್ಲಿ ನಮೂದಿಸಲ್ಪಡದೇ ಇರುವುದರಿಂದ, ಆ ಕಾಲಕ್ಕಿಂತಲೂ ಅತಿ ಪ್ರಾಚೀನ ನಮ್ಮ ವೇದ ಎನ್ನುವುದನ್ನು ನಿಷ್ಪಕ್ಷಪಾತಿಗಳೆಲ್ಲರೂ ಒಪ್ಪಿರುವರು. ಆ ಕ್ರಿ. ಪೂ. 4000 ವರ್ಷಗಳಿಂದ ಬುದ್ಧನ ಕಾಲದವರಿಗೂ ಯಾವ ಚಾರಿತ್ರಕ ವಿಷಯವೂ ನಮಗೆ ತಿಳಿಯದು. ನಮ್ಮ ಪ್ರಾಚೀನ ಸಂಸ್ಕೃತಿಯು ಬೆಳೆದು ಬಂದದ್ದರಲ್ಲಿ ಯಾವುದೋ ದೋಷವು ಇದ್ದುದರಿಂದಲೇ, ಬುದ್ಧ ಸಂಪ್ರದಾಯವು ಏಳಲು ಅವಕಾಶವಾಯಿತು. ಅದರೊಡನೆ ಜೈನ ಸಿದ್ಧಾಂತವೂ ಎದ್ದಿತು. ಬುದ್ಧನ ಕಾಲ ಕ್ರಿ. ಪೂ. 563-483; ಜೈನ ಸಿದ್ಧಾಂತದ ಮಹಾವೀರನ ಕಾಲ ಕ್ರಿ. ಪೂ. 540-468. ಇಲ್ಲಿಂದಲೇ ನಮ್ಮ ಚರಿತ್ರೆಯು ಪ್ರಾಮಾಣಿಕವಾಗಿ ತಿಳಿದಿದೆ.

ಕ್ರಿ. ಪೂ. 600-325ವರಿಗೂ ನಮ್ಮ ದೇಶವು ಅನೇಕ ಚಿಕ್ಕ ಚಿಕ್ಕ ರಾಜ್ಯಗಳಾಗಿ ಒಡೆದಿತ್ತು. ಕಪಿಲವಸ್ತುವಿನಲ್ಲಿ ಶಾಕ್ಯರು, ವೈಶಾಲಿಯಲ್ಲಿ ಲಿಚ್ಛಗಳು ಇವರಲ್ಲಿ ಪ್ರಬಲರಿದ್ದರು. ಇವರಲ್ಲದೆ ಅಂಗ, ಕೋಸಲ, ವಾತ್ಸ, ಅವಂತಿ, ಗಾಂಧಾರ, ಮಹಾರಾಷ್ಟ್ರ ಮತ್ತು ಕಳಿಂಗ ದೇಶಗಳಿದ್ದವು. ಬೌದ್ಧ ಮತ್ತು ಜೈನ ಪ್ರಬಲ ಕಾಲದಲ್ಲಿ ಸಂಸ್ಕೃತ ಸಾಹಿತ್ಯವು ಬೆಳೆಯಲು ಅಡ್ಡಿ ಆತಂಕಗಳು ಹೆಚ್ಚಾಗಿದ್ದವು. ಈ ಕಾಲದಲ್ಲೆ ಅಲೆಕ್ಸಾಂಡರನ ದಂಡಯಾತ್ರೆಯಾಗಿ ದೇಶದಲ್ಲಿ ಕೋಲಾಹಲವೆದ್ದಿತು. ಕ್ರಿ.ಪೂ.326ರಲ್ಲಿ ಇವನು ಸತ್ತ ಮೇಲೆ ಇವನ ದಳಕ್ಕೆ ಸೇರಿದ್ದ ಸೆಲ್ಯೂಕಸನು ಸಿರಿಯಾ ಬಾಕ್ಟ್ರೀರಿಯಾವರೆವಿಗೂ ಏಕಛತ್ರಾಧಿಪತ್ಯವನ್ನು ಸ್ವಲ್ಪಕಾಲ ನಡೆಸಿದನು. ಆಗ ಚಂದ್ರಗುಪ್ತನು ಪ್ರಬಲನಾಗಿ ಅವನ ಬಲವನ್ನು ಕುಂದಿಸಿದ್ದಲ್ಲದೆ ಅವನ ಮಗಳನ್ನು ಮದುವೆಯಾಗಿ, ಅವನೊಡನೆ ಸ್ನೇಹವನ್ನು ಬೆಳೆಸಿಕೊಂಡನು. ಈ ಸೆಲ್ಯೂಕಸ್ಸನ ಪ್ರತಿನಿಧಿಯಾಗಿ ಮೆಗಾಸ್ತನೀಸನು ಚಂದ್ರಗುಪ್ತನ ಆಸ್ಥಾನದಲ್ಲಿದ್ದನು. ಇವನ ರಾಜ್ಯಭಾರದ ವಿಷಯದಲ್ಲಿ ತನ್ನ `ಇಂಡಿಕಾ`ಎನ್ನುವ ಪುಸ್ತಕವನ್ನು ಬರೆದಿರುವನು. ಚಾರಿತ್ರಕವಾಗಿ ಇದು ಬೆಲೆ ಬಾಳುವ ಪುಸ್ತಕವಾಗಿದೆ. ಚಂದ್ರಗುಪ್ತನ ಮಗ ಬಿಂದುಸಾರ ಅವನು ಸ್ವಲ್ಪಕಾಲ ರಾಜ್ಯವಾಳಿದನು. ಇವನ ಮಗನೇ ಅಶೋಕ. ಅವನ ಕಾಲ ಕ್ರಿ. ಪೂ. 273-232. ಇವನ ಕಾಲದಲ್ಲೇ ಬೌದ್ಧದರ್ಶನಕ್ಕೆ ಬಹಳ ಪ್ರಾಬಲ್ಯವಿದ್ದುದು. ಸಂಸ್ಕೃತಕ್ಕೆ ಸ್ವಲ್ಪವೂ ಉತ್ತೇಜನವಿರಲಿಲ್ಲವೆನ್ನಬಹುದು. ಇವನಾದಮೇಲೆ ಗ್ರೀಕರ ಚಿಕ್ಕ ಚಿಕ್ಕ ತುಂಡುಗಳ ಬಂದು ಇಲ್ಲಿ ನೆಲೆಸಲು ಪ್ರಯತ್ನಿಸಿದವು. ಇದು ಕ್ರಿ. ಪೂ.140 ರ ವರೆಗೂ ನಡೆಯಿತು. ಇವರಾದ ಮೇಲೆ ಶಕರು (scyithians)ಪಂಜಾಬನ್ನು ಮುತ್ತಿದರು. ಕುಶಾನರೂ ಪ್ರವೇಶಿಸಿ ಪ್ರಬಲರಾದರು. ಇವರಿಬ್ಬರ ಮಧ್ಯವರ್ತಿಕಾಲದಲ್ಲೇ ಪುಷ್ಯಮಿತ್ರನು ತನ್ನ ದೊರೆಯನ್ನು ಕೊಂದು ಚಕ್ರವರ್ತಿಯಾದನು. ಇವನ ಮಗನೇ ಅಗ್ನಿಮಿತ್ರ. ಪುಷ್ಯಮಿತ್ರನ ಕಾಲದಲ್ಲಿ ಸಂಸ್ಕೃತಕ್ಕೂ ಬ್ರಾಹ್ಮಣಕ್ಕೂ ಉತ್ತೇಜನ ಸಿಕ್ಕಿ ಶಾಸ್ತ್ರ ಗ್ರಂಥಗಳು ಏಳಲು ಅವಕಾಶವಾಯಿತು. ಪತಂಜಲಿಯು ಮಹಾಭಾಷ್ಯವನ್ನು ಬರೆದಿದ್ದು ಈ ಕಾಲದಲ್ಲೇ. ಕಾನಿಷ್ಕನು ಪರದೇಶದವನಾದರೂ ಬೌದ್ಧನಾಗಿ

ಆಸಂಪ್ರದಾಯಕ್ಕೆ ಬಹಳ ಉತ್ತೇಜನಕೊಟ್ಟನು. ಇವನ ಕಾಲ ಕ್ರಿ.ಶ.1 ನೇ ಶತಮಾನ ಈಗಾಗಲೇ ಸಂಸ್ಕೃತಕ್ಕೆ ಪ್ರಾಬಲ್ಯ ಬಂದುದರಿಂದ ಅಶ್ವಘೋಷನು ಇವನ ಆಸ್ಥಾನ ಪಂಡಿತನಾಗಿ ಸಂಸ್ಕೃತದಲ್ಲೇ ಬೌದ್ಧ ಸಂಪ್ರದಾಯಕ್ಕೆ ಉಪಯುಕ್ತವಾದ ಗ್ರಂಥಗಳನ್ನು ಬರೆದನು. ಕಾನಿಷ್ಕನಿಗೆ ಹಿಂದೆಯೇ ಪ್ರಬಲ ವಿಕ್ರಯಾದಿತ್ಯನು ಹೊಸ ಶಕೆಯನ್ನು ಪ್ರಾರಂಭಿಸಿ ಸಂಸ್ಕೃತಕ್ಕೆ ಉತ್ತೇಜನವನ್ನು ಕೊಟ್ಟಿದ್ದನು. ಇವನ ಆಸ್ಥಾನದಲ್ಲಿಯೇ ಇದ್ದುದು ಕಾಳಿದಾಸ. ಇವನ ಹಿಂದೆಯೇ ಭಾಸನು 14 ನಾಟಕಗಳನ್ನು ಬರೆದಿದ್ದನು. ಕ್ರಿ.ಶ 1ನೇ ಶತಮಾನದಲ್ಲೇ ಗುಣಾಢ್ಯನು ಬೃಹತ್ಕಥಾನವನ್ನು ಬರೆದದ್ದು.

ವಿಕ್ರಮಾದಿತ್ಯ ಮತ್ತು ಕಾನಿಷ್ಕನ ಕಾಲವಾದ ಮೇಲೆ ನಾಗರ ಪ್ರಾಬಲ್ಯವು ಜಾಸ್ತಿಯಾಯಿತು. ಅವರಾದ ಮೇಲೆ ಚಂದ್ರಗುಪ್ತನು ಸಾಮ್ರಾಜ್ಯ ಸ್ಥಾಪನೆಯನ್ನು ಮಾಡಿ 10 ವರ್ಷಕಾಲ ಆಳಿದನು (ಕ್ರಿ.ಶ 320-330) ಇವನ ಮಗ ಸಮುದ್ರಗುಪ್ತನು 335-375 ಬಹಳ ಪ್ರಬಲ ದೊರೆ. ರಾಜ್ಯವನ್ನು ಬಹಳವಾಗಿ ವಿಸ್ತರಿಸಿದನು. ಅಶ್ವಮೇಧ ಯಾಗವನ್ನು ಮಾಡಿದನು. ಈಗಿನ ಅಲಹಾಬಾದಿನಲ್ಲಿ ಇವನ ಒಂದು ಸ್ತಂಭವಿದೆ. ಇವನ ಕಾಲದಲ್ಲೇ ಅಜಂತ, ಸರ್ನ್ನಾರ್ ಮತ್ತು ನಳಂದ ವಿಶ್ವವಿದ್ಯಾಲಯಗಳು ಸ್ಥಾಪಿತವಾಗಿ ಸಂಸ್ಕೃತಾಭ್ಯಾಸಕ್ಕೆ ಪೂರ್ಣಬೆಂಬಲ ಸಿಕ್ಕಿತು. ಇವನ ಮಗ IIಚಂದ್ರಗುಪ್ತ(375-413). ಇವನ ಕಾಲದಲ್ಲೇ ಜೈನಯಾತ್ರಿಕ ಫಾಹಿಯಾನ್ ಬಂದು ಆಗಿನ ಸ್ಥಿತಿಗತಿಗಳನ್ನು ಚೆನ್ನಾಗಿ ವರ್ಣಿಸಿರುವನು. II ಚಂದ್ರಗುಪ್ತನ ಮಗನೇ ಕುಮಾರಗುಪ್ತ. ಇವನ ರಾಜ್ಯಭಾರ ಕ್ರಿ.ಶ 490ರ ವರೆಗೂ ನಡೆಯಿತು. ಇವನಾದ ಮೇಲೆ ಕ್ಷೀಣವಾಗುತ್ತಾ ಬಂದರೂ 540ವರೆಗೂ ಬಂಗಾಳದಲ್ಲಿ ಈ ಸಂತತಿಯು ಇತ್ತು. ಹೂಣರು ಪ್ರಬಲರಾಗಿ ಪರ್ಶಿಯಾದಿಂದ ಬಂದರು. ತೋರಮಾನನು ಅವನ ದೊರೆ. ಇವನ ಕಾಲ 500-528. ಇವನನ್ನು ಓಡಿಸಿದವನು ಹರ್ಷವರ್ಧನ ತಂದೆ ಪ್ರಭಾಕರವರ್ಧನ. ಈ ಕಾಲದಲ್ಲೇ ಸಿದ್ಧರಾದ ಆರ್ಯಭಟ್ಟ (476) ವರಾಹಮಿಹಿರ (505-587) ಧನ್ವಂತರಿ ಮೊದಲಾದವರು ಇದ್ದುದು.

ಪ್ರಭಾಕರನ ಮಗ ಹರ್ಷವರ್ಧನ. ಇವನ ಕಾಲ ಕ್ರಿ. ಶ. 606-647 ಇವನು ಸ್ವತಃ ಕವಿ. ಕವಿಗಳಿಗೆ ಆಶ್ರಯದಾತ. ಇವನ ಆಸ್ಥಾನದಲ್ಲೇ ಬಾಣ ಇದ್ದುದು. ಮಯೂರನು ಈ ಕಾಲದವನು. ಇವನಾದ ಮೇಲೆ ರಜಪೂತರ ಪ್ರಾಬಲ್ಯವು 500 ವರ್ಷ ಕಾಲ ನಡೆಯಿತು. ಮುಸಲ್ಮಾನರ ಧಾಳಿಯು ಈ ಕಾಲದಲ್ಲಿ ಪ್ರಬಲವಾಗಿ ಅವರು ಇಲ್ಲೇ ನೆಲೆಸಲು ಪ್ರಾರಂಭಿಸಿದರೂ 11 ನೇಶತಮಾನದವರೆವಿಗೂ ಹಿಂದೂ ಪ್ರಾಬಲ್ಯವೂ ಇದ್ದುದರಿಂದ ಸಂಸ್ಕೃತ ಬೆಳೆಯಲು ಅವಕಾಶವಿತ್ತು. ಮಹಮದ್‌ಬಿನ್‌ಖಾಸಿಮನು ಕ್ರಿ. ಶ 712ರಲ್ಲಿ ಸಿಂಧ್ ದೇಶವನ್ನು ಪ್ರವೇಶಿಸಿದನು. ಕ್ರಿ. ಶ. 977-1030ರವರೆಗೂ 17ಸಾರಿ ಘಸ್ನಿಮಹಮೂದನು ಸೋಮನಾಥ ದೇವಾಲಯಾದಿಗಳನ್ನು ಕೊಳ್ಳೆ ಹೊಡೆದನು. ಈ ಕಾಲದಲ್ಲೇ ಪ್ರಸಿದ್ಧ ಗಣಿತಶಾಸ್ತ್ರಜ್ಞನೂ, ಸಂಸ್ಕೃತ ವಿದ್ವಾಂಸನ ಆದ ಅಲ್ ಬರೂನಿ ಇದ್ದು ಆ ಕಾಲದ ಚರಿತ್ರೆಯನ್ನು ಕೊಟ್ಟಿರುವನು. ಆಫ್‌ಘಾನಿಸ್ಥಾನದಿಂದ ಮಹಮದ್‌ಗೋರಿ ಬಂದು ಆಳಿದನು .(ಕ್ರಿ.ಶ .1175-1206) ಇವನಾದ ಮೇಲೆ ಮುಸ್ಲಿಂ ಪ್ರಭುತ್ವವು 5 ಭಾಗವಾಗಿ ಒಡೆಯಿತು. ಕೊನೆಯವನಾದ ಲೋಡಿಯನ್ನು (1517-1526) 1526ರಲ್ಲಿ ಬಾಬರನು ಪಾಣಿಪಟ್ಟದಲ್ಲಿ ಸೋಲಿಸಿ ಚಕ್ರವರ್ತಿಯಾದನು. ಇವನ ಮಗ ಹುಮಾಯನ್. ಹುಮಾಯೂನನ ಮಗ ಪ್ರಸಿದ್ಧ ಅಕ್ಬರ್ (1556-1605). ಅಕ್ಬರನ ಮಗ ಜಹಾಂಗೀರ್

ಮತ್ತು ಮೊಮ್ಮಗ ಷಹಜಹಾನ್. ಇವರಾದ ಮೇಲೆ ಔರಂಗಜೇಬ್ (1658-1707) ಇವರಿಬ್ಬರ ಮಧ್ಯವರ್ತಿ ಕಾಲದಲ್ಲೇ ಪ್ರಸಿದ್ಧ. ಅಲಂಕಾರಿಕ ಜಗನ್ನಾಥ ಇದ್ದದು.

ಔರಂಗಜೇಬ್ ಆದಮೇಲೆ ಬ್ರಿಟಿಷರ ಕಾಲವು ಪ್ರಾರಂಭವಾಯಿತೆನ್ನಬಹುದು ಈ ಕಾಲದಲ್ಲಿ ಸಂಸ್ಕೃತಕ್ಕೆ ಉತ್ತೇಜನವಿಲ್ಲದಿದ್ದರೂ ಇದರ ಕೀರ್ತಿ ವಿಶ್ವದಾದ್ಯಂತವೂ ವ್ಯಾಪಿಸುವಂತಾಯಿತು. ಹಿಂದೂ ಸಂಸ್ಕೃತಿಯಲ್ಲಿ ಪಾಶ್ಚಾತ್ಯರಿಗೆ ವಿಶೇಷ ಆಸಕ್ತಿ ಇದ್ದಿತು. ಕಾವ್ಯ, ನಾಟಕ, ಅಲಂಕಾರ ಶಾಸ್ತ್ರಗಳಲ್ಲದೆ, ತರ್ಕಮೀಮಾಂಸ ಜ್ಯೋತಿಷ್ಯ ಮತ್ತು ವೇದಾಂತವೂ ಎಲ್ಲರ ಕಣ್ಣನ್ನು ತೆರೆಯುವಂತೆ ಮಾಡಿತು. ಈ ವಿಶಾಲವಾದ ಸಂಸ್ಕೃತ ಸಾಹಿತ್ಯದಲ್ಲಿ ಈ ಮೊದಲನೇ ಭಾಗದಲ್ಲಿ ಗಮನಕೊಟ್ಟಿರುವುದು 5ಕ್ಕೆ ಮಾತ್ರ 1.ವೇದಸಾಹಿತ್ಯ2.ಇತಿಹಾಸ ಪುರಾಣ ಸಾಹಿತ್ಯ 3.ಕಾವ್ಯಸಾಹಿತ್ಯ 4.ನಾಟಕ ಸಾಹಿತ್ಯ ಮತ್ತು 5.ಅಲಂಕಾರ ಸಾಹಿತ್ಯ.

ಈ ಸಂಸ್ಕೃತ ಸಾಹಿತ್ಯವು ವೇದಕಾಲದಿಂದಲೂ ಬೆಳೆದುಬಂದಿರುವುದನ್ನು ಏಳು ಪರ್ವಗಳಲ್ಲಿ ನಾವು ನೋಡಬಹುದು.

1. ಋಗ್ವೇದದ ಮಂತ್ರಗಳ ಕಾಲದಿಂದ ಬುದ್ಧನ ಕಾಲದವರೆಗೂ, ಸಂಹಿತ, ಬ್ರಾಹ್ಮಣ, ಉಪನಿಷತ್ತುಗಳು, ಪ್ರಾತಿಶಾಖ್ಯೆಗಳು, ಅನುಕ್ರಮಣಿಕೆಗಳು, ಯಾಸ್ಕನಿರುಕ್ತ, ಪಾಣಿನೀಯ ಅಷ್ಟಾಧ್ಯಾಯಿನೀ, ರಾಮಾಯಣ, ಮಹಾಭಾರತ ಮತ್ತು 18 ಪುರಾಣಗಳ ಮೂಲರೂಪ, ವೇದವನ್ನು ಸಂರಕ್ಷಿಸಲು ಕಲ್ಪಿತವಾದ ಗ್ರಂಥಗಳು. ಇವೇ ಈ ಕಾಲದ ವೈಶಿಷ್ಟ್ಯ.

2. ಬುದ್ಧನು ಹುಟ್ಟಿದ ಮೇಲೆ ಪಾಳಿ ಭಾಷೆಗೆ ಪ್ರಾಶಸ್ತ್ಯ ಬಂದು, ಸಂಸ್ಕೃತವೂ ವ್ಯತ್ಯಾಸವಾಗುತ್ತಿರುವುದನ್ನು ಕಂಡು ಕಾತ್ಯಾಯನರು ಪಾಣಿನಿಯ ವ್ಯಾಕರಣಕ್ಕೆ ತಿದ್ದುಪಡಿಗಳನ್ನು ಮತ್ತು ಪುಷ್ಟಿದಾಯಕ ವಾಕ್ಯಗಳನ್ನು ಕೊಟ್ಟಿರುವರು. ಈ ಕಾಲದಲ್ಲೇ ಬೌದ್ಧದರ್ಶನದಿಂದ ಪ್ರಾಚೀನ ಸಂಸ್ಕೃತಿಗೆ ಸೆಟ್ಟುಬೀಳುತ್ತಿರುವುದನ್ನು ನೋಡಿ, ಸೂಕ್ಷ್ಮ ಬುದ್ಧಿಯಿಂದ ವೇದ ಸಂಪ್ರದಾಯವನ್ನು ಉಳಿಸಲು ಅಥವಾ ಅದನ್ನುಳಿಸಲು ಪ್ರಯತ್ನ ನಡೆದು ನ್ಯಾಯ ಮತ್ತು ವೈಶೇಷಿಕ ಸೂತ್ರಗಳು ರೂಪುಗೊಂಡವು. ರಾಂಡೆಲ್ (Randle)ಹೇಳಿರುವಂತೆ ಈ ಸೂತ್ರ ಗ್ರಂಥಗಳು ಕ್ರಿ. ಪೂ. 200ರಿಂದ ಕ್ರಿ. ಶ 20 ರಲ್ಲಿ ರೂಪಗೊಂಡವು. ಅಶ್ವಘೋಷ, ನಾಗಾರ್ಜುನ, ದೇವ ಮೊದಲಾದ ಬೌದ್ಧ ಸಿದ್ಧಾಂತಾನುಯಾಯಿಗಳು ಇದ್ದುದು ಈ ಕಾಲದಲ್ಲಿ ವ್ಯಾಕರಣ ಶಾಸ್ತ್ರವನ್ನು ಭದ್ರಪಡಿಸಲು ಪತಂಜಲಿಯು ಮಹಾಭಾಷ್ಯವನ್ನು ಬರೆದನು. ಭಾಸನ ನಾಟಕಗಳು, ಕಾಳಿದಾಸನ ಕಾವ್ಯನಾಟಕಗಳು, ಕೌಟಿಲ್ಯನ ಅರ್ಥಶಾಸ್ತ್ರ (304B-C)ಈ ಕಾಲಕ್ಕೆ ಸೇರಿದೆ.

3. ಕನಿಷ್ಕನು ಕೊಟ್ಟ ಉತ್ತೇಜನದಿಂದ ಸ್ವಲ್ಪಕಾಲ ಬೌದ್ಧದರ್ಶನವು ಉಳಿಯಲು ಅವಕಾಶವನ್ನು ಹೊಂದಿದರೂ, ಪುಷ್ಯಮಿತ್ರ ಮತ್ತು ಅವನ ಅನುಯಾಯಿಗಳಿಂದ ಪ್ರಾರಂಭಿಸಿದ ಪ್ರಾಚೀನ ಸಂಸ್ಕೃತಿಯ ಪುನರುದ್ಧಾರ, ಬಹುಬಿರುಸಿನಿಂದ ನಡೆದುದರಿಂದ ಬೌದ್ಧ ಜೈನದರ್ಶನಗಳು ತಮ್ಮ ಪೂರ್ಣಪ್ರಭಾವವನ್ನು ಬೀರಲು ಸಮರ್ಥವಾಗಲಿಲ್ಲ. ಕ್ರಿ. ಪೂ. 200ರಿಂದ

ಗುಪ್ತರ ಕಾಲದವರಿಗೂ ಪೂರ್ವಸಂಸ್ಕೃತಿಯು ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ಸರ್ವ ಪ್ರಯತ್ನವನ್ನೂ ಮಾಡಿರುವಂತಿದೆ.

4. ಗುಪ್ತರ ಕಾಲದಲ್ಲಿ ಇದಕ್ಕೆ ಪೂರ್ಣ ಬೆಂಬಲ ಸಿಕ್ಕಿ ಸಂಸ್ಕೃತಾಭ್ಯಾಸಕ್ಕಾಗಿ ಮೂರು ವಿಶ್ವವಿದ್ಯಾಲಯಗಳು (ಅಜಂತ, ಸರ್ನಾತ್ ಮತ್ತು ನಳಂದ) ಸ್ಥಾಪಿಸಲ್ಪಟ್ಟವು. ಚಿಕ್ಕಪುಟ್ಟ ಕಾವ್ಯಗಳ ಮತ್ತು ನಾಟಕಗಳು ಈ ಕಾಲದಲ್ಲಿ ಇದ್ದಿರಬೇಕು.

5 ಗುಪ್ತರಾದ ಮೇಲೆ ಹರ್ಷವರ್ಧನನ ಕಾಲದಲ್ಲಿ (7ನೇ ಶತಮಾನ) ಇದು ತಲೆ ಎತ್ತಿನಿಂತಿತು. ದಕ್ಷಿಣದಲ್ಲಿ ಪಲ್ಲವರು. ಪೂರ್ವದಲ್ಲಿ ಬಂಗಾಳತೀರ. ದಕ್ಷಿಣದಲ್ಲಿ ಚೋಳಪಾಂಡ್ಯರು -ಸಂಸ್ಕೃತಕ್ಕೆ ಉತ್ತೇಜನ ಕೊಟ್ಟಿರುವುದಕ್ಕೆ ನಿದರ್ಶನಗಳಿವೆ.

6. 7 ಮತ್ತು 8ನೇ ಶತಮಾನದಿಂದ 11 ಮತ್ತು 12ನೇ ಶತಮಾನದವರಿಗೂ ಕಾಶ್ಮೀರದಲ್ಲಿ ರಾಜರ ಆಶ್ರಯದಲ್ಲಿ ಇದ್ದು ನಾನಾಮುಖವಾಗಿ ಬೆಳೆಯಲು ಅವಕಾಶವನ್ನು ಹೊಂದಿತು 9ನೇ ಶತಮಾನದಿಂದ ಇಲ್ಲಿ ಪ್ರಚಾರಕ್ಕೆ ಬಂದ ಶಂಕರರ ಅದ್ವೈತ ಸಿದ್ಧಾಂತವೂ ಸಂಸ್ಕೃತ ಸಾಹಿತ್ಯಕ್ಕೆ ಒಂದು ಹೊಸ ರೂಪವನ್ನು ಕೊಟ್ಟಿತು ಎನ್ನಬಹುದು.

7 12ನೇ ಶತಮಾನದಿಂದ ದಕ್ಷಿಣದಲ್ಲಿ ಕರ್ನಾಟಕ ಸಾಮ್ರಾಜ್ಯದಿಂದ ಸಂಸ್ಕೃತಕ್ಕೆ ಬಹಳ ಸಹಕಾರವು ಸಿಕ್ಕಿತು. ಶಂಕರ (8ನೇ ಶತಮಾನ). ರಾಮಾನುಜ (12ನೇ ಶತಮಾನ). ರಾಮಾನಂದ (14ನೇ ಶತಮಾನ). ಕಬೀರ್ (15ನೇ ಶತಮಾನ) ಇವರು ದಕ್ಷಿಣದಲ್ಲಿ ಗುರುನಾನಕ್ (1459) ಮತ್ತು ಚೈತನ್ಯ (1485) ಇವರು ಉತ್ತರದಲ್ಲೂ ತಮ್ಮ ಸಿದ್ಧಾಂತವನ್ನು ಪ್ರಚಾರ ಮಾಡುವ ವ್ಯಾಜದಿಂದ ಸಂಸ್ಕೃತಕ್ಕೆ ಪರೋಕ್ಷವಾಗಿ ಉತ್ತೇಜನ ಕೊಟ್ಟರು ಎನ್ನಬಹುದು. ಅನೇಕ ಮುಸ್ಲಿಂ ಪ್ರಭುಗಳು ಇದಕ್ಕೆ ನೆರವು ಕೊಟ್ಟರು.

ಇಷ್ಟು ಚಾರಿತ್ರಿಕ ವಿಷಯವನ್ನು ಗಮನದಲ್ಲಿಟ್ಟು ಈ ಗ್ರಂಥವನ್ನು ಓದಿದರೆ ಒಂದು ನಿಶ್ಚಯ ಜ್ಞಾನವು ಬರಬಹುದೆಂದು ಆಶಿಸಲಾಗಿದೆ.

ಇಲ್ಲಿ ಮೊದಲು ವೇದ. ಇತಿಹಾಸ. ಪುರಾಣ. ಕಾವ್ಯ. ನಾಟಕ ಮತ್ತು ಅಲಂಕಾರ ಇವುಗಳ ಚರಿತ್ರೆಯನ್ನು ಕೊಟ್ಟು. ಎರಡನೇ ಭಾಗದಲ್ಲಿ ವ್ಯಾಕರಣ ಶಾಸ್ತ್ರದ ಚರಿತ್ರೆಯನ್ನೂ. ಮೂರನೇ ಭಾಗದಲ್ಲಿ ತರ್ಕಶಾಸ್ತ್ರದ ಚರಿತ್ರೆಯನ್ನೂ. ಕೊಡಲಾಗಿದೆ. ಮೊದಲನೇ ಭಾಗದಲ್ಲಿ ಪ್ರತಿಯೊಂದು ಕವಿ ಮತ್ತು ಅವನ ಗ್ರಂಥಗಳ ವಿಷಯದಲ್ಲಿ ಇಲ್ಲಿ ಕೊಟ್ಟಿರುವುದಕ್ಕಿಂತಲೂ ಅಧಿಕಾಂಶವನ್ನು ಕೊಡುವುದು ಈ ತೆರನಾದ ಗ್ರಂಥಗಳಲ್ಲಿ ಸಾಧ್ಯವಿಲ್ಲ. ಸಾಹಿತ್ಯದಲ್ಲಿ ಅಭಿರುಚಿಯನ್ನು ಉಂಟು ಮಾಡುವುದು ಮಾತ್ರ ಸಾಧ್ಯ. ಅಧಿಕ ವಿಷಯಗಳನ್ನು ಆಯಾಗ್ರಂಥಗಳಿಂದಲೇ ಅರಿಯಬೇಕು. ಅದಕ್ಕಾಗಿಯೇ ಪೂರ್ವೀಕರು ಹೇಳಿರುವುದು "ಏಕಸ್ಮಿನ್ ಜನ್ಮನ್ಯೇಕಮೇವ ಶಾಸ್ತ್ರಂ"ಎಂದು.

ಇಲ್ಲಿ ಕೊಟ್ಟಿರುವ ವಿಷಯಗಳಿಗಿಂತಲೂ ಹೆಚ್ಚು ವಿವರಗಳನ್ನು ಉಪಾಧ್ಯಾಯರು ತರಗತಿಯಲ್ಲಿ ಕೊಡಬೇಕಾಗುವುದು. ಉದಾಹರಣೆಗೆ ಪ್ರತಿ ಪುರಾಣದ ಕಥಾ ಭಾಗಗಳನ್ನೂ, ಭಾಸ ಮೊದಲಾದ ಕವಿಗಳ ನಾಟಕಗಳ ವಿವರಗಳನ್ನೂ, ಇಲ್ಲಿ ಕೊಟ್ಟಿರುವುದಕ್ಕಿಂತಲೂ ಹೆಚ್ಚಾಗಿ ಕೊಡಲು ಪ್ರಾರಂಭಿಸಿದರೆ ಗ್ರಂಥವು ಬಹಳ ವಿಸ್ತಾರವಾಗುತ್ತದೆ. ಇಲ್ಲಿ ಎಲ್ಲಾ ವಿಷಯಗಳನ್ನೂ ಕೂಲಂಕುಷವಾಗಿ ವಿಮರ್ಶಿಸಿಲ್ಲ. ಸಂಸ್ಕೃತ ಸಾಹಿತ್ಯದ ಮಹತ್ವವನ್ನು ಮಾತ್ರ ತಿಳಿಸಲು ಪ್ರಯತ್ನಪಡಲಾಗಿದೆ. ಅನೇಕ ಚಿಕ್ಕ ಚಿಕ್ಕ ಕವಿಗಳನ್ನು ಇಲ್ಲಿ ಬಿಡಲಾಗಿದೆ. ಅವರ ವೈಶಿಷ್ಟ್ಯವು ಇಲ್ಲಿ ಕೊಟ್ಟಿರುವ ಕವಿಗಳಲ್ಲಿ ಅಂತರ್ಗತವಾಗಿರುವುದರಿಂದ ಅವರನ್ನು ಉಪೇಕ್ಷಿಸಲಾಗಿದೆ. ಅದರಿಂದ ಅವರ ಕೀರ್ತಿಗೆ ಯಾವ ಕುಂದೂ ಬರಲಾರದು.

ಇಲ್ಲಿ 53 ಕವಿಗಳನ್ನು 30 ಅಲಂಕಾರಿಕರನ್ನೂ ವಿಮರ್ಶಿಸಲಾಗಿದೆ. ಇವರೆಲ್ಲರೂ ಕಾವ್ಯ, ನಾಟಕ ಮತ್ತು ಅಲಂಕಾರ ಶಾಸ್ತ್ರಗಳಲ್ಲಿ ಕ್ರಾಂತಿಕಾರರೂ ಅಲ್ಲದೆ ಆ ಕ್ರಾಂತಿಯ ಪೋಷಕರು ಆಗಿರುವುದರಿಂದ ಅವರನ್ನು ಮಾತ್ರ ತೆಗೆದುಕೊಳ್ಳಲಾಗಿದೆ. ಕ್ರಿ. ಶ. 17ನೇ ಶತಮಾನದ ಮೇಲೆ ಬಂದ ಕವಿಗಳ ವಿಮರ್ಶೆಯು ಇಲ್ಲಿ ನಡೆದಿಲ್ಲ.

# I. ವೈದಿಕ ಸಾಹಿತ್ಯ

## 1. ಪೀಠಿಕೆ

ಅತಿ ಪ್ರಾಚೀನ ಜನಾಂಗವೆಂದು ಆಧುನಿಕ ಚರಿತ್ರಕಾರರೆಲ್ಲರೂ ಹೇಳುವ ಆರ್ಯರ ಸಂಸ್ಕೃತಿಯನ್ನು ಚೆನ್ನಾಗಿ ಪ್ರತಿಬಿಂಬಿಸಿರುವ ಗ್ರಂಥಗಳಲ್ಲಿ ಋಗ್ವೇದವೇ ಅತಿ ಪ್ರಾಚೀನವೆನ್ನುವುದರಲ್ಲಿ ಈಗ ಯಾವ ಭಿನ್ನಾಭಿಪ್ರಾಯವೂ ಇಲ್ಲ. ವೇದವೆಂದರೆ "ಜ್ಞಾನ". ಇದರ ಮೂಲರೂಪವು ನಮ್ಮ ಹಿಂದೂ ದೇಶದಲ್ಲಿ ಅತಿ ಪ್ರಾಚೀನದಿಂದಲೂ ಆರ್ಯರ ವಾಙ್ಮಯದಲ್ಲಿ ಕಾಣುತ್ತಿರುವುದರಿಂದ ನಮ್ಮ ಪೂರ್ವಿಕರ ಗ್ರಂಥಕ್ಕೆ ವೇದವೆನ್ನುವ ಹೆಸರು ರೂಢವಾಗಿದೆ. ನಮ್ಮ ಪ್ರಾಚೀನರೂ, ಅದರಲ್ಲೇ ವಿಶ್ವಾಸವಿಟ್ಟು ತಮ್ಮ ಮನಸ್ಸನ್ನು ಬೆಳೆಯಿಸಿಕೊಳ್ಳುವ ಆಧುನಿಕ ಹಿಂದೂ ವಿದ್ವಾಂಸರೂ ಈ ವೇದವನ್ನು ಅನಾದಿ ಎಂತಲೂ ಅನಂತವೆಂತಲೂ ನಂಬಿರುವರು. ಅದರ ಪರವಾಗಿ ವಾದಿಸುತ್ತಲೂ ಇರುವರು. ಅವೆಲ್ಲಕ್ಕೂ ಕಾರಣವಿಷ್ಟೇ ವೇದದಲ್ಲಿ ನಮ್ಮವರು ಯೋಗಾಭ್ಯಾಸದ ಪರಿಷ್ಕಾರವನ್ನು ನೋಡಿ (1) ಅದರ ಬಲದಿಂದ ಋಷಿಗಳು, ಮಹರ್ಷಿಗಳು, ಬ್ರಹ್ಮರ್ಷಿಗಳು ತಮ್ಮ ಅಂತರ್ಹೃದಯದಲ್ಲಿ ಸಾಕ್ಷಾತ್ಕರಿಸಿಕೊಂಡ ಶಬ್ದರಾಶಿಯನ್ನು ಯಾರೊಬ್ಬರೂ ತನ್ನಿಂದ ರಚಿಸಲ್ಪಟ್ಟಿತೆಂದು ಹೇಳಿಲ್ಲ. ಅದರಿಂದ ಕೀರ್ತಿಯನ್ನೂ ಹೊಂದಿಲ್ಲ. (2). ಆದ್ದರಿಂದ ಪರಮಾತ್ಮದತ್ತವಾದ ಜ್ಞಾನವಿಶೇಷವಾಗಿರುವುದರಿಂದ ಈ ಶಬ್ದರಾಶಿಯು ಅನಾದಿ. (3)ಅನಂತವಾದ ಈ ಶಬ್ದರಾಶಿಯಲ್ಲಿ ಕೆಲವು ಮಾತ್ರ ನಮಗೇ ಲಭ್ಯವಾಗಿದೆ. ಇದನ್ನು ಪರಮಾತ್ಮನು ಚತುರ್ಮುಖ ಬ್ರಹ್ಮನಿಗೆ ಕೊಟ್ಟನು.

"ಯೋಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈವೇದಾಂಶ್ಚ ಪ್ರಹಿಣೋತಿ ತಸ್ಮೈ † ತಂ ದೇವಮಾತ್ಮಬುದ್ಧಿ ಪ್ರಸಾದಂ ಮುಮುಕ್ಷು ರ್ವೈಶರಣಮಹಂ ಪ್ರಪದ್ಯೆ†"ಎಂದು ಶ್ವೇತಾಶ್ವತರ ಉಪನಿಷತ್ತು ಹೇಳಿರುತ್ತದೆ ಎಂದು ಹೇಳುತ್ತಲೂ ನಂಬುತ್ತಲೂ ಇರುವರು. ಇಂತಹ ದೃಷ್ಟಿಗೆ ಸನಾತನ ದೃಷ್ಟಿ ಎಂದು ಹೇಳಬಹುದು. ವೇದಾಂತ ದೃಷ್ಟಿಯಲ್ಲಿ ತೊಯ್ಯುವರಿಗೆ ಪರಮಾತ್ಮನಿಂದ ಪ್ರಪಂಚವು ಹುಟ್ಟಿತೆನ್ನುವ ನಂಬಿಕೆಯೂ, ತನ್ನಿಂದ ಹುಟ್ಟಿದ ಈ ವಿಶ್ವಕ್ಕಾಗಿ ತಾನೇ ದಾರಿ ತೋರಿಸಲು ವೇದವನ್ನು ಕೊಟ್ಟನು ಎನ್ನುವ ವಿಶ್ವಾಸವೂ, ಎಷ್ಟು ವಾದಿಸಿದರೂ ಈ ಭಾವನೆಗೆ ಚ್ಯುತಿ ಬರುವುದಿಲ್ಲವೆನ್ನುವ ಮಹಾ ವಿಶ್ವಾಸವೂ, ಸಹಜವಾಗಿಯೇ ಇದೆ. ಆದರೆ ಆಧುನಿಕ ಯುಗವು ವಿಜ್ಞಾನ ಯುಗ. ಅದರ ಆಶ್ರಯದಲ್ಲಿ, ಪ್ರಪಂಚವು ಸ್ವಾಭಾವಿಕವಾಗಿ ಹುಟ್ಟಿತ್ತೆನ್ನುವ ಭಾವವು ಈಗ ಎಲ್ಲರಲ್ಲಿಯೂ ಮೂಡಿರುವಾಗ, ಈ ವೇದವನ್ನೇ ಚಾರಿತ್ರಿಕ ದೃಷ್ಟಿಯಿಂದ ವಿಮರ್ಶಿಸುವುದರಿಂದ, ನಮ್ಮಲ್ಲಿ ಅದಿಲ್ಲದಿರುವುದರಿಂದ, ಬೆಳೆದಿರುವ ಸಂಕುಚಿತ ದೃಷ್ಟಿಯು ದೂರವಾಗುವುದು ಮತ್ತು ವೇದಾರ್ಥವನ್ನು ಮಾಡುವಾಗ ವಿಶಾಲ ಮನೋಧರ್ಮವು ಸರ್ವಗ್ರಾಹ್ಯವೂ ಮತ್ತು ಸರ್ವಸಮನ್ವಯಾತ್ಮಕವೂ ಆದ ದಾರಿಯನ್ನು ಹಿಡಿಯುವುದು. ಮಾನವನ ಮನಸ್ಸು ಬೆಳೆಯಬೇಕಾದರೆ ಅದಕ್ಕೆ ನಿರ್ದಿಷ್ಟವಾದ ಮೂರು ಹಂತಗಳನ್ನು ಶಾಸ್ತ್ರ ತಿಳಿದವರು ಹೇಳಿರುವರು.

ಅವ್ಯವಸ್ಥಿತ ಪಕ್ಷ: ಇದು ಎಳೆಯ ಮನಸ್ಸು ಬಿಚ್ಚುವುದಕ್ಕಾಗಿ ಕಲ್ಪಿತವಾದ ಕ್ರಮ. ಇದನ್ನು Debating Logic ಎಂದು ಕರೆಯಬಹುದು.

೨. ಹೇತು ಪಕ್ಷ: ಎಳೆ ಮನಸ್ಸು ಬಲಿತ ಮೇಲೆ "ಇದಕ್ಕೆ ಇದು ಕಾರಣ. ಇವೆಲ್ಲಕ್ಕೂ ಇದು ಕಾರಣ; ಈ ವಿಶ್ವಕ್ಕೆ ಕಾರಣವಿದು" ಎಂದು ಮನಸ್ಸು ಮುಂದೆ ಸಾಗುವುದಕ್ಕಾಗಿ ನಿಶ್ಚಿತವಾದ ತರ್ಕಪದ್ಧತಿ. ಇದನ್ನು Scientific Logicಅಥವಾ Construction Logic ಎಂದು ಕರೆಯಬಹುದು. ಈ ದಾರಿಗೆ ಬಹಳ ಪ್ರಯೋಜನಕಾರಿಯಾದ ಮಾರ್ಗವೇ ಚಾರಿತ್ರಕ ದೃಷ್ಟಿ. ಬ್ರಹ್ಮ ಸೂತ್ರದ ವೇದವ್ಯಾಸರೂ ಕೂಡ ಈ ದಾರಿಯಲ್ಲಿ ನಡೆದು ಬುದ್ಧಿ ಪರಿಷ್ಕಾರ ಹೊಂದಿದವರಿಗೆ ಮಾತ್ರ ಮೂರನೇ ಸಂಸ್ಕಾರವನ್ನು ಮನಸ್ಸಿಗೆ ವಿಧಿಸಿರುತ್ತಾರೆ.

೩. ವ್ಯವಸ್ಥಿತ ಪಕ್ಷ: ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದ ಮಾಯನ್ನಾಸ್ತ್ಯ ಕೃತಃ ಕೃತೇನ; ತದ್ವಿ ಜ್ಞಾನಾರ್ಥಂ ಸಗುರುಮೇವಾಭಿಗಚ್ಛೇತ್ ಶ್ರೋತ್ರಿಯಂಬ್ರಹ್ಮನಿಷ್ಠಂ" ಎನ್ನುವ ಮುಂಡಕೋಪ ನಿಷ಼ತ್ತಿನ ಮಂತ್ರದಿಂದಲೇ ತಮ್ಮ ಬ್ರಹ್ಮಸೂತ್ರವನ್ನು ಬೆಳೆಸಿರುವರು. ಇವರು ಉಪನಿಷತ್ತನ್ನು ಅರ್ಥ ಮಾಡಲು ಹೇಳಿರುವ ತರ್ಕ ಪದ್ಧತಿಗೆ ಸಾಮಾನ್ಯವಾಗಿ ಮೀಮಾಂಸಾ ಎಂತಲೂ ವಿಶೇಷವಾಗಿ ವ್ಯವಸ್ಥಿತ ಪಕ್ಷವೆಂತಲೂ ಹೇಳಬಹುದು. ಈ ಕ್ರಮವು ಮತ್ತಾವ ಸಂಸ್ಕೃತಿಯಲ್ಲಿಯೂ ಇಲ್ಲ. ಇದಕ್ಕೆ Religions or Vedantio Logic ಎಂದು ಹೆಸರಿಡಬಹುದು. ಈ ದಾರಿಯಲ್ಲಿ ನಡೆಯುವುದಕ್ಕಾಗಿಯೇ ಅಥರ್ವಶಿ ಖೋಪನಿಷತ್ತು"ಕಾರಣಂತುಧ್ಯೇಯಃ" ಎನ್ನುವ ಮಂತ್ರವನ್ನು ಕೊಟ್ಟಿರುತ್ತದೆ. ತೈತ್ತಿರಿಯೋಪನಿಷತ್ತಿನ ಭೃಗುವಲ್ಲಿಯಲ್ಲಿ ಇದಕ್ಕೆ ತಪಸ್ಸು ಎಂದು ಹೆಸರಿದೆ.

ಈ ಮೂರು ವಿಧ ತರ್ಕ ಮಾರ್ಗಗಳಲ್ಲಿ ನಮ್ಮೆಲ್ಲರಿಗೂ ಅಂದರೆ ಮಾನವ ಸಾಮಾನ್ಯ ಉಪಯೋಗವನ್ನು ಕೊಡುವಂತಹುದು ಎರಡನೇ ಹೇತು ಪಕ್ಷವೇ. ಈ ದಾರಿಯಲ್ಲೇ ಚಾರಿತ್ರಕ ದೃಷ್ಟಿಯು ಬೆಳೆಯಲು ಪೂರ್ಣಾವಕಾಶವಿದೆ. ಆದರ ಈ ಶೂನ್ಯತೆಯಿಂದಲೇ ನಮ್ಮಲ್ಲಿ ಮೂಢನಂಬಿಕೆಗಳು ಬಹಳವಾಗಿ ಬೆಳೆದಿರುತ್ತದೆ. ಅದರ ಫಲವಾಗಿ ಆಧುನಿಕ ವಿಜ್ಞಾನ ಸಂಪರ್ಕವಾಗಿ ನಮ್ಮ ವೇದ ಸಂಸ್ಕೃತಿ ಮತ್ತು ವೇದಾಂತದೌನ್ನತ್ಯ ಇವೆಲ್ಲದರಲ್ಲಿಯೂ ಅಪನಂಬಿಕೆ ಹುಟ್ಟಿ, ಮೂಲಕ್ಕೆ ಲೋಪ ಬರುತ್ತಿರುವುದು ಕಾಣುತ್ತಿದೆ. ವಿಜ್ಞಾನ ದೃಷ್ಟಿಯಲ್ಲಿ ಮನಸ್ಸು ಬೆಳೆದು ಚಾರಿತ್ರಕವಾಗಿ ವೇದ, ಇತಿಹಾಸ, ಪುರಾಣ ಮೊದಲಾದ ಗ್ರಂಥಗಳು ವಿಮರ್ಶಿಸಲ್ಪಡುವಂತಾದರೆ ವೇದ ಭಾಗದ ಉನ್ನತ ಸ್ಥಾನವು ನಮಗೆ ಗೋಚರವಾಗುವುದಲ್ಲದೆ. ಹಿಂದೂ ವೇದಾಂತವೂ ಸರ್ವದರ್ಶನ ಸಮನ್ವಯವನ್ನು ಸಾರುತ್ತಿದೆ ಎಂದು ಕಾಣದಿರದು. ಈ ವಿಚಾರದಲ್ಲಿ ನಾವು ಪಾಶ್ಚಾತ್ಯರ ಅದರಲ್ಲೂ ಆಂಗ್ಲೇಯರ ಸಂಪರ್ಕಕ್ಕೆ ಚಿರ ಋಣಿಯಾಗಿರಬೇಕು. ಇವರು ತೋರಿಕೊಟ್ಟ ದಾರಿಯಲ್ಲೇ ನಡೆದು ಪಾಶ್ಚಾತ್ಯ ಮತ್ತು ಪೌರ್ವಾತ್ಯ ವಿದ್ವಾಂಸರು ನಮ್ಮ ಸಂಸ್ಕೃತ ಸಾಹಿತ್ಯವನ್ನು ವಿಮರ್ಶಿಸಿರುವರು. ಇವರ ದಾರಿಯನ್ನು ಆಶ್ರಯಿಸಿರುವುದರಿಂದ ಸಂಸ್ಕೃತದ ಅಧ್ಯಯನವು

ಹೊಸಬೆಳಕಿಗೆಯನ್ನು ಆಶ್ರಯಿಸಿ, ಮುಂದೆ ನಾನಾ ಮುಖವಾಗಿ ಬೆಳೆಯಲು ಅವಕಾಶವು ತೋರುತ್ತದೆ. ಕೇವಲ ಪ್ರಾಚೀನ ಪದ್ಧತಿಯಲ್ಲಿ ಅಧ್ಯಯನ ಮಾಡುವುದರಿಂದ ಸಂಸ್ಕೃತ ಭಾಷಾ ಜ್ಞಾನ ಸುಲಭವಾಗಿ ಸರ್ವರಿಗೂ ಹಿತವಾಗಿ, ವಿಶಾಲ ಮನೋಧರ್ಮವನ್ನು ಸೂಸುವಂತೆ ಗಾಂಭೀರ್ಯವೂ ಮರ್ಯಾದೆಯೂ ಬರುವಂತೆ ತಿಳಿಯಲು ಶಾಸ್ತ್ರ ಜ್ಞಾನವು ಬರಬೇಕಾದರೆ ಆಧುನಿಕ ಅಭ್ಯಾಸ ಕ್ರಮದ ಸಂಪರ್ಕ ಮತ್ತು ಸಹವಾಸವು ಅತ್ಯವಶ್ಯಕವಾಗಿ ಬೇಕಾಗಿದೆ. ಹೀಗೆ ಪ್ರಾಚೀನ ಮತ್ತು ನವೀನ ಪದ್ಧತಿಗಳ ಜೋಡಣೆಯಿಂದ ಸಂಸ್ಕೃತ ಸಾಹಿತ್ಯ ವಿಮರ್ಶೆಯನ್ನು ಮಾಡಲು ಆ ಸಾಹಿತ್ಯ ಭಂಡಾರವನ್ನು (1) ವೇದ (2) ಇತಿಹಾಸ (3) ಪುರಾಣ (4) ನಾಟಕ (5) ಅಲಂಕಾರ ಎಂದು 5 ಭಾಗವಲ್ಲಿ ವಿಮರ್ಶಿಸಬಹುದು. ಈ ವಿಭಾಗವೇ ಸ್ಥೂಲ 2, 3, 4,ಮತ್ತು 5ರ ಮೂಲವನ್ನು ವೇದದಲ್ಲೇ ಚೆನ್ನಾಗಿ ಕಾಣಬಹುದು. ಅಲ್ಲದೆ ಆ ವೇದದ ಅಂಗವಾಗಿ ಶಿಕ್ಷಾ, ವ್ಯಾಕರಣ ಛಂದಸ್ಸು, ನಿರುಕ್ತ ಜ್ಯೋತಿಷ್ಯ, ಕಲ್ಪಸೂತ್ರ, ಶುಲ್ಬ ಸೂತ್ರ, ಅಶ್ವಶಾಸ್ತ್ರ, ಹಸ್ತಿಶಾಸ್ತ್ರ ಅರ್ಥಶಾಸ್ತ್ರ ಇವೇ ಮೊದಲಾದವುಗಳನ್ನು, ಷಟ್‌ದರ್ಶನಗಳನ್ನೂ, ಹೊಂದಿರುತ್ತೇವೆ. ಇವೆಲ್ಲವನ್ನೂ ಕೂಲಂಕಷವಾಗಿ ವಿಮರ್ಶಿಸುವುದು ಅತ್ಯಾವಶ್ಯಕವಾದರೂ ಈಗ ಸ್ಥೂಲವಾಗಿ ಮೇಲೆ ಹೇಳಿದಂತೆ ಐದು ವಿಭಾಗಕ್ಕೆ ಗಮನ ಕೊಡಲಾಗುತ್ತದೆ.

## ವೇದ ಸಾಹಿತ್ಯ

ಆರ್ಯರ ಒಂದು ಪಂಗಡವು ಪ್ರೊ. ಮ್ಯಾಕ್‌ಡೊನೆಲ್ ಅವರು ಹೇಳಿರುವಂತೆ ಹಿಂದೂ-ಐರೋಪ್ಯ (Indo European) ಎಂದು ಕಲ್ಪಿಸಿಕೊಂಡಿರುವ ಮೂಲ ಶಾಖೆಯಿಂದ ವಿಭಾಗಿಸಿ ನಮ್ಮ ಹಿಂದೂ ದೇಶಕ್ಕೆ 3000 ವರ್ಷಗಳ ಹಿಂದೆ ಬಂದಿತು. ಎ. ಜಿ. ಪಾರ್ಜಿಟರ್ ಎನ್ನುವ ವಿಮರ್ಶಕರು ಆರ್ಯರು ಹಿಂದೂ ದೇಶದಿಂದ ಹೊರಗೆ ಹರಡಿದರೆನ್ನುವ ವಾದವನ್ನು ಮಾಡಿರುವರು. ಭೂ ಸಂಶೋಧನ ಶಾಖೆ (Archeological Department) ಯವರಿಂದ ಈಗ ಬಹಿರಂಗ ಮಾಡಲ್ಪಟ್ಟು "ಮೊಹೆಂಜೋದಾರೊ "ಮತ್ತು "ಹರಪ್ಪಾನ್ಸ್" ಎನ್ನುವ ಅತಿ ಪ್ರಾಚೀನ ಅವಶೇಷಗಳಿಂದ ಇಲ್ಲಿಯವರು ಕ್ರಿ. ಪೂ. 5000 ವರ್ಷಗಳಿಗೂ ಹಿಂದಿನಿಂದ ಹೊರದೇಶದವರೊಡನೆ ಸಂಪರ್ಕವಿಟ್ಟುಕೊಂಡಿದ್ದರೆಂದೂ ಅದರಲ್ಲೂ "ಉರ್" (Ur) ಕಿಷ್, " ಈಜಿಪ್ಟ್". "ಸುಮರ್" "ಏಲಂ" ಮೊದಲಾದ ದೇಶಗಳೊಡನೆ ವ್ಯಾಪಾರವನ್ನು ಸಮುದ್ರಯಾನದ ಮೂಲಕ ಮಾಡುತ್ತಿದ್ದರೆಂದೂ A .D. ಪುಸಲ್ಕರ್ ಅವರು ತಮ್ಮ ಲೇಖನದಲ್ಲಿ ತಿಳಿಸಿರುವರು. ದತ್ತರು ತಮ್ಮ ಗ್ರಂಥದಲ್ಲಿ ಈ ಜನಾಂಗದ ಸಂಸ್ಕೃತಿ ಕಾಲದಲ್ಲೇ ಆರ್ಯರು ಸಂಗಡವಿದ್ದರೆಂದಿರುವರು. ಈ ಸಂಸ್ಕೃತಿಯನ್ನು ಈಗ ವಿಮರ್ಶಕರು "ಸಿಂಧೂ ನದಿಯ ತಪ್ಪಲು ಪ್ರದೇಶ ಸಂಸ್ಕೃತಿ" (Indus Valley Civilization) ಎಂದು ವ್ಯವಹರಿಸುತ್ತಿರುವರು. ಆರ್ಯಸಂಸ್ಕೃತಿಯೂ ಸಿಂಧು ತಪ್ಪಲು ಪ್ರದೇಶದ ಸಂಸ್ಕೃತಿಯೂ. ಬೇರೆ ಎನ್ನುವ "ಸರ್ ಮಾರ್ಷಲ್"ಅವರ ಅಭಿಪ್ರಾಯವು ಈಗ ಸಾಮಾನ್ಯವಾಗಿ ಒಪ್ಪಲ್ಪಟ್ಟಿದ್ದರೂ ಋಗ್ವೇದದ ಆರ್ಯರ ಸಂಸ್ಕೃತಿಯೋ ಇದು ಎನ್ನುವುದಕ್ಕೆ ವಿರುದ್ಧವಾಗಿ ಪ್ರಮಾಣ ಬಾಹುಳ್ಯವಿಲ್ಲ. ಈ ಸಂಸ್ಕೃತಿಯು ಸಿಂಧ್. ಪಂಜಾಬ್. ಕಾಥಿಯವಾರ್. ಕೆಲವು ಸಮುದ್ರತೀರಗಳು. ವಾಯುವ್ಯ ಪ್ರದೇಶಗಳು. ಗಂಗಾ ತೀರಪ್ರದೇಶಗಳು. ಹೈದರಾಬಾದ್. ಕರ್ನಾಟಕ. ನೀಲಗಿರಿ. ತಿನ್ನವೆಲ್ಲಿ ಡಿಸ್ಟ್ರಿಕ್ಟ್ ಮತ್ತು ಕೊನೆಯದಾಗಿ ಸಿಂಹಳಕ್ಕೂ ಹರಡಿತ್ತೆಂದು ಅಭಿಪ್ರಾಯವೂ ಕೊಡಲ್ಪಟ್ಟಿದೆ. ಅಂದರೆ ಒಟ್ಟಿನಲ್ಲಿ ಈಗ ಆರ್ಯರು ಬಂದರೋ ಇಲ್ಲಿಂದ ಹೊರಗೆ ಹೋದರೋ ಎನ್ನುವುದು ಅನಿಶ್ಚಿತವಾಗಿ ಉಳಿದಿದೆ. ಕಾಲದ ವಿಷಯದಲ್ಲಿಯೂ ಈಗ ಸಾಮಾನ್ಯವಾಗಿ ಸ್ವೀಕರಿಸಲ್ಪಟ್ಟಿರುವ ಅಭಿಪ್ರಾಯಗಳು ಮತ್ತೆ ವಿಮರ್ಶಿಸಲ್ಪಡಬೇಕಾದ ಪ್ರಸಂಗವು ಒದಗಿದೆ. ಋಗ್ವೇದದ ಭಾಷೆ ಮತ್ತು ವಿಷಯಗಳ ಆಧಾರದ ಮೇಲೆ ಕಾಲ ನಿರ್ಣಯ ಮಾಡುವುದು ಸಮರ್ಪಕವಲ್ಲವೆಂದು V. S.ಸುಕ್‌ಥಂಕರ್ ಅವರು ತಮ್ಮ ಅಭಿಪ್ರಾಯವನ್ನು ಹೇಳಿ. ಮ್ಯಾಕ್ಸ್‌ಮುಲ್ಲರ್ ಅವರ ಕ್ರಿ.ಪೂ. 1200 ಎನ್ನುವ ಅಭಿಪ್ರಾಯವನ್ನೂಕ್ಕೆಗಿ ಮತ್ತು ಹಟ್ಗ ಅವರ ಕ್ರಿ. ಪೂ. 2000-1500 ಕಾಲ ನಿರ್ದೇಶನವನ್ನೂ ತಳ್ಳಿಹಾಕಿ ಜ್ಯೋತಿಷ್ಯದ ಆಧಾರದ ಮೇಲೆ ಹೇಗ್. ಶಂಕರ. ಬಾಲಕೃಷ್ಣ ದೀಕ್ಷಿತ್ ಮತ್ತು ಬಾಲಗಂಗಾಧರ್ ತಿಲಕ್ ಇವರ ಕ್ರಿ.ಪೂ. 3000-6000 ಕಾಲಾವಧಿಗೂ ಜಾಕೋಭಾ ಅವರ ಕ್ರಿ. ಪೂ. 4000 ಎನ್ನುವ ಮತಕ್ಕೂ ತಲೆದೂಗಿಸುವಂತಿದೆ. ಇವೆಲ್ಲವನ್ನೂ ನೋಡಿದರೆ ಆರ್ಯರೇ ಅತಿ ಪ್ರಾಚೀನ ಜನಾಂಗವೆಂದೂ. ಅವರು ನಮ್ಮ ಹಿಂದೂ ದೇಶದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಇದ್ದರೆಂದೂ ಇವರ ಪ್ರಭಾವವೇ ಹೊರಗೆ ಹಾದಿತ್ತೆಂದು ಊಹಿಸಲು ಸಾಧ್ಯವಾಗಿದೆ. ಇದರ ವಿಷಯದಲ್ಲಿ ಪ್ರವೀಣರು ಇನ್ನೂ ವಿಮರ್ಶೆ ಮಾಡಿ ಮತ್ತು ನಿರ್ದಿಷ್ಟಾಭಿಪ್ರಾಯಕ್ಕೆ ಬರಬೇಕಾಗಿದೆ. ಈ ವೇದ ಕಾಲವನ್ನು ನಾಲ್ಕು ಅಂತರದಲ್ಲಿ ನಾವು ಊಹಿಸಬಹುದು.

(a) ಭಾವನಾಮಯ ಕಾಲ:- ಆರ್ಯರು ಪ್ರಕೃತಿ ಸೌಂದರ್ಯವನ್ನೂ ಅದರಲ್ಲಿ ಕಾಣುವ ನಿಯಮ ಅಂದರೆ ವ್ಯತ್ಯಾಸವಾಗದ ಕ್ರಮ ವಿಶೇಷವನ್ನೂ ನೋಡಿ, ತಮ್ಮ ಅಂದರೆ ವೃತ್ತಗಳನ್ನೂ ಆಶ್ರಯಿಸಿ ಅವು ತಮ್ಮ ಭಾವನೆಗೆ ಸರಿದೂಗುವಂತೆ ಮಾಡಿಕೊಂಡು ಆಯಾ ಪ್ರಕೃತಿ ವ್ಯಕ್ತಿಗಳಿಗೆ ಚೇತನತ್ವವನ್ನು ಕೊಟ್ಟು, ಅವು ದೇವತೆಗಳೆಂದು ಗುಣಗಾನಮಾಡಿ ತೃಪ್ತಿಮಾಡುತ್ತಿದ್ದರು ಇದೇ ಸಂಹಿತೆಯ ಕಾಲ. ಸಂಹಿತೆಯೆಂದರೆ ದೇವತಾಪರವಾದ ಛಂದಸ್ಸಿನೊಡನೆ ಕೂಡಿರುವ ಪದ್ಯಗಳನ್ನು ವಿಂಗಡಿಸಿ ಅವುಗಳನ್ನು ಮೊದಲು ಹತ್ತು ಮಂಡಲಗಳಲ್ಲಿ ಕೂಡಿಸಿಕೊಟ್ಟಿರುವ ಗ್ರಂಥ ವಿಶೇಷ.

(b) ಕರ್ಮಮಯ ಕಾಲ:- ಈ ಕಾಲದಲ್ಲಿ ದೇವತೆಗಳ ವಿಷಯದಲ್ಲಿ ಭಾವವು ಪಕ್ವವಾಗುತ್ತಾ ಬಂದು ಅವರು ಉತ್ತಮ ಜೀವಿಗಳು ಎನ್ನುವ ಅಭಿಪ್ರಾಯವು ಮನದಲ್ಲಿ ರೂಢವಾದ ಮೇಲೆ ಆಯಾ ದೇವತೆಗಳನ್ನು ಕರ್ಮಗಳಿಂದ ಪ್ರೀತಿಪಡಿಸಬೇಕೆನ್ನುವ ಹಂಬಲ ಜಾಸ್ತಿಯಾಯಿತು. ಡಾ. ಲಿಯೋನಿಡ್ (Dr. Leonid Weliachew) ಎನ್ನುವ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದ ವಿಮರ್ಶಕನು ನಮ್ಮದಲ್ಲದೆ ಬೇರೆ ಪ್ರಪಂಚಗಳಲ್ಲಿ ನಮಗಿಂತಲೂ ಉತ್ಕೃಷ್ಟ ಜ್ಞಾನವುಳ್ಳ ಜೀವಿಗಳಿರುವರೆಂದು ತಿಳಿಸಿರುವನು (Vide Deccan Herald of 16-07-1971)

ಈ ಕಾಲದಲ್ಲಿ ಹೊಸ ಪದ್ಯಗಳು ರಚಿಸಲ್ಪಡಲಿಲ್ಲ. ಮನಸ್ಸು ಕಾರ್ಯೋನ್ಮುಖವಾಗಿತ್ತು. ಯಜ್ಞ ಯಾಗಾದಿಗಳು ತಲೆದೋರಿದುವು. ಇದು ಗದ್ಯ ಕಾಲ. ಕಥೆ, ಇತಿಹಾಸ ಮತ್ತು ಆಖ್ಯಾಯಿಕೆಗಳಿಂದ ತಮ್ಮ ಅನುಷ್ಠಾನಗಳಿಗೆ ಪ್ರಮಾಣಗಳನ್ನು ಕಲ್ಪಿಸಿಕೊಂಡ ಕಾಲವಿದು. ಕಥೆ ಮತ್ತು ನಿದರ್ಶನ ಇವುಗಳಿಗೆ ಅರ್ಥವಾದವೆಂದು ಹೆಸರು ಬಂದಿದೆ. ಈ ಕಾಲದಲ್ಲಿಯೂ ವೇದವು ಶೃತಿ ಎಂದು ಕೀರ್ತಿಯನ್ನು ಪಡೆದು ಮಂತ್ರಗಳೆಲ್ಲವೂ ಪರಮಾತ್ಮನಿಂದ ಕೊಡಲ್ಪಟ್ಟ ಅನುಗ್ರಹ ವಿಶೇಷಗಳು ಎಂದು ನಂಬಿಕೆಯು ಮಾಡುವಂತಾಯಿತು.

(c) ಕರ್ಮವಿನಿಮಯ ಕಾಲ:- ಈ ಕಾಲದಲ್ಲಿ, ಯಜ್ಞಯಾಗಾದಿಗಳು ನಿಶ್ಚಿತ ಆಕಾರಗಳನ್ನು ಹೊಂದಿ ಆಯಾ ಯಜ್ಞಗಳಿಗೆ ಆಯಾ ದೇವತೆಗಳು, ಆಯಾ ದೇವತೆಗಳಿಂದ ಆಯಾ ಫಲಕ್ಕಾಗಿ ಆಯಾ ಆಹಾರಪದಾರ್ಥಫಲಗಳೂ ಇವೆಲ್ಲವೂ ನಿಶ್ಚಯಿಸಲ್ಪಟ್ಟು. ಇಂತಹ ವೇದ ಕರ್ಮಗಳಲ್ಲಿ ಅನ್ವಯಿಸುವವರಿಗೂ ಋತ್ವಿಕ್ಕುಗಳು ಎಂದು ಹೆಸರುಬಂದು, ಅವರು ಸಾಮಾನ್ಯವಾಗಿ ನಾಲ್ವರಿರಬೇಕೆನ್ನುವ ನಿರ್ಬಂಧವು ಜಾರಿಗೆ ಬಂದಿತು. ಹೀಗೆ ಕರ್ಮಗಳಲ್ಲಿ ಅನ್ವಯಿಸುವವರಿಗೆ ದ್ವಿಜರೆಂದೂ, ದ್ವಿಜತ್ವವೂ ಉಪನಯನದಿಂದ ಬಂದು ವಿಶೇಷಾಧ್ಯಯನದಿಂದ ಸಿದ್ಧವಾಗುವುದೆಂದೂ ಪರಿಷ್ಕೃತವಾಗಿ ಜಾತಿಭಾವನೆಯು ತಲೆದೋರುವಂತಾಯಿತು. ಯಜ್ಞಮಾಡುವವನು "ಅಧ್ವರ್ಯು" ಸಾಮಗಾನ ಮಾಡುವವನು ಉದ್ಗಾತಾ:ಮಂತ್ರವನ್ನು ಹೇಳುವವನು ' ಹೋತಾ' ಇವೆಲ್ಲವೂ ಸರಿಯೇ ಎಂದು ಗಮನಿಸಿ ನೋಡಿಕೊಳ್ಳುವವನು ಬ್ರಹ್ಮಾ; ಹೀಗೆ ಬುದ್ಧಿ , ಶಕ್ತಿ ಮತ್ತು ಕೌಶಲ್ಯದ ಆಧಾರದ ಮೇಲೆ ಸಮಾಜದಲ್ಲಿ ವ್ಯಕ್ತಿ ವಿಭಾಗವಾಗಿ ಅದು ಕ್ರಮೇಣ ನಾಲ್ಕೂಜಾತಿಗಳಾಗಿ ಉಳಿಯುವಂತಾಯಿತು. ಈ ಕಾಲವೇ ಬ್ರಾಹ್ಮಣ ಕಾಲ. ರಾಜ್ಯವಾಳುವವನು ದೊರೆಯಾದನು.

ಅವನಿಗೆ ರಾಜ್ಯದಲ್ಲಿ ನೆರವಾಗುವವರು ಕ್ಷತ್ರಿಯರು. ಅವನಿಗೆ ಧರ್ಮಾಧರ್ಮ ವಿವೇಕ ಕೊಡುವವನೂ ಉಪಯುಕ್ತ ಕರ್ಮಗಳನ್ನು ಮಾಡಿಸುವವನು ಬ್ರಾಹ್ಮಣನಾದನು. ಬೊಕ್ಕಸ ನೋಡಿಕೊಳ್ಳುವವನು ವೈಶ್ಯ. ಈ ಬ್ರಹ್ಮ, ಕ್ಷತ್ರಿಯ, ವೈಶ್ಯರಿಗೆ ಸೇವೆ ಸಲ್ಲಿಸುವವನು ಶೂದ್ರ. ಇವನು ಬುದ್ಧಿಯಲ್ಲಿ, ಕುಶಲತೆಯಲ್ಲಿ, ಜಾಣ್ಮೆಯಲ್ಲಿ ಹಿಂದುಳಿದವನು. ಈ ಕಾಲದಲ್ಲಿಯೂ ಬ್ರಾಹ್ಮಣನಿಗೆ ಪ್ರಾಶಸ್ತ್ಯ ಬಂದಿತೆಂದು ಅಭಿಪ್ರಾಯಪಡುತ್ತಾರೆ. ಈ ಪ್ರಾಶಸ್ತ್ಯವು ಆಳರಸರಿಗೆ ನೆರವಾಗುವುದಕ್ಕೆ ಮಾತ್ರ ಉಪಯುಕ್ತವಾಗಿತ್ತು. ಅವರಿಗೆ ವಿಶೇಷಾನುಷ್ಠಾನಗಳು ವಿಧಿಸಲ್ಪಟ್ಟ ಕಾಲವಿದು. ಬ್ರಾಹ್ಮಣರೆಂದರೆ ಪರಮಾತ್ಮನ ಧ್ಯಾನದಲ್ಲಿ ಅವನನ್ನು ಪ್ರತಿಪಾದಿಸುವ ಶಾಸ್ತ್ರವನ್ನು ಅಧ್ಯಯನ ಮಾಡುವುದರಲ್ಲಿ ನಿರತನಾದವನೆಂದರ್ಥ. (ಬ್ರಹ್ಮ ಅಣತಿ ಇತಿ ಬ್ರಾಹ್ಮಣ) ಈ ಧ್ಯಾನ ವಿಶೇಷದಿಂದ ಸರ್ವಭೂತ ಹಿತವೇ ಇವನ ದೃಷ್ಟಿಯಾಗಿ ಇವನು ಬಾಳಬೇಕಾಗಿ ಬಂದಿರುವುದರಿಂದ ಇವನಿಗೆ ಬ್ರಹ್ಮವೆನ್ನುವ ಹೆಸರೂ ರೂಢವಾಯಿತು. ಇವನ ಧ್ಯಾನಕ್ಕೆ ಉಪಯುಕ್ತವಾದ ವಿಷಯಗಳೂ, ಧ್ಯಾನಕ್ರಮವೂ, ಆಲಂಬನವಸ್ತುವೂ ನಿರ್ದೇಶಿಸಲ್ಪಟ್ಟವು. ಅದನ್ನು ತಿಳಿಸುವ ಗ್ರಂಥಗಳೇ ಅರಣ್ಯಕಗಳು. ಅರಣ್ಯದಲ್ಲಿ ಏಕಾಂತವಾಗಿ ಚಿಂತಿಸಲ್ಪಡಬೇಕಾದ, ಧ್ಯಾನಮಾಡಲ್ಪಡಬೇಕಾದ ವಿಷಯಗಳೆಲ್ಲವೂ ಇಲ್ಲಿ ವಿಶೇಷವಾಗಿ ಹೇಳಲ್ಪಟ್ಟಿರುವುದರಿಂದ ಈ ಹೆಸರು ಬಂತು. ಈ ಅರಣ್ಯಕಗಳಲ್ಲಿಯೂ ಪರಮಾತ್ಮಾ, ಜೀವಾತ್ಮಾ, ಪ್ರಕೃತಿ, ಕರ್ಮ, ಜ್ಞಾನ ಮೊದಲಾದ ವಿಷಯಗಳಿಗೆ ಮಾತ್ರ ಏಕಾಂತದೃಷ್ಟಿ ಕೊಟ್ಟಿರುವ ಭಾಗವೇ ಉಪನಿಷತ್ತು. ಇಲ್ಲಿ ಗುರುವಿನಿಂದಲೇ ಚಿಂತಿಸಲ್ಪಡಬೇಕಾದ, ಧ್ಯಾನಿಸಲ್ಪಡಬೇಕಾದ ವಿಷಯಗಳು ಅಡಗಿರುವುದರಿಂದ ಅದಕ್ಕೆ ಈ ಹೆಸರು ರೂಢವಾಯಿತು. ಅಂದರೆ ಬ್ರಾಹ್ಮಣವು ಅರಣ್ಯಕ ಮತ್ತು ಉಪನಿಷತ್ತು ಎಂದು ಎರಡು ವಿಶೇಷಾಧ್ಯಯನಗಳನ್ನು ಸೇರಿಸಿಕೊಡುವಂತಾಯಿತು. ಈ ಬ್ರಾಹ್ಮಣ ಕಾಲವಾದ ಮೇಲೆಯೋ ದೇವತಾಪರವಾದ ಮಾತ್ರಗಳೆಲ್ಲವೂ ಸಂಹಿತಾ ರೂಪದಲ್ಲಿ ಕ್ರಮಪಡಿಸಲ್ಪಟ್ಟವೆಂದು ಮ್ಯಾಕ್‌ಡೊನೆಲ್ ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯಕ್ಕೆ ಅನೇಕರು ಸಮ್ಮತಿ ಕೊಟ್ಟಿರುವರು.

(d) ಸೂತ್ರಕಾಲ:- ಈ ಕಾಲದಲ್ಲಿ ಧರ್ಮಶಾಸ್ತ್ರಗಳು ತಲೆದೂರಿದವಲ್ಲದೇ ವೇದ ಕರ್ಮಗಳೆಲ್ಲವೂ ಬ್ರಹ್ಮಚರ್ಯ, ಗಾರ್ಹಪತ್ಯ, ವಾನಪ್ರಸ್ಥ ಸನ್ಯಾಸವೆನ್ನುವ ಆಶ್ರಮಗಳಿಗೂ ಆಯಾ ಜಾತಿಗೂ ವಿಂಗಡಿಸಲ್ಪಟ್ಟವು. ಹಾಗೆ ಕರ್ಮಗಳನ್ನು ವಿಂಗಡಿಸಿ, ಅವುಗಳ ಅನುಷ್ಠಾನ ಪರಿಷ್ಕಾರವು ಗೃಹಸೂತ್ರ, ಶ್ರೌತಸೂತ್ರ ಮೊದಲಾದವುಗಳಿಂದ ಮಾಡಲ್ಪಟ್ಟವು. ಈ ಕಾಲದಲ್ಲಿಯೇ ವರ್ಣಾಶ್ರಮ ಧರ್ಮವು ರೂಪುಗೊಂಡಿತು.

## ೨. ಋಗ್ವೇದ ಸ್ವರೂಪ

ಹೀಗೆ ನಾನಾ ಮುಖವಾಗಿ ವಿಪುಲವಾಗಿ ಬೆಳೆದ ವಿಪುಲ ಸಾಹಿತ್ಯಕ್ಕೆ ಋಗ್ವೇದವೇ ಮೂಲ ಆರ್ಯರ ಯೋಗ ಪರಿಷ್ಕೃತ ಹೃದಯದಲ್ಲಿ ಪ್ರಕೃತಿ ಸೌಂದರ್ಯ, ನಿಯತಿ ಮತ್ತು ಅನುಕೂಲ್ಯ ಇವೇ ಮೊದಲಾದವುಗಳನ್ನು ನೋಡಿ ಹೊರಹೊಮ್ಮಿದ ಆಶ್ಚರ್ಯ, ಸಂತೋಷ ಮತ್ತು ನಂಬಿಕೆ,

ಇವೇ ಈ ಮಂತ್ರಗಳು ಬರೆಯಲ್ಪಡುವುದಕ್ಕೆ ಮೂಲ ಕಾರಣ. ಈ ಪ್ರಕೃತಿ ತತ್ತ್ವವನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆನ್ನುವ ಕುತೂಹಲವೂ ಕಂಡು ಬರುತ್ತದೆ. ಇದಕ್ಕೆ

(a) " ಕಸ್ಮಾದಸೌ ಸೂರ್ಯೋನ ಪತತ್ಯಂತರಿಕ್ಷಾತ್

(b) ಕುತ್ರೈತಾಸ್ತಾರಾಃ ದಿವಾನಿಲೀಯಂತೇ

(c) ರಾತ್ರಿಂದಿವಂ ಸ್ಯಂದಮಾನಾ ಅಪಿನದ್ಯಃ
ಕದಾಚಿತ್ ಸಮುದ್ರಂ ಜವೇನ ಪೂರಯಂತಿ."

ಇವೇ ಮೊದಲಾದವುಗಳು ನಿದರ್ಶನ. ಇವುಗಳಲ್ಲಿ ಬಾಲ್ಯಭಾವನೆಯೂ ಕಾಣುವುದೆಂದು ಮ್ಯಾಸ್ ಡೊನೆಲ್ ಅವರ ಅಭಿಪ್ರಾಯ. ತಮ್ಮ ದೃಷ್ಟಿಯಿಂದ ತಮ್ಮ ಜನಾಂಗದ ಚರಿತ್ರೆಯ ದೃಷ್ಟಿಯಿಂದ ಈ ಅಭಿಪ್ರಾಯವು ಅವರಿಂದ ಕೊಡಲ್ಪಟ್ಟಿದೆ. ಮನಸ್ಸಿನಲ್ಲಿ ಏಳುವ ಕುತೂಹಲವನ್ನು ಯಥಾವತ್ತಾಗಿ ತಿಳಿಸುವ ಮಂತ್ರಗಳಿವು. ಆಧುನಿಕರಂತೆ ಅವರು ಇದ್ದು ಅವರ ಮನಸ್ಸಿನಲ್ಲಿ ಈ ಭಾವಗಳು ಬಂದಿದ್ದರೆ ಮಂತ್ರಗಳು ಈಗಿರುವಂತೆ ಇರುತ್ತಿರಲಿಲ್ಲ. ಸೌಹಾರ್ದದೃಷ್ಟಿಯಿಂದ ನೋಡಿದರೆ ಯಥಾರ್ಥವು ಗೋಚರವಾಗುವುದು. ವಿಲ್ಸನ್ ವಿಮರ್ಶಕನು ಹೇಳಿರುವಂತೆ "ಹಿಂದು ಸಂಸ್ಕೃತಿಯಲ್ಲಿ ತೊಡಗಿರುವವರು ಮಾತ್ರ ವೇದಕ್ಕೆ ಸರಿಯಾದ ಅರ್ಥ ಹೇಳಲು ಸಮರ್ಥರು. ಹಿಂದುವಲ್ಲದವನು ಎಷ್ಟು ನಿಷ್ಪಕ್ಷಪಾತಿ ಎಂದು ತಾನು ಅರಿತಿದ್ದರೂ ತನ್ನ ಹೃದಯದಲ್ಲಿ ಅಡಗಿರುವ ದ್ವೇಷಾಸೂಯೆಗಳನ್ನು ಪ್ರಕಾರಾಂತರದಿಂದ ತನ್ನ ಗ್ರಂಥದಲ್ಲಿ ತೋರಿಸಿಕೊಳ್ಳುವನು. ಕೋಲ್‌ಬ್ರೂಕಿಗೆ (1805) ಹಿಂದೂ ಸಂಸ್ಕೃತಿಯಲ್ಲಿ ಅಸಹ್ಯಭಾವನೆ ಇತ್ತು. ಎ. ವೆಬರ್‌ರವರ (1852) ನಿರ್ಣಯಗಳು ಸಾಮಾನ್ಯವಾಗಿ ತಪ್ಪಾಗಿಯೇ ಇವೆ. ಮ್ಯಾಕ್ಸ್‌ಮುಲ್ಲರ್ ಇದ್ದುದರಲ್ಲಿ ಮಧ್ಯಸ್ಥಿಗೆ ಭಾವವನ್ನು ತಾಳಿರುವರು. ಲುಡ್‌ವಿಗ್ ಮತ್ತು ಗ್ರಾಸ್‌ಮನ್ ಇವರು ಹಿಂದುಗಳು ಮಾಡಿರುವ ವ್ಯಾಖ್ಯಾನಗಳೆಲ್ಲ ತಪ್ಪು ಮತ್ತು ವಿಮರ್ಶನಾತ್ಮಕ ದೃಷ್ಟಿಯಿಂದ ಕಂಡಿಲ್ಲವೆಂದು ಹೇಳಿರುವರು (1873-75) ಹಿಂದೂ ಸಂಸ್ಕೃತಿಯನ್ನು ವಿಮರ್ಶಿಸಬೇಕೆನ್ನುವ ಕುತೂಹಲವು 18ನೇ ಶತಮಾನದ ಕೊನೆಯಲ್ಲಿ ಪಾಶ್ಚಾತ್ಯರಿಗೆ ತೋರಿ ಅವರಿಂದ ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್ (Asiatic Society of Bengal) ಎನ್ನುವ ಸಂಸ್ಥೆಯು 1784ರಲ್ಲಿ ಸ್ಥಾಪಿತವಾಯಿತು. ಇದಾದ 20 ವರ್ಷಗಳಾದ ಮೇಲೆ ಜರ್ಮನ್ ದೇಶದವನಾದ ಫೆಡ್‌ರಿಕ್‌ರೋಸೆನ್ ಎನ್ನುವನು ವೇದದ ನಿಜವಾದ ಬೆಲೆಯನ್ನು ಮನಗಂಡನು. 1846ರಲ್ಲಿ ರುಡಾಲ್ಫ್ ರಾತ್ ಎನ್ನುವನು ಚಾರಿತ್ರಿಕ ದೃಷ್ಟಿಯಿಂದಲೇ ವೇದಾಂತವನ್ನು ಗ್ರಹಿಸಬೇಕೆಂದೂ ಅದಕ್ಕಾಗಿ ನಮ್ಮ ತರ್ಕವು ಅನ್ವಯ ವ್ಯಾಪ್ತಿಗೇ ಸರಿಹೋಗಬೇಕೆಂದೂ (Inductive or Historical method) ಹೇಳಿ, ಯಾಸ್ಕರ ನಿರುಕ್ತಕ್ಕೂ ಸಾಯಸಾ ಚಾರ್ಯರಿಗೂ 1800 ವರ್ಷಗಳು ಅಂತರವಿರುವುದರಿಂದ ಸಾಯನರ ಭಾಷ್ಯವು ಅಷ್ಟು ಪ್ರಾಮಾಣಿಕತೆಯಿಂದ ನೋಡಲು ಯೋಗ್ಯವಲ್ಲವೆಂದು ವಾದಿಸಿರುವವನು. ಬೋಟ್ಲಿಂಗ್ ಎನ್ನುವನು ಈರಾತನ ಮಾರ್ಗವನ್ನೇ ಅನುಸರಿಸಿ ಅನೇಕ ಊಹೆಗಳನ್ನು ಮಾಡಿರುವನು. ಅವೆಲ್ಲವೂ ಉಪೇಕ್ಷಣೀಯಗಳೇ ಆಗಿದೆ. ಇಷ್ಟಾದರೂ ಮೂರ್ (Muir)ಮತ್ತು ಓಲ್ಡೆನ್ ಬರ್ಗ್ (Olden Berg) ಮೊದಲಾದವರು

ಹೀಗೆ ವೇದಾರ್ಥ ಪ್ರತಿಪಾದನೆಯಲ್ಲಿ ಕೆಲವರು ಮಧ್ಯಸ್ಥಿಕೆ ವಹಿಸಿರುವರು ಎಂದಾಗಿ ವೈದಿಕ ಸಾಹಿತ್ಯ ವಿಮರ್ಶೆಯನ್ನು ಮಾಡಲು ಯಾವ ಮಾರ್ಗವನ್ನು ಆಶ್ರಯಿಸಿದರೆ ಸರಿಹೋಗುವುದು ಎನ್ನುವ ವಿಷಯದಲ್ಲಿ ವಿ.ಎಸ್. ಸುಕಥಂಕರ್‌ರವರ ಅಭಿಪ್ರಾಯವೇ ಸರಿಯಾದುದೆಂದು ಹೇಳಬಹುದು. ಅವರು ಹಿಂದೂ ದೇಶದಲ್ಲಿ ಸಾಂಪ್ರದಾಯಿಕವಾಗಿ ಬಂದಿರುವ ವ್ಯಾಖ್ಯಾನಗಳೂ ನಿಷ್ಪಕ್ಷಪಾತಿ ಮನೋಧರ್ಮವೂ, ಪ್ರಾಮಾಣಿಕತೆಯೂ, ತಾಳ್ಮೆ ಮತ್ತು ಪ್ರಜ್ಞೆ ಇವೇ ಸರಿಯಾದ ಮಾರ್ಗ ಎಂದು ಹೇಳಿರುವರು. "ವೇದಾರ್ಥವನ್ನು ಹೇಳಲು ಪಾಶ್ಚಾತ್ಯರೇ ಅಧಿಕಾರಿಗಳು" ಎಂದು ಹೇಳಿರುವುದು ಭೂಷಣವಾಗಿಲ್ಲ. ಪಾಶ್ಚಾತ್ಯ ಅಧ್ಯಯನ ಕ್ರಮದಲ್ಲಿ ಅನೇಕ ಗುಣಗಳು ಇವೆ. ಅವೆಲ್ಲವೂ ಗ್ರಾಹ್ಯವೇ. ಅವರು ಬೋಟ್ಲಿಂಗರ ಸಹಾಯದಿಂದ ಸಂಸ್ಕೃತ ಶಬ್ದ ನಿಘಂಟನ್ನು (sanskrit Dictionary) 1852-75 ಕೊಟ್ಟಿರುವುದಕ್ಕೆ ನಾವು ಚಿರಋಣಿಯಾಗಿರುತ್ತೇವೆ. ಅವರು ಮತ್ತು ಅವರಂತೆ ಮತ್ತು ಅನೇಕರು ನಮ್ಮ ವಿಮರ್ಶನ ದೃಷ್ಟಿಕೋನವನ್ನು ಪರಿಷ್ಕರಿಸಿಕೊಟ್ಟಿರುವುದಕ್ಕೂ ಕೃತಜ್ಞರಾಗಿರುತ್ತೇವೆ. ನಮ್ಮ ವೇದ ಕಾಲದ ಪೂರ್ವೀಕರಂತೆ, ವೇದಮಂತ್ರಗಳು ಇಷ್ಟೆ ಇವು ಖಿಲಶ್ರುತಿಗಳು ಅಂದರೆ ಅಧಿಕ ಪಾಠಗಳು ಮೊದಲಾದ ಕ್ರಮವನ್ನು ಪಾಶ್ಚಾತ್ಯರ ಸಹವಾಸದಿಂದಲೇ ಮತ್ತೆ ನಾವು ತಿಳಿದಿರುತ್ತೇವೆ. ಅದರಂತೆ ವಿಮರ್ಶೆ ಮಾಡಿದರೆ ಋಗ್ವೇದದಲ್ಲಿ 1017 ಮಂತ್ರಗಳು ಮತ್ತು 11ವಾಲಖಿಲ್ಯವೆನ್ನುವ ಮಂತ್ರಗಳು. ಒಟ್ಟುಗೂಡಿ 1028 ಮಂತ್ರಗಳಾಗಿ ಅವು ಹತ್ತು ಮಂಡಲಗಳಲ್ಲಿ ಅಡಗಿಸಲ್ಪಟ್ಟಿವೆ. ಇವುಗಳ'. (1) 2ರಿಂದ 7ರ ಕೊನೆಯವರೆಗೂ ನೋಡಿದರೆ ಪ್ರತಿ ಮಂಡಲವು ಒಬ್ಬೊಬ್ಬ ಋಷಿಗೆ ಮತ್ತು ಅವನ ವಂಶಸ್ಥರಿಗೆ ಮೀಸಲಾಗಿರುವಂತಿದೆ. ಈ ಆರು ಮಂಡಲಗಳನ್ನು ಶಾಖಾ ಮಂಡಲಗಳೆನ್ನಬಹುದು. ಇವೇ ಋಗ್ವೇದದ ಮೂಲಗ್ರಂಥಗಳೆನ್ನಬಹುದು. ಎರಡಕ್ಕಿಂತ ಮೂರು ದೊಡ್ಡದು; ಅದಕ್ಕಿಂತ ನಾಲ್ಕು ಹೀಗೆ ಉತ್ತರೋತ್ತರ ಮಂಡಲವು ಮಂತ್ರಗಳನ್ನು ಜಾಸ್ತಿಯಾಗಿ ಹೊಂದಿದೆ. ಮಿಕ್ಕ ಮಂಡಲಗಳೆಲ್ಲವೂ ಈ ಆರುಮಂಡಲಗಳಿಗೆ ಉತ್ತರ ಕಾಲದಲ್ಲಿ ಸೇರಿಸಲ್ಪಟ್ಟಿರಬೇಕು. (2) 8ನೇ ಮಂಡಲದಲ್ಲಿ ಕಣ್ವ ಶಾಖೆಗೆ ಪ್ರಾಧಾನ್ಯತೆ ಇದೆ. ಆದರೆ ಏಳನೇ ಮಂಡಲಕ್ಕಿಂತ ಚಿಕ್ಕದು. (3) ಈ 7ಮಂಡಲಗಳಾದ ಮೇಲೆ 9ನೇ ಮಂಡಲವು ಸೇರಿಸಲ್ಪಟ್ಟಿರಬೇಕು. ಇದರಲ್ಲಿ ಹಿಂದೂ ಪಾರ್ಶಿಕರ ಒಟ್ಟು ಸಂಸ್ಕೃತಿಯು (Indo-Iranian Culture) ಕಂಡುಬರುತ್ತದೆ. ಇದರಲ್ಲಿ ಸೋಮದೇವತಾ ಪರವಾದ ಮಂತ್ರಗಳೇ ಹೆಚ್ಚು. (4) ಮೊದಲನೇ ಮಂಡಲದ ಮೊದಲಿನ 50 ಮಂತ್ರಗಳು ಎಂಟನೇ ಮಂಡಲದ ಮಂತ್ರಗಳಿಗೆ ಹೋಲುತ್ತವೆ. ಕೆಲವೆಡೆ ಒಂದೇ ಮಂತ್ರಗಳು ಎರಡು ಮಂಡಲಗಳಲ್ಲಿಯೂ ಇವೆ. (5) ಹತ್ತನೇ ಮಂಡಲವು ಮಿಕ್ಕವುಗಳಿಗಿಂತ ನವೀನತೆಯನ್ನು ತೋರಿಸುತ್ತದೆ. ಹಳೆ ದೇವತೆಯಾದ ಉಷಸ್ ದೇವತೆ ಇದರಲ್ಲಿಲ್ಲ. ಹೊಸ ದೇವತೆಗಳು ಎದ್ದಿರುತ್ತಾರೆ. ವಿಶ್ವೇದೇವರಿಗೆ ಪ್ರಾಮುಖ್ಯತೆ ಇದೆ. ಕ್ರೋಧ, ಶ್ರದ್ಧಾ ಮೊದಲಾದ ಮನೋಧರ್ಮಗಳು ದೇವತೆಗಳಾಗಿವೆ. ಜಗತ್ಕಾರಣತ್ವ, ವಿವಾಹ, ಉಪನಯನ, ಅಪರ ಕರ್ಮ, ಮಂತ್ರ ತಂತ್ರಗಳು, ವೇದಾಂತ ಇವೆಲ್ಲವೂ ಇಲ್ಲಿ ಇವೆ. ಭಾಷೆಯಲ್ಲಿಯೂ ನವೀಲತೆಯೂ ಕಂಡುಬರುತ್ತದೆ.

ಅಂದರೆ ಈಗ ಋಗ್ವೇದ ಸಂಹಿತೆ ಎನ್ನುವ ಸಾಹಿತ್ಯವು ಐದು ಪರ್ವಕಾಲಗಳಲ್ಲಿ ಬರೆಯಲ್ಪಟ್ಟಿರುವಂತಿದೆ. (1) ಪ್ರಾಯಶಃ ಇದು ಮತಧರ್ಮವಿಷಯಕವಾದ ಮಂತ್ರಗಳಿಂದಲೇ ಕೂಡಿದೆ. (2) ಲೌಕಿಕ ವಿಷಯ ಪರವಾದ ಮಂತ್ರಗಳು ಹತ್ತನೇ ಮಂಡಲದಲ್ಲಿದೆ. (3)

ಪುತ್ರಪೌತ್ರರ ಶ್ರೇಯಸ್ಸು, ದೀರ್ಘಾಯಸ್ಸು, ವಿಜಯ ಮೊದಲಾದ ಲೌಕಿಕ ಪ್ರಯೋಜನೆಗಾಗಿ ದೇವತೆಗಳು ಸ್ತುತಿಸಲ್ಪಟ್ಟಿರುತ್ತದೆ. (4) ಈ ಮಂತ್ರ ಕರ್ತೃಗಳಾದ ಋಷಿಗಳು ಪರಿಶುದ್ಧಾತ್ಮರೆಂದು ತಿಳಿಯಬಹುದು. VI, 21, 2 ಮತ್ತು X39, 15 ಮಂತ್ರಗಳನ್ನು ಗಮನಿಸಿದರೆ ಇವರು ಯಥಾಶಕ್ತಿ, ಯಥಾಮತಿ, ಮುಚ್ಚುಮರೆ ಇಲ್ಲದೆ ಮನಸ್ಸನ್ನು ಬಿಚ್ಚಿ ತೋರಿಸುತ್ತಿದ್ದರೆಂದು ಊಹಿಸಬಹುದು. (5) ಕೆಲವು ಭಾವನೆಗಳು ಬಹಳ ಪ್ರಿಯವಾಗಿದ್ದಂತೆ ಭಾಸವಾಗುತ್ತದೆ. ಒಂದೇ ಅರ್ಥವನ್ನು ಪ್ರಕಾರ ಭೇದದಿಂದ ಅನೇಕ ಕಡೆ ಅನೇಕ ರೀತಿಯಲ್ಲಿ ವರ್ಣಿಸಿರುವುದನ್ನು ಕಾಣಬಹುದು. (6) ಅಗ್ನಿಸೋಮಪರವಾದ ಮಂತ್ರಗಳಲ್ಲಿ ಕವಿತೆಯು ಬಹಳ ಹಿತವಾಗಿಯೂ ಇಲ್ಲವಾಗಿಯೂ ಇದೆ. (7) ಸೂಕ್ತಗಳು ಸಾಮಾನ್ಯವಾಗಿ ಸರಳವಾಗಿಯೇ ಇದೆ. ಸಮಸ್ತಪದಗಳು ಅಲ್ಪವಾಗಿವೆ . ಯಜ್ಞದೇವತಾ ವಿಷಯಕವಾದ ಸೂಕ್ತಗಳು ಕ್ಲಿಷ್ಟವಾಗಿದೆ. (8) ವಿಶ್ವದಲ್ಲಿ ಕಾಣವ ನಿಯತಿಗೆ ಮುಗ್ಧರಾಗಿದ್ದರು. ಅದನ್ನು 'ಋತ' ಎಂದು ಕರೆದು ಮೊದಲು ಭಾವನೆಯಲ್ಲಿ ಋತುವನ್ನೂ ನಂತರ ಯಜ್ಞಯಾಗಾದಿಗಳಲ್ಲಿ ಋತವನ್ನೂ ಮನಗಂಡು ವೇದಾಂತ ಜೀವನಕ್ಕೆ ಮಾರ್ಗವನ್ನು ಸ್ವಾಭಾವಿಕವಾಗಿ ತೆರೆದಿರುವರು. ಇಲ್ಲಿ ಪಾರಮಾರ್ಥಿಕ ದೃಷ್ಟಿಯ ನಾನಾ ಪರ್ವಗಳನ್ನು ನೋಡಬಹುದು. ದೇವತೆಗಳು ಬೇರೆ ಬೇರೆಯಾಗಿ ಚಿಂತಿಸಲ್ಪಟ್ಟು ಪ್ರಾರ್ಥಿಸಲ್ಪಟ್ಟರೂ ಇಷ್ಟದೇವತಾ ಪಾರಮ್ಯ (Herotheirm), ಪರ್ಯಾಯದೇವತಾ ಪಾರಮ್ಯ (Katherm theirm) ಏಕದೇವತಾ ಪಾರಮ್ಯ (Monotheirm) ನಿರ್ಗುಣಬ್ರಹ್ಮವಾದ (Pantheism)ಇತ್ಯಾದಿ ಕ್ರಮವಲ್ಲಿ ಬುದ್ಧಿಯು ಪರಿಷ್ಕಾರವನ್ನು ಹೊಂದಿರುವಂತಿದೆ. (a) ಮ್ಯಾಕ್‌ಮುಲ್ಲರ್ ಅಭಿಪ್ರಾಯದಲ್ಲಿ, ಪ್ರಾಚೀನ ಕಾಲದಲ್ಲಿ ಪ್ರತಿದೇವತೆಗೂ ಉತ್ಕರ್ಷವಿತ್ತು. ಸರ್ವದೇವತೋತ್ಕರ್ಷವೇ ಇರದು. ಆದರೂ ಅವರಲ್ಲಿ ತಾರತಮ್ಯವೂ ಇತ್ತು ಅದಕ್ಕಾಗಿಯೇ ಅವರಿಗೆ ಸೋಮಯಾಗದಲ್ಲಿ ಬೇರೆ ಬೇರೆ ಸ್ಥಾನವಿತ್ತು. (10) ಮೊದಲು ಪ್ರಾಕೃತಿಕ ವ್ಯಕ್ತಿಗಳಿಗೆ ಚೈತನ್ಯವನ್ನು ಕೊಟ್ಟು ಚಿಂತಿಸುವಾಗ ಪ್ರತಿಯೊಂದು ದೇವತೆಗೂ ಪ್ರಾಶಸ್ತ್ಯವಿತ್ತು. ನಂತರ ಆ ದೇವತೆಗಳನ್ನು ಪ್ರತ್ಯೇಕವಾಗಿ ಸಾಮೂಹಿಕವಾಗಿ ಚಿಂತಿಸುವಾಗ ಸಾಮರಸ್ಯವು ಕಂಡು ಬಂದು "ಅಗ್ನಿ ಷೋಮ, ದ್ಯಾವಾಪೃಥವೀ "ಇಂದ್ರಾವರುಣಾ ಇತ್ಯಾದಿ ದ್ವಂದ್ವ ದೇವತೆಗಳು ಗೋಚರವಾದವು. ಈ ಎಲ್ಲಾ ದೇವತೆಗಳ ಮೂಲವನ್ನು ಮತ್ತು ಅಂತ್ಯವನ್ನು ಚಿಂತಿಸಲು ಹೊರಟಾಗ, ಇವರೆಲ್ಲರೂ ದ್ಯಾವಾಪೃಥಿವೀಯ ಮಕ್ಕಳೆಂದೂ, ಈ ದೇವತೆಗಳ ಮಕ್ಕಳೂ ಸಂತತಿಯೂ ದೇವತಾ ಗೋಷ್ಠಿಗೆ ಸೇರಿದವೆಂದೂ ಸೋಮಪಾನದಿಂದ ಅಮರತ್ವವನ್ನು ಸಂಪಾದಿಸಿದರೆಂದೂ ಭಾವವೂ ತಲೆದೋರಿತು. ಈ ನಿರ್ಜರತ್ವವು ನಿತ್ಯತೋ ಅನಿತ್ಯವೋ ಎನ್ನುವುದರಲ್ಲಿ ನಿಶ್ಚಯವು ಕಂಡುಬರುವುದಿಲ್ಲ. ಮುಂದಿನ ಸ್ಮೃತ್ಯಾದಿಗಳಲ್ಲಿ ಪ್ರಳಯಪರ್ಯಂತ ಅವರ ಸ್ಥಿತಿಯು ಹೇಳಲ್ಪಟ್ಟಿದೆ. (11) ಈ ದೇವತೆಗಳು ಮೂರು ಬುಡಕಟ್ಟಿಗೆ ಸೇರಿದವರು. ಭೂದೇವತೆಗಳು ಕೆಲವರು. ಅವರಿಗೆ ಯಜಮಾನ ಅಗ್ನಿ. ಅಂತರಿಕ್ಷ ದೇವತೆಗಳು ಕೆಲವರು. ರುದ್ರನು ಅವರಿಗೆ ಅಧಿಪತಿ. ದ್ಯುದೇವತೆಗಳು ಮಿಕ್ಕವರು. ಅವರಲ್ಲಿ ಇಂದ್ರನು ಪ್ರಧಾನ. ಅವರೆಲ್ಲರಿಗೂ ದ್ಯೌಃ (Zeus) ಎನ್ನುವ ದೇವತೆಯ ಪಿತೃವು. ದ್ಯೌಪಿತೃ (Jupiter) ಎನ್ನುವ ನಂಬಿಕೆಯು ಗ್ರೀಸ್ ಸಂಸ್ಕೃತಿಯಲ್ಲಿ ನೋಡಬಹುದು. ಒಟ್ಟು 33 ದೇವತೆಗಳು. ಇವರಲ್ಲಿ ಮರುದ್ದೇವಗಳು ಗಣಿಸಲ್ಪಟ್ಟಿಲ್ಲ. ಒಟ್ಟಿನಲ್ಲಿ 20 ದೇವತೆಗಳಿಗೆ ಪ್ರಾಶಸ್ತ್ಯವಿದೆ. ಇಂದ್ರ ಪರವಾದ ಮಂತ್ರಗಳು 250 ಇವೆ. ಅಗ್ನಿಪರವಾಗಿ 200. ಸೋಮಪರವಾಗಿ 100. ಪರ್ಜ ನ್ಯ 3.ಯಮ3. ವರುಣಪರವಾಗಿ ಹೆಚ್ಚಾಗಿಲ್ಲದಿದ್ದರೂ ಅವನು ಇಂದ್ರನಿಗೆ ಸಮವಾಗಿ

ಪರಿಗಣಿಸಲ್ಪಟ್ಟಿರುತ್ತಾನೆ. ಎಲ್ಲಾ ದೇವತೆಗಳೂ ಗುಣಶಾಲಿಗಳು. ವೀರ್ಯ ಸಾಹಸದಲ್ಲಿ ಇವರು ಅಗ್ರಗಣ್ಯರು. (12) ಇವರಲ್ಲಿ ಕರ್ಮದೇವತೆಗಳು ಅಜಾನಜದೇವತೆಗಳು ಮತ್ತು ದೇವತೆಗಳು ಎಂದು ಮೂರು ವಿಭಾಗವು ತೈತ್ತಿರೀಯದಲ್ಲಿ ಕಾಣುತ್ತದೆ. (13) ಭಕ್ತಿಗೆ ವಿಷಯವಾದ ದೇವತೆ, ವರುಣ, ಭಕ್ತಿಮಾರ್ಗದ ಮೂಲವನ್ನು ಇವನ ಪರವಾದ ಮಂತ್ರಗಳಲ್ಲಿ ನೋಡಬಹುದು. ಆದರೆ ಅಗ್ನಿ ಮತ್ತು ಇಂದ್ರ ಇವರಿಬ್ಬರಿಗೆ ಋಗ್ವೇದದಲ್ಲಿ ಪ್ರಾಶಸ್ತ್ಯವು ಚೆನ್ನಾಗಿ ಕಂಡುಬರುತ್ತದೆ. ಅಗ್ನಿಯೇ ಎಲ್ಲಾ ದೇವತಾಕಾರದಲ್ಲಿ ಕಾಣಲ್ಪಡುವನ್ನೆನ್ನುವ ಭಾವದಲ್ಲಿ ಏಕದೇವತಾ ಪರವಾದವನ್ನು ನೋಡಬಹುದು.

V.3.1.ರಲ್ಲಿ ತ್ವಮಗ್ನೇವರುಣೋಜಾಯಸೇಯತ್ತ್ವಂಮಿತ್ರೋ
ಭವಸಿಯತ್ಸಮಿದ್ಧಃ ತ್ವೇ ವಿಶ್ವೇಸಹಸಸ್ಪಾತ್ರ ದೇವಾಸ್ತ್ವ
ಮಿಂದ್ರೋದಾಶುಷೇ ಮರ್ತ್ಯಾಯ

ಒಂದೇ ದೇವತೆಯು ಲೌಕಿಕಾಗ್ನಿ, ವಿದ್ಯುತ್, ಸೂರ್ಯ ರೂಪದಲ್ಲಿ ಸ್ತುತಿಸಲ್ಪಟ್ಟಿದೆ. ಇದರ ಆಧಾರದ ಮೇಲೆಯೇ I ಮಂಡಲದಲ್ಲಿ "ಏಕಂ[illegible] ವಿಪ್ರಾಬಹುಧಾವದಂತ್ಯಗ್ನಿಂಯಮಂ ಮಾತರಿಶ್ವಾನಮಾಹುಃ"ಎಂದೂX ಮಂಡಳದಲ್ಲಿ " ಸು[illegible]ರ್ಣವಿಪ್ರಾಃ ಕವಯೋವಚೋಭಿರೇಕಃ ಸಂತಬಹುಧಾ ಕಲ್ಪಯಂತಿ" ಎಂದೂ ಭಾವವು ಬೆಳೆದು

" ದ್ಯೌರಂತ ರಿಕ್ಷಂ ವಿಶ್ವೇದೇವಃ ಪಂಚಜನಾಃ
ಜಾತಂ ಜನಿಷ್ಯ ಮಾಣಂ ಚ ಸರ್ವಮದಿತಿರೇವ"

ಎಂದೂ (Iಮಂಡಲ) ಅದಿತಿಸೂಕ್ತದಲ್ಲಿ ಅದ್ವೈತವಾದದಲ್ಲಿ ಕೊನೆಗೊಂಡಿದೆ. (14) ಈ ದೇವತೆಗಳಿಗೂ ಮಾನವರಿಗೂ ಸಂಬಂಧವನ್ನು ಕಲ್ಪಿಸುವಾದ ಮಾನವರೆಲ್ಲರೂ ದೇವತೆಗಳ ಸೇವಕರೆನ್ನುವ ಭಾವವನ್ನು "ಯದಹಂತೇದದಾಮಿ ತನ್ಮೇಪ್ರತ್ಯರ್ಪಯ ಇವೇ ಮೊದಲಾದ ಮಂತ್ರಗಳಲ್ಲಿ ನೋಡಬಹುದು. (15) ಈ ದೇವತೆಗಳು ಪುರುಷಾಕಾರದಲ್ಲಿರುವರೆಂದೂ, ಛಾಯಾರೂಪಗಳಾಗಿ ಅಂಗವೈಚಿತ್ರ್ಯವುಳ್ಳವರೆಂದೂ, ವಾಹನವುಳ್ಳವರೆಂದೂ ಚಿಂತಿಸಲ್ಪಟ್ಟಿರುತ್ತಾರೆ. ಅಗ್ನಿಗೆ ಜ್ವಾಲೆ ನಾಲಿಗೆ ಸೂರ್ಯನಿಗೆ ಕಿರಣಗಳೇ ಕೈಗಳು. ಇವರುಗಳು ತಮ್ಮ ತಮ್ಮ ವಿಮಾನದಿಂದ ಸವನ (ಯಾಗ) ಭೂಮಿಗೆ ಬಂದು ಹವಿಸ್ಸನ್ನು ಸ್ವೀಕರಿಸುವರು ಅಥವಾ ಅಗ್ನಿಯು ಅವನಿಗೆ ಹವಿಸ್ಸನ್ನು ತಲಪಿಸುವನು. ಇವರೆಲ್ಲರೂ ಶಾಂತಾತ್ಮರಾಗಿ ಒಂದೆಡೆ ಇರುವರು. ಇಂದ್ರ ಮಾತ್ರ ಸಂಗ್ರಾಮಾಭಿಲಾಷೀ. ರುದ್ರನುನೃಶಂಸನು. ಅತಿವೃಷ್ಟಾದಿ ಅನಿಷ್ಟಗಳು ವೃತ್ರಾದಿ ರಾಕ್ಷಸರಿಂದ ಬರುತ್ತವೆ. ದೇವತೆಗಳು ಸಾತ್ವಿಕರಾದರೂ ವಿಪಕ್ಷವರ್ಗದವರನ್ನೂ ಕೊಲ್ಲುವುದರಲ್ಲಿ ಕೌಟಿಲ್ಯವನ್ನು ಆಶ್ರಯಿಸುವರು ಅದು ಧಾರ್ಮಿಕವೇ ಎನ್ನುವ ಭಾವನೆಯು ಇದೆ.

## ೩. ಋಗ್ವೇದ ದೇವತೆಗಳು

ದೇವತೆಗಳಲ್ಲಿ ಸೌರ ದೇವತೆಗಳಿಗೆ ಪ್ರಾಶಸ್ತ್ಯವಿದೆ. ಅವರು ಐವರು. (1) ಅವರಲ್ಲಿ ಪ್ರಾಚೀನರೆಂದರೆ ಮಿತ್ರ. ಇವನು ಇಂಡೋ ಇರಾನಿಯನ್ ಕಾಲದಿಂದ ಬಂದವನು. ಅಂದರೆ ಇರಾನ್ ಸಂಸ್ಕೃತಿಯಲ್ಲಿಯೂ ಇವನಿಗೆ ಪ್ರಾಶಸ್ತ್ಯವಿದೆ. ಕ್ರಮೇಣ ಇವನು ವರುಣನಿಗೆ ಸಮನಾಗಿ ಭಾವಿಸಲ್ಪಟ್ಟಿರುವನು. ಅವನೊಡನೆ ಸೇರಿ "ಮಿತ್ರಾ ವರುಣ" ಎನ್ನುವ ದ್ವಿದಳ ದೇವತೆಯಲ್ಲಿ ಇರುವನು.

III. 59 ಮಂತ್ರ ಮಾತ್ರ ಇವನನ್ನು ಪ್ರತ್ಯೇಕವಾಗಿ ವರ್ಣಿಸಿದೆ. ಇದು ಈಗಲೂ ಸಂಧ್ಯಾವಂದನೆಯಲ್ಲಿ ಉಪಸ್ಥಾನ ಮಂತ್ರವಾಗಿ ಪೂಜ್ಯತೆಯನ್ನು ಗಳಿಸಿದೆ. (2) ಇವನಾದಮೇಲೆ ಪ್ರಧಾನ ದೇವತೆ ಎಂದರೆ ಸೂರ್ಯ. ಗ್ರೀಕ್ ಭಾಷೆಯಲ್ಲಿ ಇವನು ಹೆಲಿಯಸ್. ಇವನ ಕಣ್ಣು ಉಷಸ್ ದೇವತೆಯಿಂದ ತರಲ್ಪಟ್ಟು ದೇವತೆಗಳ ಕಣ್ಣಾಗಿದೆ. ಇವನು ಸರ್ವಸಾಕ್ಷಿ. ಸಕಲಜೀವರಾಶಿಗಳ ಪುಣ್ಯಪಾಪಗಳನ್ನು ನೋಡುತ್ತಿರುವನು. ಇವನಿಂದಲೇ ಎಲ್ಲರೂ ಕೆಲಸಮಾಡಲು ಸಮರ್ಥರಾಗಿರುವರು. ಎಲ್ಲರ ಆತ್ಮ ಮತ್ತು ರಕ್ಷಕ ಇವನು. ಏಳು ಕುದುರೆಯಿಂದ ಎಳೆಯಲ್ಪಡುವ ವಾಹನದಲ್ಲಿ ಸಂಚರಿಸುವವನು. ಸಾಯಂಕಾಲದಲ್ಲಿ ಈ ಕುದುರೆಗಳಿಗೆ ವಿಶ್ರಾಂತಿ ಕೊಡುವನು. (II.15.4) ಕತ್ತಲೆಯನ್ನು ಹೋಗಲಾಡಿಸುವನು. ಇವನು ಉಷಃಪತಿ. ಪ್ರಾಣಿಗಳ ಆಯಸ್ಸು ಸರ್ವ ಕರ್ತ. (3) ಇವನಾದ ಮೇಲೆ ಸವಿತೃ ದೇವತೆಯು ಸೂರ್ಯನುದ್ದೀಪ ಪ್ರಕಾಶವಾಗಿ ಹನ್ನೊಂದು ಸೂಕ್ತಗಳಲ್ಲಿ ವರ್ಣಿಸಲ್ಪಟ್ಟಿರುವನು. ಇನನು ಸುವರ್ಣಮಯ ದೇವತೆ. ಇವನಲ್ಲಿ ಎಲ್ಲವೂ ಸುವರ್ಣಮಯ. ಛಾಂದೋಗ್ಯೋಪನಿಷತ್ತಿನಲ್ಲಿರುವ ಅಂತರಾದಿತ್ಯ ವಿದ್ಯೆಯಲ್ಲಿ ಇಂತಹ ಸುವರ್ಣಮಯ ದೇವತೆ ಧ್ಯಾನಕ್ಕೆ ವಿಷಯವಾಗಿರುವುದು. ಉಷಸ್ ದೇವತೆ ಹಿಂದೆ ಓಡುವನು. ದುಃಸ್ವಪ್ನವನ್ನು ಹೋಗಲಾಡಿಸುವನು. ರಾಕ್ಷಸರನ್ನು ಧ್ವಂಸ ಮಾಡುವನು. ದೇವತೆಗಳಿಗೆ ಅಮೃತವನ್ನೂ, ಮಾನವರಿಗೆ ದೀರ್ಘಾಯುಷ್ಯವನ್ನೂ ಕೊಡುವನು. ಮಿಕ್ಕ ದೇವತೆಗಳೆಲ್ಲರೂ ಇವನ ಹಾದಿಯಲ್ಲಿಯೇ ನಡೆವರು. ಮಾನವ, ಇಂದ್ರ, ವರುಣ ಮೊದಲಾದ ದೇವತೆಗಳು ಇವನ ಶಾಸನವನ್ನು ಶಿರಸಾವಹಿಸಿ ನಡೆವರು. ಇವನು ಸೂರ್ಯನೊಡನೆ ಸೇರಿರುವಂತೆ ಎಲ್ಲಿಯೂ ವರ್ಣಿತವಾಗಿಲ್ಲ. II-38ರಲ್ಲಿ ಮಾತ್ರ ವಿನಾಂತ ಸೂರ್ಕ್ಯ ವರ್ಣಿಸಲ್ಪಟ್ಟಿರುವನು. ವೇದಾರಂಭ ಕಾಲದಲ್ಲಿ ಇವನ ವಿಷಯದ ಮಂತ್ರವು ಗಾಯತ್ರಿ ಎನ್ನುವ ಹೆಸರಿನಿಂದ ಹಿಂದೂ ಸಂಸ್ಕೃತಿಗೇ ಒಂದು ಪ್ರಜ್ಯೋತಿ ಎನಿಸಿದೆ. ಇದು II-62-10ರಲ್ಲಿದೆ. ಮುಂದೆ ಉಪನಿಷತ್ಕಾಲದಲ್ಲಿ ಅಂತರಾದಿತ್ಯವಿದ್ಯೆ ಮತ್ತು ಜ್ಯೋತಿರ್ವಿದ್ಯೆಯಲ್ಲಿ ಈ ದೇವತೆಯ ಮಹಾತ್ಮೆಯು ಚೆನ್ನಾಗಿ ಕಾಣುತ್ತದೆ. (4) ಇವನಿಂದ ಮೇಲೆ ಪೂಷದೇವತೆ. ಎಂಟುಸೂಕ್ತಗಳು ಇವನ ಪರವಾಗಿದೆ. ಪೋಷಕನಿವನು. ಮೇಕೆಯೇ ಇವನ ವಾಹನ. ಅಂಕುಶ ಅಸ್ತ್ರ. ಇವನು ಗೋಪಾಲಕನು. ಪಿತೃಲೋಕ ದಾರಿಯನ್ನು ತೋರಿಸುವ ಪರಮೋಪಕಾರಿ (5) ಇವನಾದ ಮೇಲೆ ವಿಷ್ಣು. ಚಾರಿತ್ರಿಕ ದೃಷ್ಟಿಯಿಂದ ನೋಡಿದರೆ ಇವನು ಪ್ರಧಾನ ದೇವತೆ. ಇವನೇ ತ್ರಿವಿಕ್ರಮನು. ವೈದಿಕರಲ್ಲಿ ಪ್ರತಿ ಸಂಧಾನದಲ್ಲಿರುವ ಮಂತ್ರವೆಂದರೆ (I-154-5)

ತದಸ್ಯ ಪ್ರಿಯಮಭಿಪಾದೋ ಅಸ್ಯಾಂ
ನರೋಯಂತ್ರ ದೇವಯವೋಮದಂತಿ
ಉರುಕ್ರಮಸ್ಯ ಸಹಿ ಬಂಧುರಿತ್ಥಾ
ವಿಷ್ಣೋಃಪದೇ ಪರಮೋ ಮಧ್ವ ಉತ್ಸಃ

ಇವನು ಮೂರು ಲೋಕವನ್ನು ವ್ಯಾಪಿಸಿರುವನು. ಅನೇಕ ಮಂತ್ರಗಳಲ್ಲಿ ಮನುಷ್ಯನ ಉಪಕಾರಕ್ಕಾಗಿ ತನ್ನ ಮೂರು ಹೆಜ್ಜೆಯನ್ನಿಟ್ಟನೆಂದು ವರ್ಣಿತವಾಗಿದೆ. ಬ್ರಾಹ್ಮಣದಲ್ಲಿ ಇದರ ವಿಷಯಕವಾದ ಒಂದು ಉಪಾಖ್ಯಾನವಿದೆ . ವಿಷ್ಣುವು ವಾಮನ ರೂಪನಾಗಿ ಮೂರು ಹೆಜ್ಜೆಯನ್ನು ರಾಕ್ಷಸರಿಂದ ಅಪಹರಿಸಿ ಭೂಮಿಯನ್ನು ಮೋಚನ ಮಾಡಲು ಅವತರಿಸಿದನು. ಪುರಾಣಗಳಲ್ಲಿ ಇದು ವಿಸ್ತಾರವಾಗಿ ವರ್ಣಿತವಾಗಿದೆ.

ಈ ಐವರು ಸೌರ ದೇವತೆಗಳಾವ ಮೇಲೆ ಉಷಸ್ಸೇಪ್ರಧಾನ ದೇವತೆ. ಇವಳೊಬ್ಬಳೇ ಸ್ತ್ರೀ ದೇವತೆ ಎಂದು ಸಾಮಾನ್ಯವಾಗಿ ಪಾಶ್ಚಾತ್ಯರೆಲ್ಲರೂ ಭಾವಿಸಿರುವರು. ಅದಿತಿ ದೇವತೆಯು ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ ಎಂದೂ, ಸ... ದೇವತಾಸಮನ್ವಯ ಕೊಡುವ ಒಂದು ಭಾವನಾ ವಿಶೇಷ ಬೆಳೆದು ಅದ್ವೈತ ಭಾವನೆಗೆ ತಳಹದಿ ಎಂದೂ, ಅಭಿಪ್ರಾಯವನ್ನೂ ಬಹುಮಂದಿ ಹೊಂದಿರುವರು. ಅದಿತಿಯ ಮಕ್ಕಳೇ ಆದಿತ್ಯರೆಂದರೆ ಅದಿತಿಯೂ ಒಂದು ಸ್ತ್ರೀ ದೇವತೆ ಎಂದೂ ಋತಾಧಿಪತಿಗಳಾದ ಸೌರದೇವತೆಗಳ ತಾಯಾಗಿರುವುದರಿಂದ ಜಗಜ್ಜನನೀ ಎಂದೂ ಭಾವಿಸಲು ಅವಕಾಶವಿದೆ. ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಅದಿತಿ ಪರವಾದ ಮಂತ್ರಗಳನ್ನು ಶ್ರೀ ದೇವತೆಯ ಸೂಕ್ತಗಳೆನ್ನುವ ವ್ಯಾಖ್ಯಾನಗಳೂ ಇವೆ. ಸರಸ್ವತೀ, ರಾತ್ರಿ, ಪೃಥ್ವೀ, ಅವರೂ ಸ್ತ್ರೀ ದೇವತೆಗಳು. ಉಷಸ್ ದೇವತೆಯೇನೋ ಖಂಡ ಸೂಕ್ತಳಿಂದ ಸ್ತುತಿಸಲ್ಪಟ್ಟಿರುವಳು. 30 ಸೂಕ್ತಗಳು ಇವಳ ಪರವಾಗಿವೆ. ಇವಳು ಕಾಂತಿಪತಿ ದೇವತೆ. ಲ್ಯಾಟಿನ್‌ನಲ್ಲಿ ಅವಳು ಓರೋರ್. ಗ್ರೀಕ್‌ನಲ್ಲಿ ವಜಸ್. ಇವಳಿಗೆ ಸೋಮಯಾಗಗಳಲ್ಲಿ ಹವಿಸ್ಸಿಲ್ಲ. ಇವಳ ವಿಷಯಕವಾದ ವರ್ಣನೆಯು ಅತಿಸುಂದರವಾಗಿದೆ. ತೇಜಸ್ವಿನಿ ಅಂತರಿಕ್ಷದಲ್ಲಿ ಹುಟ್ಟಿದವಳು. ದ್ಯುದೇವತೆಯ ಮಗಳು. ರಾತ್ರಿ ದೇವತೆಯ ಸೊಸೆ. ಇವಳ ವಲ್ಲಭನೇ ಸೂರ್ಯ. ಇವಳ ಹಿಂದೆಯೇ ಅವನು ಓಡಿ ಬರುವನು. ರಕ್ತಾಶ್ವಗಳಿಂದಲೋ ಪಶುಗಳಿಂದಲೋ ಎಳೆಯಲ್ಪಟ್ಟ ರಥದಲ್ಲಿ ಬರುವಳು. ವಿಲಾಸೋಚಿತ ವೇಷವನ್ನು ಪರಿಗ್ರಹಿಸಿ ನರ್ತಕಿಯಂತೆ ತನ್ನ ವಕ್ಷಸ್ಥಲವನ್ನು ಪ್ರಕಟಿಸುವಳು. ತೇಜಸ್ಸನ್ನೇ ಬಟ್ಟೆಯನ್ನಾಗಿ ಉಟ್ಟು, ಪೂರ್ವದಲ್ಲಿ ಉದಯಿಸಿ ತನ್ನ ಲಾವಣ್ಯವನ್ನು ತೋರಿಸುವಳು. ದ್ಯುಲೋಕದ ಬಾಗಿಲನ್ನು ತೆರೆವಳು. ಸರ್ವರ ಪ್ರಾಣ ಮತ್ತು ಆತ್ಮಾ ಇವಳು. ಇಷ್ಟಾದರೂ ದೇವತೆಗಳ ನಿಯತಿಗಳನ್ನು ಸ್ವಲ್ಪವೂ ಉಲ್ಲಂಘಿಸುವುದಿಲ್ಲ. ಇವಳಿಗೆ ಮುಪ್ಪಿಲ್ಲ. ಮರಣವೂ ಇಲ್ಲ.

ಉಶ್ನಸ್ ದೇವತೆಯ ಮುಂದಾಳುಗಳು ಅಶ್ವಿನೀ ದೇವತೆಗಳು. ಇವಳು ಉದಯಿಸುವುದಕ್ಕೆ ಮುಂಚೆಯೇ ಅವರು ತೋರ್ಪಡಿಸಿಕೊಳ್ಳುವರು. ಇವರ ವಿಷಯದಲ್ಲಿ ಅನೇಕ ಉಪಾಖ್ಯಾನಗಳಿವೆ.

ಸಂಧ್ಯಾಕಾಲೇ ಸಂಭಿನ್ನೌ ತಮಃ ಪ್ರಕಾಶೌವಾ.
ಸಾಯಂ ಪ್ರಾತಃ ತಾರಕೇ ವಾಸ್ಯಾತಾಂ† ಯದಾತೌ
ರಥಂ ಯೋಜಯತಃ ತದಾ ಉಷಾಃ ಪಾಪ್ರಾಮರಾಸ್ತೇ

ಅಂತರಿಕ್ಷ ದೇವತೆಗಳಲ್ಲಿ ಇಂದ್ರನೇ ಪ್ರಧಾನ. ಇವನು ವೃಪ್ರಾಸುರನನ್ನು ಕೊಂದವನು ಮತ್ತು ಗೋ ವಿಮೋಚನೆ ಮಾಡಿದವನು. ತನ್ನ ತಂದೆಯನ್ನು ಕೊಂದವನಿವನು. ಕ್ಷಉಶಸೋರಥಂ ಭಂಜಯತಿ" ತನ್ನ ಮಹಿಮೆಯನ್ನೂ, ಬಲವನ್ನು ಕೊಚ್ಚಿಕೊಳ್ಳುವನು. ಸೋಮಪಾನದಿಂದ ಮತ್ತನಾಗುತ್ತಾನೆ. ಅವೆಸ್ತಾದಲ್ಲಿ ಇವನು ಒಬ್ಬ ರಾಕ್ಷಸ. ಅಲ್ಲಿ ಅವನು "ವರೇತ್ರಘ್ನ". ವೇದದಲ್ಲಿ ಇವನಿಗಿಂತ ವರುಣನೇ ಉತ್ತಮ ದೇವತೆ. ಆದರೆ ವರುಣನು ಇತಿಹಾಸಗಳಲ್ಲಿ ಇಂದ್ರನಿಗೆ ಅಧೀನನಾಗಿರುವನು.

ಇಂದ್ರನಾದ ಮೇಲೆ ದೇವತೆಗಳೆಲ್ಲರೂ ಅಷ್ಟು ಪ್ರಧಾನರಲ್ಲ. ತ್ರಿತ ಮತ್ತು ಅಪಾಂನಪಾತ್ _ಇವರಿಬ್ಬರೂ ಇಂಡೋ ಇರಾನಿಯನ್ ಕಾಲದ ದೇವತೆಗಳು. ಮಾತರೀಶ್ವನು ದೇವಾಗ್ನಿಯ ಅವತಾರವೆನ್ನುವ ಭಾವವಿದೆ. ರುದ್ರನು 3-4 ಮಂತ್ರಗಳಲ್ಲಿ ಮತ್ತು ಸ್ತುತಿಸಲ್ಪಟ್ಟಿರುವನು. ಪುರಾಣ ಕಾಲಕ್ಕೆ ಇವನು ಶಿವನಾಗಿರುವನು. ಮರುದ್ದೇವತೆಗಳು ರುದ್ರನ ಮಕ್ಕಳು . ಇಂದ್ರನಿಗೆ ಯುದ್ಧದಲ್ಲಿ ಸಾಹಯ ಮಾಡುವವರು (I-168.8;VIII. 7.4 II. 34-2) ವಾಯುವು ಮೂರು ಮಂತ್ರಗಳಲ್ಲಿ ವರ್ಣಿತನಾಗಿರುವನು.

ಬುದ್ಧಿಯ ವೇಗ ಇವನಿಗಿದೆ. ವಾತನು ಇವನಿಗೆ ಭಿನ್ನನು (X-168)ಅಮೃತತ್ವದ ನಿಧಿಯು ಇವನಲ್ಲಿದೆ. ಪರ್ಜನ್ಯ ದೇವತಾಪರವಾದ ಮಂತ್ರಗಳು ಮೂರು ಮಾತ್ರ. ಅವನು ಮೂವತ್ತು ಆವರ್ತನಮೂದಿಸಲ್ಪಟ್ಟಿರುವನು.

ಪೃಥ್ವೀ ದೇವತೆಗಳಲ್ಲಿ ಅಗ್ನಿಯೇ ಪ್ರಧಾನ. ಲ್ಯಾಟಿನ್‌ನಲ್ಲಿ ಇವನು ಅಗ್ನಿಸ್. ಅವನ ಪರವಾಗಿ 200ಕ್ಕಿಂತಲೂ ಜಾಸ್ತಿ ಮಂತ್ರಗಳಿವೆ. ಕುದುರೆ ಸಮನಿವನು. ಅಭೀದಾತ್ಮಕನು. ಇವನ ಪ್ರಭೆಯೇ ಉಕ್ಷಸ್. ಇವನಿಗೆ ನಾನಾ ಜನ್ಮರೂಪ ಮತ್ತು ಸ್ಥಾನಗಳಿವೆ. ಪೃಥ್ವೀ. ಅಂತರಿಕ್ಷ ಮತ್ತು ದ್ಯುಲೋಕದಲ್ಲಿ ಇವನಿಗೆ ಬೇರೆ ಬೇರೆ ರೂಪಗಳಿವೆ. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿ ಭಾವನೆಗೆ ಮೂಲಸ್ವರೂಪನಾಗಿ ವರ್ಣಿತನಾಗಿರುವನು. ಎಲ್ಲಾ ದೇವತೆಗಳೂ ಇವನಲ್ಲಿ ಲೀನರು. ಇವನ ಮಂತ್ರಗಳಲ್ಲಿ ಏಕದೇವತಾ ವಾದಕ್ಕೆ ಆಧಾರವಿದೆ. ಹ ನಿರ್ವಾಹಕನಾಗಿ ಇವನು ದೂತನು. ಉಪಾಸಕರ ಅನುಗ್ರಾಹಕನು. ಇವೇ ಆಕಾಶದಿಂದ ವರ್ಷಿಸುವನು. ಇರಾನ್‌ದಲ್ಲಿ ಎಲ್ಲಾ ದೇವತೆಗಳೂ ಇವನನ್ನೇ ಅವಲಂಬಿಸಿರುವರು. (ಅಗ್ನಿ ಮುಖಾವೈದೇವಾಃ)ಪರದೇವತಾ ಸ್ಥಾನದಲ್ಲಿ ಇವನಿರುವನು. ಉಪನಿಷತ್ತಿನಲ್ಲಿ ಪರದೇವತೆಯಾಗಿ ವರ್ಣಿಸಲ್ಪಟ್ಟಿರುವ ಇವನು ಸಂಹಿತೆ ಬ್ರಾಹ್ಮಣದಲ್ಲಿ ವಾಹಕನಾಗಿರುವನು.

ಇಂದ್ರ ಮತ್ತು ಅಗ್ನಿಯಾದ ಮೇಲೆ ಮೂರನೇ ಸ್ಥಾನವು ಸೋಮದೇವತೆಗೆ ಇದೆ. IXನೇ ಮಂಡಲವೆಲ್ಲಾ ಸೋಮದೇವತಾ ಪರವಾದದ್ದು. ಮಿಕ್ಕ ಮಂಡಲಗಳಲ್ಲಿ ಅಲ್ಲಲ್ಲಿ ಈ ದೇವತೆಯ ವರ್ಣನೆಯು ಹರಡಿದೆ. ಸೋಮಲತೆಯೂ ಆಗಿದೆ. ಅವೆಸ್ತಾದಲ್ಲಿ ಸೋಮಲತೆಯು ಪರ್ವತಗಳಲ್ಲಿ ಬೆಳೆಯುವ ವನಸ್ಪತಿ ರಾಜ. (ಸೋಮ ಓಪಧೀನಾಮಧಿಪತ್ಯ)ಪಕ್ಷಿಗಳಿಂದ ತರಲ್ಪಡುತ್ತದೆ. ಇದು ದೇವತೆಗಳ ಅನ್ನ ಲೌಕಿಕ ಸಂಸ್ಕೃತದಲ್ಲಿ ಸೋಮ ಅಂದರೆ ಚಂದ್ರ. ಋಗ್ವೇದದಲ್ಲಿ ಕಲಶದಲ್ಲಿ ಇಟ್ಟಿರುವ ಸೋಮರಸವು ಚಂದ್ರನಂತಿದೆ ಎಂದು ವರ್ಣಿತವಾಗಿದೆ. ಸೋಮರಸವನ್ನು ನಿಷ್ಪೀಡನ ಮಾಡಿ ಕ್ಷೀರ ಮಿಶ್ರಣ ಮಾಡಿ ಆರ್ಯರು ಉಪಯೋಗಿಸುತ್ತಿದ್ದರು.

ಮೊದಲು ಸೂರ್ಯನೇ ಪ್ರಜಾಪತಿ ಎಂದು ವರ್ಣಿತನಾಗಿರುವನು. ಮುಂದೆ ಪ್ರಜಾಪತಿಯು ಬೇರೆ ದೇವತೆಯಾಗಿರುವನು. ಗುಣಗಳೂ ದೇವತೆಗಳಾಗಿ ವರ್ಣಿತಗಳಾಗಿವೆ. ಭಕ್ತಿಯೇ ಪ್ರಜಾಪತಿ. ಸ್ತ್ರೀ ದೇವತೆಗೆ ಪ್ರಾಶಸ್ತ್ಯವಿಲ್ಲ. ಪ್ರಾಧಾನ್ಯತೆಯೂ ಇಲ್ಲ. ಅಪ್ಸರರು. ಗಂಧರ್ವರು. ಋಷಿಗಳು. ರಾಕ್ಷಸರು. ಅಸುರರು. ಮರಣದೇವತೆ ಇತ್ಯಾದಿಗಳು ಅಹಿರ್ಬುಧ್ನ್ಯವೆನ್ನುವ ಸರ್ಪ. ನದಿಗಳು. ಅರಣ್ಯಗಳು ಹೀಗೆ ದೇವತಾಜಾತಿಗೆ ಸೇರದಿರುವವೂ ವರ್ಣಿತಗಳಾಗಿವೆ.

ಒಟ್ಟಿನಲ್ಲಿ ಹೇಳುವುದಾದರೆ ವಿಶಾಲ ವಿಶ್ವದಲ್ಲಿ ಅಪ್ರತಿಹತ ನಿಯತಿಯನ್ನು ಕಂಡು ಚಕಿತರಾಗಿ ಅದರ ಮೂಲವನ್ನು ಸಾಕ್ಷಾತ್ಕರಿಸಿಕೊಳ್ಳುವ ಪ್ರಯತ್ನದಲ್ಲಿ. ಆನಿಯತಿಗೆ "ಋತ"ಎಂದು ನಾಮಕರಣ ಮಾಡಿ. ಅದಕ್ಕೆ ಅಧಿಪತಿಗಳು ಆದಿತ್ಯರೆಂದೂ ಅವರು ದ್ಯುದೇವತೆಗಳೆಂದೂ. ಇವರಲ್ಲದೆ ಅಂತರಿಕ್ಷ ದೇವತೆಗಳು. ಭೂದೇವತೆಗಳು ಒಟ್ಟುಗೂಡಿ 33 ದೇವತೆಗಳಿರುವರೆಂದೂ. ಅವರನ್ನು ಯಜ್ಞಯಾಗಾದಿಗಳಿಂದ ಸಂತೃಪ್ತಿಪಡಿಸಿದರೆ ಅವರು ಪ್ರಸನ್ನರಾಗಿ ಮಾನವರಿಗೆ ಧನ. ವೃಷ್ಟಿ. ಸಂತಾನ ಮೊದಲಾದ ಸೌಖ್ಯಕ್ಕೆ ನೆರವಾಗುವರೆಂದು ಭಾವವು ರೂಪಗೊಂಡಿದೆ. ದೇವತೆಗಳನ್ನು ಮೂರು ಜಾತಿಗೆ ಸೇರಿಸಿರುವುದನ್ನು ಯಾಸ್ಕ ನಿರುಕ್ತದಲ್ಲಿ ನೋಡಬಹುದು. ಮೊದಲು ವಿಶ್ವನಿಯತಿ ಕಾಣಲ್ಪಟ್ಟು. ನಂತರ ಯಜ್ಞ. ನಿಯತಿ. ಅದಾದ ಮೇಲೆ ವ್ಯಕ್ತಿ ನಿಯತಿ - ಹೀಗೆ ಸರ್ವ ಪರ್ವದಲ್ಲಿ ಧರ್ಮ ಸ್ವರೂಪವು ರೂಪಿತವಾಗಿದೆ. ಋತ ಎಂದರೆ ಧರ್ಮ. ವಿಶ್ವದಲ್ಲಿ ಏಕೀಕರಣ ಮಾಡುವ ಶಕ್ತಿ ವಿಶೇಷ ಈ ಭಾವನೆಯೇ ಮುಂದಿನ ವೇದಾಂತದ ದೃಷ್ಟಿ. ಪುಷ್ಟಿ. ಔನ್ನತ್ಯ. ಸಾಮರಸ್ಯ ಇವುಗಳಿಗೆ ಮೂಲ. ಆರ್ಯರ ಈ ಭಾವನೆಯೇ ಇದರಿಂದ ಪರಿಷ್ಕೃತವಾದ ಯೋಗ ಮಾರ್ಗವೇ ಪ್ರಪಂಚದ ಎಲ್ಲಾ ಮತಗಳಿಗೂ ಮೂಲವಾಗಿ ಆರ್ಯ ಸಂಸ್ಕೃತಿಯು ಅಗ್ರಸ್ಥಾನವನ್ನು ಹೊಂದಿರುವುದೂ ಅಂತಹ ಆರ್ಯ ಸಂಸ್ಕೃತಿಯನ್ನು ಕಾಪಾಡಿಕೊಂಡು ಹಿಂದೂ ದೇಶವು ಇನ್ನೂ. ಉಳಿಸಿಕೊಂಡಿರುವುದೂ ಒಂದು ಅತಿಶಯದ ವಿಷಯವೇ ಆಗಿದೆ. ದೇವತೆಗಳಿಗೂ ಮಾನವರಿಗೂ ಮಿಕ್ಕವ್ಯಕ್ತಿಗಳಿಗೂ. ಪ್ರಾಣಿಗಳಿಗೂ ಸಹಬಾಳ್ವೆಯ ಅವಶ್ಯಕತೆಯನ್ನು ಅತಿಪ್ರಾಚೀನಾರ್ಯರೇ ಮನಗಂಡರು. ದೇವತೆಗಳು ಉತ್ತಮ ಜೀವಿಗಳೂ ಆದುದರಿಂದ ಅವರನ್ನು ತೃಪ್ತಿಪಡಿಸುವ ಯಜ್ಞ ಯಾಗಾದಿಗಳು ಸಫಲವಾಗುವುದಕ್ಕಾಗಿ ಯೋಗದಿಂದ ಆತ್ಮ ಸಾಕ್ಷಾತ್ಕಾರ ಹೊಂದಿ ನಿಗ್ರಹಾನುಗ್ರಹ ಶಕ್ತಿಯನ್ನು ಹೊಂದಬೇಕೆನ್ನುವ ನಿಯಮವನ್ನು ಛಂದೋಗೋಪನಿಷತ್ತಿನ ಉದ್ಗೀಥೋಪಾಸನ ಪ್ರಕರಣದಲ್ಲಿ ಕಾಣಬಹುದು. ತ್ಯಾಗಿಗಳಾಗಿ. ಲೋಕ ಕ್ಷೇಮಕ್ಕಾಗಿ ಸನ್ಮಾರ್ಗದಲ್ಲಿದ್ದು ಯಜ್ಞಯಾಗಾದಿಗಳಲ್ಲಿ ನೆರವಾಗುವವರೇ ಬ್ರಾಹ್ಮಣರು. ಐಶ್ವರ್ಯಾಕಾಂಕ್ಷಿಗಳಲ್ಲಿ . ಪ್ರಭುತ್ವ ಮತ್ತು ಅಧಿಕಾರಕ್ಕೆ ಆಸೆ

ಪಡುವವರಲ್ಲ. ಇದರಿಂದ ಯಜ್ಞ ಯಾಗಾದಿಗಳು ಸಫಲವಾಗಿ ದೇವತೆಗಳು ಪ್ರಸನ್ನರಾಗಿ ಲೋಕಕ್ಷೇಮ ಕೊಡುವುದರಿಂದ. ಇವರು ಭೂದೇವತೆಗಳು ಅಂದರೆ ಭೂಸುರರು ಎನ್ನುವ ಭಾವವು ಋಗ್ವೇದ ಕಾಲದಲ್ಲೇ ರೂಪಗೊಂಡಿತ್ತು. ಈ ಕೀರ್ತಿಯನ್ನು ದುರುಪಯೋಗಿಸಿಕೊಂಡ ಕೆಲವು ವ್ಯಕ್ತಿಗಳ ನಿದರ್ಶನದಿಂದ. ಪಾಶ್ಚಾತ್ಯರು ಮುಂದಿನ ಕಾಲವನ್ನು ಬ್ರಾಹ್ಮಣ ಪ್ರಾಶಸ್ತ್ಯಕಾಲವೆಂದು ಹೇಳಿ ಇದಕ್ಕೆ ಆಧಾರವನ್ನು ಮಂಡೂಕ ಶ್ರುತಿಯಲ್ಲಿ ತೋರಿಸಿರುವರು. ಮತ್ತು ಬ್ರಾಹ್ಮಣ ಕಾಲಕ್ಕೆ ಬ್ರಾಹ್ಮಣರು ಭೂದೇವತೆಗಳಾದರು ಎಂದಿರುವರು. ಮಂಡೂಕ ಶ್ರುತಿಯು ಬ್ರಾಹ್ಮಣ ನಿಂದೆ ಎಂದು ಅಭಿಪ್ರಾಯಪಟ್ಟಿರುವರು. ಆದರೆ ವೇದ ಪಾರಾಯಣದಲ್ಲಿ ಬ್ರಾಹ್ಮಣರು ಎರಡು ಪಂಗಡಗಳಾಗಿ ಗುಂಪಿನಲ್ಲಿ ಒಂದೊಂದು ವಾಕ್ಯವನ್ನು ಹೇಳುತ್ತಿರುವುದನ್ನು ಹಾಗೆಯೇ ಹಿಂದೆ ಹೇಳುತ್ತಿದ್ದರೆಂದು ತಿಳಿಸಲು ಮಂಡೂಕ ಶ್ರುತಿಯು ಪ್ರಯತ್ನಪಟ್ಟಿರುತ್ತದೆ. ವರ್ಷಕಾಲದ ಮಂಡೂಕಗಳು ಇದಕ್ಕೆ ನಿದರ್ಶನವಾಗಿರುವುದರಿಂದ ಈ ಶ್ರುತಿಗೆ ಈ ಹೆಸರು ಬಂದಿದೆ.

## ೪. ಋಗ್ವೇದ ತತ್ತ್ವ ವಿಚಾರ (ವಿಷಯ ಸಮೀಕ್ಷಾ)

ವೈದಿಕ ಗ್ರಂಥಗಳಲ್ಲಿ ಮೊದಲಿನಿಂದಲೂ ಶರೀರಕ್ಕಿಂತ ಅತಿರಿಕ್ತವಾದ ಆತ್ಮವಸ್ತುವಿನಲ್ಲಿ ನಂಬಿಕೆಯಿದ್ದು ಅವರ ಸಾಕ್ಷಾತ್ಕಾರಕ್ಕಾಗಿ ಯೋಗ ಮಾರ್ಗವು ಪರಿಷ್ಕೃತವಾದಂತಿದೆ. ಇದರ ಆಧಾರದ ಮೇಲೆ ಆರ್ಯರು ಹಿಂದೂ ದೇಶದಿಂದ ಹೊರಗೆ ಹೋದರೆನ್ನಬಹುದು. ಯೋಗಾನುಷ್ಠಾನವು ಹಿಂದೂ ದೇಶದಲ್ಲಿ ಪರಿಷ್ಕೃತವಾದಂತೇ ಕೊಡುತ್ತದೆ. ಆತ್ಮವು ಶರೀರ ಬಿಟ್ಟ ಮೇಲೆ ಯಮನಲ್ಲಿಗೆ ತೆರಳುವರು. ಸ್ವರ್ಗದಲ್ಲಿರುವ ಇವರ ಪಿತೃಗಳೊಡನೆ ಅವನು ಇವರನ್ನು ಸೇರಿಸುವನು. ಈ ಸ್ವರ್ಗದಲ್ಲಿ ಶಾಖೋಪಶಾಖೆಯಾಗಿ ಬೆಸೆದಿರುವ ಒಂದು ವಿಶಾಲ ವೃಕ್ಷವಿದೆ. ಅದರ ನೆರಳಿನಲ್ಲಿ ದೇವತೆಗಳೊಡನೆ ಯಮನು ಸೋಮಪಾನ ಮಾಡುವನು. ಸಂಗೀತ ಮತ್ತು ಮುರಳೀ ನಾದವನ್ನು ಕೇಳುತ್ತಿ ರುವನು. ಸತ್ತ ಮೇಲೆ ಸಾಮಾನ್ಯವಾಗಿ ಎಲ್ಲರೂ ಪಿತೃಯಾನ ಮಾರ್ಗವಾಗಿ ತೆರಳಿ ಯಮನಲ್ಲಿಗೆ ತೆರಳುವರು. ಉತ್ತಮರಾಗಿ ಆತ್ಮಜ್ಞಾನಿಗಳಾಗಿರುವವರು ಈ ಮಾರ್ಗಕ್ಕಿಂತಲೂ ಭಿನ್ನವಾದ ದೇವಯಾನ ಮಾರ್ಗವಾಗಿ ಹೋಗುವರು. ಪಾಖಂಡರಿಗಾಗಿ ಭೂಲೋಕದ ಕೆಳಗೆ ಅಂಧಂತ ಮನಸ್ಸಿನಿಂದ ಕೂಡಿರುವ ಒಂದು ಲೋಕವಿದೆ ಎಂದು ಋಗ್ವೇದದಲ್ಲಿ ಹೇಳಿದೆ ಎಂದು ರಾತನು ಹೇಳಿರುವನು. ಅಥರ್ವಣ ವೇದದಲ್ಲಿ ಪಾರಲೌಕಿಕವಿದೆ. ಇದನ್ನು ಸ್ಮೃತಿಯು ಬೆಳೆಯಿಸಿ ನಾನಾ ವಿಧವಾದ ನರಕವನ್ನು ವರ್ಣಿಸಿರುತ್ತದೆ.

ಬ್ರಾಹ್ಮಣದಲ್ಲಿ ದೇವತೆಗಳೂ. ಪಿತೃಗಳೂ ಭಿನ್ನಲೋಕವಾಸಿಗಳು. ಪರೇತರ ಅಧಿಗತಿ ಯಮ. ಇವನ ಪರವಾಗಿ ಮೂರು ಸೂಕ್ತಗಳಿವೆ. ಭಯಂಕರನಾದರೂ ಮೃತ್ಯುದೇವತೆಯಾಗಿ [illegible]ತವಾಗಿಲ್ಲ. ಇವನ ದೂತರು ಉಲೂಕ ಮತ್ತು ಕಪೋತ. ನಿಯತರಾದ ದೂತರೆಂದರೆ [illegible] ಸಾರಮೇಯಗಳು. ಯಮನು ಯಮಳಾತ್ಮಕನು (x-10) ಯಮಿಯು ಯಮನ ಸಹೋ[illegible]ಯಾದರೂ ಅವನಲ್ಲಿ ಅನುರಾಗವನ್ನು ತೋರಿಸುವಳು. ಯಮನು ಅವಳಿಗೆ ಬು[illegible] ಹೇಳುವನು. ಇವರ ಪರಸ್ಪರ ಪ್ರೇಮವು ಲೋಕರೀತಿಯಲ್ಲಿ ಧರ್ಮವಿರುದ್ಧವಾದರೂ ಆದಿಪುರುಷ ಮತ್ತು ಸ್ತ್ರೀ ಎನ್ನುವ ಮೂಲ ದ್ವಂದ್ವ ವಿಷಯ ಚರಿತ್ರೆಯನ್ನು ಅವಲಂಬಿಸಿರಬೇಕು. ಸ್ತ್ರೀತ್ವವೆಂದರೆ ಸಾಮಾನ್ಯವಾಗಿ ಪತ್ನೀ ಎನ್ನುವ ಕ್ರಮವು ಋಗ್ವೇದದಲ್ಲಿ ವಿಶೇಷವಾಗಿ ಕಾಣುತ್ತದೆ.

ಪತಿ ಎಂದರೆ ಪ್ರಭು. ಆ ಪ್ರಭುವಿಗೆ ಅನುಕೂಲ ಚೇತನರೆಲ್ಲರೂ ಪತ್ನೀ ಎನ್ನುವ ಪ್ರಯೋಗವು ಕ್ರಿ.ಪೂ. 7ನೇ ಶತಮಾನದ ಹಿಂದೆಯೂ ಇದ್ದುದರಿಂದಲೇ ಪಾಣಿನಿಯು "ಪತ್ಯುರ್ನೋ ಯಜ್ಞ ಸಂಯೋಗೇ ಎನ್ನುವ ಸೂತ್ರದಿಂದ ಪತ್ನೀ ಶಬ್ದ ನಿಷ್ಪತ್ತಿಗೆ ವಿಧಿಯನ್ನು ಕೊಟ್ಟಿರುವನು. ಆಧುನಿಕ ದೃಷ್ಟಿಯಲ್ಲಿ ಪತ್ನೀ ಶಬ್ದಪ್ರಯೋಗವು ವೇದದಲ್ಲಿಲ್ಲ. ಯಮನಿಗೆ ಯಮಿಯಾದರೂ ಪತ್ನಿ. ಬ್ರಹ್ಮನಿಗೆ ಸರಸ್ವತಿ ಮಗಳಾದರೂ ಪತ್ನಿ. ಅದಿತಿಯಿಂದ ದಕ್ಷನು. ದಕ್ಷನಿಂದ ಅದಿತಿಯು ಉದ್ಭವಿಸಿರುವರು. (X.72-4) ಮಕ್ಕಳು ತಂದೆಯನ್ನು ಉತ್ಪನ್ನ ಮಾಡುವರು. (X54-3) ಇಂದ್ರನಿಂದ ಅವನ ತಾಯಿತಂದೆಗಳು ಹುಟ್ಟಿದರು. ಹೀಗೆಯೇ ಸೃಷ್ಟಿ ವಿಷಯದಲ್ಲಿ ಅನೇಕ ವೈಚಿತ್ರ್ಯಗಳನ್ನು ವೇದದಲ್ಲಿ ನೋಡಬಹುದು.

ಸ್ಮೃತಿಯಲ್ಲಿ ಇದನ್ನು ಬಹಳವಾಗಿ ನೋಡಬಹುದು. ತಾವು ಭಾವಿಸಿರುವ ಕ್ರಮದಲ್ಲಿ ಪಾಶ್ಚಾತ್ಯರು ಈ ಭಾವನೆಯನ್ನು ಇಂಡೋ ಇರಾನಿಯನ್ ಸಂಸ್ಕೃತಿಗೆ ಅನ್ವಯಿಸುತ್ತಿರುವರು. ಅಂತಹ ಭಾವನೆಗೆ ಅರ್ಥವು ನಮ್ಮಲ್ಲಿರುವುದರಿಂದ ನಾವೇ ಆರ್ಯರ ಸರಿಯಾದ ಪ್ರತಿನಿಧಿಗಳೆನ್ನಬಹುದು. ನಮ್ಮ ಶ್ರುತಿ ಮತ್ತು ಮಿಶ್ರ ಗ್ರಂಥಗಳಲ್ಲಿ ಜ್ಞಾನೌನ್ನತ್ಯದಿಂದ ನಮಗೆ ಈ ಹೆಸರು ರೂಢವಾಗಿದೆ (ಆ(ರಾತ್) (ದೂರಾತ್. ಕುತರ್ಕೆ .:)ಯಾ(ತಾಃ)ಆರ್ಯಾಃ). ಮಿಶ್ರ ಯುವಜನಾಂಗವೂ ತಮ್ಮ ಸಂಸ್ಕೃತಿಯಲ್ಲಿ ತಾವು ಆರ್ಯರು ಎ..ವುದನ್ನು ಬಳಸಿಕೊಂಡಿಲ್ಲ. ನಮ್ಮ ಸಂಸ್ಕೃತಿಯಲ್ಲಿರುವ ದೇವತೆಗಳು ಅವೆಸ್ತಾ ಮತ್ತು ಗ್ರೀಕ್ ಸಂಸ್ಕೃತಿಯಲ್ಲಿ ಕಾಣಬಹುದು. ಆದರೆ ತಮ್ಮ ಸಹವಾಸದಿಂದ ರೂಪಾಂತರವನ್ನು ತಾಳಿದ ಸಂಸ್ಕೃತಿಗಳು ಮಿಶ್ರವುಗಳು ಎನ್ನುವುದಕ್ಕೆ " ಮೊಹೆಂಜೊದಾರೊ"ಮತ್ತು "ಹರಪ್ಪ"ಅವಿಶೇಷಗಳೇ ಪ್ರಮಾಣವೆಂದು ಈಗ ತೋರಿಸಬಹುದು.

| ನಮ್ಮ ವೇದ | ಅವೆಸ್ತಾ |
|---|---|
| ಯಮ | ಇಮ |
| ವರುಣ | ಓರಿನೋಸ್ |
| ಸೋಮ | ಹೊಮ |
| ವಿವಸ್ವಾನ್ | ವಿವನ್ಹಂತ್ |
| ಯಮಿ | ಯಿಮೋಹ್ |

ನಮ್ಮಲ್ಲಿ ಯಮನು ಮೃತ್ಯು. ಅವೇಸ್ತಾದಲ್ಲಿ ಇವನು ಮೋಕ್ಷಸ್ಥಾನ. ವರುಣನು ಇಲ್ಲಿಯೂ ಅಲ್ಲಿಯೂ ಪೂಜ್ಯ. ಅದಿತಿಯು ಹಾಗೆಯೇ ಗೋಪೂಜೆ ಇಬ್ಬರಲ್ಲಿಯೂ ಇದೇ. ತ್ರಿಷ್ಟುಪ್. ಅನುಷ್ಟುಪ್ ಮತ್ತು ಗಾಯತ್ರೀ ವೃತ್ತಗಳು ಅವೇಸ್ತಾದಲ್ಲಿಯೂ ಇವೆ. ಅದರಲ್ಲಿರುವ ಎಲ್ಲಾ ಉತ್ತಮಭಾವನೆಯು ನಮ್ಮಲ್ಲೊಂದು ನಮ್ಮಲ್ಲಿ ಇನ್ನೂ ಅಧಿಕಾಂಶವಿದ್ದರೆ. ಮೂಲ ಆರ್ಯರು ಪಾರ್ಸಿಯುಗಳಾಗಿಯೂ, ಹಿಂದೂಗಳಾಗಿಯೂ ಬಿಚ್ಚಿದರೆನ್ನುವುದು ಸತ್ಯಾಂಶವಾಗುವುದಿಲ್ಲ. ಹಾಗಿದ್ದಿದ್ದರೆ ನಮಗೆ ಪೂಜ್ಯವಾದ ಭಾವನೆಗಳೆಲ್ಲವೂ ಅವೆಸ್ತಾದಲ್ಲಿಯೂ ಕಾಣಬೇಕಾಗಿತ್ತು; ವ್ಯತ್ಯಾಸವಾಗಿದೆ. ನಮ್ಮ ಸುರರ ಸ್ಥಾನದಲ್ಲಿ ಅವೆಸ್ತಾ ಅಸುರರನ್ನಿಟ್ಟಿದೆ. ಯಾಮ ಜ್ಞಾನೌನ್ನತ್ಯದಿಂದ ನಮ್ಮವರು

ಋಗ್ವೇದದ ಎಲ್ಲಾ ಸೂಕ್ತಗಳು ದೇವತೆಗಳ ಮತ್ತು ಅವರ ವಸ್ತುಗಳ ಪ್ರಶಂಸಾಪರವಾದರೂ 10ನೇ ಮಂಡಲದಲ್ಲಿ ಪುರಾವೃತ್ತ ವಿಷಯಕ ಸೂಕ್ತಗಳಿವೆ. ಇವು ಮೊದಲು ಗದ್ಯರೂಪದಲ್ಲಿದ್ದು ನಂತರ ಪದ್ಯರೂಪದಲ್ಲಿ ಋಗ್ವೇದಕ್ಕೆ ಸೇರಿಸಲ್ಪಟ್ಟಿರಬೇಕು.

X-10- ಯಮ: ಯಮಿ ಸಂವಾದ – ಯಮನು ಯಮಿಗೆ ಬುದ್ಧಿ ಹೇಳುವುದು

IV-42 ಇಂದ್ರಾವರುಣ ಸಂವಾದ: ಪರಸ್ಪರ ಉತ್ಕರ್ಷ ಸ್ಪರ್ಧೆ.

X-52 ಇಂದ್ರಾಗ್ನಿಗಳ ಸಂವಾದ: ಅಗ್ನಿಯ ಮಹತ್ಕರ್ಮ ವರ್ಣನೆ ಮತ್ತು ಅದರ ನಿರ್ವಹಣೆ.

X-19. ಇಂದ್ರ ಇಂದ್ರಾಣಿ ಸಂವಾದ : ಕೋಪಗೊಂಡ ಇಂದ್ರಾಣಿಯ ಮಾತುಗಳು

X-10- ದೇವಶುನವಾದ ಸರಮಾ – ಹಸುವನ್ನು ಕದ್ದ ಪಣಿಗಳೊಂದನೆ ಸಂವಾದ.

ಹೀಗೆ ಹತ್ತು ಸಂವಾದಗಳು ಹತ್ತು ಸೂಕ್ತಗಳಲ್ಲಿ ಮಂತ್ರ ತಂತ್ರ ವಿಷಯವೇ ಇಲ್ಲವಿರುವುದರಿಂದ 12 ಸೂಕ್ತಗಳಲ್ಲಿ ಅಭಿಚಾರ ವಿಷಯಕವಾದವೂ, ಇವುಗಳಲ್ಲದೆ X-183ರಲ್ಲಿ ಸಂತತಿ ಲಾಭಕ್ಕಾಗಿ X-162ರಲ್ಲಿ ಅಪತ್ಯಘಾತಕ ರಾಕ್ಷವನಿರ್ಮೂಲನಕ್ಕಾಗಿ, X-166ರಲ್ಲಿ ಶತ್ರುಚ್ಛೇಧನಕ್ಕಾಗಿ, X-145ರಲ್ಲಿ ಸವುತಿಯಿಂದ ಪತಿವ್ಯೆರ ಮುಖ್ಯಸಂಪಾದನೆಗಾಗಿ ಮಂತ್ರಗಳೂ, ಸಾಂಘಿಕಾಚಾರ, ರಾಜರ ಔದಾರ್ಯ ನೀತಿಧರ್ಮ, ದಾನಸ್ತುತಿ, ಜೂಜು, ಸ್ತ್ರೀ ಮತ್ತು ಧನನಿಂದೆ, ಪತಿಯ ಭ್ರಾತೃವನ್ನು ಮದುವೆಯಾಗುವುದು, ಅಪರಕರ್ಮಗಳಲ್ಲಿ ಖನನ ಮತ್ತು ದಹನ, ವಿವಾಹದಲ್ಲಿ ದೀರ್ಘಕಲಾಪಗಳೂ (x-85)ದ್ಯೂತದ ಅನರ್ಥ (x-37) ಧರ್ಮ ಸತ್ಕರ್ಮಗಳ ಅನುಷ್ಠಾನವೀ (x-117)ಸ್ತ್ರೀ ಮತ್ತು ಧನದ ಕೌಟಿಲ್ಯ ವರ್ಣನೆ (x-27-12;VIII 33-17; X-95-15; V-61-6): ಜಗತ್ಸೃಷ್ಟಿವಾದ (1-115-1; 1-164-46, X-81-82) X-41,X-129) ಇವೆಲ್ಲವೂ ಹಿಂದೂ ಆರ್ಯರ ಉನ್ನತ ಸಾಮಾಜಿಕ, ವ್ಯಾವಹಾರಿಕ, ನೈತಿಕ ಮತ್ತು ಧಾರ್ಮಿಕ ಜೀವನವನ್ನೂ ತೋರಿಸುತ್ತವೆ.

## ೫. ಋಗ್ವೇದದ ಕಾಲದ ಸ್ಥಿತಿ

ಪಾಶ್ಚಾತ್ಯ ವಿಮರ್ಶಕರ ಮತ್ತು ಅವರ ಅನುಯಾಯಿಗಳ ಮತ:

ಚರಿತ್ರೆಯ ದೃಷ್ಟಿಯಿಂದ ಋಗ್ವೇದವು ಉಪಕಾರಿಯಾಗಿರುವುದಲ್ಲದೆ ಪಾರಮಾರ್ಥಿಕವಾಗಿಯೂ ಇದು ಬಹಳ ಪ್ರಯೋಜನಕಾರಿಯಾಗಿದೆ. ಲೌಕಿಕ ವಿಷಯ ಪರವಾದ ಮಂತ್ರಗಳು ಪರಿಮಿತವಾಗಿದ್ದರೂ ಆರ್ಯರ ವೃತ್ತಾಂತವನ್ನು ತಿಳಿಸುವುದರಲ್ಲಿ ಇದು ಅಗ್ರಸ್ಥಾನವನ್ನು ಹೊಂದಿದೆ. ಸಪ್ತಸಿಂಧು ಅಲ್ಲಲ್ಲಿ ನಿರ್ದಿಷ್ಟವಾಗಿದೆ. ಅವೆಸ್ತಾದಲ್ಲಿ ಇದು" ಸಪ್ತ ಹಿಂದೂ", ಸಪ್ತ ಎನ್ನುವುದು

ಸಂಖ್ಯಾಪರವಾದರೆ ಕೂಭಾ. ಸಿಂಧು ಮತ್ತು ಅದರ ಮೂಲಭೂತ ನದಿಗಳು (5) ಹೇಳಲ್ಪಟ್ಟಂತಾಯಿತು. ಕೂಭಾ ಎನ್ನುವುದು ಪಾವನ ನದಿಯಾಗಿ ಋಗ್ವೇದದಲ್ಲಿ ವರ್ಣಿತವಾದ ಸರಸ್ವತಿ ಎಂದು ಊಹೆಮಾಡಲ್ಪಟ್ಟಿದೆ. ರೋಟರ್ ವಿಮರ್ಶಕನು ಸಿಂಧೂ ನದಿಯನ್ನೇ ಪಾವನತ್ವೇನ ಸರಸ್ವತಿ ಎಂದು ಕರೆಯುತ್ತಿದ್ದಿರ ಬೇಕೆಂದಿರುವನು. ಮತ್ತೆ ಕೆಲವರು ಯಮನೆ ಶುತುದಿ, ನದಿಗಳ ಮಧ್ಯವರ್ತಿ ಯಾವುದೋ ಒಂದು ಅನಾಮಧೇಯ ನದಿಯಾಗಿರಬೇಕೆಂದಿರುವರು. ಇನ್ನೂ ಕೆಲವರು ಸರಸ್ವತಿಯ ದೃಷದ್ವತಿಯೊಡನೆ ಅಂಬಾಲ ದೇಶದ ದಕ್ಷಿಣದಲ್ಲಿ ಸಿಮ್ಲಾ ದೇಶದ ಕೆಳಗೆ ಕೆಲವು ಮೈಲಿ ದೂರದಲ್ಲಿ ಬ್ರಹ್ಮಾವರ್ತ ದೇಶದ ಸೀಮಾರೇಖೆಯಾಗಿದೆ ಎಂದು ಹೇಳಿರುವರು. ಯಾವ ಸರಸ್ವತಿಯು ಈಗ ಕೇವಲ ಮರಳಿನಿಂದ ಕೂಡಿದ ಮೃತ ನದಿಯಾಗಿರುವುದೋ ಅದು ಋಗ್ವೇದ ಕಾಲದಲ್ಲಿ ಜೀವನದಿಯಾಗಿದ್ದಿರಬೇಕು. ಹಾಗಿಲ್ಲದಿದ್ದರೆ ಅದು "ಇಮಂ ಮು ಗಂಗೇ. ಯಮುನೇ. ಸರಸ್ವತಿ. ಶುತಿದ್ರಿ ಸ್ತೋಮಂ ಸಚತಾಪರುಷ್ಣಿಯಾ" ಎಂದು ಗಂಗೆಗೆ ಸಮನಾಗಿ ಜೀವನದಿಯಾಗಿ ವರ್ಣಿಸಲ್ಪಡುತ್ತಿರಲಿಲ್ಲ. ಸರಸ್ವತೀ ಮತ್ತು ದೃಷದ್ವತೀ ನದೀತೀರಗಳಲ್ಲಿ ಯಜ್ಞಯಾಗಾದಿಗಳು ವಿಪುಲವಾಗಿ ನಡೆಯುತ್ತಿದ್ದಂತೆ ಕಂಡುಬರುತ್ತದೆ. ಆರ್ಯರು ಸಂಸ್ಕೃತಿಯನ್ನು ದಾಟಿ ಗಂಗೆಯ ಪಶ್ಚಿಮದ ದಡದವರೆಗೂ ಋಗ್ವೇದ ಕಾಲಕ್ಕೆ ಹೋಗಿದ್ದರೆಂದು ಊಹಿಸಬಹುದು. ಗಂಗಾನದಿಯು ಋಗ್ವೇದದಲ್ಲಿ ಸಾಕ್ಷಾತ್ತಾಗಿ ಒಂದು ಮಂತ್ರದಲ್ಲೂ. ಪರೋಕ್ಷವಾ ಒಂದರಲ್ಲೂ ನಿರ್ದಿಷ್ಟವಾಗಿದೆ. ಬೇರೆ ವೇದಗಳಲ್ಲಿ ಇದರ ಹೆಸರೇ ಇಲ್ಲ.

ಋಗ್ವೇದದಾರ್ಯರಿಗೆ ಸಮುದ್ರವು ತಿಳಿದು ಬಂದಂತೆ ಕಂಡುಬರುವುದಿಲ್ಲ. ಸಿಂಧು ಶಬ್ದಕ್ಕೆ ಸಮುದ್ರವೆನ್ನುವ ಅರ್ಥವು ಆ ನದಿಯು ವಿಶಾಲಪಾತ್ರದಿಂದ ಬಂದಿರಬೇಕು ಸಾಗರವೇ ಸಮುದ್ರವೆನ್ನುವುದು ಅವರಿಗೆ ತಿಳಿದಿರಲಿಲ್ಲ. ಐದುನದಿಗಳೂ ಒಟ್ಟುಗೂಡಿ ಸಿಂಧೂನದಿಯಾಗುವಂತಹ ಪರ್ಯಂತವೂ ಆರ್ಯರು ವ್ಯಾಪಿಸಿಕೊಂಡಿದ್ದು ನಿರ್ದಿಷ್ಟವಾದ ಅಲ್ಲದೆ ಮತ್ಸ್ಯವು (ಮೀನು) ವರ್ಣಿತವಾಗಿಲ್ಲ. ಮತ್ಸ್ಯಬಂಧನವು ಯಜುರ್ವೇದದಲ್ಲಿದೆ. ಅಥರ್ವಣ ವೇದದಲ್ಲಿ ಪೂರ್ಣಸಾಗರ ಪರಿಚಯವು ಕಂಡುಬರುತ್ತದೆ.

ಪರ್ವತಗಳಲ್ಲಿ ಹಿಮವತ್ಪರ್ವತ ಮತ್ತು ಯಾಜವತ್ ಪರ್ವತ ತಿಳಿದಿದೆ. ಸೋಮಲತೆ ಬೆಳೆಯುವ ಪರ್ವತವೇ ಮೂಜವತ್. ವಿಂಧ್ಯಪರ್ವತವು ವರ್ಣಿತವಾಗಿಲ್ಲ. ಅದರ ಕೆಳಗೆ ಹರಿಯುವ ನರ್ಮದೆಯೂ ತಿಳಿಯದು. ಬ್ರಾಹ್ಮಣಕಾಲದಲ್ಲಿ ಮಾತ್ರ ಸೋಮ ಸಿಗುವ ಪರ್ವತವು ದೂರವಾಗಿ ಅದಕ್ಕೆ ಪ್ರತಿನಿಧಿಯನ್ನು ಆರಿಸಿಕೊಳ್ಳುವ ಪ್ರಸಂಗವು ಕಂಡುಬರುತ್ತದೆ. ಸೋಮಕ್ಕೆ ಪ್ರತಿನಿಧಿಯಾಗಿ ಮಂಗರ ಬಳ್ಳಿಯನ್ನು ತೆಗೆದುಕೊಳ್ಳಬಹುದೆಂದು ವಿಹಿತವಾಗಿದೆ. ಸೋಮಯಾಗವಿಲ್ಲದೆ ಯಾವ ಶುಭ ಕಾರ್ಯವೂ ನಡೆಯುತ್ತಿದ್ದಂತಿಲ್ಲ. ಈ ಪದ್ಧತಿಯೂ ನಮ್ಮ ಕಾಲದವರೆಗೂ ಬಂದಿದೆ. ಮದುವೆ. ಮುಂಜಿ ಮೊದಲಾದ ಶುಭಕಾರ್ಯಕ್ಕೆ ಮೊದಲು ಹಪ್ಪಳ ಮಾಡುವುದಕ್ಕೆ ಒಂದು ಶುಭ ದಿನವನ್ನು ಗೊತ್ತು ಮಾಡಿ ಆ ದಿನ ಸುಮಂಗಲೆಯರು ಮಂಗರಬಳ್ಳಿ ರಸವನ್ನು ತೆಗೆದು ಉದ್ದಿನ ಬೇಳೆಹಿಟ್ಟಿನೊಡನೆ ಕಲಸಿ ಹದಕ್ಕೆ ತಂದುಕೊಂಡು ಹಪ್ಪಳ ಮಾಡುವ ಪದ್ಧತಿಯು ಈಗಿನ ವೈದಿಕ ಸಂಪ್ರದಾಯಸ್ಥರ ಮನೆಗಳಿಗೆ ವಾಡಿಕೆಯಾಗಿದೆ. ಇವೆಲ್ಲಾ ಕಾರಣಗಳನ್ನು ಗಮನಿಸಿ ಹಾಪ್‌ಕಿನ್ (Hopkin) ವಿಮರ್ಶಕನು ಋಗ್ವೇದವು ಪಂಜಾಬ್‌ನಲ್ಲಿ ಬರೆಯಲ್ಪಟ್ಟಿರಬೇಕೆಂದೂ.

ಮಿಕ್ಕ ವೇದಗಳು ಸರಸ್ವತೀ ವೇದದಲ್ಲೊಂದೂ ಊಹಿಸಿರುವನು. ಉಕ್ಷಸ್ ದೇವತೆ ಮತ್ತು ವರುಣಸ್ತುತಿಪರ ಮಂತ್ರಗಳನ್ನು ಗಮನಿಸಿದರೆ ಕೂಬಾ ನದಿಯಿಂದ ಸಟ್ಲೆಜ್ ನದಿಮಧ್ಯಭಾಗದ ಹವಾಗುಣ ಮತ್ತು ಪ್ರಕೃತಿ ಸೌಂದರ್ಯಾದಿಗಳು ವರ್ಣಿತವಾಗಿರುವಂತಿದೆ. ವೃಕ್ಷಗಳಲ್ಲಿ ಅಶ್ವತ್ಥ, ಅದರ ಫಲ, ಪಿಪ್ಪಲ, ವರ್ಣಿತವಾಗಿದೆ. ಈ ವೃಕ್ಷದ ದಿಂಡು ಸೋಮ ಪಾತ್ರ ಬೊಡಲು, ರೆಂಬೆಗಳು ಅರಣಿಯಾಗಿರಲು ಯೋಗ್ಯವೆಂದು ಹೇಳಲ್ಪಟ್ಟಿದೆ. ವನ್ಯಮೃಗಗಳಲ್ಲಿ ಸಿಂಹ ಮಾತ್ರ ತಿಳಿದಿರುವುದು. ಹುಲಿ ತಿಳಿಯದು. ವೃಕ್ಷ, ಮಹಿಷ, ಕಪಿ ಮತ್ತು ಆನೆ ಗೊತ್ತು. ಗ್ರಾಮ್ಯಮೃಗಗಳಲ್ಲಿ ಮೇಷ, ಅಜ, ಗರ್ದಭ, ನಾಯಿ ಮಾತ್ರ ನಮೂದಿಸಲ್ಪಟ್ಟಿವೆ. ವಿವಾಹ ಸೂಕ್ತಗಳಲ್ಲಿ ಗೋವಧೆಯು ವಿಹಿತವಾಗಿರುವಂತಿದೆ ಎಂದು ಮ್ಯಾಕ್ಸ್‌ಡೊನೆಲ್ ಅಭಿಪ್ರಾಯಪಡುವರು. ಆದರೆ ಶುಕ್ಲ ಯಜುರ್ವೇದದಲ್ಲಿ ಗೋವಧೆಯು ಶಿಕ್ಷಾರ್ಹವಾಗಿರುವುದೂ, ಅವೆಸ್ತಾದಲ್ಲಿ ಗೋಪೂಜೆಗೆ ಪ್ರಾಶಸ್ತ್ಯವಿರುವುದೂ, ಧೇನುವು ಮಂತ್ರಗಳಲ್ಲಿ ಅಘ್ನ್ಯ ಎಂದು ವರ್ಣಿತವಾಗಿರುವುದೂ, ಅಥರ್ವಣದಲ್ಲಿ ಇದರ ಪೂಜೆಯು ವಿಹಿತವಾಗಿರುವುದೂ, ಶತಪಥ ಬ್ರಾಹ್ಮಣದಲ್ಲಿ ಅದರ ಮಾಂಸ ಭಕ್ಷಣವು ಪರಮದೋಷವಾಗಿ ಪರಿಗಣಿಸಲ್ಪಟ್ಟಿರುವುದೂ, ಆಗಿನ ಐಶ್ವರ್ಯವೆಲ್ಲಾ ಗೋ ಸಂಖ್ಯೆಯಿಂದ ನಿಶ್ಚಿತವಾಗಿರುವುದೂ, ಇವೆಲ್ಲವನ್ನು ಗಮನಿಸಿದರೆ ಅವರ ಮಾತು ಅಷ್ಟು ನಂಬಲರ್ಹವಾದುದಲ್ಲ. ಅಶ್ವವು ಉಪಯುಕ್ತವಾದ ವಾಹನ ಪಶುವಾಗಿದೆ. ಇದು ಕ್ಷತ್ರಿಯರ ಅಶ್ವಮೇಧಯಾಗದಲ್ಲಿ ಪ್ರಾಧಾನ್ಯತೆಯನ್ನು ಹೊಂದಿದೆ. ಪಕ್ಷಿಗಳಲ್ಲಿ ಹಂಸವು ತಿಳಿದಿದ್ದರೂ, ಹಾಲುನೀರನ್ನು ವಿಭಾಗಿಸುವ ಶಕ್ತಿಯು ಕ್ರೌಂಚ ಪಕ್ಷಿಗೆ ಇರುವುದು. ಯಜುರ್ವೇದದಲ್ಲಿ ಹಂಸಕ್ಕೆ ಆ ಶಕ್ತಿ ಇರುವುದು. ಅಶ್ವಿನಿ ದೇವತೆಗಳಿಗೆ ಚಕ್ರವಾಕ ಪಕ್ಷಿ ಸಾದೃಶ್ಯವಿದೆ ಮಯೂರಕ್ಕೆ ವಿಷಾಪಹರಣ ಶಕ್ತಿ• ಇದೆ. ಶುಕವು ಹೇರಳವಾಗಿರುವುದು. ಲೋಹಗಳಲ್ಲಿ ಚಿನ್ನವು ತಿಳಿದಿದೆ. ಕಬ್ಬಿಣವು ತಿಳಿಯದು. ಇವೆಲ್ಲವನ್ನೂ ಗಮನಿಸಿದರೆ ಕುಬಾನದಿಯಿಂದ ಪ್ರಾರಂಭಿಸಿ ಯಮುನಾ ನದಿಯ ಪರ್ಯಂತವೂ ಋಗ್ವೇದದ ಆರ್ಯರು ವ್ಯಾಪಿಸಿಕೊಂಡಿದ್ದರೆಂದು ಹೇಳಬಹುದು.

## ೬. ಈ ಭಾವನೆಯಲ್ಲಿ ಸತ್ಯಾಸತ್ಯಾಂಶ ವಿಮರ್ಶೆ

ಗ್ರಂಥಗಳಲ್ಲಿ ನಮೂದಿಸಲ್ಪಟ್ಟಿರುವ ಅಂಶಗಳಿಂದಲೇ ಒಂದು ನಿರ್ಣಯಕ್ಕೆ ಬರುವುದು ಅಷ್ಟು ಉಚಿತವಾಗಿಲ್ಲ. ಸಾದೃಶ್ಯ ಮೊದಲಾದ ವಿಷಯಗಳಲ್ಲಿ ಹೇಳಲ್ಪಡುವ ಮೃಗ, ಪಕ್ಷಿ, ಲೋಹ ಮೊದಲಾದ ಆಧಾರಗಳು ಮಿಕ್ಕ ಮೃಗಾದಿಗಳ ಅಜ್ಞಾನವನ್ನಾಗಲೀ, ಅಪರಿಚಯವನ್ನಾಗಲಿ ಸ್ಥಿರಪಡಿಸುವುದಿಲ್ಲ. ಋಗ್ವೇದದಲ್ಲಿ ಉಪ್ಪು ವರ್ಣಿತವಾಗಿಲ್ಲ. ಪಂಜಾಬಿನಲ್ಲಿ ಜಾಸ್ತಿಯಾಗಿದ್ದರೂ ಅದರ ಮಾತೇ ಋಗ್ವೇದದಲ್ಲಿಲ್ಲದಿರುವುದು ಆ ಕಾಲದ ಆರ್ಯರ ಅಜ್ಞಾನದಿಂದಲ್ಲವೆಂದು ಎಲ್ಲರೂ ಒಪ್ಪಲೇಬೇಕು ಹಾಗೆಯೇ ಮಿಕ್ಕ ವಿಷಯಗಳಲ್ಲಿ ಕವಿತಾದೃಷ್ಟಿಯೇ ಪ್ರಧಾನವಾಗಿರುವ ಆ ಕಾಲವನ್ನು ವಸ್ತು ನಿರ್ದೇಶನದಿಂದ ನಿರ್ಣಯ ಮಾಡುವುದು ಸರಿಯಾದ ಪ್ರಮಾಣವಲ್ಲ. ಬಾಲಗಂಗಾಧರ ತಿಲಕರು ಗೀತಾರಹಸ್ಯದಲ್ಲಿ ಹೇಳಿರುವಂತೆ ಒಂದು ಗ್ರಂಥವನ್ನು ವಿಮರ್ಶಿಸಬೇಕಾದರೆ ಎರಡು ಕ್ರಮವುಂಟು. ಅಂತರ ಪ್ರಮಾಣ ಮತ್ತು ಬಾಹ್ಯ ಪ್ರಮಾಣ. ಕೇವಲ ಬಾಹ್ಯ ಪ್ರಮಾಮದಲ್ಲಿ ನಡೆದರೆ ವಿಮರ್ಶೆಯು ಸ್ಥೂಲವಾಗಿ ಪುಷ್ಪದ ವಾಸನೆಯನ್ನು ಗಮನಿಸದೆ ದಳಗಳನ್ನು ಎಣಿಸುವಂತೆಯೂ, ಜೇನುತುಪ್ಪದ ಸವಿಯನ್ನು ಹೊಂದದೆ ಜೇನುಗೂಡಿನ ರಂಧ್ರಗಳನ್ನು ಎಣಿಸುವಂತೆಯೂ ಆಗುತ್ತದೆ. ಪರಲೌಕಿಕ ಮತ್ತು ಪಾರಮಾರ್ಥಿಕ ದೃಷ್ಟಿಯುಳ್ಳ ಆರ್ಯರ

ಮಾತುಗಳಲ್ಲಿ ಪ್ರಸಕ್ತ ಲೌಕಿಕ ಸಂಬಂಧ ಮಾತ್ರವಿರುವುದರಿಂದ ಅವರ ಲೌಕಿಕ ಜ್ಞಾನವೇ ಇಷ್ಟು ಎಂದು ಹೇಳುವುದು ತಪ್ಪು.

ಅಬ್ಧಿರ್ಲಂಘಿತಏವ ವಾನರ ಭಟೈಃ ಕಿಂತ್ವಸ್ಯಗಂಭೀರತಾಂ
ಆಪಾತಾಲನಿಮಗ್ನ ಪೀವರತನು ರ್ಜಾನಾತಿ ಮಂಥಾ ಚಲ ||

ಎಂದು ಮುರಾರಿ ಕವಿಯು ಹೇಳಿರುವಂತೆ ವೇದದ ತತ್ವ ವಿಮರ್ಶೆಯಲ್ಲಿ ಚಾರಿತ್ರಿಕ ದೃಷ್ಟಿಯನ್ನು ಪ್ರಧಾನವಾಗಿ ಪರಿಗಣಿಸುವುದು ತಪ್ಪು. ಚರಿತ್ರೆಗೆ ಉಪಯುಕ್ತವಾದ ವಿಷಯವೆಂದರೆ ಆರ್ಯರಲ್ಲಿದ್ದ ಪಂಗಡದ ವಿಮರ್ಶೆ. "ಪಂಚಜನಾಃ ಎನ್ನುವ ಶಬ್ದವಿರುವುದರಿಂದ ಆರ್ಯರಲ್ಲಿ 5 ವರ್ಗವಿದ್ದಂತಿದೆ. ಪುರವರು. ತುರ್ವಶರು. ಯದುಗಳು. ಅನುಸ್ಸರು ಮತ್ತು ದ್ರುಹ್ಯಗಳು ಎಂದು. ಅವರು ಪರಸ್ಪರ ಕಲಹಮಾಡುತ್ತಿದ್ದರು. ಪುರವರು ಸರಸ್ವತೀ ನದಿಯ ಎರಡೂ ದಡದಲ್ಲೂ ಇದ್ದರು. ಅವರ ದೊರೆತ್ರಸದಸ್ಯು. ಪುರಕುತ್ಸನ ಮಗನವನು. ಅವನ ವಂಶದಲ್ಲಿ ಶೂರನಾದ ತ್ರಕ್ಷಿಯು ವರ್ಣಿತನಾಗಿರುವನು. ಈವಂಶದವರಿಗೆ ಮಿತ್ರರೂ ಮತ್ತು ಕಣ್ವ ಗೋತ್ರದವರನ್ನು ಪುರೋಹಿತರನ್ನಾಗಿ ಹೊಂದಿದ್ದರೂ ಯದುಗಳು ಅನುಸ್ಸರು ..ಷ್ಣಿತೀರದಲ್ಲಿದ್ದರು. ಇವರಿಂದಲೇ ಭೃಗು ವಂಶವು ಬಂದಿದೆ. ಅವರು ಮತ್ತು ದ್ರುಹ್ಯಗಳು ಏಗಟ..ವುಳ್ಳವರೆಂದು ಕಂಡು ಬರುತ್ತದೆ. ಬಂಧುಗಳೂ ಆಗಿರಬೇಕು. ಇವರಲ್ಲದೆ ಮತ್ಸ್ಯರು. ಭರತರು. ತ್ರಿಟ್ಸುಗಳು. ಸುದಾಸರು. ಉಶೀನರು. ಚೇದಿಗಳು. ಕ್ರಿವಿಗಳು. ಗಾಂಧಾರಿಗಳು. ಮೂಜವಸ್ತರೂ ಇದ್ದರು. ತ್ರಿಟ್ಸು ಮತ್ತು ಸುಧಾಸರ ಗುರು ವಶಿಷ್ಠ. ಭರತರ ಗುರು ವಿಶ್ವಾಮಿತ್ರ. ಮತ್ಸ್ಯರು ಮತ್ತು ತ್ರಿಟ್ಸುಗಳು ಮತ್ತು ಸುಧಾಸರೂ ಪರಸ್ಪರ ಶತ್ರುಗಳು . ಅಯೋಧ್ಯಾಪತಿ ಪ್ರಸಿದ್ಧ ಇಕ್ಷ್ವಾಕು ಮಹಾರಾಜ. ಹೀಗೆ ಕ್ಷತ್ರಿಯ ವಂಶವು ವಿಸ್ತಾರಗೊಂಡಿದ್ದರೂ ಎಲ್ಲಾ ವಂಶಕ್ಕೂ ಬ್ರಾಹ್ಮಣರಾದ ಗುರುಗಳಿದ್ದರು. ಅವರೇ ಕ್ಷತ್ರಿಯರಿಗೆ ಧರ್ಮಾಧರ್ಮ ಜ್ಞಾನವನ್ನು ಕೊಡುತ್ತಿದ್ದರು. ಅಂದರೆ ಬ್ರಹ್ಮ ಮತ್ತು ಕ್ಷತ್ರವೆನ್ನುವ ಮೇಲಂತಸ್ಥಿನ ಜಾತಿ ಇದ್ದುದು ಕಂಡುಬರುತ್ತದೆ ವೈಶ್ಯರು ನಮೂದಿಸಲ್ಪಡದಿದ್ದರೂ ಇವರಲ್ಲಿ ಅಂತರ್ಗತರು ಇಷ್ಟು ಅಂಶಗಳು ಸರ್ವಗ್ರಾಹ್ಯವಾಗಿದೆ. ಒಬ್ಬ ಋಷಿಯು ದಾಸರನ್ನು ದಾನವಾಗಿ ಹೊಂದಿರುವುದನ್ನು ಹೇಳಿರುವನು ಇದರ ಆಧಾರದ ಮೇಲೆ ಪಾಶ್ಚಾತ್ಯರು ತಮ್ಮ ಅಭಿಪ್ರಾಯಕ್ಕೆ ಎಂದರೆ ಆರ್ಯರು ಹಿಂದೂ ದೇಶಕ್ಕೆ ಬಂದರು ಎನ್ನುವ ಮತಕ್ಕೆ ಬೆಂಬಲ ಕೊಡಲು ಈ ದೇಶದ ನಿವಾಸಿಗಳೇ ದಸ್ಯುಗಳು ಎಂದೂ. ಅವರು ಕಪ್ಪು ಬಣ್ಣದವರೆಂದೂ ಸಮರ್ಥಿಸಿರುವರು ವರ್ಣ ಎಂದರೆ ಜಾತಿ ಎಂದು ಈ ಕಾಲದಲ್ಲಿಯೇ ಹುಟ್ಟಿತೆಂದಿರುವರು ಅಲ್ಲದೆ ನಾಸ್ತಿಕತ್ವ, ಅಧರ್ಮ, ಲಿಂಗಪೂಜೆ ಇವರಲ್ಲಿತ್ತೆಂದಿರುವರು ಲಿಂಗ ಪೂಜೆಯನ್ನು ಆರ್ಯರು ದಸ್ಯುಗಳಿಂದ ಕಲಿತರಂತೆ. ಆದರೆ ಮಹೆಂಜೊದಾರೋದಲ್ಲಿ ಒಂದು ಲಿಂಗವು ಸಿಕ್ಕಿರುವುದರಿಂದ ಆ ಜನಾಂಗವೇ ಆರ್ಯರೆಂದು ಅಥವಾ ಆರ್ಯರ ಸಂಬಂಧವುಳ್ಳವರೆಂದೂ ಅಭಿಪ್ರಾಯವು ತಲೆದೋರಿರುವುದರಿಂದ ಈ ಪಾಶ್ಚಾತ್ಯರ ಅಭಿಪ್ರಾಯಗಳು ವ್ಯತ್ಯಾಸಹೊಂದಬೇಕಾಗುತ್ತದೆ.

## ೭. ವೇದಕಾಲ ಸಮಾಜ ಪದ್ಧತಿ

ಮನೆಯ ಯಜಮಾನನು ಗೃಹಪತಿ. ಅವನ ಹೆಂಡತಿ ಗೃಹಪತ್ನಿ. ಇವಳಿಗೆ ಸ್ವಾತಂತ್ರ್ಯವಿತ್ತು. ಮದುವೆ ಕ್ರಮವು ಈಗಿರುವಂತೆಯೇ ಇತ್ತು. ಮದುವೆಯಾಗದ ಕನ್ಯೆಯರು ಅನೇಕವಿದ್ದಂತೆ ಋಗ್ವೇದದಿಂದ ತಿಳಿಯುತ್ತದೆ. ದತ್ತು ಸ್ವೀಕಾರ ಕ್ರಮವಿತ್ತು. ನೀತಿ ಮತ್ತು ಧರ್ಮವು ಉನ್ನತ ಮಟ್ಟದಲ್ಲಿತ್ತು. ಪರಸ್ತ್ರೀ ಗಮನವು ಪರಮನಿಂದ್ಯ ಮತ್ತು ಶಿಕ್ಷಾರ್ಹವಾಗಿತ್ತು. ಗೋಕಳುವು ಶಿಕ್ಷಿಸಲ್ಪಡುತ್ತಿತ್ತು. ಋಣವನ್ನು ಕಂತಿನಲ್ಲಿ ಕೊಡುವ ಪದ್ಧತಿ ಇತ್ತು. ಉಡುಪಿನಲ್ಲಿ ಈಗಿನ ದಕ್ಷಿಣದೇಶದ ವೈದಿಕರಲ್ಲಿರುವಂತೆ ಒಂದು ಅಧರೀಯ. ಒಂದು ಉತ್ತರೀಯ ಮತ್ತು ಜಡೆಹೆಣೆಯುವ ಕಲೆ ಇದ್ದಂತಿದೆ. ಗಂಡಸರೂ ಜಡೆಗಂಟು ಹಾಕಿಕೊಳ್ಳುತ್ತಿದ್ದರು. ಆಹಾರವು ಪ್ರಧಾನವಾಗಿ ಹಾಲು. ಮೊಸರು. ಮತ್ತು ತುಪ್ಪವಾಗಿತ್ತು. ಹಾಲಿನೊಡನೆ ಸೋಮವನ್ನು ಸೇರಿಸಿಕೊಳ್ಳುತ್ತಿದ್ದರು. ಗೋದಿ. ಭತ್ತ. ತರಕಾರಿ. ಹಣ್ಣು ಈಗಿರುವಂತೆಯೇ ಇತ್ತು. ಮಾಂಸಾಹಾರವಿತ್ತು. ಪಾನೀಯದಲ್ಲಿ ಸೋಮ ಮತ್ತು ಸುರ ಎಂದು ಎರಡು ಜಾತಿ ಇತ್ತು. ರಥದಲ್ಲಿ ಕವಚ ಧರಿಸಿ ಶಿರೋ ವೇಷ್ಟನದಿಂದ ಪರಸ್ಪರ ಯುದ್ಧ ಮಾಡುತ್ತಿದ್ದರು. ಬಿಲ್ಲು. ಬಾಣಗಳು. ಕತ್ತಿ. ಈಟಿ. ಗುರಾಣಿ. ಕೊಡಲಿ. ಮೊದಲಾದವು ಆಯುಧಗಳಾಗಿದ್ದುವು. ಪಶುಪಾಲನೆ. ವ್ಯವಸಾಯ ಬೇಟೆ . ನಾವೆ. ವ್ಯಾಪಾರ ಮೊದಲಾದವು ಜೀವಿಕೆಯಾಗಿತ್ತು. ಕೈಗಾರಿಕೆಯು ಇತ್ತು. ದ್ಯೂತ. ರಥಪಂದ್ಯ. ಸಂಗೀತ ಮೊದಲಾದ ವಿನೋದ ಮತ್ತು ವಿಹಾರ ಕ್ರಮವು ಪರಿಷ್ಕೃತವಾಗಿದ್ದಿತು. ಒಟ್ಟಿನಲ್ಲಿ ಸಮಾಜವು ಬಹಳ ಉನ್ನತ ಮಟ್ಟದಲ್ಲಿತ್ತು.

## ೮. ವೇದ ಸಂರಕ್ಷಣ ಸಾಧನಗಳು

ಹೀಗೆ ನಾನಾ ರೀತಿಯಲ್ಲಿ ವೇದವು ಪ್ರಾಚೀನ ಆರ್ಯರ ಸಂಸ್ಕೃತಿ ಬುದ್ಧಿಶಕ್ತಿ. ಕೌಶಲ್ಯ. ಧರ್ಮಾಧರ್ಮಚಿಂತನೆ. ಸಮಾಜ ಪದ್ಧತಿ ಮೊದಲಾದವುಗಳನ್ನು ತಿಳಿಯಲು ಪರಮ ಪ್ರಯೋಜನವಾಗಿದೆ. ಇದಲ್ಲದೆ ಮತ್ಯಾವ ಗ್ರಂಥವೂ ಅವರ ಮಹಿಮೆಯನ್ನು ತಿಳಿಸಲು ಅಸಮರ್ಥವಾಗಿದೆ. ಆಸೇತು ಹಿಮಾಚಲ ಪ್ರದೇಶದಲ್ಲಿ ಸಹಸ್ರಾರು ಹಸ್ತಪ್ರತಿಗಳು. ಓಲೆಪುಸ್ತಕಗಳು ಶೋಧಿಸಲ್ಪಟ್ಟು ವಿಮರ್ಶಿಸಲ್ಪಟ್ಟರೂ ಅಷ್ಟಾಗಿ ಪಾಠ ಭೇದವಿಲ್ಲದೆ ಸಹಸ್ರಾರು ವರ್ಷಗಳಿಂದ ಈ ವೇದವು ಕಾಪಾಡಲ್ಪಟ್ಟಿರುವುದನ್ನು ಕಂಡು ಪಾಶ್ಚಾತ್ಯರು ಚಕಿತರಾದರು. ಇದರಿಂದ ಆರ್ಯರಿಗೆ ಈ ವೇದದಲ್ಲಿ ಎಷ್ಟು ಪೂಜ್ಯಭಾವವಿದೆ ಎಂದು ತಿಳಿಯಬಹುದು. ಅತಿಪ್ರಾಚೀನ ಕಾಲದಲ್ಲಿಯೇ ಇವರು ವೇದವನ್ನು ಇದ್ದಂತೆಯೇ ಸಂರಕ್ಷಿಸಿಕೊಳ್ಳಲು ನಾನಾ ಸಾಧನಗಳನ್ನು ಕಲ್ಪಿಸಿಕೊಂಡರು.

1. ಸಂಹಿತಾಮಂತ್ರಗಳನ್ನು ಪದ ಪಾಠವಾಗಿ ಮತ್ತೆ ಕಲಿಯುತ್ತಿದ್ದರು. ಇದರಿಂದ ಸಂಹಿತೆಯಲ್ಲಿರುವ ಉದಾತ್ತ. ಅನುದಾತ್ತ. ಸ್ವರಿತವೆನ್ನುವ ಸ್ವರಗಳು ವ್ಯತ್ಯಾಸ ಹೊಂದಿ ವ್ಯತ್ಯಸ್ತ ಸ್ವರಕ್ಕೆ ಅನುಗುಣವಾಗಿ ಅರ್ಥವಾಗುತ್ತಿತ್ತು. ಒಂದೇ ಪದಕ್ಕೆ ಸ್ವರ ಭೇದದಿಂದ ಅರ್ಥಭೇದ ಬೀಳುತ್ತದೆ. "ಇಂದ್ರ ಶತ್ರುರ್ವರ್ಧಸ್ವ "ಎನ್ನುವಾಗ "ಇಂದ್ರಸ್ಯ ಶತ್ರುಃ " ಮತ್ತು "ಇಂದ್ರ ಶತ್ರುಃ ಯಸ್ಯ" ಎಂದು ಸ್ವರಭೇದದಿಂದ ವಿಗ್ರಹ ವಾಕ್ಯವು ವ್ಯತ್ಯಾಸ

ಹೊಂದುತ್ತದೆ. ಋಗ್ವೇದ ಸಂಹಿತೆಯು ಮಂತ್ರಗಳನ್ನು ಬಿಟ್ಟು, ಮಿಕ್ಕವುಗಳೆಲ್ಲವೂ ಪದಪಾಠದಲ್ಲಿವೆ. ಪದಪಾಠ ಕೊಟ್ಟವರು ಶಾಕಲ್ಯರು.

2 ಎರಡನೇ ಕ್ರಮ -ಕ್ರಮ ಪಾಠ; ಐತ್ತರೇಯ ಅರಣ್ಯಸದ ಶಾಕಲ್ಯನಿಗೆ ಈ ಕ್ರಮವು ತಿಳಿದಂತಿದೆ.

3 ಮೂರನೇ ಕ್ರಮ ಜಟೆ

4 ನಾಲ್ಕನೆಯದು ಘನ

ಈ ಕ್ರಮವನ್ನು "ಇಶ್ವೇತ್ವೋರ್ಜೇತ್ವಾ" ಎನ್ನುವ ಯಜುರ್ವೇದದ ಮೊದಲನೇ ಮಂತ್ರದಲ್ಲಿ ಪ್ರಯೋಗಿಸಿದರೆ:

1 ಇಷೆ. ತ್ವಾ. ಊರ್ಜೇ. ತ್ವಾ -ಪದಪಾಠ

2 ಇಷೇತ್ವಾ -ಊರ್ಜೇ -ತ್ವಾ ಊರ್ಜೆತ್ವಾ = ab, bc, cd ಕ್ರಮ ಪಾಠ

3 ಇಷೇತ್ವಾ -ತ್ವಾ ಇಷೆ -ಇಷೇತ್ವಾ; ತ್ವಾ ಊರ್ಜೇ– ಊರ್ಜೇತ್ವಾ -ತಾ ಊರ್ಜೇ = ab, ba, ab, bc-cb,bc ಜಟೆಪಾಠ

4 ಇಷೇತ್ವಾ -ಇಷೋತ್ವೋರ್ಜೆ -ಊರ್ಜೇತ್ವಾ ಇಷೇ -ಇಷೇತ್ವೋರ್ಜೇತ್ವ =ab, ba, abc, cbc, abc ಘನಪಾಠ

5 ಪದಪಾಠವನ್ನು ಸಂಹಿತೆಯನ್ನಾಗಿ ಮಾಡಲು ನಿಯಮಗಳನ್ನು "ಪ್ರಾತಿಶಾಖ್ಯ"ಎನ್ನುವ ಗ್ರಂಥದಲ್ಲಿ ಕ್ರಮಪಡಿಸಿಕೊಂಡರು.

6 ಮಂತ್ರಸಂಖ್ಯೆ, ಪದ, ಪದಸಂಖ್ಯೆ, ಋಷಿ, ಛಂದಸ್ಸು, ದೇವತೆ ಮೊದಲಾದ ಅನುಕ್ರಮಣಿಕೆಗಳಲ್ಲಿ ಸಿದ್ಧಪಡಿಸಿಕೊಂಡರು

ಈ ಮೇಲಿನ 16ಕ್ರಮಗಳನ್ನು ಆಶ್ರಯಿಸಿರುವುದರಿಂದ ಪಾಠಭೇದಗಳು ತೋರಲು ಅವಕಾಶವು ಬಹುಮಟ್ಟಿಗೆ ಕಡಿಮೆಯಾಯಿತು. ಆದರೂ ಸೂತ್ರಕಾಲದ ಚರಣವ್ಯೂಹವೆನ್ನುವ ಗ್ರಂಥದಿಂದ ಐದು ಶಾಖೆಗಳು ಇರುವಂತೆ ಕಂಡುಬರುತ್ತದೆ. ಶಾಕಲ, ವಾತ್ಕಲ, ಅಶ್ವಲಾಯನ, ಶಾಂಖಾಯನ, ಮಾಂಡುಕೇಯ ಎನ್ನುವ ಐದು ಶಾಖೆಗಳಲ್ಲಿ ಶಾಕಲರೇ ಉತ್ತಮ ವೇದ ಪ್ರತಿಪಾದಕರು ಅಶ್ವಲಾಯನರಿಗೆ ವಾಲಖಿಲ್ಯಸೂಕ್ತಗಳು ಶ್ರುತಿಯಾಗಿದೆ. ಶಾಕಲರಿಗೆ ಇದು ಖಿಲಶ್ರುತಿ

ಈ ಆರುಸಾಧನೆಗಳೊಡನೆ ಷಡಂಗದಿಂದ ಅರ್ಥನಿರ್ಣಯಕ್ಕೆ ಅನುಕೂಲವನ್ನು ಕಲ್ಪಿಸಿಕೊಂಡರು. 1) ಶಿಕ್ಷಾ 2) ವ್ಯಾಕರಣ, 3) ಛಂದಸ್ಸು, 4) ನಿರುಕ್ತ, 5) ಜ್ಯೋತಿಷ ಮತ್ತು 6) ಕಲ್ಪ ಇವೇ ಆ ಆರು ಅಂಗಗಳು.

"ಶೀಕ್ಷಾಂ ವ್ಯಾಖ್ಯಾಸ್ವಾಮಃ† ವರ್ಣ, ಸ್ವರಃ ಮಾತ್ರಾಬಲಂ ಸಾಮಸಂತಾನಃ"ಎಂದುದುತ್ತೈತ್ತರೀಯ ಶೀಕ್ಷಾವಲ್ಲಿಯಲ್ಲಿ ಹೇಳಿರುವಂತೆ ವೇದ ಮಂತ್ರದ ವರ್ಣ,ಸ್ವರ, ಬಲ ಇತ್ಯಾದಿ ವಿಮರ್ಶೆಯು ಶಿಕ್ಷಾದಲ್ಲಿದೆ (Phonetics) ಸುಪ್, ತಿಜ್, ಪ್ರತ್ಯಯ, ಧಾತು, ಧಾತ್ವರ್ಥ, ಶಬ್ದ, ವ್ಯುತ್ಪತ್ತಿ, ಸಮಾಸ ಇತ್ಯಾದಿಯಾಗಿ ಶಬ್ದಾರ್ಥ ನಿರ್ಣಯಕ್ಕಾಗಿ ವ್ಯಾಕರಣ ಶಾಸ್ತ್ರವಿದೆ (Grammer)ಇದರಲ್ಲಿ ಲೌಕಿಕ, ವೈದಿಕ, ಅರ್ಥ ನಿರ್ಣಯಕ್ಕೆ ಬೇಕಾದ ಎಲ್ಲಾ ನಿಯಮಗಳಿವೆ. ಆದರೆ ನಿರುಕ್ತದಲ್ಲಿ ವೈದಿಕ ಶಬ್ದಗಳಿಗೆ ಯಾತ್ರ ಸಂಬಂಧಪಟ್ಟ ನಿಯಮಗಳಿರುವುದಲ್ಲದೆ, ದೇವತಾನಿರ್ಣಯ ಶಬ್ದಗಳ ಅರ್ಥಮಾಡುವಾಗ ಸಾಮಾನ್ಯವಾಗಿ ಯೌಗಿಕಾರ್ಥವನ್ನೇ ಸ್ವೀಕಾರ ಮಾಡಬೇಕೆನ್ನುವ ವಿಧಿ ಇತ್ಯಾದಿಗಳು ವಿಸ್ತೃತವಾಗಿವೆ. ಇವನ್ನು ಬರೆದ ಯಾಸ್ಕರು ಕ್ರಿ.ಪೂ. 8ನೇ ಶತಮಾನಕ್ಕೆ ಹಿಂದಿನವರು. 12ಅಧ್ಯಾಯವುಳ್ಳ ಈ ಗ್ರಂಥದಲ್ಲಿ ತಮ್ಮ ಹಿಂದಿದ್ದ 20 ವೈಯಾಕರಣಗಳನ್ನು ಯಾಸ್ಕರು ನಮೂದಿಸಿರುವರು. ಶಾಕಟಾಯನ ಮತದ ವಿಷಯದಲ್ಲಿ ಚರ್ಚೆಯನ್ನು ನಡೆಯಿಸಿರುವರು. ಇವರಾದ ಮೇಲೆ ಬಂದವರೇ ಪಾಣಿನಿ. ಇವರು ಈಗ ನಿರ್ಣಯವಾಗಿರುವಂತೆ ಕ್ರಿ. . 7ನೇ ಶತಮಾನದವರು. ಇವರು 3798 ಸೂತ್ರಗಳುಳ್ಳ ಅಷ್ಟಾಧ್ಯಾಯಿ ಎನ್ನುವ ಗ್ರಂಥವನ್ನು ಅನಾದೃಶ ಪ್ರತಿಭೆ ಮತ್ತು ದೇವತಾನುಗ್ರಹದಿಂದ ಬರೆದಿರುವರು. ಅವರಿಗೆ ಹಿಂದಿದ್ದ ಎಲ್ಲಾ ವ್ಯಾಕರಣ ಗ್ರಂಥಗಳೂ ಅಷ್ಟಾಯಿಯೂ ಬಂದಮೇಲೆ ಕಣ್ಮರೆಯಾಗಿವೆ. ಅವುಗಳಲ್ಲಿ ಈಗ ಉಳಿದಿರುವುದು ಯಾಸ್ಕನಿರುಕ್ತ ಮಾತ್ರ. ಪಾಣಿನಿ ಸೂತ್ರಗಳನ್ನು ಪರಿಷ್ಕಾರ ಮಾಡಲು ಮುಂದೆ ಕ್ರಿ.ಪೂ. 4ನೇ ಶತಮಾನದಲ್ಲಿ ಕಾತ್ಯಾಯನರು ಪ್ರಯತ್ನಪಟ್ಟಿರುವರು. ಪಾಣಿನಿಯ ಸೂತ್ರಪರಿಷ್ಕಾರ ಮತ್ತು ಪುಷ್ಟಿ ಇವೇ ಇವರ ದೃಷ್ಟಿಯಾಗಿದೆ. ಇವರಿಗೆಗೂ ಮುಂದೆ ಕ್ರಿ.ಪೂ. 2ನೇ ಶತಮಾನದಲ್ಲಿದ್ದ ಪತಂಜಲಿಗಳು ಇದನ್ನು ಸಹಿಸದೆ ಪಾಣಿನಿಯನೇ ಪೂರ್ತಿಯಾಗಿ ಸಮರ್ಥಿಸಲು ಮಹಾಭಾಷ್ಯವೆನ್ನುವ ಉದ್ಭಟ ಗ್ರಂಥವನ್ನು ಬರೆದಿರುವರು. ಈ ಮೂರು ವೈಯಾಕರಣದಿಂದ ಸಂಸ್ಕೃತ ಇತಿಹಾಸದಲ್ಲೇ ಎಂದೂ ಅಳಿಯದ ಒಂದು ಕೀರ್ತಿಯು ಬೆಳಗುತ್ತಿದೆ. "ಮುನಿತ್ರಯಂ ನಮಸ್ಕೃತ್ಯ ತದುಕ್ತೀಃ ಪರಿಭಾವ್ಯಚ ವೈಯಾಕರಣ ಸಿದ್ಧಾಂತ ಕಾಮುದೀಯಂ ವಿರಚ್ಯತೀ" ಎಂದು ಈ ಮೂರು ಮುನಿಗಳನ್ನು ನಮಸ್ಕರಿಸದೆ ವ್ಯಾಕರಣ ಶಾಸ್ತ್ರಧ್ಯಾಯನವೇ ನಡೆಯುವುದಿಲ್ಲ. ಇಲ್ಲಿಂದ ಮುಂದೆ ಅನೇಕ ಬೌದ್ಧರು , ಜೈನರು ವ್ಯಾಕರಣ ಶಾಸ್ತ್ರವನ್ನು ಪರಿಷ್ಕರಿಸಲು ಪ್ರಯತ್ನಪಟ್ಟರು. ಆದರೆ ಅವೆಲ್ಲವು ಅಷ್ಟಾಗಿ ಸಫಲವಾಗಲಿಲ್ಲ. ಕ್ರಿ.ಶ. 16ನೇ ಶತಮಾನದಲ್ಲಿ ಭಟ್ಟೋಜ ದೀಕ್ಷಿತರು ವ್ಯಾಕರಣ ಶಾಸ್ತ್ರಕ್ಕೆ ಅನಾದೃಶ್ಯವಾದ ಸೇವೆಯನ್ನು ಸಲ್ಲಿಸಿರುವರು. ಪಾಣಿನಿಯ ಸೂತ್ರಗಳನ್ನು ಇರುವಂತೆಯೇ ಅಧ್ಯಯನ ಮಾಡುವುದು ಕಠಿಣವೆಂದು ಮನಗಂಡು ತನ್ನ ಪಾಂಡಿತ್ಯಮಹಿಮೆಯಿಂದ ಸಿದ್ಧಾಂತ ಕಾಮುದೀ ಎನ್ನುವ ತನ್ನ ಗ್ರಂಥದಲ್ಲಿ ಪಾಣಿನೀಯ ಸೂತ್ರಗಳನ್ನು ಪ್ರಕರಣಕ್ಕನುಗುಣವಾಗಿ ವಿಂಗಡಿಸಿಕೊಂಡು, ತನ್ನ ಹಿಂದಿದ್ದ ಎಲ್ಲಾ ವ್ಯಾಕರಣ ಗ್ರಂಥಗಳನ್ನು ಪರಿಶೀಲಿಸಿ ವ್ಯಾಖ್ಯಾನ ಮಾಡಿರುವರು. ತನ್ನ ಶಬ್ದ ಕೌಸ್ತುಭದಲ್ಲಿ

ಪರಿಭಾವ್ಯ ಬಹೂರ್ಗ್ರಂಥನ್ ಯೋರ್ಥಃಕ್ಲೇಶಾಚ್ಚಲಭ್ಯತೇ
ತಮಶೇಷ ಮನಾಯಾಸಾದಿತಿ ಗೃಹ್ಣೀತಸಜ್ಜನಾಃ

ಎಂದು ಹಾಗೆಯೇ ಹೇಳಿಕೊಂಡಿರುವರು. ಇವರ ಹಿಂದಿದ್ದ ಕಲಾಪವ್ಯಾಕರಣ ಕ್ರಮದಲ್ಲಿ ನಡೆದರೂ, ಕೌಮೂದ ಮತ್ತು ಕಾಂತತ್ರವೆಂದು ಈಗಲೂ ಬಂಗಾಳದೇಶದ ಕೆಲವೆಡೆ ಅಭ್ಯಸಿಸಲ್ಪಡುತ್ತಿರುವ ಈ ಗ್ರಂಥವನ್ನು ಬಹಳವಾಗಿ ಶಾಸ್ತ್ರ ದೃಷ್ಟಿಯಲ್ಲಿ ಪುಷ್ಟೀಕರಿಸಿರುವರು ಮತ್ತು ಕಲಾಪ ವ್ಯಾಕರಣ ಆಧಾರದ ಮೇಲೆ ಬರೆದಿರುವ ಬೋಪ ದೇವನ ಮುಗ್ಧ ಭೋದ ಗ್ರಂಥವು ವ್ಯಾಕರಣ ಶಾಸ್ತ್ರ ದೃಷ್ಟಿಯಲ್ಲಿ ನಾಮಶೇಷವಾಗಿ ಉಳಿಯುವಂತೆ ಮಾಡಿರುವರು. ಇದರ ವಿಚಾರ IIನೇ ಭಾಗದಲ್ಲಿ ಬರುವುದು. ಪೂರ್ವಾರ್ಧ, ಉತ್ತರಾರ್ಧ ಮತ್ತು ವೈದಿಕ ಪ್ರಕ್ರಿಯಾ ಎಂದು ಕೌಮುದಿಯು ಮೂರು ಭಾಗವಾಗಿ ವಿಂಗಡಿಸಲ್ಪಟ್ಟಿದೆ.

ಪೂರ್ವಾರ್ದದಲ್ಲಿ ಸಂಜ್ಞಾ ಪ್ರಕರಣ, ಪರಿಭಾಷಾಪ್ರಕರಣ, ಅಚ್‌ಸಂಧಿ, ಹಲ್‌ಸಂಧಿ, ವಿಸರ್ಗಸಂಧಿ, ಸ್ವಾವಿಸಂಧಿ, ಶಬ್ದರೂಪ, ಅವ್ಯಯ ಸ್ತ್ರೀ ಸತ್ಯಯ, ಕಾರಕ, ಸಮಾಸಾಂತ, ತದ್ಧಿತ

ಉತ್ತರಾರ್ಧದಲ್ಲಿ ತಿಜಂತ (ಹತ್ತು ಲಕಾರಗಳು) ಕೃಂತ, ಯಜಂತ, ಯಂಗ್, ಲುಗಂತ, ನಾಮಧಾತು, ಕಣ್ವಾದಿ, ಆತ್ಮನೇಪದ, ಪರಸ್ಮೈಪದ, ಪ್ರಕ್ರಿಯಾ, ಭವ ಕರ್ಮ, ಕರ್ಮಕರ್ತೃ ಪ್ರಕ್ರಿಯಾ, ಲಕಾರಾರ್ಥ ಪ್ರಕ್ರಿಯಾ, ಪೂರ್ವಕೃದಂತ, 5 ಪಾದದಲ್ಲಿ ಉಣಾದಿ ಮತ್ತು ಉತ್ತರ ಕೃದಂತ.

ವೈದಿಕ ಪ್ರಕ್ರಿಯೆಯಲ್ಲಿ -ಸ್ವರ ಪ್ರಕ್ರಿಯಾ ಇತ್ಯಾದಿಗಳು

ಈ ರೀತಿಯಲ್ಲಿ ಪಾಣಿನೀ ಸೂತ್ರಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಲು ಅನುಕೂಲ ಮಾಡಿಕೊಟ್ಟರೂ ಮಧ್ಯೆ ಅಪವಾದ ನ್ಯಾಯ, ಮಂಡೂಕ ಪ್ಲುತನ್ಯಾಯ್ಯ ಅಪಕರ್ಷ ಇತ್ಯಾದಿಗಳಿಂದ ವ್ಯಾಕರಣಶಾಸ್ತ್ರಾಧ್ಯಯನವು ಕಠಿಣವಾಗಿಯೇ ಉಳಿದಿದೆ. ಅದಕ್ಕಾಗಿಯೇ ಸುಲಭವಾಗಿ ಸಂಸ್ಕೃತ ಭಾಷಾಜ್ಞಾನ ಬಂದು ಕಾವ್ಯಾದಿಗಳನ್ನು ಓದಲು ಉಪಯೋಗವಾಗುವುದಕ್ಕಾಗಿ ಈಗಲೂ ಕಲಾಪ ಮತ್ತು ಮುಗ್ಧ ಭೌದ ವ್ಯಾಕರಣಗಳು ಉತ್ತರ ದೇಶದಲ್ಲಿ ಪ್ರಚಾರದಲ್ಲಿವೆ. ಈ ವ್ಯಾಕರಣ ಶಾಸ್ತ್ರದ ಚರಿತ್ರೆಯನ್ನು ಎರಡನೇ ಭಾಗದಲ್ಲಿ ಕೊಡಲಾಗಿದೆ.

ಪ್ರಾತಿಶಾಖ್ಯಗಳೇ ವ್ಯಾಕರಣ ಶಾಸ್ತ್ರದ ಮೂಲವೆನ್ನಬಹುದು. ಆಯಾ ಶಾಖೆಯವರಿಗೆ ಉಪಯುಕ್ತವಾದ ವ್ಯಾಕರಣ ನಿಯಮಗಳು ಇವುಗಳಲ್ಲಿ ಅಡಗಿವೆ. ಸ್ವರವರ್ಣ, ವ್ಯಂಜನವರ್ಣ, ಸಂಜ್ಞಾ, ಯಮ, ಸತ್ವವಿಧಾನ, ಣತ್ವವಿಧಾನ ಇತ್ಯಾದಿ ಪುರುಷಾಧಿಕಾರ ಮತ್ತು ಗುರು ಲಘು ವಿಚಾರ ಇತ್ಯಾದಿ ಮೂಲ ವಿಷಯಗಳು ಗಮನಿಸಲ್ಪಟ್ಟಿವೆ. ಆದರೆ ಕಾರಕ, ಸಮಾಸ, ತದ್ಧಿತ ಇವು ಗಮನಿಸಲ್ಪಟ್ಟಿಲ್ಲ. ಯಾಸ್ಕನಿರಕ್ತವು ನಿಘಂಟುವಾಗಿ ಪ್ರಯೋಜನ ಕಾರಿಯಾದರೂ ಪ್ರಾತಿಶಾಖ್ಯೆಗಳೊಡನೆ ಸೇರಿ ವ್ಯಾಕರಣ ಶಾಸ್ತ್ರಕ್ಕೆ [illegible]ಬವನ್ನು ಕಲ್ಪಿಸಿಕೊಟ್ಟಿದೆ. ಶಾನಕರು ಋಗ್ವೇದ

ಪ್ರಾತಿಶಾಖ್ಯೆಯನ್ನು 3ಅಧ್ಯಾಯದಲ್ಲಿ ಕೊಟ್ಟಿರುವರು. ಇವರು ಅಶ್ವಲಾಯವರ ಗುರುಗಳು. ಇದರ ಸಂಗ್ರಹವೇ ಉಪಲೇಖ. ಇದಲ್ಲದೇ ತೈತ್ತಿರೀಯ ಪ್ರಾತಿಶಾಖ್ಯೆ, ಕಾತ್ಯಾಯನರ 8 ಅಧ್ಯಾಯನವುಳ್ಳ ವಾಜಸನೇಯ ಪ್ರಾತಿಶಾಖ್ಯೆ, ಶಾನಕರ 4ಅಧ್ಯಾಯವುಳ್ಳ ಅಥರ್ವಣವೇದ ಪ್ರಾತಿ ಶಾಖ್ಯೆಗಳೂ ಇವೆ. ಇವುಗಳೊಡನೆ ಅಶ್ವಲಾಯನ ಪರಿಶಿಷ್ಟ, ಗೋಬಿಲ ಸಂಗ್ರಹ ಪರಿಶಿಷ್ಟ, (ಸಾಮವೇದ), ಕರ್ಮಪ್ರದೀಪ, ಛಾಂದೋಗ್ಯ, ಗೃಹ್ಯಪರಿಶಿಷ್ಟ ಇತ್ಯಾದಿಗಳು ಇವೆ.

ಋಗ್ವೇದಕ್ಕೆ ಶಾನಕರ ಏಳು ಅನುಕ್ರಮಣಿಕೆಗಳಿವೆ. ಅದಲ್ಲದೆ ಸರ್ವಾನುಕ್ರಮಣಿಕೆಯೂ ಇದೆ. ಸಾಮವೇದಕ್ಕೆ ಹರ್ಷ, ದೈವತವೆನ್ನುವ ಅನುಕ್ರಮಣಿಕೆಗಳು, ಕೃಷ್ಣ ಯಜುರ್ವೇದಕ್ಕೆ ನಿಗಮ ಪರಿಚ್ಛೇದ, ಪ್ರವರಾಧ್ಯಾಯವೆನ್ನುವ ಗ್ರಂಥಗಳೂ ಇವೆ.

ಕಲ್ಪಸೂತ್ರಗಳಲ್ಲಿ ಯಜ್ಞಯಾಗಾದಿಗಳು ವಿಮರ್ಶೆಯು ನಡೆದಿದೆ. ಜ್ಯೋತಿಷ್ಯವು ಕಾಲನಿರ್ಣಯಕ್ಕಾಗಿ ಪರಿಷ್ಕರಿಸಲ್ಪಟ್ಟಿತು.

ಹೀಗೆ ನಾನಾ ಮುಖದಲ್ಲಿ ಪ್ರಾಚೀನಾಚಾರ್ಯರು ತಮ್ಮ ವೇದವನ್ನು ಕಾಪಾಡಿಕೊಳ್ಳಲು ಸಾಧನಗಳನ್ನು ಕಲ್ಪಿಸಿಕೊಂಡರು.

## ೯. ಮಿಕ್ಕ ವೇದಗಳು -ಸಾಮವೇದ

ಇದರಲ್ಲಿ 1549ಮಂತ್ರಗಳಿವೆ. ಎರಡು ಕಾಂಡಗಳಾಗಿ ವಿಂಗಡಿಸಲ್ಪಟ್ಟಿದೆ. ಪ್ರತಿಕಾಂಡಕ್ಕೂ ಆರ್ಚಿಕ ಎಂದು ಹೆಸರು. ಮೊದಲನೆ ಆರ್ಚಿಕದಲ್ಲಿ 6 ಪ್ರಪಾಠಕಗಳೂ, ಪ್ರತಿ ಪ್ರಪಾಠಕದಲ್ಲಿ ಹತ್ತು ದಶಕಗಳೂ (ಮಂತ್ರ)ಇವೆ. ಆದರೆ 6ನೇ ಪ್ರಪಾಠಕದಲ್ಲಿ ದಶಕ ಮಾತ್ರವಿದೆ. ಅಗ್ನಿ, ಸೋಮ, ಮತ್ತು ಇಂದ್ರ ಇವರೇ ಪ್ರಧಾನ ದೇವತೆಗಳು. ಎರಡನೇ ಆರ್ಚಿಕದಲ್ಲಿ 9ಪ್ರಪಾಠಕಗಳಿವೆ. ಇದು ಮೊದಲನೇ ಪ್ರಪಾಠಕವಾದ ಮೇಲೆ ಬರೆಯಲ್ಪಟ್ಟಂತಿದೆ. ಮೊದಲನೇ ಪ್ರಪಾಠಕದ ಮಂತ್ರಗಳು ಹಾಗೆಯೇ ಇಲ್ಲಿ ಪುನರುಕ್ತಗಳಾಗಿವೆ. ಇದನ್ನು ಶತಪಥ ಬ್ರಾಹ್ಮಣದಲ್ಲಿ ನೋಡಬಹುದು.

ಈ ವೇದದಲ್ಲಿರುವ ಮಂತ್ರಗಳಲ್ಲಿ ಸಾಮಾನ್ಯವಾಗಿ ಋಗ್ವೇದದ ಸೋಮದೇವ ಲೌಪರವಾದ 8ಮತ್ತು 9ನೇ ಮಂಡಲದಿಂದ ತೆಗೆಯಲ್ಪಟ್ಟಿದೆ. ಆದರೆ 75ಮಂತ್ರಗಳು ಮಾತ್ರ ಸ್ವತಂತ್ರಗಳು. ಯಜುರ್ವೇದದಂತೆ ಯಜ್ಞಯಾಗಾದಿಗಳಲ್ಲಿ ಉದ್ಗಾತೃವಿಗೆ ಗಾನ ಮಾಡಲು ಉಪಯುಕ್ತವಾದ ಮಂತ್ರಗಳು ಇಲ್ಲಿವೆ. ಇದು ಕೃಷ್ಣ ಮತ್ತು ಶುಕ್ಲ ಯಜುರ್ವೇದಕ್ಕಿಂತ ಪ್ರಾಚೀನವಾದದ್ದು. ಇದರಲ್ಲಿಕೌತುಕ ಮತ್ತು ರಾಣಾಯನೀಯವೆನ್ನುವ ಎರಡು ಶಾಖೆಗಳಿವೆ. ಈಗಿನ ಗುಜರಾತಿನಲ್ಲಿ ಕೌತುಮರು, ಮರಾಠ ಮತ್ತು ಪೂರ್ವ ಹೈದರಾಬಾದ್ ಪ್ರದೇಶಗಳಲ್ಲಿ ರಾಣಾಯನೀಯರೂ ಅಧಿಕವಾಗಿರುವರು. ಈ ಎರಡು ಶಾಖೆಗಳಲ್ಲಿ ಪಾಠಭೇದವು ಕಮ್ಮಿಯಾಗಿದೆ.

# ೧೦. ಯಜುರ್ವೇದ

ಉತ್ತರ ಭಾರತದ ಮಧ್ಯಭಾಗ, ಕುರುಪಾಂಚಾಲ, ಶುತುದ್ರಿ ಮತ್ತು ಯಮುನಾ ನದಿಗಳ ಮಧ್ಯಪ್ರದೇಶ ದೃಷ್ಟದ್ವತೀ ಮತ್ತು ಸರಸ್ವತೀ ನದಿಗಳ ಪ್ರಾರಂಭದಿಂದ ಪೂರ್ವ ದಕ್ಷಿಣ ಭಾಗ -ಇವೇ ಈ ವೇದದ ನಿರ್ಮಾಣ ಪ್ರದೇಶ ಇದರಲ್ಲಿ ಬ್ರಾಹ್ಮಣ್ಯಕ್ಕೆ ಮೊದಲನೇ ಸ್ಥಾನವಿದೆ ಕುರುಕ್ಷೇತ್ರದಲ್ಲಿ ಇದು ರೂಪುಗೊಂಡು ಮಿಕ್ಕಪ್ರದೇಶಗಳಿಗೆ ವ್ಯಾಪಿಸಿಕೊಂಡಂತಿದೆ ಮನು ಸ್ಮೃತಿಯಲ್ಲಿ ಕುರುಕ್ಷೇತ್ರಕ್ಕೆ ಗೌರವವಿದೆ ಮೀರತ್ತಿನಿಂದ ಹಿಡಿದು ಅಹಮದಾಬಾದ್ ಪರ್ಯಂತ ವ್ಯಾಪ್ತವಾದ ಪ್ರದೇಶಕ್ಕೆ ಬ್ರಹ್ಮಾವರ್ತರೆಂದು ಹೆಸರು ಇದೆ

ಈ ವೇದದಲ್ಲಿ ನಾಲ್ಕು ಶಾಖೆಗಳಿವೆ (1) ಕಾಠ (2) ಮೈತ್ರಾಯಣೀಯ (3) ತೈತ್ತಿರೀಯ ಮತ್ತು (4) ವಾಜಸೇನೆಯಿ. ಕಾಠರು ಮತ್ತು ಅವರ ಉಪಶಾಖೆ ಕಪಿಷ್ಠಲರು ಪಂಜಾಬ್ ಮತ್ತು ಕಾಶ್ಮೀರದಲ್ಲಿ ಅಧಿಕ ಸಂಖ್ಯೆಯಲ್ಲಿರುವರು ಮೈತ್ರಾಯಣೀಯರಿಗೆ ಕಾಲಾಪರೆಂದು ಮತ್ತೊಂದು ಹೆಸರು ಇವರು ನರ್ಮದಾ ನದಿಯ ತೀರದಿಂದ ದಕ್ಷಿಣಕ್ಕೆ ನಾಸಿಕ್ ಪ್ರದೇಶದ ಪರ್ಯಂತ ಸಮುದ್ರಕ್ಕೆ 100 ಮೈಲಿದೂರದಲ್ಲಿ ನರ್ಮದಾ ತೀರಗಳಲ್ಲಿ ವಾಸಿಸುತ್ತಿದ್ದರು ಈಗ ಇವರು ಅಹಮದಾಬಾದಿನಲ್ಲಿ ವಿರಳರಾಗಿರುವರು ಕಾಠರು ಮತ್ತು ಮೈತ್ರಾಯಣೀಯರೂ ಸರ್ವ ವ್ಯಾಪಿಗಳೆಂದು ಪತಂಜಲಿಗಳು ಮಹಾಭಾಷ್ಯದಲ್ಲಿ ಹೇಳಿರುವರು ರಾಮಾಯಣದಲ್ಲಿ ಇವರು ಅಯೋಧ್ಯೆಯಲ್ಲಿ ಬಹಳ ಗೌರವಕ್ಕೆ ಪಾತ್ರರಾಗಿರುತ್ತಾರೆ ತೈತ್ತಿರೀಯರು ಕ್ರಿ ಪೂ 400ರಲ್ಲಿ ನರ್ಮದೆಯ ದಕ್ಷಿಣತೀರದಲ್ಲಿದ್ದರು ಇವರ ಉಪಶಾಖೆಯವರಾದ ಆಪಸ್ತಂಭರು ಗೋದಾವರೀ ತೀರಗಳಲ್ಲಿಯೂ, ಹಿರಣ್ಯಕೇಶಿಗಳು ಗೋದಾವರಿಗೆ ದಕ್ಷಿಣಪ್ರದೇಶಗಳಲ್ಲಿಯೂ ಇರುವರು ವಾಜಸೇನೆಯಿ ಗಂಗಾ ಕೂಲಗಳಲ್ಲಿ ವಾಸಿಸುತ್ತಿದ್ದರು ಈಗ ಇವರು ಆಗ್ನೇಯ ಮತ್ತು ಮಧ್ಯಭಾರತದಲ್ಲಿ ಅಧಿಕವಾಗಿರುವರು ಇವರಲ್ಲಿ ಎರಡು ಪಾಠಭೇದವಿದೆ ಮಾಧ್ಯಂದಿನ ಮತ್ತು ಕಣ್ವ, ವೇದಾರ್ಥಮಾಡುವಾಗ ಇವೆರಡೂ ಪರಸ್ಪರ ಉಪಕಾರಕವಾಗಿವೆ ಈ ಶಾಖೆಗೆ ಶುಕ್ಲ ಯಜುರ್ವೇದವೆಂದು ಹೆಸರು ಬಿದ್ದಿದೆ ಈ ಸಂಹಿತೆಯಲ್ಲಿ 40 ಅಧ್ಯಾಯಗಳಿವೆ 40 ಅಧ್ಯಾಯವೇ ಈಶಾವಾಸ್ಯೋಪನಿಷತ್ತು 16ನೇ ಅಧ್ಯಾಯದಲ್ಲಿ ರುದ್ರನಾಗಿರುವವನಿಗೆ 39ನೇ ಅಧ್ಯಾಯದಲ್ಲಿ ಈಶಾನ ಮತ್ತು ಮಹಾದೇವ ಎನ್ನುವ ಹೆಸರುಗಳು ಪ್ರಸಿದ್ಧವಾಗಿದೆ ತೈತ್ತರೀಯವು ಕೃಷ್ಣಯಜುರ್ವೇದವೆಂದು ಪ್ರಸಿದ್ಧವಾಗಿದೆ ಇದರಲ್ಲಿ ಮಂತ್ರ ಮತ್ತು ಬ್ರಾಹ್ಮಣ ಒಟ್ಟಿಗೆ ಸೇರಿವೆ ವಾಜಸನೇಯದಲ್ಲಿ ಹಾಗಿಲ್ಲ

ಈ ಯಜುರ್ವೇದವು ಸಾಮವೇದದಂತೆ ಯಜ್ಞಯಾಗಾದಿಗಳಿಗೆ ಉಪಯುಕ್ತವಾದ ಮಂತ್ರಗಳನ್ನೊಳಗೊಂಡಿದೆ ಆದರೆ ಸಾಮವೇದವು ಸೋಮಯಾಗಕ್ಕೆ ಮಾತ್ರ ಉಪಯುಕ್ತವಾಗಿದೆ ಯಜುರ್ವೇದವಾದರೋ ಎಲ್ಲಾ ಯಾಗಗಳಿಗೂ ಪ್ರಯೋಜನಕಾರಿಯಾಗಿದೆ ಇದರಲ್ಲಿ ಋಗ್ವೇದ ಮಂತ್ರಗಳಿದ್ದರೂ ಮುಕ್ಕಾಲು ಭಾಗವು ಸ್ವತಂತ್ರ ಮಂತ್ರಗಳಿಂದ ಕೂಡಿದೆ ಭಾಷೆಯೂ ಋಗ್ವೇದದಂತೆಯೇ ಇದೆ ಅಲ್ಲಿರುವಂತೆ ಇಲ್ಲಿಯೂ ದೇವತೆಗಳು ಋಗ್ವೇದದ ರುದ್ರನು ಇಲ್ಲಿ ಶಿವನಾಗಿರುತ್ತಾನೆ ಯಜ್ಞಸ್ವರೂಪನಾದ ವಿಷ್ಣುವಿಗೆ ಪ್ರಾಶಸ್ತ್ಯ ಬಂದಿದೆ ಪಾರಮಾರ್ಥಿಕ

ದೃಷ್ಟಿಯಲ್ಲಿಯೂ. ಯಜ್ಞಯಾಗಾದಿಗಳ ಸ್ವರೂಪದಲ್ಲಿಯೂ ಇಲ್ಲಿ ವೈಲಕ್ಷಣ್ಯವಿದೆ. ಋಗ್ವೇದದಲ್ಲಿ ದೇವತೆಗಳ ಪ್ರಾರ್ಥನೆಯಿಂದ ಕರುಣೆಯನ್ನು ತೋರಿಸುವರಾಗಿದ್ದರು. ಇಲ್ಲಿ ಮಾತ್ರ ಶಕ್ತಿಗೆ ಪ್ರಾಶಸ್ತ್ಯವಿದೆ. ತಪಸ್ಸು ಮತ್ತು ವ್ರತಶಕ್ತಿದಾಯಕಗಳಾಗಿವೆ. ವೇದಾಂತಾನು ಭವಕ್ಕೆ ಬೇಕಾದ ಅನುಷ್ಠಾನಗಳು ಇಲ್ಲಿ ನಿರ್ದಿಷ್ಟರೂಪವನ್ನು ತಾಳಿಯವಂತಿದೆ. ಇದರ ಸ್ವರೂಪವನ್ನು ತಿಳಿಯದೆ ಪಾಶ್ಚಾತ್ಯರು ಈ ವೇದದಲ್ಲಿ ಋಗ್ವೇದದ ಉದಾತ್ತ ಧ್ಯೇಯವು ಕೆಳಗಿಳಿದಂತಿದೆ ಎಂದು ಅಭಿಪ್ರಾಯಪಟ್ಟಿರುವರು. ಜಾತಿಯ ಈ ವೇದದಲ್ಲಿ ಕಠಿಣ ರೂಪವನ್ನು ತಾಳಿದೆ.

## ೧೧. ಅಥರ್ವಣವೇದ

ಇದರಲ್ಲಿ 20 ಕಾಂಡಗಳಿವೆ. 730 ಮಂತ್ರಗಳು. 6000 ಪದ್ಯಗಳು ಇವೆ ಇವುಗಳಲ್ಲಿ 1200 ಪದ್ಯಗಳು ಋಗ್ವೇದದಿಂದ ತೆಗೆದುಕೊಂಡವು. I, VIII ಮತ್ತು X ಕಾಂಡಗಳು. ಇನ್ನು ಕೆಲವು ಭಾಗಗಳನ್ನು ಬಿಟ್ಟು ಮಿಕ್ಕ ಭಾಗಗಳಲ್ಲಿ ಗದ್ಯವೇ ಅಧಿಕವಾಗಿದೆ. ಮೊದಲಿನಿಂದ 13 ಕಾಂಡಗಳೇ ಮೂಲಭೂತವಾದವುಗಳೆಂದು ಊಹಿಸಬಹುದು. ಇವುಗಳಲ್ಲಿ ಪದ್ಯಗಳು ಕಡಿಮೆಯಾಗಿಯೂ ಮುಂದಿನ 6 ಕಾಂಡಗಳಲ್ಲಿ ಅಧಿಕವಾಗಿಯೂ ಇವೆ. XVVರಲ್ಲಿ ವಿವಾಹ ಮಂತ್ರಗಳು . XVಪರಮಾತ್ಮನಿಗೆ ವ್ರಾತ್ಯವೆನ್ನುವ ಹೆಸರೂ. XVIIರಲ್ಲಿ ಏಕೀಕರಣ ಮಂತ್ರಗಳು XVIIIರಲ್ಲಿ ಹೆಣಗಳನ್ನು ಹೂಳುವದೂ. ಪಿತೃಗಳ ವಿಷಯ-ಇವೂ ಇವೆ. XIX ಮತ್ತು XXಕಾಂಡಗಳು ನವೀನ. XXರಲ್ಲಿ ಇಂದ್ರ ಸ್ತುತಿ ಇದೆ ಇವೆರಡನ್ನೂ ಋಗ್ವೇದದಿಂದ ಕೋರಲಾಗಿದೆ. ಇದರಿಂದಲೇ ಅಥರ್ವಕ್ಕೆ ವೇದತ್ವವು ಸಿದ್ಧಿಸಿದಂತಿದೆ. ಇವೆರಡೂ ಅಥರ್ವ ಪ್ರತಿಶಾಖ್ಯೆಯಲ್ಲಿ ನಮೂದಿಸಲ್ಪಟ್ಟಿಲ್ಲ ಶತಪಥ. ತೈತ್ತಿರೀಯ ಬ್ರಾಹ್ಮಣ ಮತ್ತು ಛಾಂದೋಗ್ಯದಲ್ಲಿ ಈ ವೇದವು ನಮೂದಿಸಲ್ಪಟ್ಟಿದೆ. ಮಹಾಭಾಷ್ಯದಲ್ಲಿ ಇದು ವೇದದ ಶಿರೋಭಾಗವೆಂದೂ. ವೇದದ ಪ್ರತಿನಿಧಿ ಎಂದೂ ಹೇಳಲ್ಪಟ್ಟಿದೆ. ಇದಕ್ಕೆ ಅಥರ್ವಾಂಗೀರಪ. ಭೃಗು. ಅಂಗೀರಸ ಮತ್ತು ಬ್ರಹ್ಮ ವೇದ ಎಂದು ಹೆಸರುಗಳೂ ಇವೆ. ಋಗ್ವೇದದಲ್ಲಿಯೇ ಮಾಯ. ಮಾಟ. ಮೊದಲಾದವುಗಳ ಗೃಹಸ್ಥ ಧರ್ಮಕ್ಕೆ ಸೇರಿರುವುದು ಗೋಚರವಾಗಿದೆ. ವಿಶೇಷವಾಗಿ ಇವು ಅಥರ್ವ ವೇದದಲ್ಲಿದೆ ಧರ್ಮ ಸ್ವರೂಪದಲ್ಲಿ ಈ ವೇದಕ್ಕೆ ಒಂದು ಸ್ಥಾನವಿದೆ ಹಿಂದೂ ದೇಶದ ವೈದ್ಯ ಮತ್ತು ಜ್ಯೋತಿಷ್ಯವು ಇದರ ತಳಹದಿಯಲ್ಲಿ ನಿಂತಿವೆ ಆಪಸ್ತಂಭ ಧರ್ಮಸೂತ್ರದಲ್ಲಿ ಇದಕ್ಕೆ ಗೌರವ ಕೊಟ್ಟಿಲ್ಲ. ವೈಷ್ಣವ ಸ್ಮೃತಿಯ ಪರಹಿಂಸೆ ಮಾಡುವ ಮಂತ್ರೋಚ್ಚಾರಕನನ್ನು ಆತ ತಾಯಿ ಎಂದು ಕರೆದಿದೆ. ಮನು ಸ್ಮೃತಿಯಲ್ಲಿ ಈ ಮಂತ್ರಗಳು ಶತ್ರು ಹನನಕ್ಕೆ ಬೇಕಾದ ಬ್ರಹ್ಮಾಸ್ತ್ರವೆಂದಿದೆ. ಮಹಾಭಾರತದಲ್ಲಿ ಅಥರ್ವಣದ ಧಾರ್ಮಿಕ ದೃಷ್ಟಿಗೆ ಮನ್ನಣೆ ದೊರಕಿದೆ. ಪುರಾಣಗಳಲ್ಲಿ ಇದಕ್ಕೆ ಮಿಕ್ಕ ವೇದಗಳೊಡನೆ ಸ್ಥಾನವಿದೆ. ವಿಷ್ಣು ಪುರಾಣದಲ್ಲಿ ಅಥರ್ವರು ಬ್ರಹ್ಮಸ್ಥಾನಕ್ಕೆ ಅರ್ಹರೆಂದು ಹೇಳಲಾಗಿದೆ. ಮುಂದಿನ ಗ್ರಂಥಗಳ ದೃಷ್ಟಿಯನ್ನು ನೋಡಿದರೆ ಮೊದಲಿನ ಮೂರು ವೇದಗಳಿಗೆ ಅರ್ಹನಲ್ಲದವನನ್ನು ಅಥರ್ವನು ಎಂದು ತಿಳಿದಿರುವಂತಿದೆ. ಧರ್ಮಸೂತ್ರದ ಕಾಲದಿಂದ ಇದರ ವಿಷಯದಲ್ಲಿ ಭಿನ್ನಾಭಿಪ್ರಾಯವಿರುವಂತಿದೆ. ಆದರೆ ಗೋಪಥ ಬ್ರಾಹ್ಮಣದಲ್ಲಿ ಇದಕ್ಕೆ ಬ್ರಹ್ಮ ವೇದವೆಂದು ಹೆಸರಿದೆ. ಅಥರ್ವಣ ವೇದದಲ್ಲಿಯೂ ಹೇಳಿರುವಂತೆ ಪುರೋಹಿತನು ಅಥರ್ವವೇದಾನುಯಾಯಿಯಾಗಿರಬೇಕೆನ್ನುವ ವಿಧಿ ಇದೆ. ಜ್ವರ (fever)ಶ್ವೇತ (Lyprosy) ಕಾಮಾಲೆ (Jaundivce)ಜಲೋದರ (Drops)ಗಂಡಮಾಲೆ(Scrofula).

ರಾಜಯಕ್ಷ್ಮ (cough) ನೇತ್ರ ರೋಗ (Optenalmia) ಶಿರೋರೋಗ (Balodven) ಹೃದ್ರೋಗ (Loss of vital power)ಘಾಯ ಸಂಪದಂಶ ಇವೆಲ್ಲವೂ ಈ ವೇದದ ಪ್ರತಿ ಪಾದ್ಯಾಂಶವಾಗಿದೆ. ಈ ವೇದವು ಎಲ್ಲಿ ಬರೆಯಲ್ಪಟ್ಟಿತು ಎಂದು ಹೇಳಲು ಸಾಧ್ಯವಾಗಿಲ್ಲ. ಇದರಲ್ಲಿ ಕೊನೆಯ ಭಾಗಬಿಟ್ಟು ಮಿಕ್ಕ ಭಾಗಗಳೆಲ್ಲವೂ ಗೃಹಸ್ಥಧರ್ಮಕ್ಕೆ ಸೇರಿದ ಮಂತ್ರಗಳಾಗಿವೆ. ಇಲ್ಲಿ ಶೋಡಷ ಕರ್ಮಗಳು ಹೇಳಲ್ಪಟ್ಟಿವೆ. ದೇವತಾಭಾವನೆಯಲ್ಲಿ ಋಗ್ವೇದಕ್ಕಿಂತ ಬಹಳ ಮುಂದುವರಿದಿದೆ. ಇದರಲ್ಲಿ ಪೈಪ್ಪಲಾದ ಮತ್ತು ಶಾಸಕವೆನ್ನುವ ಎರಡು ಶಾಖೆಗಳಿವೆ

## ೧೨. ಬ್ರಾಹ್ಮಣಗಳು

ಯಜ್ಞಯಾಗಾದಿಗಳನ್ನು ವಿಧಿಸಿ ಅವುಗಳನ್ನು ಪ್ರಕೃತಿಯಾಗವೆಂದು ಒಳಗಾಗಿಸಿ ವ್ರಕೃತಿಯಾಗಕ್ಕೆ ಎಲ್ಲಾ ವಿವರ. ವಿಧಿ. ನಿಷೇಧ. ಕ್ರಮ ಮೊದಲಾದವುಗಳನ್ನು ತಿಳಿಸಿ. ಆ ಪ್ರಕೃತಿ ಯಾಗಗಳ ಅಂಗಗಳನ್ನು ವಿಕೃತಿಯಾಗಗಳಿಗೂ ಯಥಾವತ್ತಾಗಿ ಅನ್ವಯಿಸುವಂತೆ ತೋರಿಸಿ ಕರ್ಮವಿಧಾಯಕ ವಿಧಿ (Direction) ಕರ್ಮ ಪ್ರರೋಚನವಂ (Explanation)ಮತ್ತು ತತ್ವವಿಚಾರ ಪರ ಉಪನಿಷತ್ತು ಎನ್ನುವ ಮೂರು ಭಾಗವಾಗಿರುವ 1ದ್ಯಾತ್ಮಕವಾದ ವೇದಭಾಗಕ್ಕೆ ಬ್ರಾಹ್ಮಣ ಎಂದು ಸಾಮಾನ್ಯವಾಗಿ ಹೆಸರಿದೆ. ಇದರಲ್ಲಿ ಶಿಷ್ಯನಿಗೆ ೨ಕಾಂತದಲ್ಲಿ ಅರಣ್ಯಪ್ರದೇಶದಲ್ಲಿ ಧ್ಯಾನ ಮಾಡಲು ಬೇಕಾದ ವಿಷಯಗಳು ಅರಣ್ಯವೇನ್ನುವ ಭಾಗಗಳಲ್ಲಿ ಸಂಗ್ರಹೀತಗಳಾಗಿವೆ. ಸಾಮಾನ್ಯವಾಗಿ ಈಶಾನಾಸ್ಯೋಪನಿಷತ್ತು ಒಂದನ್ನು ಬಿಟ್ಟು ಮಿಕ್ಕ ಉಪನಿಷತ್ತುಗಳೆಲ್ಲಾ ಅರಣ್ಯಕಗಳಲ್ಲಿಯೇ ಇವೆ.

## ೧೩. ಋಗ್ವೇದ ಬ್ರಾಹ್ಮಣಗಳು

1) 8 ಕಾಂಡಗಳಲ್ಲಿ ಅಡಗಿರುವ 40 ಅಧ್ಯಾಯವುಳ್ಳ ಐತರೇಯ ಬ್ರಾಹ್ಮಣ 1-16 ಅಗ್ನಿಷ್ಟೋಯ ಯಾಗ. 17-18 ಗವಾಯಮನ. 19-24ದ್ವಾದಶಾಹ. 25-32 ಅಗ್ನಿಹೋತ್ರ; 33-40 ಪಟ್ಟಾಭಿಷೇಕ ಇವು ವರ್ಣಿತವಾಗಿವೆ. ಇದರಲ್ಲಿ ಐತರೇಯ ಆರಣ್ಯಕವೆನ್ನುವ 18 ಅಧ್ಯಾಯಗಳು ಸೇರಿವೆ. ಈಶ್ಕರಾಸ್ತಿತ್ವವಾದ. ವಿಶ್ವಾತ್ಮಾ. ಪ್ರಾಣ. ಪುರುಷ ಇವುಗಳ ಪ್ರಸ್ತಾಪವೊಂದಿದೆ. ಶುಲಶ್ಯೇಪ. ವೃತ್ತಾಂತ. ಹರಿಶ್ಚಂದ್ರ. ರೋಹಿತ. ವರುಣ ಇವೆಲ್ಲವೂ ಇಲ್ಲಿವೆ.

2) 30 ಅಧ್ಯಾಯಗಳುಳ್ಳ ಶಾಂಖಾಯನವೆನಿಸಿಕೊಂಡಿರುವ ಕಾಶೀತಕೀ ಬ್ರಾಹ್ಮಣದಲ್ಲಿ ಅಗ್ನಾ ಧ್ಯಾನ. ಅಗ್ನಿಹೋತ್ರ. ದರ್ಶನಪೂರ್ಣಮಾಸ. ಚಾತುರ್ಮಾಸ ಮೊದಲಾದ ವಿಷಯಗಳೆಲ್ಲವು ಇವೆ. ಇಲ್ಲಿ ಈಶಾನ ಮತ್ತು ಮಹಾದೇವ ಶಬ್ದಗಳಿರುವುದರಿಂದ ಶುಕ್ಲಯಜುರ್ವೇದದ ವಾಜಸನೇಯಿ ಸಂಹಿತ ಕಾಲದಲ್ಲಿ ಅಥರ್ವವೇದ ಮತ್ತು ಶತಪಥ ಬ್ರಾಹ್ಮಣ ಕಾಲದಲ್ಲಿ ರಚಿಸಲ್ಪಟ್ಟಿರಬೇಕೆಂದು ವೇಬರ್ (weber) ಅಭಿಪ್ರಾಯಪಟ್ಟಿರುತ್ತಾರೆ ಇದರಲ್ಲಿ 156 ಅಧ್ಯಾಯವುಳ್ಳ ಕೌಶೀತಕೀ ಬ್ರಾಹ್ಮಣವೂ ಸೇರಿದೆ. 3-6 ಅಧ್ಯಾಯಗಳೇ ಕೌಶೀತಕೀ ಉಪನಿಷತ್ತು.

## ೧೪. ಸಾಮವೇದ ಬ್ರಾಹ್ಮಣಗಳು

1 ತಾಂಡಿನ್– ಇದಕ್ಕೆ ಪಂಚವಿಶ, ತಾಂಡ್ಯ, ಮತ್ತು ಪ್ರೌಢಬ್ರಾಹ್ಮಣವೆನ್ನುವ ಹೆಸರುಗಳೂ ಇವೆ. ಕುರುಕ್ಷೇತ್ರವು ಇಲ್ಲಿ ನಮೂದಿಸಲ್ಪಟ್ಟಿದೆ. ವ್ರಾತ್ಯ ಸ್ತೋತ್ರವಿದೆ. ಇದರಿಂದ ಆರ್ಯರಾಗಿ ಬ್ರಾಹ್ಮಣರಲ್ಲದವರು ಬ್ರಾಹಣರಾಗಲು ವಿಧಿಗಳಿವೆ. ಈ ಬ್ರಾಹ್ಮಣದಲ್ಲಿ ಕೌಶೀತಕ್ಕೀಬ್ರಾಹ್ಮಣ ವಿಷಯದಲ್ಲಿ ದ್ವೇಷಭಾವವು ತೋರಿದೆ. ಪಂಚ ವಂಶ ಬ್ರಾಹ್ಮಣದ ಪರಿಶಿಷ್ಟವಾಗಿ ಷಡ್ವಿಂಶ ಬ್ರಾಹ್ಮಣವು ಪರಿಗಣಿಸಲ್ಪಟ್ಟಿದೆ. ಇದರ ಕೊನೆಯ ಆರು ಅಧ್ಯಾಯಗಳು ಅನಿಷ್ಟ ನಿವೃತ್ತಿಗಾಗಿ, ಅದ್ಭುತ ಬ್ರಾಹ್ಮಣ ಎಂದು ಪ್ರಸಿದ್ಧವಾಗಿದೆ.

2. ತಲವಕಾರ ಅಥವಾ ಜೈಮುನೀಯ–ಇದು 5 ಅಧ್ಯಾಯವುಳ್ಳದ್ದು . ಕೇನೋಪನಿಷತ್ತು ಈ ಬ್ರಾಹ್ಮಣಕ್ಕೆ ಸೇರಿದ್ದು.

3. ಛಾಂದೋಗ್ಯ ಬ್ರಾಹ್ಮಣ –ಇದರಲ್ಲಿಯೇ ಪ್ರಸಿದ್ಧವಾದ 8 ಅಧ್ಯಾಯ (ಪ್ರಪಾಠಕ)ವುಳ್ಳ ಛಾಂದೋಗ್ಯಪನಿಷತ್ತು ಸೇರಿದೆ. ಈ ಸಾಮ ಬ್ರಾಹ್ಮಣಗಳಲ್ಲಿ ಭಾವನೆಗಳು ವಿಚಿತ್ರವಾಗಿಯೂ ಗಹನವಾಗಿಯೂ ಇವೆ.

## ೧೫. ಕೃಷ್ಣ – ಯಜುರ್ವೇದ ಬ್ರಾಹ್ಮಣ

1. ತೈತ್ತಿರೀಯ ಬ್ರಾಹ್ಮಣ-ಇದರಲ್ಲಿ ಅರಣ್ಯಕವೂ ಸೇರಿದೆ. ಈ ಬ್ರಾಹ್ಮಣದಲ್ಲಿಯೇ ಕಠೋಪನಿಷತ್, ತೈತ್ತಿರಿಯೋಪನಿಷತ್ತಿನ ಶಿಕ್ಷಾವಲ್ಲಿ, ಆನಂದವಲ್ಲಿ ಮತ್ತು ಭೃಗುವಲ್ಲಿಗಳೂ, ಯಾಜ್ಞ, ಕೀ ಉಪನಿಷತ್ತು ಇವೆ. ಮೈತ್ರೀ ಉಪನಿಷತ್ತು ಮಾತ್ರ ಮೈತ್ರಾವರುಣೀಸಂಹಿತೆಯ 2 ಅಥವಾ 5ನೇ ಭಾಗವಾಗಿದೆ.

## ೧೬. ಶುಕ್ಲಯಜುರ್ವೇದದ ಪ್ರಸಿದ್ಧ ಬ್ರಾಹ್ಮಣವೆಂದರೆ ಶತಪಥ ಬ್ರಾಹ್ಮಣ

ಇದು 100 ಅಧ್ಯಾಯವುಳ್ಳದ್ದು, ಋಗ್ವೇದವಾದ ಮೇಲೆ ಇದೇ ಪ್ರಧಾನವಾದುದು. ಇದಲ್ಲಿ ಕಾಣ್ವ ಮತ್ತು ಮಾಧ್ಯಂದಿನವೆನ್ನುವ ಎರಡು ಶಾಖೆಗಳಿವೆ. ಮಾಧ್ಯಂದಿನದಲ್ಲಿ 14ಪ್ರಶ್ನೆಗಳೂ, ಕಾಣ್ವದಲ್ಲಿ 17 ಪ್ರಶ್ನೆಗಳೂ ಇವೆ. ಈ ಬ್ರಾಹ್ಮಣದಲ್ಲಿ ಮೊದಲನೆ 10 ಅಧ್ಯಾಯಗಳವರೆಗೂ ಯಾಜ್ಞವಲ್ಕ್ಯರ ಹೆಸರೇ ಇಲ್ಲ. ಅಲ್ಲಿಂದ ಮುಂದೆ ಅವರೇ ಪ್ರಧಾನವಾಗಿರುತ್ತಾರೆ. ಇವರು ವಿದೇಹದವರು. ಪಾಂಚಾಲ ದೇಶದ ಆರುಣಿ ಇವರ ಗುರು. ಈ ಶತಪಥ ಬ್ರಾಹ್ಮಣ ಕಾಲದಲ್ಲಿ ವಿದೇಹವು ಇನ್ನೂ ಬ್ರಾಹ್ಮಣ್ಯಕ್ಕೆ ತಿಳಿದಾಗಿರಲಿಲ್ಲವೆಂದು ಕಾಣುತ್ತದೆ. ಇದರಲ್ಲಿ ಒಂದು ಕಥೆ ಇದೆ. ವಿದೇಹದ ದೊರೆ ಮಾಥವನು ತನ್ನ ಗುರುವಾದ ಗೌತಮ ರಾಹೂಗಣನೊಡನೆ ಅಗ್ನಿಯನ್ನು ಮುಂದೆ ಬಿಟ್ಟುಕೊಂಡು ಪೂರ್ವಕ್ಕೆ ಹೊರಟನು. ಅಗ್ನಿಯು ಸದಾನೀರ ನದಿಯವರಿಗೂ ಸುಡುತ್ತಾ

ಬಂದಿತು. ಈ ನದಿಯ ಗಂಗೆಯ ಉಪನದಿ. ಪಾಟ್ನಾದ ಹತ್ತಿರ ಸೇರುತ್ತದೆ. ಈ ನದಿಯ ಪೂರ್ವಕ್ಕೆ ಮೊದಲು ಬಂಜರು ಪ್ರದೇಶವಾಗಿತ್ತು. ಅಲ್ಲಿಂದ ಮುಂದೆ ಇದು ಮಾಧವನ ರಾಜ್ಯವಾಯಿತು. ಈ ನದಿಯೇ ಕೋಸಲರಿಗೂ ವಿದೇಹಗಳಿಗೂ ಗಡಿಯಾಗಿದೆ. ಈ ಕೋಸಲ ವಿದೇಹಗಳಲ್ಲಿಯೇ ಮೊದಲು ಬೌದ್ಧ ಸಂಪ್ರದಾಯವು ಹರಡಿತು. ಈ ಬ್ರಾಹ್ಮಣದಲ್ಲಿ ಅರ್ಹತ್. ಶ್ರಮಣ. ಪ್ರತಿಬುದ್ಧ ಪದಗಳಿವೆ. ಆದರೆ ಬೌದ್ಧರ ಅರ್ಥದಲ್ಲಿಲ್ಲ. ಕಪಿಲ ವಸ್ತುವಿನ ಶಾಕ್ಯರ ವಂಶದ ಹೆಸರು ಗೌತಮ ಎನ್ನವುದು ಇಲ್ಲಿ ಪದೇ ಪದೇ ಬರುತ್ತದೆ. ಸಾಂಖ್ಯದರ್ಶನದ ಸೂಚನೆಯೂ ಇಲ್ಲಿದೆ . ಜನಕ. ವಿಕ್ರಮೋರ್ವಶೀಯ. ಮನುವಿನ ರಕ್ಷಣೆ. ಪ್ರಳಯ –ಇವೆಲ್ಲವೂ ಇಲ್ಲಿ ವರ್ಣಿಸಲ್ಪಟ್ಟಿವೆ.

## ೧೭. ಅಥರ್ವಣ ವೇದದ ಬ್ರಾಹ್ಮಣ

ಅಥರ್ವ ವೇದದ ಗೋಪಥ ಬ್ರಾಹ್ಮಣದಲ್ಲಿ 5 ಅಧ್ಯಾಯವುಳ್ಳ ಮೊದಲನೇ ಕಾಂಡವೂ 6 ಅಧ್ಯಾಯವುಳ್ಳ ಎರಡನೇ ಕಾಂಡವು ಇದೆ. ಶತಪಥ ಬ್ರಾಹ್ಮಣದ XI ಮತ್ತು XIIಅಧ್ಯಾಯಗಳು ಐತರೇಯ. ಮೈತ್ರಾಯಣೀಯ. ತೈತ್ತಿರೀಯ ಸಂಹಿ - ಪಂಚವಿಂಶ ಬ್ರಾಹ್ಮಣ– ಇವುಗಳಿಂದ ಮಂತ್ರಗಳನ್ನು ತೆಗೆದುಕೊಳ್ಳಲಾಗಿದೆ. 2ನೇ ಕಾಂಡವು ವೈತಾನ ಸೂತ್ರದ ಆಧಾರದ ಮೇಲೆ ಬರೆಯಲ್ಪಟ್ಟಿರುವಂತಿದೆ.

## ೧೮. ಉಪನಿಷತ್ತುಗಳು

ಐನೂರಕ್ಕಿಂತಲೂ ಮೇಲ್ಪಟ್ಟು ಉಪನಿಷತ್ತುಗಳಿವೆ. ಆದರೆ 108 ಉಪವಿಷತ್ತುಗಳು ಮಾತ್ರ ಗ್ರಾಹ್ಯಗಳಾಗಿವೆ. ಅವುಗಳಲ್ಲಿಯೂ 28 ಮಾತ್ರ ಪ್ರಮಾಣವಾದುವು. ಮತಸ್ಥಾಪಕರು ಸಾಮಾನ್ಯವಾಗಿ 10-12 ಉಪನಿಷತ್ತುಗಳನ್ನು ಮಾತ್ರ ಬ್ರಹ್ಮ ಸೂತ್ರದಲ್ಲಿ ನಮೂದಿಸಿರುವರು. ಉಪನಿಷತ್ತಿನ ಪ್ರಧಾನ ವಿಷಯಗಳನ್ನೊಳಗೊಂಡ ಉಪನಿಷತ್ತುಗಳು 15 ಎಂದು ಸಾಮಾನ್ಯವಾಗಿ ವಿಮರ್ಶಕರು ಹೇಳಿರುವರು.

ಈಶ. ಕೇನ. ಕಠ. ಪ್ರಶ್ನ. ಮುಂಡ. ಮಾಂಡೂಂಕ್ಯ. ತಿತ್ತಿರಿ
ಐತ್ತರೇಯಂ ಚ ಛಾದೋಗ್ಯಂ ಬೃಹದಾರಣ್ಯಕಂ ದಶ
ಶ್ವೇತಾಶ್ವತರ ಜಾಬಾಲ ಮೈತ್ರೀ ನಾರಾಯಣೀ ತಥಾ
ಕೌಶೀತಕೀತಿ ಪಂಚಾನಾಂ ಸಮಾಹಾರಃ ಪ್ರಧಾನತಃ

ಎಂದು ನಾವು ಜ್ಞಾಪಕದಲ್ಲಿಟ್ಟುಕೊಳ್ಳಬಹುದು. ಇವುಗಳಲ್ಲದೆ ಅಥರ್ವಶಿಖೋಪನಿಷತ್ತು ಎಲ್ಲಾ ಉಪನಿಷತ್ತುಗಳ ಸಾಮಾನ್ಯ ಸಮೀಕ್ಷೆಗೆ ಬಳ ಪ್ರಯೋಜನಕಾರಿಯಾಗಿದೆ. ಉಪನಿಷತ್ತಲ್ಲದೆ. ಎಲ್ಲಾ ಉಪನಿಷತ್ತುಗಳಲ್ಲಿ ಪ್ರತಿಪಾದ್ಯ ವಿಷಯಗಳನ್ನೊಳಗೊಂಡ ಪುರುಷಸೂಕ್ತವು ಎಲ್ಲಾ ಉಪನಿಷತ್ತುಗಳ ಸಾಮರಸ್ಯವನ್ನು ಕಲ್ಪಿಸಿಕೊಟ್ಟಿರುತ್ತದೆ.

ಈ ಉಪನಿಷತ್ತುಗಳಲ್ಲಿ, ಜೀವ, ಪ್ರಕೃತಿ, ಈಶ್ವರ ಎನ್ನುವ ಮೂರು ತತ್ವಗಳು, ಅವುಗಳ ಪರಸ್ಪರ ಸಂಬಂಧ ಮೋಕ್ಷಸ್ವರೂಪ ಬಂಧನ ಬಂದದು ಹೇಗೆ, ಈ ಬಂಧನವು ಹೋಗಿ ಮೋಕ್ಷ ಸಿಗಬೇಕಾದರೆ ಅನುಷ್ಠಿಸಲ್ಪಡಬೇಕಾದ ಸಾಧನಗಳಾವುವು, ಬಂಧ ಮೋಕ್ಷ ಮಾರ್ಗಗಳಾದ ದಕ್ಷಿಣಾಯಾನ ಮತ್ತು ಉತ್ತರಾಯಣ, ಯೋಗ, ನ್ಯಾಸ, ಉಪಾಸನ-ಇತ್ಯಾದಿಯಾಗಿ ಎಲ್ಲಾ ವೇದಾಂತ ವಿಷಯಗಳು ಹೇಳಲ್ಪಟ್ಟಿವೆ ಕರ್ಮಕಾಂಡವೆಂದು ಪ್ರಸಿದ್ಧವಾದ ಬ್ರಾಹ್ಮಣಭಾಗಕ್ಕೂ ಜ್ಞಾನಕಾಂಡವೆಂದು ಹೇಳಿಸಿಕೊಳ್ಳುವ ಈ ಉಪನಿಷತ್ತುಗಳಿಗೂ ಪರಸ್ಪರ ಸಂಬಂಧವನ್ನು ಮೊದಲನೇ ಉಪನಿಷತ್ತು ಈಶಾನಸ್ಯವೇ ಕಲ್ಪಿಸಿ ಕೊಟ್ಟಿರುತ್ತದೆ

ಕುರ್ವನ್ನೇವೇಹಕರ್ಮಾಣಿ ಜಿಜೀ ವಿಶೇತ್ ಶತಂಸಮಾಃ
ಏವಂತ್ವಯೀ ನಾನ್ಯಥೋತೋಸ್ತಿ ನ ಕರ್ಮಲಿಪ್ಯತೇ ನರೇ

ಎನ್ನುವ ಎರಡನೇ ಮಂತ್ರದಲ್ಲಿ ಈ ಕರ್ಮ ಜ್ಞಾನ ಸಾಮರಸ್ಯವನ್ನು ನೋಡಬಹುದು ಕೃಷ್ಣ ದ್ವೈಪಾಯನ ವ್ಯಾಸರೆಂದು ಪ್ರಸಿದ್ಧರಾದ ವ್ಯಾಸರು ಈ ಉಪನಿಷತ್ತುಗಳ ಅರ್ಥವನ್ನು ಬಿಚ್ಚಲು ಬ್ರಹ್ಮಸೂತ್ರವೆನ್ನುವ ಸೂತ್ರಗ್ರಂಥವನ್ನು ಕೊಟ್ಟಿರುವರು ಇದರಲ್ಲಿ ಅವರಿಗಿಂತಲೂ ಪೂರ್ವೀಕರಾದ ವೇದಾಂತಿಗಳ ಮತಗಳು ಪ್ರಸ್ತಾಪಿಸಲ್ಪಟ್ಟಿವೆ ಕರ್ಮಕಾಂಡದ ಧರ್ಮಸೂತ್ರಗಳಾದ ಪೂರ್ವಮೀಮಾಂಸಾ ಶಾಸ್ತ್ರಕ್ಕೆ ಆಚಾರ್ಯರಾದ ಜೈಮಿನಿಯೂ ಅನೇಕ ಸೂತ್ರಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವರು ಈ ಬ್ರಹ್ಮಸೂತ್ರದಲ್ಲಿ ಅವರು ಪ್ರಸ್ತಾಪಿಸಲ್ಪಟ್ಟಿರುವ ರೀತಿಯಲ್ಲಿ, ಇವರ ಮತವು ಈಶ್ವರರಹಿತವಾದ ವಾದವಲ್ಲ, ಜೀವನಿಗೆ ಪ್ರಾಶಸ್ತ್ಯವಿದ್ದರೂ ಈಶ್ವರನ ಪ್ರಸ್ತಾಪವು ಪ್ರಧಾನ ಪಾತ್ರವನ್ನು ಹೊಂದಿದೆ

## ೧೯. ಸೂತ್ರಗ್ರಂಥಗಳು

ವೇದ ಮತ್ತು ಅದರ ಸಂಸ್ಕೃತಿಯ ರಕ್ಷಣಕ್ಕಾಗಿ ಆಶ್ರಯಿಸಲ್ಪಟ್ಟ ಸಾಧನಗಳಲ್ಲಿ ಒಂದು ಅನ್ಯಾದೃಶವಾದ ಕ್ರಮವೆಂದರೆ ಸೂತ್ರಗ್ರಂಥಗಳು ಸೂತ್ರವೆಂದರೆ ಸಾಮಾನ್ಯವಾಗಿ ದಾರ ವಿಷಯಗಳನ್ನು ಒಟ್ಟಿಗೆ ಕೂಡಿಸಿ ಹೆಣೆಯುವ ಸಾಧನಕ್ಕೆ ಈ ಹೆಸರು ಅನ್ವರ್ಥವಾಯಿತು ಬೌದ್ಧ ಸಂಪ್ರದಾಯವು ತಲೆದೋರಿ ತಮ್ಮ ವೇದ ಸಂಪ್ರದಾಯಕ್ಕೆ ಚ್ಯುತಿಬಾರದಿರಲು ಸುಲಭವಾಗಿ ಎಲ್ಲಾ ವಿಷಯಗಳೂ ಸ್ಮೃತಿ ಪಥದಲ್ಲಿರುವಂತೆ ಮಾಡಿಕೊಳ್ಳಲು ಕಲ್ಪಿಸಿಕೊಂಡ ಸಾಧನಗಳಲ್ಲಿ ಸೂತ್ರಕ್ಕಿಂತ ಮಿಗಿಲಾದುದು ಯಾವುದೂ ಇಲ್ಲ, ಇದು ಭಾರತದ ಪ್ರತೀಭಾನ್ವಿತ ಮಾರ್ಗದಲ್ಲಿ ಒಂದು ಮಹತ್ತರ ಸಾಧ್ಯ ವೇದ ಸಂರಕ್ಷಣಕ್ಕಾಗಿ ಕಲ್ಪ ಸೂತ್ರಗಳು ನಿರ್ಮಿಸಲ್ಪಟ್ಟವು ಪ್ರತಿ ಶಾಖೆಯ ಧರ್ಮ ನಿರ್ಣಯ ಗ್ರಂಥವೇ ಇದು ಇದು ಎರಡು ಭಾಗದಲ್ಲಿ ವಿಸ್ತಾರಗೊಂಡಿತು ಶ್ರೌತ ಸೂತ್ರ ಮತ್ತು ಗೃಹ್ಯಸೂತ್ರ ಎಂದು ಸೂತ್ರಗಳೆಂದರೆ –ಅಲ್ಪಾಕ್ಷರಮಸಂದಿಗ್ಧಂ ಸಾರತಃ ಸರ್ವತೋಮುಖಂ– ಎಂದು.

## ೨೦. ಶ್ರೌತ ಸೂತ್ರಗಳು

ಋಗ್ವೇದ ಶ್ರೌತಸೂತ್ರಗಳು (1) ಶಾಂಖಾಯನ -ಉತ್ತರ ಗುಜರಾತಿನಲ್ಲಿ ಪ್ರಚಾರದಲ್ಲಿರುವುದು (2) ಅಶ್ವಲಾಯನ -ಕೃಷ್ಣ ಮತ್ತು ಗೋದಾವರೀ ನದಿಗಳ ದಕ್ಷಿಣ ಪ್ರದೇಶಗಳಲ್ಲಿ ಪ್ರಚಾರವಾಗಿರುವುದು. ಇವೆರಡರಲ್ಲಿಯೂ ಒಂದೇ ರೀತಿಯು ಕಂಡು ಬರುತ್ತದೆ. ಶಾಂಖಾಯನದಲ್ಲಿ ಅಶ್ವಮೇಧವು ವಿಸ್ತಾರವಾಗಿ ಹೇಳಲ್ಪಟ್ಟಿದೆ. ಇದೇ ಪ್ರಾಚೀನ ಗ್ರಂಥ. ಇದು 18 ಅಧ್ಯಾಯಗಳುಳ್ಳದಾಗಿದೆ. ಕೌಶೀತಕೀ ಅರಣ್ಯಕದ ಭಾಗದಂತಿದೆ. ಅಶ್ವಲಾಯನ ಶ್ರೌತಸೂತ್ರ ಗ್ರಂಥವು 12 ಅಧ್ಯಾಯವುಳ್ಳದ್ದು. ಐತ್ತರೇಯ ಬ್ರಾಹ್ಮಣಕ್ಕೆ ಸಂಬಂಧಿಸಿದೆ. ಅಶ್ವಲಾಯನರು ಶೌನಕರ ಶಿಷ್ಯರು.

## ೨೧. ಸಾಮವೇದ ಶ್ರೌತ ಸೂತ್ರಗಳು

(1) "ಮಶಕ"ವೆನ್ನುವುದೇ ಪ್ರಾಚೀನ. ಇದಕ್ಕೆ ಆರ್ಷೇಯ ಕಲ್ಪವೆನ್ನುವ ಹೆಸರಿದೆ. (2) ಕೌತುಕ ಶಾಖೆಯ "ಲಾಟ್ಯಾಯನ" (3) ರಾಣಾಯನೀಯ ಶಾಖೆಯ "ದ್ರಾಹ್ಯಾಯನ"

## ೨೨. ಶುಕ್ಲ ಯಜುರ್ವೇದಕ್ಕೆ

26 ಅಧ್ಯಾಯವುಳ್ಳ ಶತಪಥ ಬ್ರಾಹ್ಮಣ್ಯವನ್ನು ಅನುಸರಿಸುವ ಕಾತ್ಯಾಯನ ಶ್ರೌತ ಸೂತ್ರವಿದೆ.

## ೨೩. ಕೃಷ್ಣ ಯಜುರ್ವೇದಕ್ಕೆ

ಆರು ಶ್ರೌತ ಸೂತ್ರಗಳಿವೆ (1) ಆಪಸ್ತಂಭ ಇದರ ಉಪಶಾಖೆ. (2) ಹಿರಣ್ಯಕೇಶಿ (3) ಬೋಧಾಯನ. (4) ಭಾರದ್ವಾಜ (5) ಮಾನವ ಮತ್ತು (6) ವೈಖಾನಸ

## ೨೪. ಅಥರ್ವವೇದಕ್ಕೆ

ವೈತಾನ ಸೂತ್ರವಿದೆ. ಇದು ಗೋಪಥ ಬ್ರಾಹ್ಮಣವನ್ನು ಶುಕ್ಲಯಜುರ್ವೇದದ ಕಾತ್ಯಾಯನ ಸೂತ್ರವನ್ನೂ ಅನುಸರಿಸುತ್ತದೆ.

## ೨೫. ಶ್ರೌತ ಸೂತ್ರಗಳಲ್ಲಿರುವ ವಿವರ

ಈ ಎಲ್ಲಾ ಸೂತ್ರಗಳೂ ಯಜ್ಞಯಾಗಾದಿಗಳ ಪೂರ್ಣವಿಮರ್ಶೆಯನ್ನು ಮಾಡಿರುವುದಲ್ಲದೆ. ಅವುಗಳ ಅನುಷ್ಠಾನ ಕ್ರಮವನ್ನೂ ಪರಿಷ್ಕರಿಸಿದೆ. ಗಾರ್ಹಪತ್ಯ. ಆಹವನೀಯ ಮತ್ತು ದಾಕ್ಷಿಣಾಗ್ನಿ ಎನ್ನುವ ಮೂರು ಅಗ್ನಿಗಳ ಆಧಾನಾದಿಗಳು ಯಜ್ಞಾಯಾಗಾದಿಗಳಿಗೆ ಬೇಕಾದ ಋತ್ವಿಕ್ಕುಗಳು.

ವೇದಿಕಾ ನಿರ್ಮಾಣ, ಪ್ರಕೃತಿ ವಿಕೃತಿಯಾಗಗಳು, ಹವಿಸ್ಸುಗಳು, ಇವೆಲ್ಲವೂ ವಿಸ್ತರಿಸಲ್ಪಟ್ಟಿವೆ. ಶ್ರೌತಕರ್ಮಗಳು 14 ಅದರಲ್ಲಿ ಹವಿರ್ಭಾಗವುಳ್ಳವು. ಅಗ್ನಿಷ್ಟೋಮವು ಸೋಮಯಾಗ. ಇದರಲ್ಲಿ 16 ಋತ್ವಿಕ್ಕುಗಳಿರಬೇಕು. ದೀಕ್ಷಾ, ಒಂದು ದಿನ ಯಾಗಗಳು, ಅನೇಕ ದಿನ ಯಾಗಗಳು, ಹನ್ನೆರಡು ತಿಂಗಳು ಮಾಡುವ ಯಾಗಗಳು (ಇವುಗಳಿಗೆ ಸೂತ್ರಗಳೆಂದು ಹೆಸರು) ಇವೆಲ್ಲವೂ ಹೇಳಲ್ಪಟ್ಟಿವೆ.

ಗೃಹ್ಯಸೂತ್ರಗಳು:

ಇವು ಶ್ರೌತಕ್ಕಿಂತ ಆಧುನಿಕ ಆದರೆ ಶ್ರೌತಸೂತ್ರಗಳ ಜ್ಞಾನವು ಅವಶ್ಯವಾಗಿದೆ.

## ೨೬. ಋಗ್ವೇದ

(1) ಶಾಂಖಾಯನ ಗೃಹ್ಯಸೂತ್ರ -ಆರು ಕಾಂಡವುಳ್ಳದ್ದು, (2) ಶಾಂಬವ -ಕಾಶೀತಕಿಗಳಿಗೆ ಸೇರಿದ್ದು, (3) ಅಶ್ವಲಾಯನ - ಐತ್ತರೇಯರಿಗೆ ಮೀಸಲಾಗಿರುವುದು

## ೨೭. ಸಾಮವೇದ

(1) ಗೋಬಿಲ, ಇದು ಬಹಳ ಹಿತಗ್ರಂಥವೆಂದು ಪರಿಗಣಿಸಲಾಗಿದೆ. (2) ಖಾದಿರ. ಇದು ದ್ರಾಹ್ಯಾಯನ ಶಾಖೆಯ ಗ್ರಂಥ

## ೨೮. ಶುಕ್ಲ ಯಜುರ್ವೇದ

ಕಾತ್ಯಾಯನ ಶ್ರೌತ ಸೂತ್ರಕ್ಕೆ ಸರಿಹೋಗುವ ಕಾಟೀಯ ಮತ್ತು ವಾಜನೇಯವೆಂದು ಹೆಸರಾಂತ ವಾದ ಪರಸ್ಕರ ಗೃಹ್ಯಸೂತ್ರ

## ೨೯. ಕೃಷ್ಣ ಯಜುರ್ವೇದ

ಇದಕ್ಕೆ 7 ಸೂತ್ರಗ್ರಂಥಗಳಿವೆ. ಮೊದರೆರಡು (1) ಮತ್ತು (2) ಮಂತ್ರ ಪಾಠಗಳು ಯಜ್ಞ ಯಾಗಾದಿಗಳನ್ನು ಮಾಡುವ ಕ್ರಮವನ್ನು ತೋರಿಸುತ್ತದೆ. (3) ಆಪಸ್ತಂಭ (4) ಮಾನವ:ಇದರಲ್ಲಿ ವಿನಾಯಕ ಪೂಜೆಯನ್ನು ನೋಡಬಹುದು. ಇದನ್ನು ವಿನಾಯಕ ಸ್ತ್ರೋತ್ರವನ್ನಾಗಿ ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಕಾಣಬಹುದು. (5) ಕಾಠಕ (6)ವೈಖಾನಸ ಮತ್ತು (7) ಬೋಧಾಯಾನ.

## ೩೦. ಅಥರ್ವವೇದ

ಗೃಹ್ಯಸೂತ್ರವಲ್ಲದೆ ಅಭಿಚಾರ ಕರ್ಮಗಳನ್ನು ತಿಳಿಸುವ ಕೌಶಿಕವಿದೆ. ಶ್ರೌತಸೂತ್ರಗಳಲ್ಲಿ ಯಜ್ಞಯಾಗಾದಿಗಳಿಗೆ ಬೇಕಾದ ಅಂಶಗಳೆಲ್ಲವೂ ಹೇಳಲ್ಪಟ್ಟಿದೆ. ಈ ಯಾಗಾದಿಗಳಲ್ಲಿ ಅಂಗಗಳೂ

ಮತ್ತು ಅಂಗಿಗಳೂ ಇವೆ. ಅಂಗಿಯ ಉದ್ದೇಶದಿಂದ ಯಾಗಾದಿಗಳ ಹೆಸರು ರೂಢವಾಗಿದೆ. ಅಂಗಗಳೊಡನೆ ಒಂದು ಅಂಗಿ ಕರ್ಮವನ್ನು ಹೇಳಿದರೆ ಅದಕ್ಕೆ ಪ್ರಕೃತಿ ಯಾಗವೆಂದು ಹೆಸರು. ಅಂಗಗಳನ್ನು ಹೇಳದೆ ಕೇವಲ ಅಂಗಿ ಕರ್ಮವನ್ನು ಮಾತ್ರ ಹೇಳಿರುವ ಯಾಗಗಳಿಗೆ ವಿಕೃತಿಯಾಗಗಳೆಂದು ಹೆಸರು. ಈ ಸಂದರ್ಭದಲ್ಲಿ ಪ್ರಕೃತಿ ಯಾಗಗಳ ಅಂಗಗಳೇ ವಿಕೃತಿ ಯಾಗಗಳಿಗೆ ಕೆಲವಂಶಗಳಲ್ಲಿ ಅನ್ವಯಿಸುತ್ತವೆ. ಈ ನಿಯಮವು ಗೃಹ್ಯ ಸೂತ್ರಗಳಿಗೂ ಅನ್ವಯಿಸುತ್ತದೆ. ಸಾಮಾನ್ಯವಾಗಿ ಗೃಹ್ಯಸೂತ್ರಗಳಲ್ಲಿ ಹುಟ್ಟಿನಿಂದ ಸಾಯುವವರೆವಿಗೂ ನಡೆಯುವ ಷೋಡಶ ಕರ್ಮಗಳು (16) ವಿಸ್ತರಿಸಲ್ಪಟ್ಟಿವೆ. ಅಲ್ಲದೆ ಗರ್ಭಾದಾನ ಮೊದಲ್ಗೊಂಡು 18 ಕರ್ಮಗಳು ಮತ್ತು 22 ಯಜ್ಞಗಳು ಅಂದರೆ 40 ಸಂಸ್ಕಾರಗಳು ಹೇಳಲ್ಪಟ್ಟಿವೆ. ಈ 22 ಯಜ್ಞಗಳಲ್ಲಿ 5 ಮಹಾಯಜ್ಞಗಳು. 3 ಪಾಕ ಯಜ್ಞ ಮಿಕ್ಕವು ಶ್ರೌತಕ್ಕೆ ಸೇರಿದವುಗಳಾಗಿರುತ್ತವೆ.

## ೩.೧. ಷೋಡಶ ಕರ್ಮಗಳು

(1) ಪುಂಸವನ (2) ಸೀಮಂತ (3)ಜಾತಕರ್ಮ (4) ನಾಮಕರಣ (5) ಚೌಲ (6) ಉಪನಯನ (7) ಬ್ರಹ್ಮಚರ್ಯ (8) ವ್ರತ ಸಮಾವರ್ತನ (9) ವಿವಾಹ (10) ಬ್ರಹ್ಮಯಜ್ಞ (11) ದೇವಯಜ್ಞ. (12) ಪಿತೃಯಜ್ಞ (13) ಋಷಿಯಜ್ಞ (14) ಭೂತ ಯಜ್ಞ (15) ಮನುಷ್ಯಯಜ್ಞ (16) ಅಂತ್ಯೇಷ್ಟಿ ಇವು ಷೋಡಶ ಕರ್ಮಗಳು. ವ್ರತ ಸಮಾವರ್ತನವಾದ ಮೇಲೆ ವಿವಾಹವಾಗುವವರೆವಿಗೂ ಅಧಿಕಾರಿಗೆ ಸ್ನಾತಕನೆಂದು ಹೆಸರು. 8 ವರ್ಷವಾದ ಮೇಲೆ 16 ವರ್ಷ ಒಳಗೆ ಉಪನಯನ ನಡೆಯಬೇಕು. ಕಾಲವಿಳಂಬವಾದ ಮೇಲೆ ಪ್ರಾಯಶ್ಚಿತ್ತವು ನಡೆಯಬೇಕು. ಉಪನೀತನಾದ ಮೇಲೆ ಅವನು ದ್ವಿಜನಾಗುವನು. ಯಜ್ಞೋಪವೀತಧಾರಣವು ಪಾರ್ಶಿಗಳಲ್ಲಿಯೂ ಅವೆಸ್ತಾದಲ್ಲಿ ಹೇಳಿರುವಂತೆ ಅನುಷ್ಠಾನದಲ್ಲಿತ್ತು. (32) ಈ ಎರಡು ಜಾತಿಯ ಸೂತ್ರಗಳು ಸ್ಮೃತಿಗಳು. ಜೈಮಿನಿಯ "ಶ್ರುತಿ ಲಿಂಗ ವಾಕ್ಯ ಪ್ರಕರಣ ಸ್ಥಾನ ಸಮಾಖ್ಯಾನಾಂ ಸಮಾವಾಯೋ ಪಾರದೌರ್ಬಲ್ಯಂ ಸ್ಥಾನವಿಧ್ರಕರ್ಷಾತ್ "ಎನ್ನುವ ಸೂತ್ರದಿಂದ ಸ್ಮೃತಿಗೆ ಪ್ರಾಮಾಣ್ಯದಲ್ಲಿ ಎರಡನೇ ಸ್ಥಾನವಿದೆ. ಲಿಂಗದಲ್ಲಿ ಸ್ಮೃತಿಗಳು ಸೇರಿವೆ. ಈ ಶ್ರೌತಗೃಹ್ಯಸೂತ್ರಗಳಲ್ಲದೆ ಧರ್ಮ ಸೂತ್ರಗಳು. ಸಮಯಾಚಾರ. ಧರ್ಮಶಾಸ್ತ್ರ. ನ್ಯಾಯಶಾಸ್ತ್ರ (Law). ಇವೆಲ್ಲವೂ ಸ್ಮೃತಿಯಲ್ಲಿ ಸೇರಿವೆ.

(1) ಆಪಸ್ತಂಭ ಧರ್ಮಸೂತ್ರದಲ್ಲಿ ದ್ವಿಜರಿಗೆ ಅನ್ವಯಿಸುವ ಎಲ್ಲಾ ವಿಧಿಗಳೂ. ಆಹಾರ ನಿಯಮ. ಪ್ರಾಯಶ್ಚಿತ್ತ. ತಪಸ್ಸು. ದಾಯ. ಅಘ. (ಅಂದರೆ ಪುರಡು ಮತ್ತು ಅಶೌಚ) ಇದೇ ಮೊದಲಾದ ಲೌಕಿಕ ವಿಷಯಗಳ ವೇದಾಂತ ಜೀವನಕ್ಕೆ ಅನ್ವಯಿಸುವಂತೆ ಹೇಳಲ್ಪಟ್ಟಿದೆ. ಇದರಲ್ಲಿ ಪಾಣಿನಿಗೂ ಹಿಂದಿನ ಪ್ರಯೋಗಗಳಿವೆ. ಉತ್ತರ ದೇಶದವರು ದೂಷಿಸಲ್ಪಟ್ಟಿರುವರು. ಆದ್ದರಿಂದ ಇದರ ಕರ್ತಾ ದಕ್ಷಿಣದೇಶದವನಾಗಿರಬೇಕು ಮತ್ತು ಪಾಣಿನಿ ಹಿಂದಿನ ಅಥವಾ ಸಮಕಾಲೀನನಾಗಿರಬೇಕು.

(2) ಈ ಆಪಸ್ತಂಭಸೂತ್ರದ ಉಪಶಾಖೆಯೇ ಹಿರಣ್ಯಕೇಶೀ. ಗೋವಾದ ಹತ್ತಿರ ಕೊಂಕಣದಲ್ಲಿ ಪ್ರಚಾರದಲ್ಲಿದೆ.

(3) ಬೋಧಾಯನ ಧರ್ಮಸೂತ್ರ _ ಇದು ಆಪಸ್ತಂಭಕ್ಕಿಂತಲೂ ಪ್ರಾಚೀನ. ಈಗ ಈ ಸಂಪ್ರದಾಯವಿಲ್ಲ. ಸಾಯಣರು ಈ ಸಂಪ್ರದಾಯಕ್ಕೆ ಸೇರಿದವರು.

(4) ಗೌತಮಧರ್ಮ ಸೂತ್ರ - ಸಾಮವೇದದ ರಾಣಾಯಣ ಶಾಖೆಯ ಉಪಶಾಖೆಗೆ ಸೇರಿದೆ.

(5) ವಸಿಷ್ಠ ಧರ್ಮಸೂತ್ರ - ಕೆಲವು ವಿಷಯದಲ್ಲಿ ಆಪಸ್ತಂಭವನ್ನು ಅನುಸರಿಸಿದ ಕ್ರಿ.ಶ. 7ನೇ ಶತಮಾನದ ಕುಮಾರೀಲ ಹೇಳಿರುವಂತೆ ಋಗ್ವೇದಿಗಳು ಈ ಗ್ರಂಥವನ್ನು ಅನುಸರಿಸುತ್ತಾರೆ.

(6) ಮಾನವ ಧರ್ಮಶಾಸ್ತ್ರ

(7) ಶಂಖ -ಲಿಖಿತ- ಶುಕ್ಲ ಯಜುರ್ವೇದದ ವಾಜಸನೇಯರಿಗೆ ಸೇರಿದ್ದು

(8) ಪರಾಶರ ಸ್ಮೃತಿ

(9) ವೈಖಾನ ಸಧರ್ಮಸೂತ್ರ (300A.D)- ವೈಷ್ಣವರಿಗೆ ಸೇರಿದ್ದು. ಸರಿಯಾಗಿ ನೋಡಿದರೆ ಇದು ಗೃಹಸೂತ್ರ. ವಿಖಾಸನರು ತೈತ್ತಿರೀಯರ ಶಾಖೆಗೆ ಸೇರಿದವರು.

ಇವುಗಳಲ್ಲದೆ 33 ಸ್ಮೃತಿಗಳಿವೆ. ಇವೆಲ್ಲವೂ ಸೋಮಾರಿಪುರೋಹಿತರಿಂದ ಕಲ್ಪಿಸಲ್ಪಟ್ಟಿರಬೇಕೆಂದು ಪ್ರೊ.ಮ್ಯಾಕ್‌ಡೋನೆಲ್ ಅಭಿಪ್ರಾಯಪಡುತ್ತಾರೆ. ಆದರೆ ಮಿಶ್ರ ಜನಾಂಗಗಳ ಅದರಲ್ಲೂ ಪಾರ್ಶಿ ಜನಾಂಗದ ಪೂರ್ವಕಾಲದ ಅನುಷ್ಠಾನಗಳನ್ನು ಗಮನಿಸಿದರೆ ಇದು ಕೇವಲ ದೂಷಣವೆನ್ನಬಹುದು.

ಆಪಸ್ತಂಭ ಸೂತ್ರಗ್ರಂಥದ ಕೊನೆಯ (30ನೇ) ಅಧ್ಯಾಯದಲ್ಲಿ ಯಜ್ಞಯಾಗಾದಿಗಳಲ್ಲಿ ವೇದಿ ನಿರ್ಮಾಣ ವಿಧಿಯು ಇದೆ. ಇದೇ ಪ್ರಾಚೀನ ಗಣಿತ ಶಾಸ್ತ್ರ ಮೂಲವೆಂದು ಪರಿಗಣಿಸಬಹುದು. 'ವೇದಿ' ಎಂದರೆ ಯಾಗದಲ್ಲಿ ಅಗ್ನಿ ಪ್ರತಿಷ್ಠೆಮಾಡಲು ಸ್ವಲ್ಪ ಎತ್ತರವಾಗಿ ಮಾಡಲ್ಪಟ್ಟ ಪ್ರದೇಶ.

# II ಇತಿಹಾಸ ಪುರಾಣ ಸಾಹಿತ್ಯ

## ೩.೩. ಇತಿಹಾಸ ಪುರಾಣಗಳ ಮೂಲ

ವೇದವನ್ನು ಸಂರಕ್ಷಿಸುವ ಕುತೂಹಲದಲ್ಲಿ ಮತ್ತೊಂದು ಅನ್ಯಾದೃಶ್ಯವಾದ ಸಾಹಿತ್ಯವೇ ಉದ್ಭವಿಸಲು ಅವಕಾಶವಾಯಿತು. ಕರ್ಮವಿನಿಮಯವು ಆರ್ಯರ ಮನೋಧ್ಯೇಯದ ಅವನತಿ ಎನ್ನುವ ಪಾಶ್ಚಾತ್ಯರ ಅಭಿಪ್ರಾಯವು ಕರ್ಮಸ್ವರೂಪಕ್ಕೆ ಬಹಳ ದೂರಸರಿದಂತಿದೆ. ಸತ್ಯಾಂಶವನ್ನು ನೋಡಿದರೆ ನಿಷ್ಕೃಷ್ಟ ನಿಯತ ಕರ್ಮದ ಹಿನ್ನೆಲೆಯಲ್ಲಿ ಬುದ್ಧಿ ಶಕ್ತಿಯ ಹಿರಿಮೆಯನ್ನು ನೋಡಲೇಬೇಕು. ನಿಮಿತವಾಗಿ ನಿಯಮಿತವಾಗಿ ನಡೆಯುತ್ತಿರುವ ವಿಶ್ವದ ಋತದ ಹಿನ್ನಲೆಯಲ್ಲಿ ಒಂದು ಅಪಾರ ಶಕ್ತಿಯೊಡನೆ ಕೂಡಿರುವ ದೈವವನ್ನು ಕಂಡ ಸಂಸ್ಕೃತ ಆರ್ಯರ ಹೃದಯದಲ್ಲಿ ಕರ್ಮವು ಜ್ಞಾನದ ಪರಿಸ್ಫೂರ್ತಿ ಎಂದೇ ನಿಶ್ಚಿತವಾಗಿ ಮಿಮಾಂಸಾ ಶಾಸ್ತ್ರದಲ್ಲಿ ಹೇಳಿರುವಂತೆ ವಿನಿಯೋಗಪೃಥಕ್ತ್ವ ನ್ಯಾಯದಿಂದ ಕರ್ಮಕಾಂಡವಾದ ಬ್ರಾಹ್ಮಣದ ಸಕಲ ಕರ್ಮಗಳನ್ನು ಅರ್ಥ ಮಾಡಿಕೊಂಡು ಈ ಕರ್ಮಗಳು ಪರಮಾತ್ಮನ ಆಜ್ಞೆ ಎಂದು ಹೇಳಲು ಹೊರಟರು. ಮಿಮಾಂಸಾ ಶಾಸ್ತ್ರವಲ್ಲೇ ಮುಂದೆ ನಾನಾ ಮುಖವಾಗಿ ಬೆಳೆಯುವ ಸಕಲ ಶಾಸ್ತ್ರ ಬೀಜವನ್ನು ಬಿತ್ತಿದರು. ಶಾಸ್ತ್ರಾರ್ಥವನ್ನು ಅರಿಯಬೇಕಾದರೆ ಅದನ್ನು ಏಳು ಕ್ರಮದಲ್ಲಿ ಪರಿಷ್ಕರಿಸಬೇಕೆಂದು ವಿಧಿಯನ್ನು ಕಲ್ಪಿಸಿಕೊಂಡರು

ಉಪಕ್ರಮೋಪ ಸಂಹಾರವಭ್ಯಾಸೋಪೂರ್ವತಾಫಲಂ
ಅರ್ಥ ವಾದೋಪಹತ್ತೀ ಚಲಿಗಂತಾತ್ಪರ್ಯ ನಿರ್ಣಯೇ

ಯಾವ ಶಾಸ್ತ್ರವನ್ನು ತಿಳಿಯಬೇಕಾದರೂ (1) ಉಪಕ್ರಮ (2) ಉಪಸಂಹಾರ (3)ಮತ್ತೆ ಮತ್ತೆ ಸ್ವಾಭಿಪ್ರಾಯ ಪ್ರತಿಪಾದನ (4) ಅಪೂರ್ವ ವಿಷಯ (5) ಫಲ (6) ಅರ್ಥವಾದ ಮತ್ತು (7)ಉಪಪತ್ತಿ, ಇವೆಲ್ಲವೂ ಒಟ್ಟುಗೂಡಬೇಕು. ಅರ್ಥವಾದವೆಂದರೆ ನಿದರ್ಶನ, ಸಾದೃಶ್ಯ, ಕಲ್ಪಿತ ಅಥವಾ ಪೂರ್ವವೃತ್ತ ಕಥೆಗಳು– ಇತ್ಯಾದಿಗಳು. ಒಂದು ತತ್ವವನ್ನು ಚೆನ್ನಾಗಿ ತಿಳಿಯಬೇಕಾದರೆ ಅವನ್ನು ಪೂರ್ಣವಾಗಿ ಪ್ರತಿಬಿಂಬಿಸುವ ಪೂರ್ವಕಥಾಭಾಗಗಳಿಗೆ ಅನುವಾದವೆಂದಲೂ ಸೂತ್ರಾತ್ಮಕವಾಗಿ ಅಂದರೆ ಸ್ತಾವಕವಾಗಿದ್ದು ಕಲ್ಪಿತವಾಗಿದ್ದರೆ ಗುಣವಾದವೆಂತಲೂ, ಎರಡೂ ನಿಶ್ಚಿತವಿಲ್ಲದೆ ಕೇವಲಸ್ತಾವಕವಾದ ಪ್ರತಿಪಾದನ ಕ್ರಮಕ್ಕೆ ಭೂತಾರ್ಥವಾದವೆಂತಲೂ ಮೂರು ಭಾಗವಾಗಿ ಅರ್ಥವಾದವು ವಿಭಾಗಿಸಲ್ಪಟ್ಟಿತು. ಈ ಕ್ರಮದ ಪರಿಷ್ಕರದಲ್ಲೇ ಇತಿಹಾಸಗಳೂ, ಪುರಾಣಗಳೂ ಎದ್ದವು. ಪುರಾಣಗ್ರಂಥದಲ್ಲಿ ಈ ಸಮರ್ಥನೆಗಾಗಿಯೇ:-

ಇತಿಹಾಸ ಪುರಾಣಭ್ಯಾ ವೇದಂಸಮುಪಬೃಂದಹಯೇತ್
ಬಿಭೆತ್ಸಲ್ಪಶ್ರುಂತಾದ್ವೇದೋಯಾಮಯಂ ಪ್ರತರಿಷ್ಯತಿ

ಎನ್ನುವ ಶ್ಲೋಕವೂ ಇದೆ. ಉಪಪತ್ತಿ ಎಂದರೆ ಪರಪಕ್ಷನಿರಸನ ಪೂರ್ವಕ ಸ್ವಪಕ್ಷ ಸ್ಥಾಪನ. ಈ ಕ್ರಮದಲ್ಲೇ ತರ್ಕ, ವ್ಯಾಕರಣಶಾಸ್ತ್ರಗಳು `ಶಾಖೋಪಶಾಖೆಯಾಗಿ ಬೆಳೆಯುವಂತಾಯಿತು.

ರಾಮಾಯಣ, ಮತ್ತು ಮಹಾಭಾರತ ಇವೆರಡೂ ಇತಿಹಾಸಗಳು. ಪದ್ಮಪುರಾಣ ಮೊದಲಾದ 18 ಗ್ರಂಥಗಳು ಪುರಾಣಗಳು. ಈ ಇತಿಹಾಸ ಪುರಾಣ ಸಾಹಿತ್ಯವು ಕೇವಲ ವೇದ ಸಂರಕ್ಷಣಕ್ಕಾಗಿಯೇ ಬರೆಯಲ್ಪಟ್ಟವು. ಇವೆಲ್ಲವನ್ನು ಅರ್ಥವಾಗಲೆಂದು ಒಂದೇ ಹೆಸರಿನಿಂದ ವ್ಯವಹರಿಸಬಹುದು. ಹಿಂದೂ ದೇಶದ ಚರಿತ್ರೆಯನ್ನು ಈ ಗ್ರಂಥಗಳಲ್ಲೇ ನಾವು ತಿಳಿಯಬೇಕಾಗುತ್ತದೆ. ಸ್ವಾಭಾವಿಕವಾಗಿ ತತ್ತ್ವ ಪ್ರತಿಪಾದನೆಗೆ ನಿದರ್ಶನಗಳಾಗಿ ಇವೆಲ್ಲವೂ ಇರುವುದರಿಂದ ಅತಿಶಯೋಕ್ತಿಯು ಬಹಳ ಕಂಡುಬರುತ್ತದೆ. ನಿಜವಾದ ಚರಿತ್ರೆಯು ಯಥಾರ್ಥಸ್ಥಿತಿಯಲ್ಲಿ ನಮಗೆ ಲಭಿಸುವುದಿಲ್ಲ. ಆದರೂ ವಿಮರ್ಶಕರು ಕೆಲವು ಚಾರಿತ್ರಿಕ ವಿಷಯಗಳನ್ನು ಸಂಗ್ರಹಿಸುತ್ತಾರೆ.

## ೩೪. ಇತಿಹಾಸಗಳು

### ರಾಮಾಯಣ

ಇದು 24000 ಶ್ಲೋಕಗಳುಳ್ಳ 500 ಸಂಗ್ರಹಗಳಿಂದ ಕೂಡಿರುವ ಒಂದು ಗ್ರಂಥ. ಇದರಲ್ಲಿ ಶ್ರೀರಾಮನ ಪೂರ್ಣ ಚರಿತ್ರೆ ಹೇಳಲ್ಪಟ್ಟಿದೆ. ಈ ರಾಮಾಯಣದ ಕಥೆಯನ್ನು ತಿಳಿಯದೇ ಇರುವ ಹಿಂದುವೇ ಇಲ್ಲ. ಶ್ರೀರಾಮನು ನಾರಾಯಣನ ಅವತಾರವೆಂದೂ ದುಷ್ಟ ಶಿಕ್ಷಣ-ಶಿಷ್ಟ ಪರಿಪಾಲನೆಗಾಗಿ ದಶರಥನ ಪುತ್ರನಾಗಿ ಜನಿಸಿ ರಾಕ್ಷಸರನ್ನು ನಾಶ ಮಾಡಿ ಸತ್ಪುರುಷರನ್ನು ಸಂರಕ್ಷಿಸಿ ಧರ್ಮಸ್ವರೂಪನಾಗಿದ್ದು, ಲೋಕಕ್ಕೆ ಒಂದು ಅನ್ನಾದೃಶಾದರ್ಶನವನ್ನು ಕೊಟ್ಟು ಮರಳಿ ವೈಕುಂಠಕ್ಕೆ ಹಿಂದಿರುಗಿದನು- ಎಂದು ವರ್ಣಿತವಾಗಿದೆ. ಇವನ ಕಥಾ ಪ್ರಸಂಗದಲ್ಲಿ ವೇದಾಂತದ ಸಾರಭೂತವಾದ ಶರಣಾಗತಿಧರ್ಮವು ಉದಾಹೃತವಾಗಿದೆ. ಇದರಲ್ಲಿ ಉತ್ತರಕಾಂಡವನ್ನು ಬಿಟ್ಟರೆ ಆರು ಕಾಂಡಗಳಿವೆ. ಬಾಲಕಾಂಡದಲ್ಲಿ ದೇವತೆಗಳ ಶರಣಾಗತಿಯಿಂದ ರಾಮನ ಅವತಾರವಾಗಿ ಸೀತಾಕಲ್ಯಾಣವಾದ ಮೇಲೆ ಪರಶುರಾಮನ ಅವತಾರ ಪೂರ್ತಿ-ಇವು ವರ್ಣಿತವಾಗಿವೆ. ಅಯೋಧ್ಯಾಕಾಂಡದಲ್ಲಿ ದುಷ್ಟಮಂಥರೆಯ ಪ್ರೇರಣೆಯಿಂದ ಕೈಕೇಯಿಯು ದಶರಥನ [illegible] ಪೂರ್ವದಲ್ಲಿ ಅವಳಿಗೆ ಕೊಟ್ಟಿದ್ದ ಎರಡು ವರಗಳನ್ನು ಯಾಚಿಸಿ ಶ್ರೀರಾಮನು ವನವಾಸಕ್ಕೂ ಇವಳ ಮಗನಾದ ಭರತನು ಪಟ್ಟಾಭಿಷಿಕ್ತನಾಗುವುದಕ್ಕೂ ಪ್ರಸಂಗವನ್ನು ಕಲ್ಪಿಸಿದಳು. ರಾಮನು ವನವಾಸಕ್ಕೆ ತೆರಳಿದನು. ಮಾವನ ಮನೆಗೆ ಹೋಗಿದ್ದ ಭರತನು ಹಿಂದಿರುಗಿ ಸಿಂಹಾಸನವನ್ನು ಸ್ವೀಕರಿಸದೇ ಶ್ರೀರಾಮನಲ್ಲಿಗೆ ತೆರಳಿ ಅವನ ಅನುಜ್ಞೆಯಿಂದ ತನ್ನ ಶರಣಾಗತಿಯ ಫಲವಾಗಿ ಶ್ರೀರಾಮನ ಪಾದುಕೆಯನ್ನು ಹೊಂದಿರಾಜ್ಯಕ್ಕೆ ಹಿಂತಿರುಗಿ, ಪಾದುಕಾಪಟ್ಟಾಭಿಷೇಕ ಮಾಡಿ ತಾನು ನಂದೀ ಗ್ರಾಮದಲ್ಲಿ ರಾಮನಂತೆಯೇ ವನವಾಸ ಜೀವನವನ್ನು ಕಳೆಯುತ್ತಿದ್ದುದು ವರ್ಣಿತವಾಗಿದೆ.

ಅರಣ್ಯಕಾಂಡದಲ್ಲಿ ಋಷಿಗಳು ಶರಣಾಗತಿಯ ಫಲವಾಗಿ ಖರಾದಿ ರಾಕ್ಷಸರನ್ನು ರಾಮನು ಕೊಲ್ಲಲಾಗಿ ಲಂಕಾಧೀಶ್ವರನಾದ ರಾವಣನು ಸೇಡು ತೀರಿಸಿಕೊಳ್ಳಲು ಮೋಸವೇಷದಿಂದ ರಾಮಲಕ್ಷ್ಮಣರಿಲ್ಲದಿದ್ದ ವೇಳೆಯಲ್ಲಿ ಸೀತೆಯನ್ನು ಅಪಹರಿಸಿದನು. ಕಿಷ್ಕಿಂಧಾ ಕಾಂಡದಲ್ಲಿ ಶ್ರೀರಾಮನು ವಾನರರಾಜ ಸುಗ್ರೀವನೊಡನೆ ಸ್ನೇಹ ಬೆಳೆಯಿಸಿ ಅವನ ಅಣ್ಣ ವಾಲಿಯನ್ನು ಕೊಂದು ಅವನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಿ ಸೀತಾನ್ವೇಷಣಕ್ಕೆ ಆಂಜನೇಯನನ್ನು ಕಪಿ ಸೈನ್ಯದೊಡನೆ ಕಳುಹುವಂತೆ ಮಾಡುವನು ಇಲ್ಲಿ ಸುಗ್ರೀವ ಶರಣಾಗತಿಯೇ ಪ್ರಧಾನ. ಐದನೇ ಕಾಂಡವಾದ ಸುಂದರಕಾಂಡದಲ್ಲಿ

ಸೀತಾನ್ವೇಷಣವಾಗಿ ಆಂಜನೇಯನು ಲಂಕೆಯನ್ನು ಸುಟ್ಟು ಹಿಂದಿರುಗಿದ ಮೇಲೆ ವಾನರಸೈನ್ಯವು ಸಮುದ್ರವನ್ನು ತಲುಪಿತು. ಅಲ್ಲಿ ವಿಭೀಷಣ ಶರಣಾಗತಿಯೂ ನಡೆಯಿತು. ಸಮುದ್ರಕ್ಕೆ ಸೇತುಬಂಧನವಾಯಿತು. ಆರನೇ ಕಾಂಡ ಯುದ್ಧಕಾಂಡ. ಇದರಲ್ಲಿ ರಾಮ ರಾವಣರ ಯುದ್ಧವು ವರ್ಣಿತವಾಗಿದೆ. ಸೀತೆಯಲ್ಲಿ ತ್ರಿಜಟೆಯ ಶರಣಾತಿಯೂ ಇಲ್ಲಿ ಹೇಳಲ್ಪಟ್ಟಿದೆ. ರಾವಣಾಂತ ಎಲ್ಲಾ ವಿಪಕ್ಷ ಭಾವನೆಯುಳ್ಳ ರಾಕ್ಷಸರೂ ಮಡಿದರು. ವಿಭೀಷಣ ಪಟ್ಟಾಭಿಷೇಕವು ಅವನ ಶರಣಾಗತಿಯ ಫಲವಾಗಿಯೂ, ಸದ್ರಾಕ್ಷಸರ ರಕ್ಷಣವೂ ತ್ರಿಜಟೆಯ ಶರಣಾಗತಿಯ ಫಲವಾಗಿಯೂ ನಡೆದು ಪುಷ್ಪಕ ವಿಮಾನದಲ್ಲಿ ಶ್ರೀರಾಮನು ಅಯೋಧ್ಯೆಗೆ ಹಿಂದಿರುಗಿ, ಭರತನ ಶರಣಾಗತಿಯ ಫಲವಾಗಿ ಪಟ್ಟಾಭಿಷಿಕ್ತನಾಗುವನು. ವೇದವು ಬ್ರಾಹ್ಮಣದಲ್ಲಿ ಕ್ರಿಯಾತ್ಮಕವ್ವಾಗಿ, ಕ್ರಿಯಾಪಾರಿಶುದ್ಧ್ಯಕ್ಕಾಗಿ ಉಪನಿಷತ್ತುಗಳಲ್ಲಿ ಬ್ರಹ್ಮಜ್ಞಾನವು ಬಂದು ಆ ಉಪನಿಷತ್ತುಗಳು. (1) ತಸ್ಮಾನ್ನ್ಯಾಸ ಸ ಮೋಕ್ಷಾಂ ತಪಸಾ ಮತಿರಿಕ್ತ ಯಾಹುಃ" (2) ಮುಮುಕ್ಷು ರ್ವೈ ಶರಣ ಮಹಂದ್ರ ಪದ್ಯೇ"ಎನ್ನುವ ಶರಣಾಗತಿ ಧರ್ಮವನ್ನೇ ಎತ್ತಿ ತೋರಿಸುವುದಕ್ಕೆ ಅರ್ಥವಾದದ ಅನುವಾದ ರೂಪದಲ್ಲಿ ಶ್ರೀಮದ್ರಾಮಾಯಣವು ಇರುವುದರಿಂದ ಇದನ್ನು ಶರಣಾಗತಿ ಶಾಸ್ತ್ರವೆಂದು ಹೇಳುವರು. ಉತ್ತರ ಕಾಂಡದಲ್ಲಿ ಸೀತಾತ್ಯಾಗ, ಅಶ್ವಮೇಧಯಾಗ, ಲವಕುಶರಾದ ತನ್ನ ಮಕ್ಕಳೊಡನೆ ಸೇರುವಿಕೆ, ಸರಯೂ ನದಿಯಲ್ಲಿ ತನ್ನ ಸಹೋದರರೊಡನೆ ಇಳಿದು ವೈಕುಂಠಕ್ಕೆ ಶ್ರೀರಾಮನು ಮತ್ತೆ ತೆರಳಿದ್ದು ವರ್ಣಿತವಾಗಿದೆ. ಈ ರಾಮಾಯಣದ ಏಳು ಕಾಂಡಗಳಲ್ಲಿ ಒಂದು ಮತ್ತು ಏಳು ಇವೆರಡರ ಅನೇಕ ಭಾಗಗಳು ಮುಂದೆ ಸೇರಲ್ಪಟ್ಟಿರಬೇಕೆಂದೂ, ಮಿಕ್ಕ ಐದು ಕಾಂಡಗಳ ಕರ್ತೃವಾದ ವಾಲ್ಮೀಕಿಯು ಇವೆರಡರ ಕರ್ತೃವೆಂದೂ ಅಭಿಪ್ರಾಯ ಪಟ್ಟಿರುವರು. ಪೂರ್ವಕಾಂಡಗಳಲ್ಲಿ ಅಂದರೆ ಮೊದಲಿನ ಆರು ಕಾಂಡಗಳಲ್ಲಿ ರಾಮನು ಮಾನವ ಆದರ್ಶ ವ್ಯಕ್ತಿಯಾಗಿರುವನು. ಉತ್ತರ ಕಾಂಡದಲ್ಲಿ ಅವನು ವಿಷ್ಣುವಿನ ಅವತಾರವಾಗಿ ಪರಿಗಣಿಸಲ್ಪಟ್ಟಿರುವನು ಎನ್ನುವುದೇ ಈ ಊಹೆಗೆ ಪ್ರಧಾನ ಕಾರಣ. ಇದು. ಅಷ್ಟು ಸಮಂಜಸವಾಗಿ ಕಂಡುಬರುವುದಿಲ್ಲ. ಈಗ ಲಭ್ಯವಾಗಿರುವ ತಾಲಪತ್ರಗಳಲ್ಲಿ ಅನೇಕ ಭಿನ್ನ ಭಿನ್ನ ಭಾಗಗಳಿವೆ. ಪೌರಾತ್ಯ, ವಾಯತ್ವ, ಔತ್ತರೇಯ ದಾಕ್ಷಿಣಾತ್ಯ ಪ್ರತಿಗಳಲ್ಲಿ ಶ್ಲೋಕಗಳ ಭೇದವು ಕಂಡು ಬರುತ್ತದೆ. ಕಂಡು ಬರುತ್ತದೆ. ಮೂಲವು ಯಾವುದೆಂದು ಹೇಳುವುದೇ ಕಷ್ಟವಾಗಿದೆ. ವಾಯುವ್ಯ ಪತ್ರಗಳನ್ನೆಲ್ಲಾ ಶೋಧಿಸಿ ಒಂದು ಸಂಸ್ಕರಣ ಮಾಡಲ್ಪಟ್ಟ ರಾಮಾಯಣವನ್ನು (Critical Edition) ವಿಶ್ವೇಶ್ವರಾನಂದ ವೇದಿಕ್ (of the Research Institute of Hoshhearpur)ಮುದ್ರಣ ಮಾಡಿದವರು. ಬರೋಡಾ ದೇಶದ ಎಂ.ಎಸ್.ವಿದ್ಯಾನಿಲಯವು ಮತ್ತೊಂದು ಇಂತಹ ರಾಮಾಯಣವನ್ನು ಮುದ್ರಿಸಲು ಸನ್ನಾಹಮಾಡಿರುತ್ತದೆ. ಮೂರನೇಯದಾಗಿ ಬಂಗಾಳದಲ್ಲಿಯೂ ಮತ್ತೊಂದು ಸಂಸ್ಕರಣಕ್ಕೆ ಸನ್ನಾಹವಾಗುತ್ತಿದೆ

ಹಿಂದುಗಳ ವಾಲ್ಮೀಕಿ ರಾಮಾಯಣವನ್ನು ಪೂಜ್ಯಭಾವದಿಂದ ನೋಡುತ್ತಿರುವರು. ಜಾಕೋಬಿ (Jacobi) ಲುಡ್‌ವಿಗ್ (Ludwig) ಡಾಲ್ಮನ್ (Daltman), ಹಾಪ್ಕಿನ್ಸ್ (Hospkins), ಲೇವಿ (Levi) ಮೊದಲಾದ ಪಾಶ್ಚಾತ್ಯರೂ ವೈದ್ಯ (vaidya) ಸೂಕ್ಥಂಕರ್ (sukthankar) ಮೊದಲಾದ ಪೌರ್ವಾತ್ಯರೂ ರಾಮಾಯಣವನ್ನು ವಿಮರ್ಶನಾತ್ಮಕ ದೃಷ್ಟಿಯಿಂದ ನೋಡಿರುತ್ತಾರೆ. ಲಾಸ್ಸ್ (Lassen) ಅವರಿಂದ ಇದು ಪ್ರಾರಂಭವಾಯಿತು. ಇವರು ಹೇಳುವಂತೆ ರಾಮಾಯಣವು

ನಾಲ್ಕು ಸಂಸ್ಕರಣವಾದಂತಿದೆ (1) ಭ್ರಾತೃ ಪತ್ನಿಯರೊಡನೆ ಹಿಮಾಲಯಕ್ಕೆ ಹೋಗಿದ್ದು (2) ಹಿಮಾಲಯವು ತಪ್ಪಿ ಗೋದಾವರಿಗೆ ಹೋಗಿದ್ದು -ಋಷಿಗಳಿಗೆ ರಕ್ಷಣೆ ಕೊಟ್ಟಿದ್ದು (3) ದಕ್ಷಿಣದ ಆದಿವಾಸಿಗಳನ್ನು ಗೆಲ್ಲಲು ಪ್ರಯತ್ನ (4) ಲಂಕಾಯಾತ್ರೆ. ವೆಬರ್ (weber) ಹೇಳುವಂತೆ ರಾಮಾಯಣವು ಆರ್ಯ ಸಂಸ್ಕೃತಿಯ ದಕ್ಷಿಣದಲ್ಲಿ ಹರಡಿದನ್ನು ತೋರಿಸುತ್ತದೆ. ಜಾಕೋಬಿ (Jacobi)ಯು ರಾಮಾಯಣ ವಿಷಯದಲ್ಲಿ ಚೆನ್ನಾಗಿ ವಿಮರ್ಶೆ ಮಾಡಿರುವರು. ರಾಮಾಯಣದ II-VI ಮಾತ್ರ ವಾಲ್ಮೀಕಿ ಕರ್ತೃವೆನ್ನುವುದೇ ಇವರ ಮತ.

ರಾಮನು ಚಾರಿತ್ರಿಕ ವ್ಯಕ್ತಿ ಎನ್ನುವುದು ನಿರ್ವಿವಾದ. ಅನೇಕ ರಾಮಾಯಣಗಳಲ್ಲಿ ವಾಲ್ಮೀಕಿ ರಾಮಾಯಣಕ್ಕೆ ಅಗ್ರಸ್ಥಾನವು ಲಭಿಸಿದೆ. ವೇದಾಂತ, ಇತಿಹಾಸ, ಧರ್ಮಶಾಸ್ತ್ರ, ಅಲಂಕಾರ ಶಾಸ್ತ್ರ ಮತ್ತು ಎಲ್ಲಕ್ಕೂ ಮಿಗಿಲಾಗಿ ಕಾವ್ಯ -ಈ ದೃಷ್ಟಿಗಳಲ್ಲಿ ಇದಕ್ಕೆ ಪ್ರಥಮ ಸ್ಥಾನವಿದೆ. ಈ ಗ್ರಂಥವನ್ನು ಅನ್ಯಾದೃಶ ಪ್ರತಿಭೆಯಿಂದ ವಾಲ್ಮೀಕಿ ಬರೆದವೆನ್ನುವುದಕ್ಕೆ ರಾಮಾಯಣದ ಮೊದಲನೆ ಅಧ್ಯಾಯವು ಪುರಾಣವಾಗಿದೆ. ನಾರದರಿಂದ ವಾಲ್ಮೀಕಿಯ ರಾಮಾಯಣವನ್ನು ಸಂಗ್ರಹವಾಗಿ ಕೇಳಿದನು. ಒಂದು ಪ್ರಸಂಗದಲ್ಲಿ ಇವನಿಗೆ ಅಪ್ರತಿಮ ಪ್ರತಿಭೆಯು ಬಂದಿತು. ಅದರ ಪ್ರವಾಹವೇ ವಾಲ್ಮೀಕಿ ರಾಮಾಯಣ. ಅದಕ್ಕಾಗಿಯೇ ಅದಕ್ಕೆ ಅಷ್ಟು ಪೂಜ್ಯತೆ ಇದೆ. 24000ಸಹಸ್ರ ಶ್ಲೋಕಗಳಲ್ಲಿ ಪ್ರತಿ ಸಹಸ್ರ ಮೊದಲೇ ಅಕ್ಷರಗಳನ್ನು ಜೋಡಿಸಿದರೆ ವೇದದ ಪ್ರಸಿದ್ಧ ಗಾಯತ್ರೀ ಮಂತ್ರವು ಲಭಿಸುವುದು.

ಅಧ್ಯಾತ್ಮ ರಾಮಾಯಣ ಮೊದಲಾದ ನೂರಾರು ರಾಮಾಯಣಗಳಿದ್ದರೂ ಈ ವಾಲ್ಮೀಕಿ ರಾಮಾಯಣಕ್ಕೆ ಪೂಜ್ಯತೆಯು ಪ್ರಾಮಾಣಿಕತೆಯೂ ಇದೆ.

### ೩.೫. ರಾಮಾಯಣದ ಕಾಲ

ಅನೇಕರು ವಿಂಟರ್‌ನಿಟ್ಸ್ (Winternitz) ಕೊಟ್ಟಿರುವ ವಿಮರ್ಶೆಯು ಗ್ರಾಹ್ಯವೆಂದಿರುವರು. ಇವರ ವಾದವು ಹೀಗಿದೆ.

1. I ಮತ್ತು VII ಕಾಂಡಗಳು, ಮೂಲಭೂತ II-IVಕಾಂಡಗಳಿಗೆ ಮುಂದೆ ಸೇರಿಸಲ್ಪಟ್ಟವು. 2. ಭಾರತವು ಈಗಿನ ಮೂಲರೂಪಕ್ಕೆ ಬರುವುದಕ್ಕೆ ಮೊದಲೇ ರಾಮಾಯಣವು ಹಳೆಯದಾಗಿತ್ತು. 3. ಮೂಲಭಾರತವು ಹಳೆಯ ರಾಮಾಯಣಕ್ಕಿಂತ ಹಳೆಯದು. 4. ವೇದದಲ್ಲಿ ರಾಮಾಯಣದ ಕಥೆಯು ಇಲ್ಲ, ಭಾರತದ ಕಥೆಯು ಇದೆ. 5. ರಾಮಾಯಣದಲ್ಲಿ ಬೌದ್ಧದರ್ಶನದ ಪ್ರಸ್ತಾಪವೇ ಇಲ್ಲ. ತ್ರಿಪಿಟಕಗಳಲ್ಲಿ ರಾಮಾಯಣದ ಪ್ರಸ್ತಾಪವಿಲ್ಲ. 6. ರಾಮಾಯಣದಲ್ಲಿ ಗ್ರೀಕರ ವಿಷಯವೇ ಇಲ್ಲ. ಆದ್ದರಿಂದ ಈ ರಾಮಾಯಣವು ಕ್ರಿ.ಪೂ. 200ರಲ್ಲಿ ಬರೆಯಲ್ಪಟ್ಟಿರಬೇಕು.

ಇವರ ವಾದಕ್ಕಿಂತಲೂ ಇನ್ನು ಮುಂದಕ್ಕೆ ವಿಮರ್ಶೆಯು ಸಾಗಿದೆ.

1. ಭಾರತಕ್ಕಿಂತಲೂ ರಾಮಾಯಣವು ಪೂರ್ವಗ್ರಂಥವೆನ್ನುವುದಕ್ಕೆ ಭಾರತವೇ ಆಧಾರ. ಮೂರನೇ ಪರ್ವದಲ್ಲಿ ರಾಮೋಪಾಖ್ಯಾನವಿದೆ. 7ನೇ ಪರ್ವದಲ್ಲಿ ರಾಮಾಯಣ ಶ್ಲೋಕವು ಕಂಡು ಬರುತ್ತದೆ.

2. ಪಾಲಿ ಭಾಷೆಯಲ್ಲಿರುವ ಜಾತಕ ಕಥೆಗಳಲ್ಲಿ ರಾಮಾಯಣ ಕಥೆ ಇದೆ.

3. ಬುದ್ಧ, ಯವನ ಮೊದಲಾದ ಶಬ್ದಗಳ ಬಂದಿರುವ ಶ್ಲೋಕಗಳು ಪ್ರಕ್ಷಿಪ್ತವೆಂದುನಿಶ್ಚಿತವಾಗಿದೆ.

4. ಕಾಲಾಶೋಕನು ಪಾಟಲೀ ಪುತ್ರವನ್ನು ಸ್ಥಾಪಿಸಿ ಕ್ರಿ. ಪೂ. . ೩೮೦ರಲ್ಲಿ ಬೌದ್ಧಸಭೆಯನ್ನು ಸೇರಿದ್ದನು. ಈ ಪ್ರಸಿದ್ಧ ಪಟ್ಟಣದ ಹೆಸರು ರಾಮಾಯಣದಲ್ಲಿಲ್ಲ. ಅಲ್ಲದೆ ಬಾಲ ಕಾಂಡದಲ್ಲಿ ಪಾಟಲೀಪುತ್ರ ಪಟ್ಟಣವು ನಿರ್ಮಾಣವಾದ ಸ್ಥಳದ ಮೇಲೆ ರಾಮನು ಹಾದು ಹೋಗಿರುವುದು ಕಂಡುಬರುತ್ತದೆ.

5. ಪೂರ್ವ ದೇಶಗಳಾದ ಕೌಸಾಂಬಿ, ಕನ್ಯಾಕುಬ್ಜ, ಕಾಂಪಿಲ್ಯ, ಮೊದಲಾದ ರಾಜ್ಯಗಳನ್ನು ಹೇಳಿರುವ ಕವಿಯು ಈ ಪಾಟಲೀ ಪುತ್ರವನ್ನು ಹೇಳಿಲ್ಲ.

6. ರಾಮಾಯಣದ ಮುಖ್ಯ ಪಟ್ಟಣವು ಅಯೋಧ್ಯೆ, ಬೌದ್ಧರು, ಜೈನರು ಇದನ್ನು ಸಾಕೇತಪುರಿ ಎಂದುದಿರುವರು. ಮುಂದೆ ಲವನು ತನ್ನ ರಾಜಧಾನಿಯನ್ನು ಶ್ರಾವಸ್ತಿಗೆ ವ್ಯತ್ಯಾಸ ಮಾಡಿರುವನು. ಬುದ್ಧನ ಕಾಲದಲ್ಲಿ ಪ್ರಸೇನಜಿತ್ ರಾಜನು ಶ್ರಾವಸ್ತಿಯ ದೊರೆ.

7. ಬಾಲಕಾಂಡದಲ್ಲಿ ಮಿಥಿಲೆ ಮತ್ತು ವಿಶಾಲ ಈ ಎರಡು ಪಟ್ಟಣಗಳೂ ಇಬ್ಬರೂ ದೊರೆಗಳ ರಾಜಧಾನಿಯಾಗಿರುವುದು ಕಂಡುಬರುತ್ತದೆ. ಬುದ್ಧನ ಕಾಲದಲ್ಲಿ ಇವೆರಡು ಒಂದಾಗಿದ್ದವು.

8. ಮಹಾಭಾರತದಲ್ಲಿ ಜರಾಸಂಧನು ತನ್ನ ಮಗಧ ರಾಜ್ಯದೊಡನೆ ಅನೇಕ ರಾಜ್ಯಗಳನ್ನು ಸೇರಿಸಿಕೊಂಡದ್ದು ಕಂಡುಬರುತ್ತದೆ. ಆದ್ದರಿಂದ ಇವನ ಕಾಲಕ್ಕಿಂತ ಬಹಳ ಹಿಂದಿನ ಕಾಲದಲ್ಲಿ ಅಂದರೆ ಕ್ರಿ. ಪೂ. ೪೦೦ ಕ್ಕಿಂತಲೂ ಹಿಂದೆಯೇ ರಾಮಾಯಣವು ಬರೆಯಲ್ಪಟ್ಟಿರಬೇಕು.

9. ಈಗ ನಿಶ್ಚಿತವಾಗಿರುವಂತೆ ಕ್ರಿ. ಪೂ. ೭೦೦ಕ್ಕೆ ಸೇರಿರುವ ಪಾಣಿನಿಯು ರಾಮಾಯಣವನ್ನು ಹೇಳಿಲ್ಲ. ಆದ್ದರಿಂದ ಅವರಿಗಿಂತಲೂ ಮುಂದೆ ರಾಮಾಯಣವು ಬರೆಯಲ್ಪಟ್ಟಿರಬೇಕು.

## ೩.೬. ಮಹಾಭಾರತ

ಮಹಾಭಾರತವು ರಾಮಾಯಣಕ್ಕಿಂತಲೂ ನಾಲ್ಕರಷ್ಟು ದೊಡ್ಡದಾದ ಗ್ರಂಥ. ಇಲ್ಲಿ ನಾನಾ ಕಥೆಗಳು, ತತ್ವಗಳ ವಿಮರ್ಶೆ, ವೇದಾಂತ ಇವೆಲ್ಲವೂ ಸೇರಿ ಭಾರತ ಸಂಸ್ಕೃತಿಯು ಒಂದು

ಪ್ರತೀಕವಾಗಿ ಇದೆ. ಋಗ್ವೇದದಲ್ಲಿ ಗಂಗಾ ಯಮುನಾ ನದಿಗಳ ಮಧ್ಯಭಾಗದಲ್ಲಿ ವಾಸಿಸುತ್ತಿದ್ದ ಕ್ಷತ್ರಿಯ ಕುಲಕ್ಕೆ ಭಾರತವೆನ್ನುವ ಹೆಸರಿದೆ. ಭಾರತದಲ್ಲೇ ಮಹತ್ವಾತ್ ಭಾರತತ್ವಾಚ್ಚ ಮಹಾ ಭಾರತಮುಚ್ಯತೇ ಎನ್ನುವ ಶ್ಲೋಕವಿದೆ. ಮಿಮಾಂಸಾ ಶಾಸ್ತ್ರದ ಎರಡು ಸಂಪ್ರದಾಯ ಪ್ರವರ್ತಕರಲ್ಲಿ ಒಬ್ಬರಾದ ಕುಮಾರಿಲರು "ಮಹತ್ವಾತ್ ಭಾರತತ್ವಾಚ್ಚ" ಎಂದಿರುವರು. ಹರಿಪ್ರಸಾದ ಶಾಸ್ತ್ರಿಗಳಿಂದ–

ಭಾರತಾನಾಂ ಮಹಜ್ಜನ್ಮ ಮಹಾಭಾರತ ಮಿತ್ಯುತ
ನಿರುಕ್ತ ಮಸ್ಯ ಯೋವೇದ ಸರ್ವಪಾಪೈಃ ಪ್ರಮುಚ್ಯತೆ

ಎಂದು ಹೇಳಲಾಗಿದೆ. ಪಾಣಿನಿಗೆ ಮಹಾಭಾರತ ಯುದ್ಧವು ತಿಳಿದಿದೆ. ಭಾರತದಲ್ಲಿರುವ ಗದ್ಯಭಾಗವು ಹಳೆಯದೆಂದು ಓ ಲ್ಡೆಂಬರ್ಗ್ (Oldenberg) ರೂ. ನವೀನವೆಂದು ವಿಂಟರ್‌ನಿಟ್ಸ್ (winternitz) ಅವರೂ ಅಭಿಪ್ರಾಯಪಟ್ಟಿರುವರು. ಈ ಮಹಾಭಾರತದಲ್ಲಿ ಮೂರು ಭಾಗವಿದೆ.

ಮನ್ವಾದಿ ಭಾರತಂ ಕೇಚಿತ್ ಆಸ್ತಿಕಾದಿತಥಾಪರೇ
ತಥೋಪರಿಚರಾದ್ಯ ನ್ಯೆತಿಃ ವಿದ್ರಾಃ ಸಮ್ಯಗಧೀಯತೇ

1 ರಿಂದ 12 ಅಧ್ಯಾಯಗಳು ಮನ್ವಾವಿಭಾಗ. ಇದು ಸೂತ್ರ ಪುರಾಣಿಕರು ಬರೆದದ್ದು. ಜನಮೇಜಯನ ಸರ್ಪಯಾಗ ಮೊದಲಾದ ಭಾಗವುಳ್ಳ 13-53 ಅಧ್ಯಾಯಗಳು ಆಸ್ತಿಕಾದಿ ಆಸ್ತಿಕಾದಿ. ಇದರ ಕರ್ತೃ ವೈಶಾಪಾಯನ. ಉಪರಿಚರ ವೃತ್ತಾಂತ ಮತ್ತು ಭಾರತ ಚರಿತ್ರೆ ಅವೆಲ್ಲವನ್ನು ಹೇಳುವ ಮಿಕ್ಕ ಭಾಗಕ್ಕೆ ಕರ್ತೃ ವ್ಯಾಸರು ಎನ್ನುವ ಅಭಿಪ್ರಾಯಕ್ಕೆ ಸಾಮಾನ್ಯ ಸಮ್ಮತಿ ಇದೆ. ಈಗಿರುವ ಮಹಾಭಾರತದಲ್ಲಿ ಒಂದು ಲಕ್ಷ ಶ್ಲೋಕಗಳಿದ್ದರೂ ಇದರ ಮೂಲವು ಕೇವಲ 8800 ಶ್ಲೋಕಗಳು ಮಾತ್ರವೆಂದು ಹೇಳಲ್ಪಟ್ಟಿದೆ.

ಅಷ್ಟೌಶ್ಲೋಕಸಹಸ್ರಾಣಿ ಅಷ್ಟೌಶ್ಲೋಕಶತಾನಿಚ
ಅದು ವೇದ್ಮಿ ಕೋವೇತಿ ಸಂಜಯೋವೇತಿವಾನವಾ

ಎನ್ನುವ ಶ್ಲೋಕವೇ ಇದಕ್ಕೆ ಆಧಾರ. ಒಟ್ಟಿನಲ್ಲಿ ಒಂದು ಕವಿ ಕೃತವಲ್ಲದೆ ನಾನಾ ಹಸ್ತಕ್ಷೇಪಕ್ಕೆ ಒಳಗಾಗಿ ಭಾರತ ಸಂಸ್ಕೃತಿಯು ಒಂದು ದೊಡ್ಡ ಪ್ರತೀಕವಾಗಿ ಒಂದು ಲಕ್ಷ ಶ್ಲೋಕಗಳುಳ್ಳದಾಗಿ ನಮಗೆ ಲಭ್ಯವಾಗಿರುವ ಗ್ರಂಥವೇ ಮಹಾಭಾರತ. ತನ್ನ ಮಹಿಮೆಯನ್ನು ತಾನೇ ಹೇಳಿಕೊಂಡಿರುತ್ತದೆ.

"ಯದಿಹಾಸ್ತಿ ತದನ್ಯತ್ರಯನ್ನೇ ಹಾಸ್ತಿನತತ್ ಕ್ವಚಿತ್"

ಎನ್ನುವ ವಾಕ್ಯದಿಂದ ಇದನ್ನು ತಿಳಿಯಬಹುದು. ಹೀಗೆ ನಾನಾ ಮುಖವಾಗಿ ಬೆಳೆದಿರುವ ಮಹಾಭಾರತದ ಕುಲವನ್ನು ನಿಷ್ಕರ್ಷಿಸುವುದು ಕಠಿಣವಾದ ಪ್ರಶ್ನೆಯಾಗಿದೆ. C.S. ವೈದ್ಯರು

ಹೇಳಿರುವಂತೆ ಸೂತಕೃತ ಭಾಗವು ಕ್ರಿ. ಪೂ. 250 ವೈಶಂಪಾಯನ ಕೃತಭಾಗವು ಕ್ರಿ. ಪೂ. 1400-1200, ವ್ಯಾಸಕೃತ ಭಾಗವು ಕ್ರಿ. ಪೂ. 3100 ಎನ್ನುವ ಅಭಿಪ್ರಾಯಕ್ಕೆ ಅಷ್ಟಾಗಿ ಮನ್ನಣೆ ಇಲ್ಲ. ರೋಮ ಹರ್ಷಣನ ಮಗ ಸೂತನೂ. ವೈಶಂಪಾಯನನೂ ವ್ಯಾಸರ ಶಿಷ್ಯರು. ಹರಿಪ್ರಸಾದ ಶಾಸ್ತ್ರಿಗಳು.-

ಚತುರ್ವಿಂಶತಿ -ಸಾಹಸ್ರೀಂಚಕ್ರೇಭಾರತಸಂಹಿತಾಂ
ಉಪಾಖ್ಯಾನೈರ್ವಿನಾತಾವಿತ್ ಭಾರತಂ ಪ್ರೋಚ್ಯತೇ ಬುಧೈಃ

ಎನ್ನುವ ಶ್ಲೋಕದಿಂದ ಭಾರತದ ಮೂಲಭಾಗವು 24000 ಶ್ಲೋಕಗಳೆಂದು ಹೇಳಿರುವರು. ಇದರ ಆಧಾರದ ಮೇಲೆ ಕೆಲವರು ಕಾಲನಿರ್ಣಯ ಮಾಡಿರುವರು. ಪಾಶ್ಚಾತ್ಯರಿಗೆ ಮೊದಲು ಇದರ ಪರಿಚಯವಾದದ್ದು ಕ್ರಿ. ಶ 1758ರಲ್ಲಿ. ಶಕುಂತಲೋಪಖ್ಯಾನ ಮತ್ತು ಭಗವದ್ಗೀತೆಗೆ ಆಧಾರವಾದ ಈ ಗ್ರಂಥ ವಿಮರ್ಶನದಲ್ಲಿ ಕೂತೂಹಲವು ಆಗಲೇ ತಲೆದೋರಿತು. 1795ರಲ್ಲಿ ಚಾರಲ್ಸ್ ವಿಲ್ಕಿನ್ಸ್ (charlas Wilkin's) ಅವರು ನಳದಮಯಂತಿ ಉಪಾಖ್ಯಾನವನ್ನು ಭಾಷಾಂತರಿಸಿದನು. ಭಾಷಾಶಾಸ್ತ್ರದ ಮೂಲಪುರುಷನಾದ ಬಾಪನು (BOPP) 1819ರಲ್ಲಿ ಲಾಟಿನ್ ಭಾಷೆಗೂ ಪರಿವರ್ತಿಸಿಕೊಂಡನು. 1837ರಲ್ಲಿ c-ಲಾಸೆನ್ (Lassen) ಅವನೂ ತಮ್ಮ ಭಾಷೆಗೂ ಪರಿವರ್ತಿಸಿಕೊಂಡನು. A. ವೇಬರ್ (Weber) 1852, A. ಲುಡ್‌ವಿಗ್ (Ludwig) 1884, ಸೊರೆನ್‌ಸೆನ್ (Sorensen) 1883, ಅಡಾಲ್ಫ್ ಡಾಲ್ಟ್ಜಮನ್ (Adolf Holtzmum) 1884, ಇವರೆಲ್ಲರೂ ಕಾಲನಿರ್ಣಯಕ್ಕಾಗಿ ಒಂದು ಮತವನ್ನು ಕಲ್ಪಿಸಿಕೊಂಡರು. ಅದಕ್ಕೆ ಇನ್‌ವರ್ಷನ್ ಥಿಯರಿ (Inversion Theory) ಎನ್ನುವ ಹೆಸರಿದೆ. ಅದರ ಆಧಾರದ ಮೇಲೆ L.ವಾನ್‌ಶ್ರೋಡರ್ (Von Schroder) ಮತ್ತು ಗ್ರೀರ್ ಸನ್ (Grierson) ಅವರು ಮಹಾಭಾರತದ ಕಾಲವನ್ನು ಕ್ರಿ. ಪೂ. 700-400ಎಂದು ಹೇಳಿರುವರು. ಅಶ್ವಲಾಯನ ಗೃಹ ಸೂತ್ರದ ಕಾಲದವರೆವಿಗೂ ಇದು ಇತಿಹಾಸವಾಗಿ ಪರಿಗಣಿಸಲ್ಪಟ್ಟಿರವೆನ್ನುವ ಅಭಿಪ್ರಾಯದ ಮೇಲೆ ಕ್ರಿ. ಪೂ. 350ಕ್ಕೆ ಇದರ ಕಾಲಾವಧಿಯನ್ನು ಕಲ್ಪಿಸಿರುವರು. ಬುಲರ್ ಮತ್ತು ಭಂಡಾರ್‌ಕರ್ (Buhler & Bhandarkar) ಅವರಿಬ್ಬರೂ ಮೇಲೆ ಹೇಳಿದ ಹಾಲ್ಟ್ಜಮನ್ (Holtsman) ಅವರ ಅಭಿಪ್ರಾಯವ್ನು ಶಾಸನಗಳ (Inscriptions) ಆಧಾರದ ಮೇಲೆ ತಳ್ಳಿ ಹಾಕಿರುವರು. ಇವರು ಹೇಳಿರುವಂತೆ ಭಾರತದ ಕಾಲ ಕ್ರಿ. ಶ. 400. ಕೀತ್ (Keeth) ವಿಮರ್ಶಕರು ಗ್ರೀಸಲ್ ವಾದವನ್ನು ಖಂಡಿಸಿರುವರು. H.ಜಾಕೋಭಿಯವರಂತೆ ಇದರ ಕಾಲ ಕ್ರಿ ಪೂ. 300-200ಕ್ಕೆ ಅರ್ವಾಚೀನವಲ್ಲ. ಡಾಕ್ಟರ್ ವಿನ್‌ಟರ್‌ನಿಟ್ಸ್‌ರ ಅಭಿಪ್ರಾಯದಲ್ಲಿ ಇದರ ಕಾಲ ಕ್ರಿ. ಪೂ. 400 ಮತ್ತು ಕ್ರಿ. ಶ. 400 ರ ಮಧ್ಯವರ್ತಿಕಾಲ A.D. ಪುಸಲ್‌ಕಲ್‌ರವರು ಭಾರತ ಯುದ್ಧವು ಕ್ರಿ. ಪೂ. 1400ರಲ್ಲಿ ನಡೆದಿರಬೇಕೆಂದಿರುವರು. ಇಷ್ಟು ಅಭಿಪ್ರಾಯಗಳೂ ಈಗ ಹಳೆಯದಾಗಿವೆ. ಈಗ ಸಾಮಾನ್ಯವಾಗಿ ಹಾಪ್ಕಿನ್ಸ್ ಅವರ ಅಭಿಪ್ರಾಯಕ್ಕೆ ಸಮ್ಮತಿ ಇದೆ. ಇದರಂತೆ ಭಾರತವು ಕ್ರಿ .ಪೂ. 200 ಕ್ಕಿಂತಲೂ ಪ್ರಾಚೀನವಲ್ಲ. J.ಹರ್ಟೆಲ್ (Hertel) ಜೋಸೆಫ್‌ಡಾಲ್ಮನ್ (Joseph Dahlman) ಇವರಿಬ್ಬರೂ ಭಾರತವು ಏಕ ಕರ್ತೃಕವೆಂದು ಹೇಳಿ ಇದರ ಕಾಲವನ್ನು ಕ್ರಿ. ಪೂ. 500ಕ್ಕೂ

ಪ್ರಾಚೀನವೆಂದು ಸಮರ್ಥಿಸಿರುವರು. ಇವರ ವಾದಕ್ಕೆ ಸಮಷ್ಟಿವಾದ (synthetic theory) ಎಂದು ಹೆಸರಿದೆ. ಭಾರತವು ಏಕಕರ್ತೃಕವೆನ್ನುವ ವಾದಕ್ಕೆ A.ಬಾರ್ತ್(Barth) ಅವರು ತಲೆದೂಗಿರುವರು. ಇಷ್ಟು ಭಿನ್ನಾಭಿಪ್ರಾಯಕ್ಕೆ ಒಳಗಾದ ಮಹಾಭಾರತದ ವಿಷಯದಲ್ಲಿ ನಾವು ವಿಶಾಲ ಮನೋಭಾವದಿಂದ ಹಿಂದೂ ಸಂಸ್ಕೃತಿಯ ಮಹತ್ವವನ್ನು ತಮ್ಮ ರಕ್ತದಲ್ಲಿ ಹೊಂದಿರುವವರ ಮನೋಧರ್ಮಕ್ಕೆ ಅನುಗುಣವಾಗಿ ಅತಿಯಾಗಿ ದ್ವೇಷಾಸೂಯಗಳಿಲ್ಲದೆ. ಟೀಕಿಸದೆ ವಿಮರ್ಶಿಸಬೇಕೆಂದು ಪಿಸಾನಿ (pisani) ಅವರು ಅಭಿಪ್ರಾಯಪಟ್ಟಿರುವರು. ಈಗ ಭಾಂಡಾರ್‌ಕರ್ ಓರಿಯಂಟಲ್ ರಿಸರ್ಚ್‌ಇನ್ಸ್ಟಿಟ್ಯೂಟ್ ಸಂಸ್ಥೆಯು ಮಹತ್ಪ್ರಯತ್ನದಿಂದ ಎಲ್ಲಾ ಹಸ್ತಪ್ರತಿಗಳನ್ನೂ. ತಾಲ ಪತ್ರಗಳನ್ನು ವಿಮರ್ಶಿಸಿ ಒಂದು ಶುದ್ಧ ಸಂಸ್ಕರಣ ಮಾಡಲ್ಪಟ್ಟ ಮಹಾಭಾರತವನ್ನು ಪ್ರಕಟಿಸಿದೆ (Critical Edition of Maha bharatha) ಇದರ ಆಧಾರದ ಮೇಲೆ ಮಹಾಭಾರತದ ಕಾಲವನ್ನು ನಿರ್ದಿಷ್ಟ ಮಾಡಲು ಇನ್ನೂ ಅವಕಾಶವಿದೆ.

ಈಗಿರುವಂತೆ ಹೇಳುವುದಾದರೆ. ಭಾರತದ ಮೊದಲನೇ ಪರ್ವದಲ್ಲಿ ಹೇಳಿರುವಂತೆ ಮೊದಲು ಇದರಲ್ಲಿ 8800 ಶ್ಲೋಕಗಳು ಮಾತ್ರ ಇದ್ದವೆಂದೂ. ನಂತರ ಇದು 24000 ಶ್ಲೋಕಗಳುಳ್ಳದಾಯಿತೆಂದೂ. ಕೊನೆಗೆ 1,00,000 ಶ್ಲೋಕ ರೂಪದಲ್ಲಾಯಿತೆಂದೂ ತಿಳಿಯಬೇಕಾಗುತ್ತದೆ. ಇದರ ಆಧಾರದ ಮೇಲೆ ನಾನಾ ಊಹೆಗಳು ಹೊರಟವೆ. ಮೊದಲು ಕುಶಲವರು ಹಾಡುವುದಕ್ಕಾಗಿ ಚಿಕ್ಕದಾಗಿತ್ತೆಂದು ನಂತರ ಬ್ರಾಹ್ಮಣರು ಇದನ್ನು ಧರ್ಮಶಾಸ್ತ್ರವನ್ನಾಗಿ ಮಾಡಲು ಕ್ರಮೇಣ ಸೇರಿಸುತ್ತಾ ಬಂದರೆಂದೂ. ಕೊನೆಗೆ ಇದು ಒಬ್ಬ ವ್ಯಕ್ತಿಯಿಂದ ಒಟ್ಟುಗೂಡಿಸಲ್ಪಟ್ಟು ಒಂದು ದೊಡ್ಡ ಗ್ರಂಥವಾಯಿತೆಂದೂ ಹೇಳಿ ವ್ಯಾಸ ಎಂದರೆ ಒಟ್ಟುಗೂಡಿಸುವವನು. ಹೀಗೆ ಒಟ್ಟುಗೂಡಿಸಿದವರು ಕೃಷ್ಣದ್ವೈಪಾಯನರೆಂದೂ. ಸಾಮಾನ್ಯವಾಗಿ ಹೇಳಬಹುದು. ಆದರೆ ವೇದವ್ಯಾಸರಾದ ಕೃಷ್ಣದ್ವೈಪಾಯನ ವ್ಯಾಸವೇದದ ಉಪ ಬೃಹಂಣಕ್ಕಾಗಿ ತಾನು ಸಂಗ್ರಹಿಸಿದ ಎಲ್ಲಾ ಕಥೆಗಳನ್ನೂ. ತನ್ನ ಜೀವಿಕೆಯಲ್ಲಿ ನಡೆದ ಭಾರತ ವೃತ್ತಾಂತವನ್ನೂ. ತನ್ನ ವೇಗ ದೃಷ್ಟಿಗೆ ಸಿಲುಕಿದ ವಿಷಯಗಳನ್ನು ಆಧಾರವಾಗಿಟ್ಟುಕೊಂಡು ಒಂದು ಮಹತ್ತರ ಗ್ರಂಥವಾದ ಮಹಾಭಾರತವನ್ನು ವೇದೋಪ ಬೃಹಂಣಕ್ಕಾಗಿ ಕೊಟ್ಟರು ಎನ್ನುವ ಸತ್ಯಾಂಶವನ್ನೂ ನಾವು ಒಪ್ಪಬೇಕಾಗುತ್ತದೆ. ಆದ್ದರಿಂದ ಡಾಲ್ಮನ್ (Dahlmann) ಅವರು ಹೇಳಿರುವಂತೆ ಮೊದಲಿನಿಂದಲೂ ಈ ಮಹಾಭಾರತವು ಒಂದು ದೊಡ್ಡ ಗ್ರಂಥವಾಗಿತ್ತು. ಇದರಂತೆ ಮಹಾಭಾರತ ಕಾಲವೂ ಕ್ರಿ. ಪೂ. 1400 ಆಗ ಬೇಕಾಗುತ್ತದೆ. ಅವರ ಮೇಲೆ ಹೇಳಿದ ಸರ್ವಮತ ಸಂಗ್ರಹದ ಆಧಾರದ ಮೇಲೆ ಇದರ ಕಾಲವನ್ನು ಗಮನಿಸುವುದಾದರೆ. ಕ್ರಿ.ಶ. 467ರಿಂದ ಪರಮಾವಧಿ 532ರೊಳಗಿನ ಅಂತರಾಳದಲ್ಲಿ. ಅನೇಕ ಶಾಸನಗಳಲ್ಲಿ ಹರಿವಂಶದೊಡನೆ ಸೇರಿರುವ 18 ಪರ್ವಗಳೂ ಪೂಜ್ಯತೆಯನ್ನು ಗಳಿಸಿತ್ತು ಎನ್ನುವುದಕ್ಕೂ. ಪರಾಶರರ ಮಗ ವೇದವ್ಯಾಸರೆನ್ನುವುದಕ್ಕೂ ಆಧಾವಿದೆ. ಆದರೆ ಉತ್ತರ ದೇಶದ ಬೌದ್ಧರ ಗ್ರಂಥದ ಜೈನ ಭಾಷೆ ಪರಿವರ್ತನ ಗ್ರಂಥಗಳ ಪರಾಮರ್ಶದಿಂದ ಸುಮಾರು ಕ್ರಿ.ಶ. 350ರೊಳಗೆ ಈ ಮಹಾಭಾರತವು ಧರ್ಮಶಾಸ್ತ್ರ ಸ್ಥಾನವನ್ನು ಗಳಿಸಿತ್ತು ಎನ್ನುವುದು ನಿಶ್ಚಿತವಾಗುತ್ತದೆ. ಇದನ್ನು ಪ್ರೊ. ಹಾಲ್ಸ್ಮನ್ ಅವರು ತಂದಿರುವ ವಿಮರ್ಶನಕ್ಕೆ ವಿರುದ್ಧವಾಗಿದೆ. ಇವರ ರೀತಿಯಲ್ಲಿ ಭಾರತವು ಈಗಿರುವ ರೂಪವನ್ನು ಕ್ರಿ. ಶ. 900ರಲ್ಲಿ ತಾಳಿತು. ಇನ್ನೂ ಕೂಲಂಕಷವಾಗಿ

ಗಮನಿಸಿದರೆ ಮೂಲ 8800 ಪದ್ಯಗಳ ಕಾಲ ಕ್ರಿ. ಪೂ. 5ನೇ ಶತಮಾನವೆಂದೂ, ಇದಕ್ಕೆ ಆಧಾರ ಅಶ್ವಲಾಯನ ಗೃಹ್ಯ ಸೂತ್ರವೆಂದೂ ತಿಳಿಯಬೇಕಾಗುತ್ತದೆ.

## ೩.೭. ರಾಮಾಯಣ - ಮಹಾಭಾರತಗಳ ಸಹವಿಮರ್ಶೆ

1. ಗೃಹ್ಯ ಸೂತ್ರದ ಉತ್ತರಾವಧಿ ಕಾಲದವರೆವಿಗೂ ರಾಮಾಯಣ-ಮಹಾಭಾರತ -ಇವೆರಡೂ ಇತಿಹಾಸವಾಗಿ ಪರಿಗಣಿಸಲ್ಪಟ್ಟಿರಲಿಲ್ಲ.

2. ಇವೆರಡೂ ಪರಸ್ಪರ ಸಂಪರ್ಕದಿಂದಲೇ ಬೆಳೆದಿರುವಂತಿದೆ.

3. ಇವೆರಡೂ ಒಂದೇ ಪ್ರದೇಶದಲ್ಲಿ ಬೆಳೆದಿದೆ. ಕೋಸಲ ಮಗಧದ ಕಥೆಯು ಭಾರತದಲ್ಲಿದೆ. ಭಾರತದಲ್ಲಿ ಗಂಗಾ ಬಯಲು ಪ್ರದೇಶ ಕಥೆಗಳು ಹೇರಳವಾಗಿವೆ.

4. ಭಾರತದ 1/4 ಭಾಗ ರಾಮಾಯಣ.

5. ಭಾರತವು ಮೂರು ಸಂಸ್ಕರಣವನ್ನು ಹೊಂದಂತಿದೆ. ರಾಮಾಯಣವು ಹಾಗಲ್ಲದಿದ್ದರೂ I ಮತ್ತು VII ಕಾಂಡಗಳು ಉತ್ತರ ಕಾಲದಲ್ಲಿ II-VIಕಾಂಡಗಳಿಗೆ ಸೇರಿಸಲ್ಪಟ್ಟಂತಿದೆ.

6. ಭಾರತದ ಕರ್ತೃವಿನ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ರಾಮಾಯಣಕ್ಕೆ ವಾಲ್ಮೀಕಿ ಒಬ್ಬರೇ ಕರ್ತರು.

7. ಪಶ್ಚಿಮ ರಾಜ್ಯಗಳ ವರ್ಣನೆ ಭಾರತದಲ್ಲಿಯೂ ಪೂರ್ವರಾಷ್ಟ್ರಗಳ ವರ್ಣನೆಯು ರಾಮಾಯಣದಲ್ಲಿಯೂ ಇದೆ.

8. ಭಾರತವು ಅಸಂಸ್ಕೃತ ಸಮಾಜ ಸ್ಥಿತಿಯನ್ನು ಪ್ರತಿಬಿಂಬಿಸಿದರೂ ಯುದ್ಧದ ರೀತಿನೀತಿಗಳು ನಾಗರೀಕತೆಯ ಗುರುತುಗಳಾಗಿವೆ. ರಾಮಾಯಣದಲ್ಲಿ ಕಾಡು ಜಾಸ್ತಿಯಾಗಿದ್ದುದು ಕಂಡುಬರುತ್ತದೆ.

9. ಮೂಲಭಾರತವು ಪ್ರಾಚೀನತೆಯನ್ನೂ ತೋರಿಸುತ್ತದೆ. ರಾಮಾಯಣವು ಹಾಗಲ್ಲ.

10. ರಾಮಾಯಣದಲ್ಲಿ ರಾಮಸೀತೆಯರು ಆದರ್ಶವ್ಯಕ್ತಿಗಳು. ಭರತದಲ್ಲಿ ಸಮ್ಮಿಶ್ರ ಸ್ವಭಾವವುಳ್ಳ ವ್ಯಕ್ತಿಗಳು ವರ್ಣಿತರಾಗಿರುವರು.

11. ರಾಮಾಯಣವು ಮುಂದೆ ಬಂದ ಕವಿಗಳ, ದೇಶಪ್ರೇಮಿಗಳ ದೈವಭಕ್ತರ ರಾಜ್ಯ ಸೂತ್ರವನ್ನೂ ವಹಿಸುವವರ -ಅಂದರೆ ಜನಾಂಗದ ಹೃದಯವನ್ನು ಆಕ್ರಮಿಸಿ ಎಲ್ಲರನ್ನೂ ಮರುಳುಗೊಳಿಸಿದೆ. ಇದು ಪುನೀತ ಗ್ರಂಥವಾಗಿ ಪರಿಗಣಿಸಲ್ಪಟ್ಟು ವೇದಕ್ಕೆ ಸಮಾನವಾಗಿ ಪಾರಾಯಣ






ಮಾಡಲ್ಪಡುತ್ತದೆ. ಇದರಿಂದ ಸಕಲ ಸಿದ್ಧಿಗಳು ಲಭಿಸುತ್ತವೆನ್ನುವ ನಂಬಿಕೆಯು ಬೆಳೆದಿದೆ. ಆ ಸೇತು - ಹಿಮಾಚಲದವರೆಗೂ ಶ್ರೀರಾಮನವಮಿಯು ಆಚರಿಸಲ್ಪಡುತ್ತದೆ. ನವರಾತ್ರಿಯ ಕಾಲದಲ್ಲಿ ರಾಮಾಯಣ ಪಾರಾಯಣಾದಿಗಳು ನಡೆಯುತ್ತಿವೆ. ಸಕಲ ಹಿಂದುಗಳಿಗೂ ಪೂಜ್ಯತಾ ಬುದ್ಧಿಯನ್ನು ಬೆಳೆಸುತ್ತಾ ಬಂದಿದೆ. ಈ ರಾಮಾಯಣದಲ್ಲಿ ಅಡಗಿರುವ ಆದಿತ್ಯಹೃದಯವನ್ನೂ ಪಾರಾಯಣ ಮಾಡುವವರೂ ಉಂಟು. ಸೀತಾಕಲ್ಯಾಣ, ರಾಮಪಾದುಕಾ ಪಟ್ಟಾಭಿಷೇಕ, ಶ್ರೀರಾಮಪಟ್ಟಾಭಿಷೇಕ ಇದನ್ನು ಬಹು ವಿಜೃಂಭಣೆಯಿಂದ ನಡೆಸುವವರಂತೂ ಹೆಚ್ಚಾಗಿರುವರು. ಇದರ ಪರಿವರ್ತನೆ ಸಕಲ ದೇಶಭಾಷೆಗಳಿಗೂ ಆಗಿದೆ. ಕಥಾ ಭಾಗವು ಅನೇಕ ಕಾವ್ಯ ನಾಟಕಗಳಿಗೆ ವಸ್ತುವಾಗಿದೆ. "ಮುರಾರೇ ಸ್ತೃತೀಯಃ ಪಂಥಾಃ" ಎನ್ನುವ ಐತಿಹ್ಯವೂ ರಾಮಾಯಣ ಚರಿತ್ರೆಯ ಪ್ರತಿಪಾದನ ವೈಶಿಷ್ಟ್ಯದಿಂದಲೇ. ಇಲ್ಲಿನ ಶ್ಲೋಕಗಳ ವೃತ್ತವು ವೇದದ ಅನುಷ್ಟುಪ್ ವೃತ್ತವೇ ಜಾಸ್ತಿಯಾಗಿದೆ. ಅದಕ್ಕಾಗಿಯೇ,

ವೇದಃ ಪ್ರಾಚೇತ ಸಾದಾಸೀಸ್ಸಾಕ್ಷಾದ್ರಾಮಾಯಣಾತ್ಮನಾ

ಎನ್ನುವ ಅನುಸಂಧಾನ ಶ್ಲೋಕವೂ ಜಾರಿಯಲ್ಲಿದೆ. ತುಲಸೀದಾಸ ರಾಮಾಯಣ, ಕಂಬರಾಮಾಯಣ, ಮೊದಲಾದ ಉನ್ನತ ಗ್ರಂಥಗಳು ಇವರ ಸ್ಫೂರ್ತಿಯಿಂದಲೇ ಬೆಳೆದಿದೆ. ರಾಮಾಯಣದ ಮಂಗಳ ಶ್ಲೋಕದಲ್ಲಿ ಹೇಳಿರುವಂತೆ ಬೆಟ್ಟಗಳು, ನದಿಗಳು ಈ ಭೂಮಂಡಲದಲ್ಲಿರುವವರಿಗೂ ರಾಮಾಯಣವು ಎಲ್ಲರ ಬಾಯಲ್ಲಿರುವುದು ಎಂದಿರುವುದು ಇಲ್ಲಿಯವರಿಗೂ ಸತ್ಯವಾಗಿದೆ.

ಭಾರತವು ಪೂಜ್ಯಗ್ರಂಥವಾದರೂ ರಾಮಾಯಣದಂತೆ ಪಾರಾಯಣ ಗ್ರಂಥವಾಗಿಲ್ಲ. ಆದರೂ ರಾಮಾಯಣದಂತೆ ಮತ್ತು ಅದಕ್ಕಿಂತಲೂ ಅಧಿಕವಾಗಿ ಕವಿಗಳ ಮನಸ್ಸನ್ನು ಸೆಳೆದಿದೆ. ಇದರಲ್ಲಿ ಭಾರತೀಯ ಸಂಸ್ಕೃತಿಯ ಸಕಲ ಪರ್ವಗಳೂ ವರ್ಣಿತವಾಗಿರುವುದು ಗೋಚರವಾಗಿದೆ. ಇಲ್ಲಿರುವ ನಳದಮಯಂತಿ, ಸತಿಸಾವಿತ್ರಿ, ಶಿಬಿ ಚಕ್ರವರ್ತಿ, ಋಷ್ಯಶೃಂಗ, ರಾಮಾಯಣ, ಹರಿವಂಶ, ಶಕುಂತಲೆ, ಮೊದಲಾದ ಕಥೆಗಳು ಪ್ರಪಂಚದ ಮನಸ್ಸನ್ನೇ ಸೆಳೆದಿದೆ. ಇಲ್ಲಿ ನಾನಾ ಶೈಲಿಯ ಶ್ಲೋಕಗಳು ನಾನಾ ವೃತ್ತಗಳು, ಪ್ರಾಚೀನ ನವೀನ ಭಾಷೆಗಳು ಇರುವುದಲ್ಲದೆ, ನಿತ್ಯಪಾರಾಯಣಕ್ಕೆ ಯೋಗ್ಯವಾಗಿ ವೇದಾಂತ ಕಳಹದಿಯಾಗಿರಲು ಸಮರ್ಥಗಳಾದ ವಿಷ್ಣು ಸಹಸ್ರನಾಮ, ಭಗವದ್ಗೀತಾ ಗ್ರಂಥಗಳಿವೆ.

12. ಇವೆರಡೂ, ಸಂಸ್ಕೃತವು ಮಾತೃಭಾಷೆಯಾಗಿ ಎಲ್ಲರೂ ಮಾತನಾಡುವ ದೇಶ ಭಾಷೆಯಾಗಿದ್ದ ಕಾಲದಲ್ಲಿ ಬರೆಯಲ್ಪಟ್ಟಿರಬೇಕು. ಕುಶ -ಲವರು, ರಾಮನ ಮುಂದೆ ರಾಮಾಯಣವನ್ನು ಈಗಿರುವಂತೆ ಹಾಡಿದರು. ಕುಶೀಲವರು ಜನಗಳ ಮುಂದೆ ಭಾರತವನ್ನು ಹಾಡುತ್ತಿದ್ದರು. ಸಾಮಾನ್ಯವಾಗಿ ಈ ಎರಡು ಗ್ರಂಥಗಳ ಸವಿಯನ್ನು ಎಲ್ಲರೂ ಅನುಭವಿಸುವಂತೆ ಸುಲಭ ಶೈಲಿಯಲ್ಲಿದ್ದರೂ, ಗಾಂಭೀರ್ಯ . ಔನ್ನತ್ಯ, ಲಾಲಿತ್ಯ, ಮಾಧುರ್ಯ, ಮೊದಲಾದ ಕಾವ್ಯ ಗುಣಗಳು ಅಲ್ಲಲ್ಲಿ ಮೇಲೆದ್ದು ಕಾಣುತ್ತದೆ. 11ನೇ ಶತಮಾನದ ಕ್ಷೇಮೇಂದ್ರನು ರಾಮಾಯಣ ಕಥಾ ಮಂಜರಿ ಮತ್ತು ಭರತ ಮಂಜರಿ ಎಂದು ಎರಡು ಕಾವ್ಯಗಳನ್ನು

ಬರೆದು ಭಾರತೀಯರ ಹೃದಯದಲ್ಲಿ ಎರಡಕ್ಕೂ ಸಮಾನ ಸ್ಥಾನವಿದೆ ಎಂದು ತೋರಿಸಿರುವನು. ರಘುವಂಶ, ಮಹಾವೀರ ಚರಿತ್ರ, ಅನರ್ಘರಾಘವ, ಉತ್ತರರಾಮಚರಿತ, ಮೊದಲಾದ ರಾಮಾಯಣವೇ ಆಧಾರವಾಗಿ ಉಳ್ಳ ಕಾವ್ಯಗಳೂ, ಶಕುಂತಲ, ವೇಣೀಸಂಹಾರ, ನೈಷದ ಕಾವ್ಯ ಮೊದಲಾದ ಭಾರತವನ್ನೇ ಆಧಾರವಾಗಿವುಳ್ಳ ಕಾವ್ಯನಾಟಕಗಳೂ, ನೀರ್ವಾಣ ಕವಿತಾ ಪ್ರಪಂಚದಲ್ಲಿ ವ್ಯಾಸವಾಲ್ಮೀಕಿಗಳ ಪ್ರಭಾವವನ್ನು ಸಾರುತ್ತಿವೆ. ವಾಲ್ಮೀಕಿಯು ಒಂದು ಕಾವ್ಯವನ್ನು ಇತಿಹಾಸರೂಪದಲ್ಲಿ ಬರೆದು ಲೋಕ ವಿಖ್ಯಾತರಾದರು. ಕೃಷ್ಣದ್ವೈಪಾಯನ ವ್ಯಾಸರು ಭೀರತವನ್ನು ಬರೆದು 18 ಪುರಾಣಗಳನ್ನು ರಚಿಸಿ ಭಗವಾನ್ ವ್ಯಾಸ ಎನ್ನಿಸಿಕೊಂಡರು.

## ಪುರಾಣ

### ೩.೮. ಉತ್ಪತ್ತಿ ಮತ್ತು ಬೆಳವಣಿಗೆ

ಪುರಾಣವೆಂದರೆ ಪೂರ್ವಕಥೆ. ಅಥರ್ವ ವೇದದವರೆಗೂ ಇದಕ್ಕೆ ಇದೇ ಅರ್ಥವಿದೆ. ವೇದಕ್ಕೆ ಇದು ಬ್ರಹ್ಮನಿಂದ ಹೊರಬಿತ್ತೆಂದು ವಾಯು ಪುರಾಣದಲ್ಲಿದೆ (I, 60-61)

ಪುರಾಣಂ ಸರ್ವಶಾಸ್ತ್ರಾಣಂ ಪ್ರಥಮಂ ಬ್ರಹ್ಮಣಾಸ್ಮೃತಂ
ಅನಂತರಂಚ ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿರ್ಗತಾಃ

ಎನ್ನುವ ಶ್ಲೋಕವೇ ಇದಕ್ಕೆ ಪ್ರಮಾಣ. ಇಂತಹ ವಾಕ್ಯಗಳ ಪ್ರಮಾಣದ ಮೇಲೆ M.C.ಮಜುಮ್‌ದಾರ್ (Majumdar) ಅವರು ಋಗ್ವೇದಕ್ಕೆ ಅಗ್ನಿ ಪುರಾಣವೂ, ಯಜುರ್ವೇದಕ್ಕೆ ವಾಯುಪುರಾಣವೂ, ಸಾಮವೇದಕ್ಕೆ ಸೂರ್ಯಪುರಾಣವೂ ಮೂಲವೆಂದು ಅಭಿಪ್ರಾಯಪಟ್ಟಿರುವರು. ಜಾಕ್ಸನ್ ಅವರು ಮೊದಲು ಒಂದೇ ಪುರಾಣವಿತ್ತೆಂದೂ ಅಥರ್ವವೇದದಲ್ಲಿ ಹಾಗೆಯೇ ಏಕವಚನವಿದೆ ಎಂದೂ ಹೇಳಿರುತ್ತಾರೆ. ಅಥರ್ವ ವೇದದ XI, 7-24 ಮಂತ್ರವೇ ಇದರ ಆಧಾರ.

ಋಚ ಸ್ಸಾಮಾನಿ ಛಂದಾಂಸಿ ಪುರಾಣಂ ಯಜುಷಾಸಹ
ಉಚ್ಛಿಷ್ಟಾ ಜಜ್ಞರೇ ಸರ್ವೇದಿವಿ ದೇವಾದಿವಿಶ್ರುತಾಃ

ಎನ್ನುವ ಅಥರ್ವ ವೇದ ಮಂತ್ರದಲ್ಲಿ ಪುರಾಣ ಶಬ್ದವು ಏಕವಚನದಲ್ಲಿದೆ. ಇದರಿಂದಲೇ ಮೊದಲು ಒಂದೇ ಪುರಾಣವಿತ್ತೆಂದು ಹೇಳುವುದು ಸರಿಯಲ್ಲ. ಜಾತ್ಯೈಕ ವಚನದಲ್ಲಿ ಈ ಶಬ್ದವು ಪ್ರಯೋಗಿಸಲ್ಪಟ್ಟಿದೆ. ಮೊದಲು ಈ ಪುರಾಣ ಸಾಹಿತ್ಯವು ಕೇವಲ ಕಥಾರೂಪದಲ್ಲಿದ್ದು ನಂತರ ಸರ್ಗ, ಪ್ರತಿಸರ್ಗ, ಉಪನಿಷದರ್ಥಗಳು, ಸಾಮಾನ್ಯ ವಿಶೇಷಧರ್ಮ ಪ್ರತಿಪಾದನೆ ಇತ್ಯಾದಿಗಳು ಸೇರಿಸಲ್ಪಟ್ಟವು ಎನ್ನುವುದರಲ್ಲಿ ಸತ್ಯಾಂಶವು ಅಧಿಕವಾಗಿದೆ. ಹಾಗೆಯೇ ಹೇಳಿ ಈ ಪರಿವರ್ತನೆಯು

ಕ್ರಿ. ಶ. 400ರ ಮಧ್ಯಭಾಗದಲ್ಲಿ ಆಗಿರಬೇಕೆಂದು ಹಜ್ರಾ (Hazra) ಅವರು ಅಭಿಪ್ರಾಯಪಟ್ಟಿರುವರು.

## ೩.೯. ಲಕ್ಷಣ

### ವಿಷ್ಣು ಪುರಾಣ, III, 6, 15

> ಆಖ್ಯಾನೈಶ್ಚಾ ಪಾಖ್ಯಾನೈರ್ಗಾಥಾಭಿಃ ಕಲ್ಪಶುದ್ಧಿಭಿಃ
> ಪುರಾಣಸಂಹಿತಾಂಚಕ್ರೇ ಪುರಾಣಾರ್ಥವಿಶಾಸದಃ††

ಎನ್ನುವ ಶ್ಲೋಕದಿಂದ ಪುರಾಣ ಲಕ್ಷಣವು ವ್ಯಾಸರಿಂದ ಅವರ ಶಿಷ್ಯರಾದ ರೋಮ ಹರ್ಷಣರಿಗೆ ಉಪದೇಶವಾಯಿತು. ಇವರಿಗೆ ಸೂತಪುರಾಣಿಕರೆಂದೂ ಇವರ ಮಗ ಉಗ್ರಶ್ರವಸ್ಸೂ ಸೂತಪುರಾಣಿಕರೆಂದೂ ಭಾಗವತದಲ್ಲಿ ನೋಡುತ್ತೇವೆ. ಸೂತರೆಂದರೆ ಧರ್ಮಶಾಸ್ತ್ರಗಳಲ್ಲಿ ಅರ್ಥವಾಗಿರುವಂತೆ ಸಂಕರ ಜಾತಿಯಲ್ಲ. ಇವರಿಬ್ಬರೂ ಬ್ರಾಹ್ಮಣರು. ಇವರು ಇತಿಹಾಸ ಪುರಾಣ ಹೇಳುವುದರಲ್ಲಿ ಪ್ರವೀಣರು. ಒಂದು ವರ್ಷ ಕಾಲ ಅನುಷ್ಠಿಸಲ್ಪಡುವ ಸತ್ರಗಳಲ್ಲಿ ಮಧ್ಯೆ ಮಧ್ಯೆವಿಚ್ಛಿನ್ನ ಕಾಲಗಳಲ್ಲಿ ಸನಕಾದಿ ಋಷಿಗಳಿಗೆ ಸೂತ ಪುರಾಣಿಕರು ನೈಮಿಶಾರಣದಲ್ಲಿ ಹೇಳುತ್ತಿದ್ದರು ಎಂದು ನಾವು ಪುರಾಣಗಳಲ್ಲಿ ನೋಡುತ್ತೇವೆ. ಕಥಾಭಾಗವನ್ನು ಹೇಳುವ ಪ್ರಸಂಗದಲ್ಲಿ ಧರ್ಮ. ವೇದಾಂತ ಭಾಗಗಳು ಅಲ್ಲಲ್ಲಿ ಸೇರಿಬರುವುದರಿಂದ ಮತ್ಸ್ಯಪುರಾಣವು.

> "ಪುರಾತನಸ್ಯ ಕಲ್ಪಸ್ಯ ಪುರಾಣಾನಿವಿದುರ್ಬುಧಾಃ"

ಎಂದು ಹೇಳಿರುವಂತೆ ಬರೀ ಕಥಾಭಾಗವಿಲ್ಲ . ಹಿಂದೆ ಉಪಹರಿಸಿದ ವೇದ ಮಂತ್ರದಿಂದಲೂ ಈ ಮತ್ಸ್ಯ ಪುರಾಣ ವಚನದಿಂದಲೂ ಕೂಡ ಚತುರ್ಮುಖ ಬ್ರಹ್ಮನ ಆಯಸ್ಸು ದೇವ ಮಾನದಲ್ಲಿ ಒಂದು ನೂರು ವರುಷವೆನ್ನುವ ಮತ್ತು ಅದರ ಹೆಸರು ಕಲ್ಪವೆನ್ನುವ ಭಾವವು ವೇದಕ್ಕಿಂತಲೂ ಪ್ರಾಚೀನವೆಂದು ತೋರುತ್ತದೆ. ಈಗ ನಾವಿರುವ ಕಲ್ಪದಲ್ಲಿ ಪುರಾಣವು ಪೂರ್ವಕಲ್ಪಕಥೆಯನ್ನು ಪ್ರತಿಪಾದಿಸುತ್ತದೆ ಎನ್ನುವುದೇ ಮತ್ಸ್ಯಪುರಾಣದ ಅಭಿಪ್ರಾಯವಾಗಿದೆ. ವಾಯುಪುರಾಣವು ಕೂಡ 1, 203ರಲ್ಲಿ ಇದನ್ನೇ ಸಮರ್ಥಿಸುತ್ತದೆ.

> ಯಸ್ಮಾತ್ಪುರಾಹ್ಯನತೀದಂ ಪುರಾಣಂ ತೇನ ಹಿಸ್ಮೃತಂ
> ನಿರುಕ್ತ ಮಸ್ಯಯೋ ವೇದ ಸರ್ವಶಾಪೈಃ ಪ್ರಮುಚ್ಯತೇ

ಎನ್ನುವ ಶ್ಲೋಕದಿಂದ ಪುರಾಣಗ್ರಂಥವು ಪಾವನಗ್ರಂಥವೆಂದೂ ನಂಬಲ್ಪಟ್ಟಿದೆ. ಈಗಿರುವ ನಮ್ಮ ಪುರಾಣಗಳಲ್ಲಿ ನಮ್ಮ ಪೂರ್ವಕಲ್ಪದ ಕಥೆಗಳೂ ಈ ಕಲ್ಪಾದಿಯಲ್ಲಿ ನಡೆದ ಸೃಷ್ಟಿ. ವಂಶ. ಮನ್ವಂತರ ಇತ್ಯಾದಿ ಎಲ್ಲಾ ವಿಷಯಗಳೂ ಇವೆ. ಆದ್ದರಿಂದ ಪುರಾಣವೆಂದರೆ

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋಮನ್ವಂತರಾಣಿಚ
ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ

ಎಂದು ಹೇಳಲ್ಪಟ್ಟಿದೆ. ಅದರ ಈ ಲಕ್ಷಣವು 18 ಪುರಾಣಗಳಿಗೂ ಅನ್ವಯಿಸುವುದಿಲ್ಲ. ಉಪ ಪುರಾಣಗಳಿಗೆ ಕೆಲವು ಕಡೆ ಅನ್ವಯಿಸುತ್ತದೆ. ಆದ್ದರಿಂದ ವಾಯುಪುರಾಣ I-203ರಲ್ಲಿ ಹೇಳಿರುವ ಲಕ್ಷಣವೇ ಗ್ರಾಹ್ಯವಾಗಿದೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಭಾಗವತ XI, 7, 9, 10 ಶ್ಲೋಕಗಳಲ್ಲಿಯೂ ಪುರಾಣ ಲಕ್ಷಣವು ಕೊಡಲ್ಪಟ್ಟಿದೆ.

ಸರ್ಗೋಸ್ಯಾಥ ವಿಸರ್ಗಶ್ಚ ವೃತ್ತೀ ರಕ್ಷಾಂತರಾಣಿ ಚ
ದಂಶೋವಂಶ್ಯಾನುಚರಿತಂ ಸಂಸ್ಥಾ ಹೇತು ರಪಾಶಯಃ
ದಶಭಿರ್ಲಕ್ಷಣೈರ್ಯುಕ್ತಂ ಪುರಾಣಂ ತದ್ವಿದೋವಿದುಃ
ಕೇಚತ್ಪಂಚವಿಧಂ ಬ್ರಾಹ್ಮನ್ ಮಹದಲ್ಪವ್ಯವಸ್ಥಯಾ

ಎನ್ನುವ ಈ ಎರಡೂ ಶ್ಲೋಕಗಳಲ್ಲಿ ಪುರಾಣ ವಿಷಯ ವ್ಯಾಪ್ತಿಯು ಹೇಳಲ್ಪಟ್ಟಿದೆ.

## ೪೦. ಸಂಖ್ಯಾ ಸಮೀಕ್ಷೆ

ಹೀಗೆ ಪೂರ್ವಕಲ್ಪದ ಮತ್ತು ಈ ಕಲ್ಪದ ಕಥೆಗಳೊಡನೆ ಧರ್ಮ ಸ್ವರೂಪ ಮತ್ತು ವೇದಾಂತ ಮೊದಲಾದ ವಿಷಯಗಳನ್ನೊಳಗೊಂಡ ಪುರಾಣಗಳ 18 ಎಂದು ಪರಿಗೃಹೀತವಾಗಿದೆ.

ಪದ್ಮಪುರಾಣ 268-81-84ರಲ್ಲಿ ಹೀಗಿದೆ

ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂಸ್ಕಾಂದಂತಥೈವಚ
ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಭೋಧ ಮೇ
ವೈಷ್ಣವೀಂ ನಾರದೀಯಂ ಚತಥಾ ಭಾಗವತಂ ಶುಭಂ

ಗಾರುಡಂ ಚ ತಥಾ ಪಾದ್ಮಂವಾರಾಹಂ ಶುಭದರ್ಶನೆ
ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ ಶುಭಾನಿವೈ
ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವಚ
ಭವಿಷ್ಯ ವಾಮನಂ ಬ್ರಾಹ್ಮಂ ರಾಜಸಾನಿ ನಿಭೋಧ ಮೇ

## ೪೧. ತಾಮಸ -ರಾಜಸ -ಸಾತ್ವಿಕ ಪುರಾಣಗಳೆಂದರೇನು?

ಇಲ್ಲಿ ಪುರಾಣಗಳು ಸಾತ್ವಿಕ, ರಾಜಸ, ತಾಮಸಗಳೆಂದು ವೈಷ್ಣವ ಸಂಪ್ರದಾಯಕ್ಕೆ ಅನುಗುಣವಾಗಿ ವಿಭಾಗಿಸಲ್ಪಟ್ಟಿದೆ.

ಸ್ಕಾಂದ ಪುರಾಣದ ಕೇದಾರ ಕಾಂಡದಲ್ಲಿರುವ

ಅಷ್ಟಾದಶ ಪುರಾಣೇಷು ದಶಭಿರ್ಗೀಯತೇಶಿವಃ
ಚತುರ್ಭಿ ರ್ಭಗವಾನ್ ಬ್ರಹ್ಮಾದ್ವಾಭ್ಯಂದೇವಿ ತಥಾಹರಃ

ಎನ್ನುವುದರಿಂದ ದೇವತಾ ಪ್ರತಿಪಾದನ ಕ್ರಮವು ಹೇಳಲ್ಪಟ್ಟಿದೆ. ಮತ್ಸ್ಯ ಪುರಾಣ 53-68-69ರಲ್ಲಿ

ಸ್ವಾತಿಕೇಷು ಪುರಾಣೇಷು ಮಾಹಾತ್ಮ್ಯ ಮಧಿಕಂಹರೇಃ
ರಾಜಸೇಷು ಚ ಮಾಹಾತ್ಮ್ಯಂ ಮಧಿಕಂ ಬ್ರಹ್ಮಣೋ ವಿಧುಃ
ತದ್ವದಗ್ನೇಶ್ಚಮಾಹಾತ್ಮ್ಯಂ ತಾಮಸೇಷು ಶಿವಸ್ಯ ಚ
ಸಂಕೀರ್ಣೇಷು ಸರಸ್ವತ್ಯಾಃ ಪಿತೃಣಾಂ ಚ ನಿಗದ್ಯನೇ

ಎನ್ನುವ ಶ್ಲೋಕಗಳಿಂದ ವೇದಾಂತ ಮತ್ತು ಧರ್ಮ ಸ್ವೀಕಾರದ ವಿಷಯದಲ್ಲಿ ಯಾವ ಪುರಾಣಗಳು ಗ್ರಾಹ್ಯಗಳು, ಯಾವುದು ತ್ಯಾಜ್ಯಗಳು ಎಂದು ನಿಷ್ಕರ್ಷಿಸಲ್ಪಟ್ಟಿದೆ. ಈ ಮತ್ಸ್ಯ ಪುರಾಣದ ವಿಭಾಗವನ್ನು ಸ್ಥೂಲ ದೃಷ್ಟಿಯಿಂದ ನೋಡಿದರೆ ಶೈವ ವೈಷ್ಣವ ಪರಸ್ಪರ ದ್ವೇಷವಿದ್ದ ಕಾಲದಲ್ಲಿ ಇವು ಬರೆದಿರಲ್ಪಟ್ಟಿರಬೇಕೆಂದು ತೋರುತ್ತದೆ. ಆದರೆ ಸತ್ಯಾಂಶವು ಹಾಗಿಲ್ಲ. ತಮೋಗುಣವೇ ಪ್ರಧಾನವಾಗಿದ್ದು ಎದ್ದಿರುವ ಸ್ವಭಾವವುಳ್ಳ ಮಾನವರಿಗೆ ಅಗ್ನಿಯೇ ಮತ್ತು ಶಿವನೇ ಪರಮೋತ್ಕೃಷ್ಟ ದೈವವೆಂದು, ಪ್ರತಿಪಾದನೆ ಮಾಡುವ ಪುರಾಣಗಳು ತಾಮಸ ಪುರಾಣಗಳೆಂದೂ, ರಜೋಭೂಯಿಷ್ಠಮಾನವರಿಗೆ ಚತುರ್ಮುಖ ಬ್ರಹ್ಮನ ಪಾಠವನ್ನು ಹೇಳುವ ಪುರಾಣಗಳು ಸಾತ್ವಿಕವೆಂದೂ, ಸಂಕೀರ್ಣ ಗುಣವುಳ್ಳವರಿಗೆ ಸರಸ್ವತಿ, ಪಿತೃಗಳು-ಇವರ ಪಾರಮ್ಯ ಸೂಚಕ ಉಪಪುರಾಣಗಳಿವೆ ಎಂದೂ ಅರ್ಥಮಾಡುವುದೇ ಉಚಿತವಾಗಿದೆ. ಅಂದರೆ ತಾಮಸ ಸ್ವಭಾವದವರಿಗೆ ಅಗ್ನಿ ಕಾರ್ಯ ಮತ್ತು ಶಿವಭಕ್ತಿಯಿಂದ ಸತ್ವವು ಎಲೆ ಎತ್ತುವುದೆಂದೂ ರಾಜಸ ಸ್ವಭಾವದವರಿಗೆ ಚತುರ್ಮುಖ ಬ್ರಹ್ಮ ಧ್ಯಾನಾದಿಗಳಿಂದ ಕ್ರಮೇಣ ಸತ್ವಗುಣವು ಪ್ರಧಾನವಾಗುವುದೆಂದೂ ಅರ್ಥವು ಸಮಂಜಸವಾಗುತ್ತದೆ. ಹೀಗೆ ಅರ್ಥ ಮಾಡದಿದ್ದರೆ ಈ ಪುರಾಣಗಳನ್ನೆಲ್ಲಾ ಸಂಗ್ರಹಿಸಿ ಲೋಕೋಪಕಾರ ಮಾಡಿರುವ ವ್ಯಾಸರ ವಿಷಯದಲ್ಲಿ ಹೀನ ಭಾವವು ತೋರುತ್ತದೆ. ಸತ್ವ ಪ್ರಧಾನರಾದ ಋಷಿಗಳು.

ಲಂಭತೇ ಬ್ರಹ್ಮನಿರ್ವಾಣಾಂ ಋಷಯಃಕ್ಷೀಣಕಲ್ಮಷಾಃ
ಛಿನ್ನದ್ವೈ ಧಾಃ ಯತಾತ್ಮಾನಃಸರ್ವಭೂತಹಿತೇರತಾಃ

ಎನ್ನುವ ಗೀತಾಶ್ಲೋಕದ ಆಧಾರದ ಮೇಲೆ ಸತ್ವಪ್ರಧಾನರಾಗಿರುವುದರಿಂದ ಆ ಋಷಿಗಳಲ್ಲಿ ಶ್ರೇಷ್ಠರಾದ ವ್ಯಾಸರು ಪರಸ್ಪರ ದ್ವೇಷಾಸೂಯೆಗಳನ್ನು ಹೆಚ್ಚಿಸುವ ಭಾವನೆಯನ್ನು ಇಂತಹ ಶ್ಲೋಕಗಳಲ್ಲಿ ಕೊಟ್ಟಿರುವರೆನ್ನುವುದು ನಮ್ಮ ಸಂಸ್ಕೃತಿಯನ್ನು ನಾವೇ ನಿಂದಿಸಿಕೊಂಡಂತಾಗುತ್ತದೆ. ಮತ್ತೆ ಕೆಲವರು ಈ ಪುರಾಣಗಳಲ್ಲಿ ಅನೇಕ ಜಾತಿಯರ ಮತ್ತು ಸಂಪ್ರದಾಯಸ್ಥರ ಹಸ್ತಕ್ಷೇಪವಿದೆ ಎಂದು ವಾದಿಸುವರು. ಈ ಮಾತಿಗೆ ಯಾವ ಆಧಾರವೂ ಇಲ್ಲ. ಉದಾಹರಿಸಲ್ಪಟ್ಟ ಶ್ಲೋಕಗಳು ಪ್ರಕ್ಷಿಪ್ತಗಳೆಂದು ಹೇಳಲು ಸಾಧ್ಯವಿಲ್ಲ. ಏತಕ್ಕೆಂದರೆ ಪೂರ್ವಾಚಾರ್ಯರು ತಾಮಸ ಮತ್ತು ರಾಜಸವೆಂದು ಹೇಳಲ್ಪಟ್ಟಿರುವ ಪುರಾಣಗಳಿಂದ ಪ್ರಮಾಣ ಶ್ಲೋಕಗಳನ್ನು ತೆಗೆದುಕೊಂಡಿರುವರು.

ರಾಜಸ ಪುರಾಣವಾದ ಬ್ರಹ್ಮಪುರಾಣರಿಂದ

1. ಸಕೃದ್ವಿ ಭಾತಾ ಸರ್ವಾರ್ತಿ ಸಮುದ್ರ ಪರಿಶೋಷಿಣೀ

2. ಭವಭಂಗಾಪ ಹಾರಿಣೇ

3. ಪರನಿರ್ವಾಣದಾಯಿನೀ

4. ಜ್ಯೋತಿಷ್ಮತ್ಯಮೃತಾವಹಾ

5. ಸರ್ವೇ ವಿಷ್ಣು ಮಯೋ ದೇವಾಃ ಸರ್ವೇ ವಿಷ್ಣುಮಯಾಗಣಾಃ
ನಹಿ ವಿಷ್ಣು ಸಮಾಕಾಚಿತ್‌ಗತಿರನ್ಯಾವಿಧೀಯತೇ

ಇತ್ಯಾದಿ ವಾಕ್ಯಗಳು. ಶ್ರೀಪರಪ್ರವೆಂದೂ

ರಾಜಸ ಬ್ರಹ್ಮಾಂಡಪುರಾಣದಿಂದ

ಯೇನ್ಯಂ ದೇವಂ ಪರತ್ವೇನ ವದಂತ್ಯ ಜ್ಞಾನಮೋಹಿತಾಃ
ನಾರಾಯಣಾಜ್ಜಗನ್ನಾಥಾತ್ ತೇವೈ ಪಾಷಂಡಿನಃ ಸ್ಮೃತಾಃ

ರಾಜಸ ಮಾರ್ಕಂಡೇಯ ಪುರಾಣದಿಂದ

1. ಸ್ವಪತಸ್ತಸ್ಯ ವೈ ಪದ್ಮಂ ಕೋಟಿ ಸೂರ್ಯ ಸಮಪ್ರಭಂ
ನಾಭೇರ್ವಿ ನಿಸ್ಸೃತಂತಸ್ಯ ತತ್ರೋತ್ಪನ್ನಃ ಪಿತಾಮಹಃ

2. ಸದ್ವೇಷಾಮೋವಲೋಕಾನಾಂ ಪಿತಾಮಾತಾಚ ಮಾಧವಃ
ಗಚ್ಛಧ್ವಮೇನಂ ಶರಣಂಶರಣ್ಯಂ ಪುರುಷರ್ಷಭಾಃ

ರಾಜಸ ವಾಮನ ಪುರಾಣದಿಂದ

ದೇವಂ ಶಾರ್ಙ್ಗಧರಂ ವಿಷ್ಣುಂ ಯೋ ಪ್ರಪನ್ನಾಃ ಪರಾಯಣಂ
ನ ತೇಷಾಂ ಯಮಸಾ ಲೋಕ್ಯಂ ನ ಚತೇ ನರ ಕೌಕಸಃ

ತಾಮಸ ಪುರಾಣವಾದಲೈಂಗದಿಂದ

ವೈಕುಂಠೇ ತುಪರೇ ಲೋಕೇ ಶ್ರಿಯಾ ಸಾರ್ಧಂಜಗತ್ಪತಿಃ
ಆಸ್ತೇ ವಿಷ್ಣು ರಚಿಂತ್ಯಾತ್ಮಾ ಭಕ್ತೈರ್ಭಾಗವತೈಸ್ಸಹ

ಇತ್ಯಾದಿ ನಾರಾಯಣ ಪರತ್ವ ವಾಕ್ಯಗಳೂ. ಮತ್ತು ಅದೇ ಲೈಂಗಪುರಾಣದಿಂದ

1. ರಾಕ್ಷಾಕ್ಷರಾಣಿ ಶೃಣ ನ್ನೈ ತಥಾ ಭಾಗವತೇರಿತಾನ್
ಪ್ರಣಾಮ ಪೂರ್ವ ಕಂಕ್ಷಾಂತ್ಯಾಯೋವದೇತ್ ವೈಷ್ಣವೋಹಿಸಃ

2. ಸ್ನೇಹಪೂರ್ವಮನುಧ್ಯಾನಂ ಭಕ್ತಿರಿತ್ಯಭಿಧೀಯತೇ

ಇತ್ಯಾದಿ ವಾಕ್ಯಗಳು ಶ್ರೀ ವೈಷ್ಣವ ಸಂಪ್ರದಾಯ ಗ್ರಂಥಗಳಲ್ಲಿ ಪ್ರಮಾಣಗಳಾಗಿ ಉದಾಹರಿಸಲ್ಪಟ್ಟಿವೆ.

## ೪೨. ಆಧುನಿಕ ರೀತಿಯಲ್ಲಿ ಪುರಾಣಗಳ ವಿಭಾಗ

ಆಧುನಿಕ ರೀತಿಯಲ್ಲಿ ವೆಂಕಟೇಶ ದೀಕ್ಷಿತರು. ಹರ ಪ್ರಸಾದ ಶಾಸ್ತ್ರಿ ಮೊದಲಾದವರು ಈ ವಿಷಯದಲ್ಲಿ ವಿಮರ್ಶನಡೆಯಿಸಿ ವಿಷಯಾನುಸಾರವಾಗಿ ಪುರಾಣಗಳನ್ನು ವಿಭಾಗ ಮಾಡಿರುತ್ತಾರೆ. ಹರಪ್ರಸಾದ ಶಾಸ್ತ್ರಿಗಳ ವಿಭಾಗವು ವೈರುಷ್ಯಭೂಷಿತವಾಗಿದೆ. ಅವರು ಹೇಳಿರುವಂತೆ

1. ಗರುಡ. ಅಗ್ನಿ. ನಾರದ ಈ ಮೂರು ಪುರಾಣಗಳು ಪುರಾಣ ಕಥೆಯೊಡನೆ ಕಲೆ. ವಿಜ್ಞಾನ. ವೈದ್ಯ. ವ್ಯಾಕರಣ. ನಾಟಕ. ಗೀತೆ. ಜ್ಯೋತಿಷ್ಯ -ಇವುಗಳನ್ನು ಒಳಗೊಂಡಿದೆ.
2. ಪದ್ಮ -ಸ್ಕಾಂದ -ಭವಿಷ್ಯ ಪುರಾಣಗಳ ಕಥೆಯೊಡನೆ ತೀರ್ಥ ವ್ರತಾದಿಗಳನ್ನು ತಿಳಿಸುತ್ತವೆ.

3. ಬ್ರಹ್ಮ -ಭಾಗವತ -ಬ್ರಾಹ್ಮವೈವರ್ತ ಇವು ಕಥೆಯೊಡನೆ ಅನೇಕ ವಿಷಯಗಳನ್ನು ಒಳಗೊಂಡಿವೆ. ಇವುಗಳಲ್ಲಿ ಮಧ್ಯಭಾಗವೇ ಮೂಲ ಗ್ರಂಥ. ಅದರ ಹಿಂದು ಮುಂದು ಹೊಸಭಾಗಗಳು ಸೇರಿಸಲ್ಪಟ್ಟಿವೆ.

4. ಬ್ರಹ್ಮಾಂಡ. ವಾಯು (ಇದುನಷ್ಟವಾದ ಪುರಾಣ. ಈಗಿರುವುದು ಬ್ರಹ್ಮಾಂಡಕ್ಕೆ ಸೇರಿದೆ.)-ಇವೆರಡೂ ಚಾರಿತ್ರಿಕ ದೃಷ್ಟಿಯಿಂದ ಉಪಯುಕ್ತವಾಗಿದೆ.

5. ಲಿಂಗ. ವಾಮನ. ಮಾರ್ಕಂಡೇಯ -ಇವು ಲಿಂಗಪೂಜೆ. ದೇವಿ ಮಾಹಾತ್ಮ್ಯೆ ಮೊದಲಾದ ವಿಷಯಗಳನ್ನು ಒಳಗೊಂಡಿದೆ. ಇವು ಶಿವಪರವಾದ ಪುರಾಣಗಳು.

6. ವರಾಹ -ಕೂರ್ಮ-ಮತ್ಸ್ಯ ಇವು ವಿಷ್ಣು ಪರ ಪುರಾಣಗಳು.

# III ಕಾವ್ಯ ಸಾಹಿತ್ಯ

## ೪೩. ಕಾವ್ಯಲಕ್ಷಣ

ಕವಿ ಎಂದರೆ ವಸ್ತುವಿನ ಮೂಲವನ್ನು ನೋಡಲು ಸಮರ್ಥವಾದವನು. ಕಂ=ಸೃಷ್ಟಿಕರ್ತಾರಂ (ಕ ಇತಿ ಬ್ರಹ್ಮಣೋನಾಮ) ವಿದಂತಿ =ಕವಿಃ. ಅಂದರೆ ಕ್ರಾಂತಿದರ್ಶಿ ಎಂದು ಸಾಮಾನ್ಯವಾಗಿ ವೇದಾಂತದಲ್ಲಿ ಅರ್ಥ ಬಿದ್ದಿದೆ. ಅಂತಹ ಕವಿಯ ಕೃತಿ ಮತ್ತು ಕರ್ಮ. ಕಾವ್ಯ -ಕವೇಃ ಕರ್ಮ ಕಾವ್ಯಂ. ಕವಿಶಬ್ದಾತ್ ಕರ್ಮಣಿ "ಷ್ಯಞ್" ಇದರ ಆಧಾರದ ಮೇಲೆ ಅಲಂಕಾರಿಕರು ಅದರ ಲಕ್ಷಣವನ್ನು ತಮ್ಮ ದೃಷ್ಟಿಗೆ ಅನುಗುಣವಾಗಿ ಕೊಟ್ಟಿರುವರು.

ವಾಮನ-ಗುಣಾಲಂಕಾರ ಯುಕ್ತೌ ಶಬ್ದಾರ್ಥೌ ಕಾವ್ಯಂ
ಭೋಜ -ನಿರ್ದೋಷ ಗುಣಾಲಂಕಾರ ರಸವದ್ವಾಕ್ಯಂ
ವಾಗ್ಭಟ - ಗುಣಾಲಂಕಾರ ರೀತಿ ರಸೋಪೇತಃ ಸಂದರ್ಭಂ ಕಾವ್ಯಂ
ಪಂಡಿತರಾಜ- ರಮಣೀಯಾರ್ಥ ಪ್ರತಿ ಪಾದ ಕಶ್ಶಬ್ದಃ
ಮಹಿಮಭಟ್ಟ - ಧ್ವ ನ್ಯಾತ್ಮಕಂ ವಾಕ್ಯಂಕಾವ್ಯಂ
ವಿಶ್ವನಾಥ _ ವಾಕ್ಯಂ ರಸಾತ್ಮಕಂ ಕಾವ್ಯಂ

ಈ ಕಾವ್ಯವು ಮಹಾಕಾವ್ಯ. ಖಂಡಕಾವ್ಯ. ಗೀತಿಕಾವ್ಯವೆಂದು ಮೂರು ವಿಧ. ಸಾಮಾನ್ಯವಾಗಿ ಕಾವ್ಯವನ್ನು ದೃಶ್ಯಕಾವ್ಯ. ಶ್ರವ್ಯ ಕಾವ್ಯವೆಂದು ಎರಡು ವಿಭಾಗ ಮಾಡಿ ಶ್ರವ್ಯ ಕಾವ್ಯವನ್ನೇ ಈ ಮೂರು ವಿಭಾಗಕ್ಕೆ ಒಳಪಡಿಸಿರುವರು. ದೃಶ್ಯಕಾವ್ಯಗಳನ್ನು ಸಾಮಾನ್ಯವಾಗಿ ನಾಟಕಗಳು ಎಂದು ಹೇಳುವುದುಂಟು. ಅದರ ವಿಮರ್ಶೆಯು IV ಭಾಗದಲ್ಲಿ ಬರುತ್ತದೆ.

ಮಹಾಕಾವ್ಯದ ಲಕ್ಷಣವನ್ನು ವಿಶ್ವನಾಥನು ತನ್ನ ಸಾಹಿತ್ಯದರ್ಪಣದಲ್ಲಿ ಹತ್ತು ಶ್ಲೋಕಗಳಲ್ಲಿ ಕೊಟ್ಟಿರುವನು. ಅವುಗಳಲ್ಲಿ

ಸರ್ಗಬಂಧೋಮಹಾಕಾವ್ಯಂ ತತ್ರೈಕೋನಾಯಕಸ್ಸುರಃ
ಸದ್ವಂಶಃ ಕ್ಷತ್ರಿಯೋ ವಾಪಿ ಧೀರೋದಾತ್ತ ಗುಣಾನ್ವಿತಃ
ಶೃಂಗಾರ ವೀರ ಶಾಂತಾನಾಮೇಕೋಂಗೀರಸ ಇಷ್ಯತೇ
ಇತಿಹಾಸೋದ್ಭವಂ ವೃತ್ತಮನ್ಯದ್ವಾ ಸಜ್ಜನಾಶ್ರಯಂ
ಆದೌನಮಸ್ಕ್ರಿಯಾಶೀರ್ವಾ ವಸ್ತು ನಿರ್ದೇಶ ಏವವಾ
ನಾತಿಸ್ವಲ್ಪಾ ನಾತಿ ದೀರ್ಘಾ ಸರ್ಗಾ ಅಷ್ಟಾಧಿಕಾ ಇಹ
ನಾನಾವೃತ್ತಮಯಃ ಕ್ವಾಪಿಸರ್ಗಃ ಕಶ್ಚನ ವಿದ್ಯತೀ
ಸಂಧ್ಯಾಸೂರ್ಯೇಂದು ರಜನೀ ಪ್ರದೋಷ ಧ್ವಾಂತ ವಾಸರಾಃ

ಪ್ರಾತರ್ಮಧ್ಯಾಹ್ನ ಮೃಗಯಾ ಶೈಲರ್ತುವನವಾಸರಾಃ
ಸಂಧೋಗ ವಿಪ್ರಲಂಭೌ ಚ ಮುನಿಸ್ವರ್ಗಪುರಾಧ್ವತಾ

ಈ ಐದು ಶ್ಲೋಕಗಳು ಮಹಾ ಕಾವ್ಯ ಲಕ್ಷಣವನ್ನು ವರ್ಣಿಸಿವೆ. ದಂಡಿಯು ತನ್ನ ಕಾವ್ಯಾದರ್ಶನದಲ್ಲಿ ಇದೇ ಲಕ್ಷಣವನ್ನು ಬೇರೆ ಕ್ರಮದಲ್ಲಿ ಕೊಟ್ಟಿರುವನು. ಮಹಾ ಕಾವ್ಯವಲ್ಲದ್ದು ಲಘುಕಾವ್ಯ. ಅದೇ ಖಂಡಕಾವ್ಯ ಮತ್ತು ಗೀತಿ ಕಾವ್ಯವೆಂದು ಎರಡು ವಿಭಾಗವಾಗಿದೆ. ಈ ಲಘು ಕಾವ್ಯದಲ್ಲಿ ಆರು ಪ್ರಭೇದಗಳಿವೆ

1. ವಕ್ರೋಕ್ತಿ ಕಾವ್ಯ - ಅಂದರೆ ಚಿತ್ರಕಾವ್ಯ, ದ್ವ್ಯಾದಿ ಸಂಧಾನ ಇತ್ಯಾದಿ

2. ನೀತಿಕಾವ್ಯ

3. ಸ್ತೋತ್ರ ಕಾವ್ಯ

4. ಸಂದೇಶ ಕಾವ್ಯ

5. ಚಾರಿತ್ರಿಕ ಕಾವ್ಯ

ಇಂತಹ ಕಾವ್ಯಗಳ ಪ್ರಯೋಜನವನ್ನು ಹೇಳುವಾಗ

ಮಾಮಟ - ಕಾವ್ಯಂಯಶಸೇರ್ಥಕೃತೇ, ವ್ಯವಹಾರ ವಿದೇಶಿ ವೇದರಕ್ಷಯೇ
ಸದ್ಯಃಪರ (ಫಲ) ನಿರ್ವೃತಯೋ ಕಾಂತಾಸಮ್ಮಿತ ತಯೋಪದೇಶ ಯಜೇ

ವಿಶ್ವನಾಥ: ಚತುರ್ವರ್ಗಫಲಪ್ರಾಪ್ತಿಃ ಸುಖಮಲ್ಪಧಿಯಾಮಪಿ
ಕಾವ್ಯಾದೇವಯತಸ್ತೇನ ತತ್ಸ್ವರೂಪಂನಿರೂಪ್ಯತೇ

ಭಾಮಹ: ಧರ್ಮಾರ್ಥ ಕಾಮಮೋಕ್ಷೇಷು ವೈಚಕ್ಷಣ್ಯಂ ಕಲಾಸುಚ
ಕರೋತಿ ಕೀರ್ತಿಂ ಪ್ರೀತಿಂ ಚ ಸಾಧುಕಾವ್ಯ ನಿಷೇವಣಂ

ಎಂದಿರುವರು.

## ೪೪. ಕಾವ್ಯಮೂಲ

ಮೇಲೆ ಹೇಳಿದ ಕಾವ್ಯಲಕ್ಷಣಗಳನ್ನು ನೋಡಿದರೆ ಇತಿಹಾಸ ಪುರಾಣಕಾಲದಲ್ಲೇ ಇಂತಹ ಸಾಹಿತ್ಯವು ಎದ್ದಿತೆಂದು S. K. ದೇ ಅವರು ಅಭಿಪ್ರಾಯಪಟ್ಟಿರುವರು. ಆದರೆ ಎ. ಬಿ.

ಮ್ಯಾಕ್‌ಡೊನೆಲ್‌ರವರ ಅಭಿಪ್ರಾಯದಲ್ಲಿ ಕಾವ್ಯದ ಮೂಲವನ್ನು ಋಗ್ವೇದದಲ್ಲೇ ನೋಡಬಹುದು. ಋಗ್ವೇದ ಮಂತ್ರಗಳಿಗೆ ಯಾವ ವೇದಾಂತ ದೃಷ್ಟಿ ಮತ್ತು ಅನುಷ್ಠಾನವು ಕಾರಣವಾಗಿರುವುವೋ ಅದೇ ಕಾವ್ಯಕ್ಕೂ ಮೂಲ. ಸಾಮಾನ್ಯವಾಗಿ ಪ್ರಾಚೀನ ಕಾಲದ ಕಾವ್ಯ ಲಕ್ಷಣಕ್ಕೆ ಸರಿಹೋಗುವ ಸಾಹಿತ್ಯವು ಸಂಸ್ಕೃತ ಭಾಷೆಯಲ್ಲೇ ಇವೆ. ಪಾಶ್ಚಾತ್ಯರ ಮತ್ತು ಅವರ ಕಲಾಭಿಮಾನಿಗಳ ಅಭಿಪ್ರಾಯದಲ್ಲಿ ಪಾಣಿನಿಯ ವ್ಯಾಕರಣ ಸೂತ್ರ ಕಾಲದ ನಂತರ ವೇದ ಭಾಷೆಯು ಸಂಸ್ಕೃತವಾಯಿತು ಎಂದು ಕೆಲವರು ಪಡುವ ಅಭಿಪ್ರಾಯವು ಸಮಂಜಸವಾಗಿಲ್ಲ. ಪಾಶ್ಚಾತ್ಯರು ಸಂಸ್ಕೃತವು ಬ್ರಾಹ್ಮಣಭಾಷೆ ಎಂದಿರುವುದು ಗ್ರಾಹ್ಯವಲ್ಲ. ಇದು ಕೇವಲ ರಾಜಕೀಯ ಪ್ರಚಾರ. ಕ್ರಿ. ಪೂ. 150ರಲ್ಲಿದ್ದ ವ್ಯಾಕರಣ ಮಹಾ ಭಾಷ್ಯ ಬರೆದ ಪತಂಜಲಿಯು ಭಾಷ್ಯದಲ್ಲಿ ಹೇಳಿರುವಂತೆ ಪ್ರಾಚೀನ ಕಾಲದಲ್ಲಿ ಜ್ಞಾನಿಗಳು ತಮ್ಮ ಮಾತನಾಡುವ ಭಾಷೆಯಲ್ಲಿ ತಪ್ಪುಗಳನ್ನು ಕಂಡು ಸರಸ್ವತಿಯ ಅನುಗ್ರಹದಿಂದ ಸರಿಪಡಿಸಿಕೊಳ್ಳುತ್ತಿದ್ದರು. ಇದು ಒಂದು ಕಲ್ಪಿತ ಭಾಷೆಯಲ್ಲ. ಮಾತನಾಡುವ ಭಾಷೆ ಇದು. ಇದಕ್ಕೆ ಅನೇಕ ಕಾರಣಗಳನ್ನು ತೋರಿಸಬಹುದು.

1 ದೂರದಲ್ಲಿರುವವನನ್ನು ಕರೆಯಲು ಪ್ಲುತಸಂಜ್ಞೆ ಇದೆ.

2 ಸ್ವರಗಳಿವೆ . ಅಂದರೆ ಉದಾತ್ತಾ, ಅನುದತ್ತಾ ಮತ್ತು ಸ್ವರಿತ

3 ಪತಂಜಲಿಯು ಲೌಕಿಕ ಭಾಷೆಯ ಪ್ರಸ್ತಾಪ ಮಾಡಿರುವರು ಮತ್ತು ಪಾಣಿನಿಯ ಕಾಲದಿಂದ ತನ್ನ ಕಾಲದವರಿಗೂ ಭಾಷೆಯು ವ್ಯತ್ಯಾಸ ಹೊಂದಿರುವುದನ್ನು ತಿಳಿಸಿರುವರು ಮತ್ತು ಇದನ್ನು ಶಿಷ್ಟ ಭಾಷೆಗಿಂತಲೂ ಬೇರೆ ಎಂದು ಹೇಳಿರುವರು.

4 ನಾಟಕಗಳಲ್ಲಿ ಉತ್ತಮ ಪಾತ್ರಗಳು ಸಂಸ್ಕೃತದಲ್ಲಿ, ನೀಚಪಾತ್ರಗಳು, ಅಶಿಕ್ಷಿತರು ಮತ್ತು ಸ್ತ್ರೀಯರು ಪ್ರಾಕೃತದಲ್ಲೂ ವ್ಯವಹರಿಸುವಂತೆ ಬರೆಯಲ್ಪಟ್ಟಿವೆ.

5 ಭರತನ ನಾಟ್ಯಶಾಸ್ತ್ರದಲ್ಲಿ ಎಲ್ಲರಿಗೂ ಅರ್ಥವಾಗುವ ಭಾಷಾಶೈಲಿ ಇರಬೇಕೆನ್ನುವ ನಿಯಮವೂ ಇದೆ.

6. ಕ್ರಿ. ಶ. 1ನೇ ಶತಮಾನದ ಅಶ್ವಘೋಷನು ತನ್ನ ಸಂಸ್ಕೃತ ಕಾವ್ಯಾದಿಗಳನ್ನು ಸಂಸ್ಕೃತದಲ್ಲೇ ಬರೆಯಲು ಸಮಸ್ತ ಜನರಿಗೂ ತನ್ನ ಮತ ಪ್ರಕ್ರಿಯ ಮೊದಲಾದವುಗಳು ತಿಳಿಯಲಿ ಎನ್ನುವ ಉದ್ದೇಶವೇ ಕಾರಣವಾದಂತಿದೆ.

7 ರಾಮಾಯಣ ಮತ್ತು ಮಹಾಭಾರತವನ್ನು ಸಾಮಾನ್ಯ ಜನರಿಗೂ ತಿಳಿಯುವಂತೆ ಕುಶೀಲವರು ಹಾಡುತ್ತಿದ್ದರೆಂದು ಹೇಳಲಾಗಿದೆ.

8. ವೈದ್ಯ ಗ್ರಂಥವಾದ ಚರಕದಲ್ಲಿ ವೈದ್ಯಕೀಯ ಪ್ರವಚನವು ಸಂಸ್ಕೃತದಲ್ಲಿ ನಡೆಯುತ್ತಿತ್ತೆಂದು ಹೇಳಿದೆ.

ಪ್ರಾತರ್ಮಧ್ಯಾಹ್ನ ಮೃಗಯಾ ಶೈಲರ್ತುವನವಾಸರಾಃ
ಸಂಭೋಗ ವಿಪ್ರಲಂಭೌ ಚ ಮುನಿಸ್ವರ್ಗಪುರಾಧ್ವರಾ

ಈ ಐದು ಶ್ಲೋಕಗಳು ಮಹಾ ಕಾವ್ಯ ಲಕ್ಷಣವನ್ನು ವರ್ಣಿಸಿವೆ. ದಂಡಿಯು ತನ್ನ ಕಾವ್ಯಾದರ್ಶನದಲ್ಲಿ ಇದೇ ಲಕ್ಷಣವನ್ನು ಬೇರೆ ಕ್ರಮದಲ್ಲಿ ಕೊಟ್ಟಿರುವನು. ಮಹಾ ಕಾವ್ಯವಲ್ಲದ್ದು ಲಘುಕಾವ್ಯ. ಅದೇ ಖಂಡಕಾವ್ಯ ಮತ್ತು ಗೀತಿ ಕಾವ್ಯವೆಂದು ಎರಡು ವಿಭಾಗವಾಗಿದೆ. ಈ ಲಘು ಕಾವ್ಯದಲ್ಲಿ ಆರು ಪ್ರಭೇದಗಳಿವೆ

1. ವಕ್ರೋಕ್ತಿ ಕಾವ್ಯ - ಅಂದರೆ ಚಿತ್ರಕಾವ್ಯ, ದ್ವ್ಯಾದಿ ಸಂಧಾನ ಇತ್ಯಾದಿ
2. ನೀತಿಕಾವ್ಯ
3. ಸ್ತೋತ್ರ ಕಾವ್ಯ
4. ಸಂದೇಶ ಕಾವ್ಯ
5. ಚಾರಿತ್ರಿಕ ಕಾವ್ಯ

ಇಂತಹ ಕಾವ್ಯಗಳ ಪ್ರಯೋಜನವನ್ನು ಹೇಳುವಾಗ

ಮಮ್ಮಟ - ಕಾವ್ಯಂಯಶಸೇರ್ಥಕೃತೇ, ವ್ಯವಹಾರ ವಿದೇಶಿ ವೇದರಕ್ಷಯೇ
ಸದ್ಯಃಪರ (ಫಲ) ನಿರ್ವೃತಯೋ ಕಾಂತಾಸಮ್ಮಿತ ತಯೋಪದೇಶ ಯಜೇ

ವಿಶ್ವನಾಥ: ಚತುರ್ವರ್ಗಫಲಪ್ರಾಪ್ತಿಃ ಸುಖಮಲ್ಪಧಿಯಾಮಪಿ
ಕಾವ್ಯಾದೇವಯತಸ್ತೇನ ತತ್ಸ್ವರೂಪಂನಿರೂಪ್ಯತೇ

ಭಾಮಹ: ಧರ್ಮಾರ್ಥ ಕಾಮಮೋಕ್ಷೇಷು ವೈಚಕ್ಷಣ್ಯಂ ಕಲಾಸುಚ
ಕರೋತಿ ಕೀರ್ತಿಂ ಪ್ರೀತಿಂ ಚ ಸಾಧುಕಾವ್ಯ ನಿಷೇವಣಂ

ಎಂದಿರುವರು.

## ೪೪. ಕಾವ್ಯಮೂಲ

ಮೇಲೆ ಹೇಳಿದ ಕಾವ್ಯಲಕ್ಷಣಗಳನ್ನು ನೋಡಿದರೆ ಇತಿಹಾಸ ಪುರಾಣಕಾಲದಲ್ಲೇ ಇಂತಹ ಸಾಹಿತ್ಯವು ಎದ್ದಿತೆಂದು S. K. ದೇ ಅವರು ಅಭಿಪ್ರಾಯಪಟ್ಟಿರುವರು. ಆದರೆ ಎ . ಬಿ.

ಮ್ಯಾಕ್‌ಡೊನೆಲ್‌ರವರ ಅಭಿಪ್ರಾಯದಲ್ಲಿ ಕಾವ್ಯದ ಮೂಲವನ್ನು ಋಗ್ವೇದದಲ್ಲೇ ನೋಡಬಹುದು. ಋಗ್ವೇದ ಮಂತ್ರಗಳಿಗೆ ಯಾವ ವೇದಾಂತ ದೃಷ್ಟಿ ಮತ್ತು ಅನುಷ್ಠಾನವು ಕಾರಣವಾಗಿರುವುವೋ ಅದೇ ಕಾವ್ಯಕ್ಕೂ ಮೂಲ. ಸಾಮಾನ್ಯವಾಗಿ ಪ್ರಾಚೀನ ಕಾಲದ ಕಾವ್ಯ ಲಕ್ಷಣಕ್ಕೆ ಸರಿಹೋಗುವ ಸಾಹಿತ್ಯವು ಸಂಸ್ಕೃತ ಭಾಷೆಯಲ್ಲೇ ಇವೆ. ಪಾಶ್ಚಾತ್ಯರ ಮತ್ತು ಅವರ ಕಲಾಭಿಮಾನಿಗಳ ಅಭಿಪ್ರಾಯದಲ್ಲಿ ಪಾಣಿನಿಯ ವ್ಯಾಕರಣ ಸೂತ್ರ ಕಾಲದ ನಂತರ ವೇದ ಭಾಷೆಯು ಸಂಸ್ಕೃತವಾಯಿತು ಎಂದು ಕೆಲವರು ಪಡುವ ಅಭಿಪ್ರಾಯವು ಸಮಂಜಸವಾಗಿಲ್ಲ. ಪಾಶ್ಚಾತ್ಯರು ಸಂಸ್ಕೃತವು ಬ್ರಾಹ್ಮಣಭಾಷೆ ಎಂದಿರುವುದು ಗ್ರಾಹ್ಯವಲ್ಲ. ಇದು ಕೇವಲ ರಾಜಕೀಯ ಪ್ರಚಾರ. ಕ್ರಿ. ಪೂ. 150ರಲ್ಲಿದ್ದ ವ್ಯಾಕರಣ ಮಹಾ ಭಾಷ್ಯ ಬರೆದ ಪತಂಜಲಿಯು ಭಾಷ್ಯದಲ್ಲಿ ಹೇಳಿರುವಂತೆ ಪ್ರಾಚೀನ ಕಾಲದಲ್ಲಿ ಜ್ಞಾನಿಗಳು ತಮ್ಮ ಮಾತನಾಡುವ ಭಾಷೆಯಲ್ಲಿ ತಪ್ಪುಗಳನ್ನು ಕಂಡು ಸರಸ್ವತಿಯ ಅನುಗ್ರಹದಿಂದ ಸರಿಪಡಿಸಿಕೊಳ್ಳುತ್ತಿದ್ದರು. ಇದು ಒಂದು ಕಲ್ಪಿತ ಭಾಷೆಯಲ್ಲ. ಮಾತನಾಡುವ ಭಾಷೆ ಇದು. ಇದಕ್ಕೆ ಅನೇಕ ಕಾರಣಗಳನ್ನು ತೋರಿಸಬಹುದು.

1 ದೂರದಲ್ಲಿರುವವನನ್ನು ಕರೆಯಲು ಪ್ಲುತಸಂಜ್ಞೆ ಇದೆ.

2 ಸ್ವರಗಳಿವೆ . ಅಂದರೆ ಉದಾತ್ತಾ, ಅನುದತ್ತಾ ಮತ್ತು ಸ್ವರಿತ

3 ಪತಂಜಲಿಯು ಲೌಕಿಕ ಭಾಷೆಯ ಪ್ರಸ್ತಾಪ ಮಾಡಿರುವರು ಮತ್ತು ಪಾಣಿನಿಯ ಕಾಲದಿಂದ ತನ್ನ ಕಾಲದವರಿಗೂ ಭಾಷೆಯು ವ್ಯತ್ಯಾಸ ಹೊಂದಿರುವುದನ್ನು ತಿಳಿಸಿರುವರು ಮತ್ತು ಇದನ್ನು ಶಿಷ್ಟ ಭಾಷೆಗಿಂತಲೂ ಬೇರೆ ಎಂದು ಹೇಳಿರುವರು.

4 ನಾಟಕಗಳಲ್ಲಿ ಉತ್ತಮ ಪಾತ್ರಗಳು ಸಂಸ್ಕೃತದಲ್ಲಿ, ನೀಚಪಾತ್ರಗಳು, ಅಶಿಕ್ಷಿತರು ಮತ್ತು ಸ್ತ್ರೀಯರು ಪ್ರಾಕೃತದಲ್ಲೂ ವ್ಯವಹರಿಸುವಂತೆ ಬರೆಯಲ್ಪಟ್ಟಿವೆ.

5 ಭರತನ ನಾಟ್ಯಶಾಸ್ತ್ರದಲ್ಲಿ ಎಲ್ಲರಿಗೂ ಅರ್ಥವಾಗುವ ಭಾಷಾಶೈಲಿ ಇರಬೇಕೆನ್ನುವ ನಿಯಮವೂ ಇದೆ.

6 ಕ್ರಿ. ಶ. 1ನೇ ಶತಮಾನದ ಅಶ್ವಘೋಷನು ತನ್ನ ಸಂಸ್ಕೃತ ಕಾವ್ಯಾದಿಗಳನ್ನು ಸಂಸ್ಕೃತದಲ್ಲೇ ಬರೆಯಲು ಸಮಸ್ತ ಜನರಿಗೂ ತನ್ನ ಮತ ಪ್ರಕ್ರಿಯ ಮೊದಲಾದವುಗಳು ತಿಳಿಯಲಿ ಎನ್ನುವ ಉದ್ದೇಶವೇ ಕಾರಣವಾದಂತಿದೆ.

7 ರಾಮಾಯಣ ಮತ್ತು ಮಹಾಭಾರತವನ್ನು ಸಾಮಾನ್ಯ ಜನರಿಗೂ ತಿಳಿಯುವಂತೆ ಕುಶೀಲವರು ಹಾಡುತ್ತಿದ್ದರೆಂದು ಹೇಳಲಾಗಿದೆ.

8 ವೈದ್ಯ ಗ್ರಂಥವಾದ ಚರಕದಲ್ಲಿ ವೈದ್ಯಕೀಯ ಪ್ರವಚನವು ಸಂಸ್ಕೃತದಲ್ಲಿ ನಡೆಯುತ್ತಿತ್ತೆಂದು ಹೇಳಿದೆ.

9. ವಾತ್ಸ್ಯಾಯನ ಕಾಮಶಾಸ್ತ್ರದಲ್ಲಿ ಸಾಮಾಜಿಕರು ಸಂಸ್ಕೃತ ಮತ್ತು ಪ್ರಾಕೃತ ಇವೆರಡನ್ನೂ ಉಪಯೋಗಿಸುತ್ತಿದ್ದರೆಂದು ಹೇಳಿದೆ.

10. ಹುಯನ್‌ತ್ಸಾಂಗ್ ಯಾತ್ರಿಕನು ಬೌದ್ಧರು ತಮ್ಮ ವಾದದಲ್ಲಿ ಸಂಸ್ಕೃತವನ್ನೇ ಹೇಳುತ್ತಿದ್ದರೆಂದು ತಿಳಿಸಿರುವನು.

11. ಕ್ರಿ. ಶ. 906 ರಲ್ಲಿದ್ದ ಸಿದ್ಧರ್ಷಿಯು ತನ್ನ "ಉಪಮಿತಿಭಾವ ಪ್ರಪಂಚ ಕಥಾ "ಎನ್ನುವ ಗ್ರಂಥದಲ್ಲಿ "ಸಂಸ್ಕೃತ ಸಾಮಾಜಿಕರಿಗೆ ಸಂಸ್ಕೃತವೇ ಪ್ರಿಯವಾಗಿದ್ದುದರಿಂದ ತಾನು ಅದನ್ನೇ ಸುಲಭ ರೀತಿಯಲ್ಲಿ ಬರೆದಿರುವೆನು" ಎಂದಿರುವನು.

12. ಕ್ರಿ .ಶ. 7ನೇ ಶತಮಾನದ ಭಾಮಹನು ತನ್ನ ಭಾಷೆಯು ಮಕ್ಕಳಿಗೂ ಹೆಂಗಸರಿಗೂ ತಿಳಿಯುವಂತಿದೆ ಎಂದು ಹೇಳಿಕೊಂಡಿರುವನು.

13. ಕ್ರಿ. ಶ. 1060ರಲ್ಲಿದ್ದ ಕಾಶ್ಮೀರದ ಬಿಲ್ಹಣನು ತನ್ನ ದೇಶದಲ್ಲಿ ಪ್ರಾಕೃತವು ಜನ್ಮ ಭಾಷೆಯಾಗಿದ್ದರೂ. ಸಂಸ್ಕೃತವನ್ನು ಚೆನ್ನಾಗಿ ತಿಳಿದುಕೊಂಡು ವ್ಯವವಹರಿಸುವಷ್ಟು ಪ್ರಧಾನವಾಗಿತ್ತೆಂದು ಹೇಳಿರುವನು.

14. ಪಂಚತಂತ್ರವನ್ನು ಬರೆದಿರುವುದೇ ರಾಜನ ಮಕ್ಕಳಿಗಾಗಿ ಎಂದ ಮೇಲೆ ಸಂಸ್ಕೃತವು ವ್ಯವಹಾರ ಭಾಷೆಯಾಗಿತ್ತೆಂದು ಹೇಳಲೇಬೇಕಾಗುತ್ತದೆ.

15. ಬುದ್ಧನ ಕಾಲಕ್ಕೆ ಹಿಂದೆ ಎಲ್ಲರಿಗೂ ಸಂಸ್ಕೃತವೇ ಅಭಿಮಾನ ಭಾಷೆ ಮತ್ತು ದೇಶ ಭಾಷೆಯಾಗಿತ್ತೆಂದು ನಿಸ್ಸಂಶಯವಾಗಿ ಹೇಳಬಹುದು. ಹಿಂದೂ ಸಂಸ್ಕೃತಿಯೇ ಈ ಭಾಷೆಯಲ್ಲಿದ್ದುದರಿಂದ. ಬುದ್ಧನ ಕಾಲದಿಂದ ಮೇಲೆ ಸಂಸ್ಕೃತವನ್ನು ಅಷ್ಟಾಗಿ ಗೌರವಿಸದೇ ದೇಶ ಭಾಷೆಯಾದ ಪಾಳಿ ಮತ್ತು ಪ್ರಾಕೃತ ಭಾಷೆಗಳನ್ನು ಪುರಸ್ಕರಿಸುವ ಪ್ರಸಂಗವೆದ್ದಿತು. ಅಶೋಕನು ತನ್ನ ಶಾಸನಗಳನ್ನೆಲ್ಲಾ ಪ್ರಾಕೃತದಲ್ಲೇ ಬರೆಸಿರುವನು. ಆದರೂ ಗುಪ್ತರ ಕಾಲಕ್ಕೆ ಈ ಸಂಸ್ಕೃತಕ್ಕೆ ಮತ್ತೆ ಉತ್ತೇಜನ ಸಿಕ್ಕಿ ನಾನಾ ಮುಖದಲ್ಲಿ ಬೆಳೆಯಲು ಅವಕಾಶವನ್ನು ಹೊಂದಿತು.

16. ಹೀಗೆ ಸಂಸ್ಕೃತಕ್ಕೂ ಪ್ರಾಕೃತಕ್ಕೂ ವೈಮನಸ್ಯ ಬಂದ ಮೇಲೆ ಸಂಸ್ಕೃತವು ಶಿಷ್ಟಭಾಷೆಯಾಗಿ ನಿಲ್ಲುವಂತಾಯಿತು. ವಿಂಧ್ಯ ಹಿಮಾಚಲ ಪ್ರದೇಶದಲ್ಲಿ ಅಂದರೆ ಆರ್ಯಾವರ್ತದಲ್ಲಿ ಶಿಷ್ಟಭಾಷೆ ಇತ್ತು. ಆದರೂ ದಕ್ಷಿಣದೇಶದಲ್ಲಿ ಸಂಸ್ಕೃತವು ವಿಪುಲ ಪ್ರಾಶಸ್ತ್ಯ ಮತ್ತು ಸ್ಥಾನವನ್ನು ಗಳಿಸಿತ್ತು. ಕ್ರಿ.ಪೂ. 3ನೇಶತಮಾನದವನಾದ ಕಾತ್ಯಾಯನನು ದಕ್ಷಿಣ ದೇಶದವನು ಯಾಸ್ಕರು ಮತ್ತು ಪತಂಜಲಿಗಳು ದಾಕ್ಷಿಣಾತ್ಯರು ಪ್ರಯೋಗಿಸುತ್ತಿದ್ದ ವಿಶೇಷ ಶಬ್ದಗಳನ್ನು ತಿಳಿಸಿರುವರು.

ಒಟ್ಟಿನಲ್ಲಿ ಹೇಳುವುದಾದರೆ ಸಂಸ್ಕೃವು ದೇಶ ಭಾಷೆಯಾಗಿ, ನಂತರ ಶಿಷ್ಟಭಾಷೆಯಾಗಿ ಉಳಿದು, ವೇದಾಂತ ಮತ್ತು ಧರ್ಮಶಾಸ್ತ್ರಾದಿ ಗ್ರಂಥಗಳಿಗೆ ಅತ್ಯವಶ್ಯಕವಾದ ಭಾಷೆಯಾಗಿ ಪರಿಗಣಿಸಲ್ಪಟ್ಟಿತು. ವೇದಾಂತ ದೃಷ್ಟಿ ಮತ್ತು ಅನುಷ್ಠಾನ -ಇವೇ ಪ್ರಧಾನವಾದ ದೇಶದಲ್ಲಿ ಕಾವ್ಯಗಳು ಪ್ರಧಾನವಾಗಿ ಸಂಸ್ಕೃತದಲ್ಲೇ ಬರೆಯಲ್ಪಡುವಂತಾಯಿತು. ಇಂತಹ ಕಾಲದಲ್ಲಿ ಕ್ರಿ.ಶ. 1 ನೇ ಶತಮಾನದಲ್ಲಿ ಹಾಲಶಾತುವಾಹನನು ಗಾಥಾಸಪ್ತಶತೀ ಎನ್ನುವ ಕಾವ್ಯವನ್ನು ಉತ್ತಮರೀತಿಯಲ್ಲಿ ಪ್ರಾಕೃತದಲ್ಲೇ ಬರೆದಿರುವನು. ಇದನ್ನು ಬಾಣನೂ ಮತ್ತು ಆನಂದವರ್ಧನನೂ ಅಭಿಮಾನದಿಂದ ಕಂಡಿರುವರು.

## ಏಳಿಗೆ

ವೇದಸಂರಕ್ಷಣಕ್ಕಾಗಿ ಋಷಿಗಳು ಆಶ್ರಯಿಸಿದ ಸಾಧನಗಳೇ ಗೀರ್ವಾಣ ಭಾಷೆಯ ಏಳಿಗೆಗೂ ಸಹಾಯವಾದವು. ಮುಖ್ಯವಾಗಿ ವ್ಯಾಕರಣ ಶಾಸ್ತ್ರವು ಪರಿಷ್ಕರಿಸಲ್ಪಟ್ಟ ಮೇಲೆ ಭಾವನಾದೃಷ್ಟಿ ಪ್ರಧಾನರಾದ ಆರ್ಯರು ವ್ಯಾಕರಣ ವಿನಿಮಯಗಳಿಗೆ ಪೂರ್ಣವಾಗಿ ಒಳಪಟ್ಟಿರಲು ಇಚ್ಛಿಸಲಿಲ್ಲವೆಂದು ಕಾಣುತ್ತದೆ. ತಮ್ಮ ಭಾವನೆಯನ್ನು ಹೊರಸೂಸಲು ಯಾವ ಶಬ್ದವನ್ನಾದರೂ ಸ್ವೀಕರಿಸಲು ಸಿದ್ಧವಾದರು ಎಂದು A.A.ಮ್ಯಾಕ್‌ಡೊನೆಲ್ ಅವರು ಅಭಿಪ್ರಾಯಪಟ್ಟಿರುವರು. ಅವರ ಅಭಿಪ್ರಾಯದಲ್ಲಿ ಈ ಮುಖ್ಯ ಕಾರಣವೇ ಪ್ರಾಕೃತ ಭಾಷೆಯು ಶಿಷ್ಟ ಭಾಷೆಯಿಂದ ಬೇರ್ಪಡಲು ಸಹಾಯವಾಯಿತು. ಶಿಷ್ಟಭಾಷೆಗೆ ಮಿಶ್ರ ಭಾಷೆಗಳಿಂದ ಶಬ್ದ ಸಂಪತ್ತು ಸೇರಿಸಲ್ಪಟ್ಟವು. ಗಣಪಾಠ ಮತ್ತು ಧಾತುಪಾಠದ ಶಬ್ದಗಳು ಸುಲಭ ಮಾಡಲ್ಪಟ್ಟವು. ಗೋಪೇಂದ್ರ ಶಬ್ದವು ಗೋವಿಂದವಾಯಿತು. ಬ್ಲೂಂಸ್‌ಫೀಲ್ಡ್ (Bloomsfield)ಹೇಳಿರುವಂತೆ ಗುಜರಾತಿ ಮತ್ತು ಮರಾಠಿ ಭಾಷೆಗಳಿಂದಲೂ ಹಿಂದಿಯಿಂದಲೂ ಶಬ್ದಗಳು ತೆಗೆದುಕೊಳ್ಳಲ್ಪಟ್ಟವು. ಉತ್ತರ ದೇಶದಲ್ಲಿ ಹೀಗಾದರೆ ದಕ್ಷಿಣದಲ್ಲಿ ದ್ರಾವಿಡ ಭಾಷೆಯಿಂದ ಶಬ್ದಗಳು ಸಂಸ್ಕೃತ ಮಾಡಲ್ಪಟ್ಟವು. ಪಾರ್ಶಿ ಮತ್ತು ಗ್ರೀಕ್ ಭಾಷೆಯು ಸಹಾಯ ನೀಡಿತು. 'ಡಿಪಿ'ಯು 'ಲಿಪಿ'ಯಾಗಿಯೂ "ಸತ್ರಪ "ಶಬ್ದವು "ಕ್ಷತ್ರಪ " ಶಬ್ದವಾಗಿಯೂ 'ಮಿಹಿರ'ಶಬ್ದವು "ಮಿತ್ರ" ಶಬ್ದವಾಗಿಯೂ ಆಯಿತು. ಅರಬ್ಬಿಭಾಷೆ, ತುರ್ಕೀಭಾಷೆ -ಇವುಗಳಿಂದಲೂ ಸ್ವೇಚ್ಛೆಯಾಗಿ ಶಬ್ದಗಳು ತೆಗೆದುಕೊಳ್ಳಲ್ಪಟ್ಟವು ಮತ್ತು ಸಂಸ್ಕೃತವಾಗಿ ಮಾಡಲ್ಪಟ್ಟವು.

ಈ ವಾದವನ್ನು ಪೂರ್ಣವಾಗಿ ಸಮ್ಮತಿಸಲಾಗುವುದಿಲ್ಲ. ಪಾಣಿನಿಯ ಧಾತು ಪಾಠವನ್ನು ನೋಡಿದರೆ ಸಂಸ್ಕೃತವೇ ಬಹಳ ಪುಷ್ಟವಾದ ಭಾಷೆಯೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. 200 ಧಾತುಗಳಿವೆ. ಇವುಗಳಿಗೆ "ಉಪಸರ್ಗಗಳಲ್ಲಿ ಒಂದೊಂದನ್ನು ಸೇರಿಸಿದರೆ 22000 ಶಬ್ದಗಳಾಗುತ್ತದೆ. ಉಪ-ಸಂ-ಹಾರ ಮೊದಲಾದ ಶಬ್ದಗಳಂತೆ ಎರಡೆರಡು ಉಪಸರ್ಗಗಳನ್ನು ಸೇರಿಸಿ ಶಬ್ದ ಪುಷ್ಟಿಯನ್ನು ಸಂಪಾದಿಸಲು ಸಾಧ್ಯವಿದೆ. ಅಂದರೆ 30 ಮತ್ತು 35 ಸಾವಿರ ಶಬ್ದಗಳನ್ನು ಉತ್ಪನ್ನ ಮಾಡಬಹುದು. ಕೆಲವು ಧಾತುಗಳಿಗೆ 2-3 ಅರ್ಥಗಳಿರುತ್ತವೆ. ಉಪಸರ್ಗಗಳ ಸಹಾಯದಿಂದ ಬೇರೆ ಬೇರೆ ಅರ್ಥ ಕೊಡುವ 1-2 ಲಕ್ಷ ಶಬ್ದಗಳನ್ನು ಲೀಲಾಜಾಲವಾಗಿ ಸೃಷ್ಟಿಸಬಹುದು. ಈ ಸಂದರ್ಭದಲ್ಲಿ ಕೆಲವು ಪರಿಭಾಷಾ ಶಬ್ದಗಳು ಸೇರಿ ಸಹಾಯ ಮಾಡಿರಬಹುದು. ಅನ್ಯಭಾಷೆಗಳಿಂದಲೇ ಸಂಸ್ಕೃತವು ಪುಷ್ಟವಾಯಿತೆಂದು ಹೇಳುವುದು ಆ ಭಾಷೆಗೆ ಕೀರ್ತಿಯನ್ನು

ಅಲ್ಲಗಳೆಯುವ ಭಾವವೆಂದು ಹೇಳಬಹುದು. ಇತಿಹಾಸ, ಪುರಾಣ, ವೈದ್ಯ ಗ್ರಂಥಗಳು, ಜ್ಯೋತಿಷ್ಯಗ್ರಂಥಗಳು ಮಿಗಿಲಾಗಿ ಭಗವದ್ಗೀತಾ ಈ ಗ್ರಂಥಗಳನ್ನು ನೋಡಿದರೆ ವ್ಯಾಕರಣ ಶಾಸ್ತ್ರ ನಿಯಮಕ್ಕೆ ವಿರುದ್ಧವಾದ ಶಬ್ದ ಪ್ರಯೋಗಗಳು ಅನೇಕವಿದೆ. ಇದರಿಂದ ಶಿಷ್ಟ ಭಾಷೆಯನ್ನು ದೇಶಭಾಷೆಯಾಗಿದ್ದ ಸಂಸ್ಕೃತದಿಂದ ಬೇರ್ಪಡಿಸುವ ಮನೋಧರ್ಮವು ಕಂಡುಬರುತ್ತದೆ. ಇದರ ಆಧಾರದ ಮೇಲೆಯೇ ಸರ್ ಜಾರ್ಜ್ ಗ್ರೀಕ್ ಸನ್ (Sir George Greenson) ಅವರು ಪ್ರಾಕೃತ ಭಾಷೆಯ ಮೂಲವನ್ನು ಮೂರನ್ನಾಗಿ ಭಾವಿಸಿರುವರು (1)ಪ್ರಪ್ರಥಮ ಭಾಷಾ (Primary dialect) ವೇದದಲ್ಲಿ; (2)ತಜ್ಜನ್ಯ ಭಾಷ್ಯ (secondary)ಪಾಳಿ ವೈಯಾಕರಣರ ಪ್ರಾಕೃತಗಳು, ನಾಟಕಗಳಲ್ಲಿ ಕಾಣುವ ಪ್ರಾಕೃತಗಳು, ಮತ್ತು (3) ಆಧುನಿಕ ದೇಶ ಭಾಷೆಗಳು - ಹಿಂದಿ, ಮರಾಠಿ, ಪಂಜಾಬಿ, ಇತ್ಯಾದಿ ಪ್ರಥಮ ಪರ್ವದ ಪ್ರಾಕೃತವನ್ನು ಅಶೋಕನ ಶಾಸನಗಳಲ್ಲೂ, ಭಟ್ಟಿಪ್ರೋಲು ಶಿಲಾಶಾಸನಗಳಲ್ಲೂ (ಆಗ್ನೇಯ) ರಾಮಘರ್ ಗುಹೆಯ ಶಾಸನಗಳಲ್ಲೂ (200BC) ಅಶ್ವಘೋಶನ ನಾಟಕಗಳಲ್ಲೂ, ಗುಣಾಢ್ಯನ ಬೃಹತ್ಕಥೆಯಲ್ಲೂ ಕಾಣಬಹುದು. ಇದೇ ಗ್ರೀರ್‌ಸನ್ ಅವರ ಅಭಿಪ್ರಾಯದಲ್ಲಿ "ಅಪಭ್ರಂಶ" ವೆಂದರೆ ನೈಜಿಕ ದೇಶ ಭಾಷೆ. (Trneverna cular) ಇದು ಗ್ರಂಥ ಪ್ರಾಕೃತಗ...ಳಲ್ಲೂ (Liteary Prakrint) ಭಿನ್ನರಾದುದು. ಆದರೆ ಇದು ಸರಿಯಲ್ಲ. ಮಾಗಧಿ, ಅರ್ಧ...ಗಧೀ, ಶೌರಸೇನಿ, ಪೈಶಾಚಿ ಮೊದಲಾದ ಗ್ರಂಥ ಪ್ರಾಕೃತಗಳೇ ಆಯಾಕಾಲದ ಸ್ಥಿತಿಗಳಿಗೆ ಅನುಸಾರವಾಗಿ (According to exigencies) ಆಧುನಿಕ ದೇಶಭಾಷೆಗಳಿಗೆ ಅವಕಾಶ ಕೊಟ್ಟವು. ಈಗಿರುವ ಪ್ರಧಾನ 14 ದೇಶಭಾಷೆಗಳನ್ನೂ ಗಮನಿಸಿದರೆ ಪ್ರತಿಭಾಷೆಯಲ್ಲೂ ಕೊನೆಯ ಪಕ್ಷ 30 -40 ಶೇಕಡಾ ಶಬ್ದರಾಶಿಯು ಸಂಸ್ಕೃತವಾಗಿದೆ. ಸಂಸ್ಕೃತದಿಂದಲೇ ದೇಶಭಾಷೆಗಳು ಪುಷ್ಟವಾದವೇ ವಿನಾ ದೇಶ ಭಾಷೆಗಳಿಂದ ಸಂಸ್ಕೃತವು ಪುಷ್ಟವಾಗಲಿಲ್ಲ. ಅಲ್ಲಲ್ಲಿ ಕೆಲವು ಶಬ್ದಗಳು ಅನ್ಯಭಾಷೆಗಳಿಂದ ಸೇರಿವೆ. ಈ ಅರ್ಥ ಬರುವ ಶಬ್ದವನ್ನು ಸಂಸ್ಕೃತ ಧಾತುಗಳಿಂದಲೇ ತೆಗೆಯಲು ಸಾಧ್ಯವಿದ್ದರೂ ವ್ಯವಹಾರ ಸೌಕರ್ಯಕ್ಕಾಗಿ ಅನ್ಯ ಭಾಷಾ ಶಬ್ದಗಳನ್ನು ಹಾಗೆಯೇ ತೆಗೆದುಕೊಂಡಿರಬೇಕು.

1. ರಾಮಾಯಣ ಮತ್ತು ಮಹಾಭಾರತಗಳಲ್ಲಿ ಕಾಣುವ ಸಮಾಜ ಸ್ಥಿತಿ, ರಾಜ್ಯಾಂಗ ನೀತಿ ಭಾವನಾ ಔನ್ನತ್ಯ ಮತ್ತು ಭಾಷಾದೃಷ್ಟಿ ಮತ್ತು ಸೌರಸ್ಯವನ್ನು ನೋಡಿದರೆ, ಅತಿ ಪ್ರಾಚೀನ ಕಾಲದಿಂದಲೂ ಸಂಸ್ಕೃತವು ವೇದಾಂತ ದೃಷ್ಟಿಗೆ ಮೀಸಲಾಗಿಡಲ್ಪಟ್ಟಿದ್ದು, ಆ ದೃಷ್ಟಿಗೆ ಲೋಪಬಾರದಂತೆ ಲೌಕಿಕ ವಿಷಯಗಳಿಗೂ ನೆರವಾಗಿದ್ದವೆಂದು ಸ್ಪಷ್ಟವಾಗಿ ಕಾಣುತ್ತದೆ. ವೇದದ ದಾನಸ್ತುತಿ, ದೇವತಾ ಪರವಾದ ಸ್ತುತಿಗಳು ಕಾವ್ಯದ ಮಟ್ಟದಲ್ಲಿವೆ.

2. ಉಪನಿಷತ್ತಿನಲ್ಲಿ, ಜನಕನ ಆಸ್ಥಾನದಲ್ಲಿವಾದ ವಿವಾದಗಳಿಗ ಅವಕಾಶವಿದ್ದುದನ್ನು, ಉತ್ತಮರಿಗೆ ಬಹುಮಾನ ದೊರಕುವುದನ್ನು ನೋಡಿದರೆ ಕಾವ್ಯ ಬೆಳೆಯಲು ಪೂರ್ಣಾವಕಾಶವಿದ್ದಂತೆ ಕಂಡು ಬರುತ್ತದೆ.

3. ರಾಮಾಯಣವು ಆದಿಕಾವ್ಯವೆಂದು ಎಲ್ಲರೂ ಸ್ವೀಕರಿಸುವರು. ಅಯೋಧ್ಯೆಯ ರಾಜತಂತ್ರ ಮತ್ತು ಒಳಸಂಚು, ಸೀತಾಪಹರಣ, ರಾವಣನೊಡನೆ ಯುದ್ಧ ಇತ್ಯಾದಿ ಅನೇಕ ಸನ್ನಿವೇಶಗಳಲ್ಲಿ ತನ್ನ ಕವಿತಾಶಕ್ತಿಯನ್ನು ವಾಲ್ಮೀಕಿಯು ಬೀರಿರುವುದು ಅವರಿಗೆ ಅರ್ವಾಚೀನರಾದ

ಕವಿಗಳಿಗೆ ಒಂದು ಆದರ್ಶವಾಗಿದೆ. ರಾಮಾಯಣವು ಕಾವ್ಯವೆನ್ನಿಸಿಕೊಳ್ಳುವುದಕ್ಕಿಂತಲೂ ಇತಿಹಾಸವಾಗಿ ಪ್ರಸಿದ್ಧವಾಗಿದೆ. ಒಂದು ರೀತಿಯಲ್ಲಿ ಇತಿಹಾಸವೂ ಕಾವ್ಯವೂ ಆಗಿದೆ. ಆನಂದವರ್ಧನನು ತನ್ನ ಸತ್ಯಾಲೋಕದಲ್ಲಿ ಹೇಳಿರುವಂತೆ ಇತಿಹಾಸದಲ್ಲಿ ಕಥೆಗೆ ಪ್ರಾಶಸ್ತ್ಯ ಕಾವ್ಯದಲ್ಲಿ ಕವಿತೆ. ಶೈಲಿ. ಮತ್ತು ರಸ ಇವುಗಳಿಗೆ ಪ್ರಾಶಸ್ತ್ಯ ರಾಮಾಯಣದಲ್ಲಿ ಇವೆಲ್ಲವೂ ಮಿಳಿತವಾಗಿವೆ.

ವಿಷಾದನ ಕ್ರಾಧ್ಯುಷಿತೇ ಪರಿತ್ರಾಸೋರ್ಮಿಮಾಲಿನೀ
ಕಿಂಯಾಂನತ್ರಾಸ್ಯನೇ ಮಗ್ನಾಂ ವಿಪುಲೇಶೋಕಸಾಗರೇ

ಇಲ್ಲಿರುವ ಸಾದೃಶ್ಯದಲ್ಲಿ ಸ್ವಾರಸ್ಯವಿಲ್ಲವೆಂದು ಪೀತರು ಅಭಿಪ್ರಾಯಪಟ್ಟಿರುತ್ತಾರೆ. ಹಿಂದೂ ಮನೋಧರ್ಮವನ್ನು ಅರಿಯಲಾರದ ವಿಮರ್ಶಕರ ಮಾತಿದು.

a. ಸಾಗರಂ ಚಾಂಬರ ಪ್ರಖ್ಯ ಮಂಬರಂ ಸಾಗರೋಪಮಂ
ರಾಮಾರಾವಣೋಯುದ್ಧಂ ರಾಮರಾವಣಯೋರಿವ

b. ಹರ್ಷೋತ್ಫುಲ್ಲನಯನಾ

c. ಲೋಚನಾಭ್ಯಂ ಪಿಬನ್ನಿನ

d. ಶುಚೌಸುವರ್ಣಕಲಶೋಪಮೌ

e. ಫೇನನಿರ್ಮಲಹಾಸಿನೀ

f. ಸ್ನಿಗ್ಧಗಂಭೀರ ಘೋಷ

g. ಚಂಚಚ್ಚಂದ್ರಕರ ಸ್ಪರ್ಶಹ ರ್ಷೋನ್ಮೀಲಿತ ತಾರಕಾ
ಅಹೋರಾಗವತೀಸಂಧ್ಯಾಜಹಾತು ಸ್ವಯ ಮಂಬರಂ

ಇತ್ಯಾದಿ ಭಾವನಾ ಪುಷ್ಟಿಯಿಂದಲೂ. ಅಲಂಕಾರಗಳಿಂದಲೂ. ಭಾಷಾಸೌಂದರ್ಯದಿಂದಲೂ ಕೂಡಿರುವ ರಾಮಾಯಣವು ಇತಿಹಾಸವಾಗಿದ್ದು ಆದಿಕಾವ್ಯವಾಗಿದ್ದು ಪರಿಗಣಿಸಲ್ಪಟ್ಟಿರುವುದರಲ್ಲಿ ಯಾವ ಅತಿಶಯವೂ ಇಲ್ಲ. ಅಲ್ಲದೆ ಇದರಲ್ಲಿಕಾಮೋದ್ರೇಕ ವರ್ಣನೆ ಬಹಳವಾಗಿ ಇಲ್ಲ; (Noeratic description)ಭಾವವು ಗಂಭೀರವಾಗಿಯೂ ಉನ್ನತರಾಗಿಯೂ ಇದೆ. ಆಂಜನೇಯನು ರಾವಣ. ಪತ್ನಿಯರನ್ನೂ ವರ್ಣಿಸಿರುವುದು ಅಶ್ವಘೋಶನಿಗೆ ಆದರ್ಶವಾದಂತಿದೆ. ಇದರ ಭಾಷೆ ಮತ್ತು ವೃತ್ತಗಳು ಮುಂದಿನ ಕವಿತಾ ಪ್ರಪಂಚಕ್ಕೆ ತಳಹದಿಯಾಗಿ ಇದು ಕಾವ್ಯಪಿತಾಮಹಾಸ್ಥಾನವನ್ನು ಗಳಿಸಿದೆ ಎನ್ನಬಹುದು.

4. ಮಹಾಭಾರತವು ಕಾವ್ಯಸ್ಥಾನಕ್ಕಿಂತಲೂ ಇತಿಹಾಸಸ್ಥಾನವನ್ನೂ, ಧರ್ಮಶಾಸ್ತ್ರ ಸ್ಥಾನವನ್ನುಗಳಿಸಿದೆ. ಕವಿತಾದೃಷ್ಟಿಯು ಕಂಡುಬಂದರೂ ಇದರಲ್ಲಿ ಧರ್ಮನಿರ್ಣಯ, ಧರ್ಮಸಂಕಟದಿಂದ ಪಾರಾಗುವ ಕ್ರಮ, ಸತ್ಯಾಸತ್ಯವಿಮರ್ಶೆ ಇತ್ಯಾದಿ ವಿಷಯಗಳಿಗೆ ಪ್ರಾಶಸ್ತ್ಯವಿದೆ. ಇದರಿಂದ ಮುಂದಿನ ಕವಿಗಳು ಕಥಾವಸ್ತುವನ್ನು ತೆಗೆದುಕೊಂಡು ತಮ್ಮ ಕವಿತಾಶಕ್ತಿಯನ್ನು ತೋರಿಸಿರುವರು. ಇಲ್ಲಿ ಕಾಣುವ ಧರ್ಮನಿರ್ಣಯ ನೀತಿ ಮತ್ತು ನಯ ಇವುಗಳು ಆಧಾರದ ಮೇಲೆ ಮುಂದೆ ಪಂಚತಂತ್ರ ಮತ್ತು ಹಿತೋಪದೇಶ ಮೊದಲಾದ ಗ್ರಂಥಗಳು ಬರೆಯುವಂತಾಯಿತು ಎನ್ನಬಹುದು.

5. ಧಾರ್ಮಿಕ ಮತ್ತು ಪಾರಮಾರ್ಥಿಕ ದೃಷ್ಟಿ ಪ್ರಧಾನವಾದ ಬುದ್ಧನ ಹಿಂದಿನ ಕಾಲದಲ್ಲಿ ಕೇವಲ ಲೌಕಿಕ ಕಾವ್ಯಗಳು ರಚಿಸಲ್ಪಡಲು ಅವಕಾಶವನ್ನು ಹೊಂದಿರಲಿಲ್ಲ. ಬುದ್ಧನಾದ ಮೇಲೆ ಲೌಕಿಕ ದೃಷ್ಟಿಯು ವಿಶೇಷವಾಗಿ ಬೆಳೆದುಬಂದು. ಭಾಷೆಯನ್ನು ಉಳಿಸಿಕೊಳ್ಳುವ ಹಂಬಲವೂ ಜಾಸ್ತಿಯಾಗಿ ಕಾವ್ಯಗಳು ತಲೆದೋರಿದವು.

6. A.A. ಮ್ಯಾಕ್‌ಡೊನೆಲ್ ಹೇಳುವಂತೆ, ಆತನ ಕಾಲದಲ್ಲಿ ಗ್ರಂಥಗಳ ಪ್ರತಿಗಳನ್ನು ಅಧಿಕ ಸಂಖ್ಯೆಯಲ್ಲಿ ಸಮಾಜಕ್ಕೆ ಕೊಡಲು ಅವಕಾಶವಿರಲಿಲ್ಲ . ಕಷ್ಟವಾದರೂ ಕಾವ್ಯಗಳನ್ನೂ ಉಳಿಸಿಕೊಳ್ಳಬೇಕೆನ್ನುವ ಆಕಾಂಕ್ಷೆಯೂ ಇರಲಿಲ್ಲ. ಅಲ್ಲದೆ ಬಹು ಪ್ರಸಿದ್ಧ ಕವಿಗಳು ಇರಲಿಲ್ಲವೆನ್ನಬಹುದು.

7 ಗ್ರೀಕ್, ಪಾರ್ಥಿಯನ್, ಶಕ-ಮೊದಲಾದವರ ಧಾಳಿಯಿಂದ ಕವಿತಾಪ್ರಪಂಚಕ್ಕೆ ಧಕ್ಕೆ ಬಂದಿರಬೇಕೆಂದು ಮ್ಯಾಕ್ಸ್ ಮುಲ್ಲರ್ ಹೇಳಿರುವುದಕ್ಕೆ ಮನ್ನಣೆಯಿಲ್ಲ. ಹಾಗೆಯೇ ಕ್ರಿ.ಶ. 6ನೇ ಶತಮಾನದಲ್ಲಿ ಕಾಳಿದಾಸನಿಂದ ಈ ಸಂಸ್ಕೃತಿಯು ತಲೆ ಎತ್ತಿತು ಎನ್ನುವ ಮಾತು ಈಗ ಗ್ರಾಹ್ಯವಾಗಿಲ್ಲ. ಪ್ರಾಕೃತವು ಜನರ ಮನ ಒಲಿಸುವುದನ್ನು ನೋಡಿ, ಆ ಭಾಷೆಯನ್ನು ಪರಿಷ್ಕರಿಸಿ. ಅದರಲ್ಲಿರುವ ಕಥಾ ಮತ್ತು ಕವಿತಾ ಚಾತುರ್ಯವನ್ನು ಶುದ್ಧವಾದ ಭಾಷೆಯಲ್ಲಿ ಮಾಡಬೇಕೆನ್ನುವ ಆಸೆಯು ತಲೆದೋರಿದ ಮೇಲೆ ಕಾವ್ಯಗಳು ಎದ್ದವು ಎನ್ನುವುದೂ ತಪ್ಪು. ರಾಮಘರ್ ಗ್ಗುಡ್ಡದ ಸೀತಾಬಂಗ, ಜೋಗಿಮಾದ ಗುಹೆಗಳಲ್ಲಿರುವ ಶಾಸನ (200 B.C) ಮತ್ತು ಅದೇ ಕಾಲದ ಹಾತಿಗುಂಪಾಶಾಸನ ಇವುಗಳಲ್ಲಿ ಸಂಸ್ಕೃತ ಗದ್ಯಕಾವ್ಯವು ಪ್ರಾಕೃತದೊಡನೆ ಬಳಸದಿಸುವುದು ಕಂಡುಬರುತ್ತದೆ.

8 (a) ಪತಂಜಲಿ ಋಷಿಯ ಮಹಾಭಾಷ್ಯದಲ್ಲಿ ಐತಿಹಾಸಿಕ (Epic), ಸಾಮಾಜಿಕ (Lyric), ಮತ್ತು ಧಾರ್ಮಿಕ (Gnomic) ಕಾವ್ಯಗಳಿಂದ ಅನೇಕ ಉದಾಹರಣೆಗಳು ತೋರಿಸಲ್ಪಟ್ಟಿರುವುದನ್ನೂ (b) ವೃತ್ತಗಳ ವೈಭವ, ಗಾಂಭೀರ್ಯ, ವೈಚಿತ್ರ್ಯಗಳನ್ನೂ (c)ಪಾಣಿನಿಯು, ಜಾಂಬವತೀ ವಿಜಯ ಮತ್ತು ಪಾತಾಳ ವಿಜಯವೆನ್ನುವ ಕಾವ್ಯಕರ್ತೃವೆಂದು ನಾಟಕಕಾರ ಮತ್ತು ಅಲಂಕಾರಿಕನಾದ ರಾಜಶೇಖರನು ಹೇಳಿರುವುದನ್ನೂ, (d)ಛಂದಸ್ ಸೂತ್ರಕಾರನಾದ ಪಿಂಗಳನು ಛಂದಸ್ಸಿನಲ್ಲಿ ಮಾಧುರ್ಯ ಮೊದಲಾದವುಗಳನ್ನೂ ಹೊಸ ಹೊಸದಾಗಿ ಕಂಡುಹಿಡಿಯಲು ಅವನ ಕಾಲದಲ್ಲಿ ಪ್ರಯತ್ನಗಳು ಪ್ರಚಾರವಾಗಿತ್ತೆಂದು

ಹೇಳಿರುವುದನ್ನೂ ಗಮನಿಸಿದರೆ ಕ್ರಿಸ್ತನ ಕಾಲಮಾನದ ಹಿಂದೂ ಮುಂದು ಕಾವ್ಯವು ಚೆನ್ನಾಗಿ ಬೆಳೆದಿತ್ತೆಂದು ಹೇಳಬೇಕಾಗುತ್ತದೆ.

9. ಗಿರ್ನಾರ್ ಮೊದಲಾದ ಶಿಲಾಶಾಸನಗಳಿಂದ ಕ್ರಿ.ಶ. 150ರಿಂದಲೂ ಕಾವ್ಯಗಳಿದ್ದುದು ಕಂಡುಬರುತ್ತದೆ.

10. ಕಾಳಿದಾಸನಿಗೆ ಹಿಂದಿದ್ದ ವಾತ್ಸ್ಯಾಯನರ ಕಾಮಶಾಸ್ತ್ರವನ್ನು ಕವಿಗಳಾಗಬೇಕೆನ್ನುವವರೆಲ್ಲರೂ ಅಧ್ಯಯನ ಮಾಡುತ್ತಿದ್ದರೆಂದು ಆ ಗ್ರಂಥದ ಆಧಾರದ ಮೇಲೆಯೇ ಹೇಳಬಹುದು. ಇದರಲ್ಲಿ ನಾಗರೀಕರಾರೆಂದು ಹೇಳಿರುವುದನ್ನೂ ನೋಡಿದರೆ ಆಗಿನ ಕಾಲಕ್ಕೆ ಕಾವ್ಯದಲ್ಲಿ, ಅತ್ಯಾಸಕ್ತಿ ಇದ್ದುದ್ದು ಕಂಡುಬರುತ್ತದೆ.

11. ಸಮುದ್ರಗುಪ್ತ, ಹರ್ಷವರ್ಧನ, ಭೋಜ, ಲಕ್ಷ್ಮಣಸೇನ, ಕಾಶ್ಮೀರ ದೊರೆಗಳು ಕವಿಗಳಿಗೆ ಆಶ್ರಯಕೊಟ್ಟಿರುವುದನ್ನೂ, ಕವಿಸಾರ್ವಭೌಮ, ಕವಿರಾಜ ಮೊದಲಾದ ಬಿರುದು ಕೊಡುವ ವಾಡಿಕೆಯನ್ನೂ ಗಮನಿಸಬಹುದು.

12. ಗ್ರೀಕ್ ದೇಶದ ಪೈಥಾಗೋರಸನ (ಕ್ರಿಸ್ತನಿಗೆ ಬಹಳ ಹಿಂದಿದ್ದವನು) ಸಂಸ್ಕೃತವನ್ನು ಕಲಿತು ಅದರ ಶಕ್ತಿಯಿಂದ ಗ್ರೀಕರ ಗುರುವಾದನೆಂದು ಹೇಳಲಾಗಿದೆ.

13. ಸುಭಾಷಿತಾವಳಿಯಲ್ಲಿರುವ ಒಂದು ಶ್ಲೋಕವು ಘಜ್ನಿಮಹಮದನೊಡನಿದ್ದ ಒಬ್ಬ ಷರೀಫನಿಂದ ಬರೆಯಲ್ಪಟ್ಟಿತ್ತೆಂದೂ ಹೇಳಲಾಗಿದೆ.

14. ಮುಂದೆ ಅಕ್ಬರನ ಕಾಲದಲ್ಲಿ (a) ಬದಯಾನಿ (b) ಹಾಜೀಇಬ್ರಾಹಿಂ (c) ಹಾಜಿಸುಲ್ತಾನ್ (d) ಅಬ್ದುಲ್ ಫೈಸ್ (c) ಮುಲ್ಲಾ ಸವಾರಿ (f) ಮುಲ್ಲಾಮಹಮದ್ ಮೊದಲಾದ ಮುಸ್ಲಿಂ ಪಂಸ್ಕೃತ ಪಂಡಿತರಿದ್ದರು.

15 ದಾರಾಷು ಕೋವಿನ "ಸಮುದ್ರಸಂಗಮ"ವೆನ್ನುವ ಹಸ್ತಪ್ರತಿಯು ಈಗಲೂ ಭಂಡಾರ್‌ಕರ್ ರಿಸರ್ಚ್ ಸಂಸ್ಥೆಯಲ್ಲಿ ಇದೆ.

16. ಬ್ರಿಟಿಷರ ಕಾಲದಲ್ಲೂ (a)ಮುಂಬಯಿ ವಿಲ್ಸನ್ ಕಾಲೇಜಿನಲ್ಲಿ ಡಾಕ್ಟರ್ ಮೊಯಿರುದಿನ್ ಅಹಮದ್ (b)ಢಾಕ್ಕಾ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ (Professor) Dr.ಜಹರುಲ್ಲಾ ಖಾನ್ (c) ಪಾಂಡಿಚೇರಿಯಲ್ಲಿ ಉಮ್ಮರ್ ಷಾಹಿ (d) ವೆನ್ನಿಸಿನ ಕಾಶಿಕ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲ್‌ಶಾನ್ ಶುಲ್ ಉವೇ ಮಾ -ಮೊದಲಾದ ವಿದ್ವಾಂಸರೂ ಇದ್ದರು.

17. ಈಗ ಪಾಶ್ಚಾತ್ಯ ದೇಶದಲ್ಲಿ ಸಹಸ್ರಾರು ಸಂಸ್ಕೃತ ವಿದ್ವಾಂಸರಿರುವರು. ಇದೆಲ್ಲವನ್ನೂ ನೋಡಿದರೆ ಸಂಸ್ಕೃತವು ಬ್ರಾಹ್ಮಣ ಭಾಷೆವೆಂದು ಬ್ರಿಟಿಷರು ಹೇಳಿರುವುದು ರಾಜಕೀಯ ಪ್ರಚಾರಕ್ಕಾಗಿ ಎಂದು ತಿಳಿಸಬೇಕಾಗಿರುತ್ತದೆ.

## ೪೫.-೧. ಕಾಳಿದಾಸ (ಕ್ರಿ.ಪೂ ೧ ನೇ ಶತಮಾನ)

### ಕಾಲ

ಈಗ ಲಭಿಸಿರುವ ಕಾವ್ಯಗಳ ಆಧಾರದ ಮೇಲೆ ಮೊದಲನೇ ಕವಿ ಅಶ್ವಘೋಶನೆಂದೂ ಅವನಾದ ಮೇಲೆ ಕಾಳಿದಾಸವೆಂದೂ, ಅಶ್ವಘೋಶನು ಕಾನಿಷ್ಕನ ಕಾಲದವನಾದ್ದರಿಂದ ಕ್ರಿ.ಶ. 1ನೇ ಶತಮಾನದಲ್ಲಿದ್ದವೆಂದೂ, ಎರಡನೇ ಚಂದ್ರಗುಪ್ತನೋ ಅಥವಾ ಅವನ ತಂದೆ ಸಮುದ್ರ ಗುಪ್ತನೇ ಕಾಳಿದಾಸನ ಆಶ್ರಿತ ದೊರೆಯಾಗಿದ್ದುದರಿಂದ, ಅವನ ಕಾಲ ಕ್ರಿ.ಶ. 4ನೇ ಶತಮಾನದವನೆಂದೂ, ಈಗಿನ ಎಲ್ಲಾ ವಿಮರ್ಶಕರು ಒಮ್ಮತದಿಂದ ಹೇಳುತ್ತಿದ್ದಾರೆ. ಆದರೆ ಇನ್ನೂ ಕೂಲಂಕುಷವಾಗಿ ಗಮನಿಸುವುದಾದರೆ ಕಾಳಿದಾಸನ ಕ್ರಿ.ಪೂ. 1ನೇ ಶತಮಾನಕ್ಕೆ ಸೇರಿದವನು ಎಂದು ಹೇಳಬಹುದು ತನ್ನ ಹಿಂದಿನ ಮತವೆಲ್ಲವನ್ನೂ ಫರ್ಗೂಸನ್ ಅವರು ಪೂರ್ಣ ಪರಾಜಯವಾದ ಮೇಲೆ, ಉಜ್ಜಯನಿಯ ವಿಕ್ರಮಾದಿತ್ಯನೇ ಕಾಳಿದಾಸನ ಆಶ್ರಿತರಾಜನೆಂದು ಹೇಳಿ, ಅವನ ಕಾಲವನ್ನು ಕ್ರಿ.ಶ. 544ಕ್ಕೆ ಇಟ್ಟಿರುವನು. ಫ್ಲೀಟ್ (fleet) ವಿಮರ್ಶಕನು ಇವನನ್ನು ಖಂಡಿಸಿರುವನು. ಮಾಳವಿಕಾಗ್ನಿಮಿತ್ರ ನಾಟಕದಲ್ಲಿ ಅಗ್ನಿಮಿತ್ರನ (ಕ್ರಿ.ಪೂ 3ನೇ ಶತಮಾನ) ಪ್ರಸ್ತಾಪವಿರುವುದರಿಂದ ಕ್ರಿ. ಶ. 1ನೇ ಶತಮಾನದವನಾದ ಅಶ್ವಘೋಷನನ್ನು ಕಾಳಿದಾಸನು ಪ್ರಸ್ತಾಪ ಮಾಡದೇ ಇರುವುದರಿಂದ ಭಾಸ ಮೊದಲಾದ ಕವಿಗಳನ್ನು ಹೇಳಿ ಅಶ್ವಘೋಷನಂತಹ ಉತ್ತಮ ದರ್ಜೆಕವಿಯನ್ನು ಹೇಳದೇ ಇರಲು ಕಾರಣವಿಲ್ಲದಿರುವುದರಿಂದ ಕಾಳಿದಾಸನ ಕಾಲವು ಕ್ರಿ. ಪೂ. 3ನೇ ಶತಮಾನ ಮತ್ತು ಕ್ರಿ. ಶ 1 ನೇ ಶತಮಾನದ ಮಧ್ಯವರ್ತಿ ಕಾಲವಾಗಿರಬೇಕು. ವಿಕ್ರಮಶಕೆಯು ಕ್ರಿ. ಪೂ. 5ರಲ್ಲಿ ಪ್ರಾರಂಭವಾಗಿದೆ. ವಿಕ್ರಮಾದಿತ್ಯ ಹೆಸರುಳ್ಳ ಆರು ಜನರಿಂದಲೂ ಶಕಪುರುಷನೇ ಕಾಳಿದಾಸನ ಆಶ್ರಿತ ದೊರೆಯಾಗಿರಬೇಕು. ಇದಕ್ಕಿಂತಲೂ ಪ್ರಬಲವಾದ ಮತ್ತೊಂದು ಕಾರಣವಿದೆ. ವಿದ್ವದ್ವರ ರಾಮಚಂದ್ರ ವಿನಾಯಕ ಪಟ್ಟವರ್ಧನನೆನ್ನುವರು. ಮೇಘದೂತ ಕಾವ್ಯದ ಕಾಲವನ್ನು ಜ್ಯೋತಿಷ್ಯದ ಆಧಾರದ ಮೇಲೆ ಕ್ರಿ. ಪೂ. 56 ಎಂದು ಹೇಳಿರುವರು.

1. ಆಷಾಡಸ್ಯ ಪ್ರಥಮದಿವಸೇಮೇಘ ಮಾಶ್ಲಿಷ್ಟಸೂನು

2. ಪ್ರತ್ಯಾಸನ್ನೇನಭಸಿದಮಿತೇ

3. ಶಾಪಾಂತೋ ಯೋಭುಜನಶಯನತ್

ಇದೇ ಮೊದಲಾದ ಶ್ಲೋಕಗಳ ಆಧಾರದ ಮೇಲೆ ಜ್ಯೋತಿಶಾಸ್ತ್ರದ ಗಣತಿ ಮೇಲೆ ಕಾಳಿದಾಸನ ಕಾಲವು ಕ್ರಿ.ಪೂ. ಒಂದನೇ ಶತಮಾನವೆಂದೇ ನಿರ್ಧರಿಸಿರುವರು. ಆದ್ದರಿಂದ ಕಾಳಿದಾಸನು

ಅಶ್ವಘೋಷನನ್ನು ಅನುಕರಿಸಿರುವನು ಎನ್ನುವುದಕ್ಕಿಂತ ಅಶ್ವಘೋಷನೇ ಕಾಳಿದಾಸನನ್ನು ಅನುಕರಿಸುವನೆಂದು ಹೇಳಬಹುದು. ಸಮುದ್ರಗುಪ್ತನ ಮಂತ್ರಿ ಮತ್ತು ಸೈನ್ಯಾಧಿಪತಿಯಾದ ಹರಿಸೇನನ ಶಿಲಾಶಾಸನ ಶ್ಲೋಕಗಳಿಗೂ ಮತ್ತು ಅದೇ ಕಾಲದ ವತ್ಸಭಟ್ಟಿಯ 40 ಶ್ಲೋಕಗಳಿಗೂ ಕಾಳಿದಾಸನ ಕೃತಿಗಳ ಆಧಾರವಾಗಿದ್ದಿರಬೇಕು. ಹರಿಸೇನನ ಕವಿತೆಯಲ್ಲಿ ಮಾಧುರ್ಯ ಮತ್ತು ರಸದ ಸವಿಯಾಟವಿದ್ದರೂ ವತ್ಸಭಟ್ಟಿಯ ಶ್ಲೋಕಗಳಲ್ಲಿ ಕವಿತಾಪ್ರಾಗಲ್ಭ್ಯವು ಕಂಡುಬಂದರೂ. ಕವಿತೆಯು ಸ್ವಾಭಾವಿಕವಾಗಿಲ್ಲ.

ಆರ್ಯೋ ಹೀತ್ಯುಪಗುಹ್ಯ ಭಾವಪಿಶುನ್ಯೆರುತ್ಕರ್ಣಿತ್ಯೆರೋಮಭಿಃ
ಸಭ್ಯೇಷೂ ಛೃ ಸಿತೇಷು ತುಲ್ಯಕುಲಜಮ್ಲಾನಾನಿನೊದ್ವೀಕ್ಷಿತಃ
ಸ್ನೇಹವ್ಯಾಕುಲಿತೇನ ಬಾಷ್ಪಗುರುಣಾತತ್ವೇಕ್ಷಣಾ ಚಕ್ಷುಷಾ
ಯಃ ಪಿತ್ರಾಭಿಹಿತೋ ನಿರೀಕ್ಷ್ಯ ನಿಖಿಲಾಂ ಪಾಹ್ಯೇದ ಮುರ್ವೀಮಿತ

ಎನ್ನುವ ಚಂದ್ರಗುಪ್ತನು ಸಮುದ್ರ ಗುಪ್ತನನ್ನು ಮಹಾರಾಜನೆಂದು ಸಭೆಗೆ ತಿಳಿಸುವುದನ್ನು ಹರಿಸೇನನು ವರ್ಣಿಸಿರುವುದನ್ನೂ.

"ದ್ವಿಟ್‌ದೃಪ್ತ ಪಕ್ಷಕ್ಷಪಣೈಕದಕ್ಷಃ "ಇತ್ಯಾದಿ ವತ್ಸಭಟ್ಟಿಯ ಕವಿತೆಯನ್ನೂ ಕಾಳಿದಾಸನ ಕೃತಿಗಳೊಡನೆ ತೋಲನ ಮಾಡಿದರೆ ಯಾರು ಯಾರನ್ನೂ ಅನುಕರಿಸಬಹುದೆಂದು ಭಾಷಾ ಮತ್ತು ಭಾವನೆಗಳ ಮೇಳನದಿಂದ ತಿಳಿಯಬಹುದು.

ವತ್ಸಭಟ್ಟಿಯ ಶ್ಲೋಕ

ಚಲತ್ಪತಾಕಾನ್ಯ ಬಲಾಸನಾಥಾ
ನ್ಯತ್ಯರ್ಥ ಶುಕ್ಲಾ ನ್ಯಧಿಕೋನ್ನತಾನಿ
ತಟಿಲ್ಲತಾಚಿತ್ರಸಿತಾಭ್ರಕೂಟ
ತುಲ್ಯೋಪಮಾವಾನಿ ಗೃಹಾಣಿ ಯತ್ರ ||೧||
ಕೈಲಾಸತುಂಗಶಿಖರ ಪ್ರತಿಮಾನಿಚಾ
ನ್ಯಾ ನ್ಯಾಭಾಂತಿ ದೀರ್ಘನಲಭೀನಿ
ಸವೇಕದಾನಿ†
ಗಾಂಧರ್ವ ಶಬ್ದ ಮುಖರಾಣಿ
ನಿವಿಷ್ಟ ಚಿತ್ರಃ
ಕರ್ಮಾಣಿ ಲೋಲಕದ ಲೀವನ
ಶೋಭಿತನಿ ||೨||

ಕಾಳಿದಾಸನ ಮೇಘದೂತ
V-65ಶ್ಲೋಕ
ವಿದ್ಯುತ್ವಂತಂಲಲಿತವನಿತಾಂ ಸೇಂದ್ರ
ಚಾಪಂ ಸಚಿತ್ರಾಃ
ಸಂಗೀತಾಯ ಪ್ರಹತ ಮುರ ಜಾಂ
ಸ್ನಿಗ್ಧ ಗಂಭೀರ ಘೋಷಂ
ಅಂತಸ್ತೋಮಂ ಮಣಿಯಯಭುವಃ
ತುಂಗಮಭ್ರಂಲಿಹಾಗ್ರಾಃ
ಪ್ರಾಸಾದಾಸ್ತ್ವಾಂ ತುಲನುತುಮಲಂ
ಯತ್ರ ತೈಸ್ತೈ ರ್ವಿಶೇಷೈಃ

ಈ ತೋಲನದಲ್ಲಿ ಯಾರು ಯಾರನ್ನು ಅನುಕರಿಸಿರಬಹುದೆಂದು ಹೇಳಬಹುದು. ಬಿಲ್ಹಣನು ತನ್ನ ವಿಕ್ರಮಾಂಗದೇವ ಚರಿತ್ರೆಯಲ್ಲಿ ಕಾಶ್ಮೀರವು ಪ್ರತಿಭಾನ್ವಿತ ಕವಿಗಳ ಸ್ಥಾನವೆಂದು ಹೇಳಿರುವುದರಿಂದಲೂ, ಕಾಳಿದಾಸನ ಕುಮಾರಸಂಭವದಲ್ಲಿ ಹಿಮಗಿರಿ ವರ್ಣನವು ನೈಜಿಕವಾಗಿರುವುದರಿಂದಲೂ, ಮೇಘದೂತದಲ್ಲಿ ವಿದಿಶೆಯಿಂದ ಹಿಡಿದು ಅಲಕಾಪಟ್ಟಣದವರಿವಿಗೂ ಇರುವ ಭೂಭಾಗವನ್ನು ಪ್ರತ್ಯಕ್ಷವಾಗಿ ವರ್ಣಿಸಿರುವುದರಿಂದಲೂ, ಕಾಳಿದಾಸನು ಹುಟ್ಟಿ ಚಿಕ್ಕ ವಯಸ್ಸನ್ನು ಕಾಶ್ಮೀರದಲ್ಲಿ ಕಳೆದವೆಂದೂ, ತಾರುಣ್ಯವನ್ನೂ, ಅಲ್ಲೇ ಕಳೆದು ಪ್ರೌಢವಯಸ್ಸಿನಲ್ಲಿ ಉಜ್ಜಯನಿಯ ವಿಕ್ರಮಾಂಕ ದೊರೆಯ ಆಸ್ಥಾನ ಪಂಡಿತವಾದನೆಂದು ಊಹಿಸಬಹುದು. ಕುಮಾರಸಂಭವ ಮತ್ತು ಮಾಳವಿಕಾಗ್ನಿಮಿತ್ರವು ತಾರುಣ್ಯದಲ್ಲಿ ಬರೆಯಲ್ಪಟ್ಟಿರಬೇಕೆಂದೂ, ಉಜ್ಜಯಿನಿ ಹೆಸರು ಅವೆರಡರಲ್ಲಿ ಇಲ್ಲದಿರುವುದರಿಂದಲೂ ಊಹಿಸಬಹುದು. ಮೇಘದೂತನಲ್ಲಿ ಉಜ್ಜಯಿನಿ ಪಟ್ಟಣದ ವರ್ಣನೆ ಇದೆ. ಇಂತಹ ಕವಿಯ ವರ್ಣನೆಯಲ್ಲಿ ಮಾಧುರ್ಯದೊಡನೆ ಸತ್ಯಾಂಶವು ಇದೆ. ವಸ್ತ್ರಭಟ್ಟಿಯ ಕವಿತೆಯಲ್ಲಿ ಕವಿತಾಪ್ರಾಗಲಭ್ಯವು ಕಂಡು ಬಂದರೂ ವರ್ಣನಾ ಕ್ರಮವು ಕಾಳಿದಾಸನಿಂದಲೇ ಬಂದಿರಬೇಕೆಂದು ಹೇಳಬಹುದು.

**ಜೀವನ**

ಇವನ ಜೀವಿತ ವಿಷಯವಾಗಿ ಅವನ ಕಾವ್ಯಗಳಲ್ಲಿ ಯಾವ ಸೂಚನೆಗಳೂ ಇಲ್ಲ. ಆದರೂ ಸೀತಾರಾಮ ಸಹಗಲಿ ಅವರು ತಮ್ಮ "ರಾಷ್ಟ್ರಕವಿ ಕಾಳಿದಾಸ " ಎನ್ನುವ ಹಿಂದೀ ಕೃತಿಯಲ್ಲಿ ಅವನ ಇಡೀ ಭಾರತದಲ್ಲಿ ಪರ್ಯಟನ, ಅವನ ಶಿಷ್ಯ ವೃತ್ತಿ ಇತ್ಯಾದಿಗಳನ್ನು ಅವನ ಕೃತಿಗಳ ಆಧಾರದ ಮೇಲೆ ತೋರಿಸಿರುವರು. ಇವೂ ಊಹೆಯೇ ಸುಸ್ಪಷ್ಟವಾಗಿಲ್ಲ. ಈಗ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಊಹೆ ಮಾಡಿ ಬರೆದಿರುವರು. ಅವನು ಒಬ್ಬ ಮೂಢನಾಗಿದ್ದನೆಂದೂ, ಕಾಳಿಯ ಅನುಗ್ರಹದಿಂದ ಕವಿಯಾದನೆಂದೂ ಹೇಳಿರುವುದು ಅವನ ಹೆಸರು ಅನ್ವರ್ಥವೆಂದು ಊಹಿಸಿ ಹೇಳಿದ ಮಾತು. ಕೆಲವರು ಇದನ್ನೇ ಪರಿಷ್ಕರಿಸಿ ಹೇಳಿರುವರು. ಇವನು ಬ್ರಾಹ್ಮಣನೆಂದೂ, ತನ್ನ ಗುರುವಿನಲ್ಲಿ ಎಲ್ಲವನ್ನೂ ಕಲಿತು, ಒಂದು ಪ್ರಸಂಗದಲ್ಲಿ ಅವರ ಶಾಪಕ್ಕೆ ಒಳಗಾಗಿ ಅಥವಾ ದಾರಿ ನಡೆಯುತ್ತಿದ್ದಾಗ ತಲೆಗೆ ಏಟುತಾಗಿ ಪೂರ್ವಸ್ಮೃತಿಯು ಕಳಚಿಹೋಗಿ ಮತ್ತೆ ಮತ್ತೊಂದು ಪ್ರಸಂಗದಲ್ಲಿ ಅಪೂರ್ವಸ್ಮೃತಿಯು ಬಂತೆಂದು ಹೇಳಲಾಗಿದೆ. ಇನ್ನೂ ಕೆಲವರು ಇವನು ಸಿಂಹಳ ದೇಶದ ಕುಮಾರದಾಸನ ಅತಿಥಿಯಾಗಿದ್ದಾಗ ಒಬ್ಬ ಸೂಳೆಯ ಧನಾಶೆಯಿಂದ ಇವನ ಮೃತ್ಯುವಿಗೆ ಕಾರಣಳಾದಳೆಂದು ಹೇಳಿರುವರು. ಇನ್ನೂ ಒಂದು ಕಥೆ ಇದೆ. ಇವನು ಸರಸ್ವತಿಯನ್ನೂ ವರ್ಣನೆಮಾಡುವಾಗ ಶಿರಸ್ಸಿನಿಂದ ಪಾದದವರೆಗೆ ಮಾಡಿದನಂತೆ ದೇವತೆಗಳ ವರ್ಣನೆಯನ್ನೂ ಆಪಾದ ಚೂಡವಾಗಿ ಮಾಡಬೇಕೆನ್ನುವ ನಿಯಮವಿದೆ. ಅದಕ್ಕೆ ವಿರುದ್ಧವಾಗಿ ಇವನ ಕ್ರಮ ವಿದ್ದುದರಿಂದ ಸರಸ್ವತಿಯು "ನೀನು ಶೃಂಗಾರ ಕವಿಯಾಗು" ಎಂದು ಶಾಪ ಕೊಟ್ಟಳಂತೆ. ಇನ್ನೊಂದು ಊಹೆಯೂ ಇದೆ. ಇವನ ಹೆಂಡತಿ ವಿದ್ಯೋತ್ತಮಾ. ಇವನ ಮೌಢ್ಯವನ್ನೂ ನೋಡಿ "ಮುಸಲಃ ಕಿಸಲಾಯತೇ"ಎಂದು ಹಾಸ್ಯ ಮಾಡಿದಳಂತೆ. ಇದರಿಂದ ನಾಚಿಕೆಪಟ್ಟು ಸರಸ್ವತೀ ಉಪಾಸನೆಯಿಂದ ಉದ್ದಾಮ ಪಂಡಿತನಾಗಿ ಹಿಂತಿರುಗಿ ಮನೆಗೆ ಬಂದು "ಅನಾವೃತ ಕಪಾಟಂದ್ವಾರಂದೇಹಿ"ಅಂದಿದ್ದಕ್ಕೆ "ಅಸ್ತಿಕಶ್ಚಿದ್ವಾಗ್ವಿಶೇಷಃ" ಎಂದು ಒಳಗಿನಿಂದಲೇ ತನ್ನ ಹೆಂಡತಿಯು

ಕೇಳಿದ್ದನ್ನು ಆಧಾರವಾಗಿಟ್ಟುಕೊಂಡು. "ಅಸ್ತ್ಯುತ್ತರಸ್ಯಾಂದಿಶಿದೇವತಾತ್ಮಾ"ಎನ್ನುವುದರಿಂದ ಕುಮಾರಸಂಭವವನ್ನೂ. ವಾಗರ್ಥಾವಿವಸಂಸ್ಪಕ್ತೌ ಎನ್ನುವುದರಿಂದ ರಘುವಂಶವನ್ನೂ ಪ್ರಾರಂಭಿಸಿ "ಕಶ್ಚಿತ್ಕಾಂತವಿರಹಗುರುಣಾ"ಎನ್ನುವುದರಿಂದ ಮೇಘ ಸಂದೇಶವನ್ನೂ ಹೀಗೆ ಮೂರು ಕಾವ್ಯಗಳನ್ನೂ ರಚಿಸಿದನಂತೆ. ಇಷ್ಟು ಕಥೆಗಳಿದ್ದರೂ ಸತ್ಯಾಂಶವು ಯಾವುದೆಂದು ಹೇಳುವುದೇ ಸಾಧ್ಯವಾಗಿಲ್ಲ. ಇವನು ಅಪ್ರತಿಮ ಮೇಧಾವೀ ಎನ್ನುವುದನ್ನು ಮುಂದೆ ಬಂದ ಕವಿಗಳು ಸ್ವೀಕರಿಸಿರುವರು.

ಮಲ್ಲಿನಾಥನು ತನ್ನ ವ್ಯಾಖ್ಯಾನದಲ್ಲಿ

ಕಾಲಿದಾಸಗಿರಾಂ ಸಾರಂ ಕಾಲಿದಾಸಃ ಸರಸ್ವತೀ†
ಚತುರ್ಮುಖೋಥವಾ ಸಾಕ್ಷಾದ್ವಿದುರ್ನಾನ್ಯೇತು ಮಾದೃಶಾಃ††

ಎಂದಿರುವನು. ಬಾಣಭಟ್ಟನ ಪ್ರಶಸ್ತಿಯು

ನಿರ್ಗತಾಸುನವಾಕಸ್ಯಕಾಲಿದಾಸಸ್ಯಸೂಕ್ತಿಷು
ಪ್ರೀತಿ ರ್ಮಧುರ ಸಾಂದ್ರಾಸು ಮಂಜರೀಷ್ವಿವ ಜಾಯತೇ

ಎನ್ನುವ ಶ್ಲೋಕದಲ್ಲಿ ಅಡಗಿದೆ. ಜಯದೇವನು ಇವನನ್ನು ಕವಿ ಕುಲಗುರುಃ ಎಂದಿರುವನು. ಒಂದು ಮಾತಿನಲ್ಲಿ ಹೇಳುವುದಾದರೆ ಅವನಿಗೆ ಸಮನಾದ ಕವಿ ಮತ್ತೊಬ್ಬನಿಲ್ಲ ಎನ್ನುವ ಅಭಿಪ್ರಾಯವು ಈ ಕೆಳಗಿನ ಶ್ಲೋಕದಿಂದ ಹಿಂದಿನಿಂದ ಬಂದಿದೆ.

ಪುರಾಕವಿನಾಂ ಗಣನಾ ಪ್ರಸಂಗೇ ಕನಿಷ್ಠಿಕಾಧಿಷ್ಠಿತ ಕಾಳಿದಾಸಃ
ಅದ್ಯಾಪಿ ತತ್ತುಲ್ಯಕವೇದ ಭಾವಾದ ನಾಮಿಕಾ ಸಾರ್ಥವತೀ ಬಭೂವ

ಇವನ ಕೃತಿಗಳು;

ಕುಮಾರಸಂಭವ, ಮೇಘದೂತ, ರಘುವಂಶ, ಋತುಸಂಹಾರ ಎನ್ನುವ ಪ್ರಧಾನ ನಾಲ್ಕು ಕಾವ್ಯಗಳು. ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ ಮತ್ತು ಅಭಿಜ್ಞಾನ ಶಾಕುಂತಲ ಎನ್ನುವ ಮೂರು ನಾಟಕಗಳು ಪ್ರಸಿದ್ಧವಾಗಿವೆ.

**ಕುಮಾರ ಸಂಭವ**

ಪಾರ್ವತಿಯನ್ನು ಈಶ್ವರನು ಪಾಣಿಗ್ರಹಣ ಮಾಡಿಕೊಂಡು ಷಣ್ಮುಖನಿಗೆ ಜನ್ಮಕೊಟ್ಟು ದೇವತೆಗಳಿಗೆ ನಾಯಕರನ್ನಾಗಿ ಮಾಡಿ ತಾರಕಾಸುರನನ್ನು ಕೊಲ್ಲಿಸಿದ ಪ್ರಕರಣವನ್ನು ಪುರಾಣದಿಂದ ಸಂಗ್ರಹಿಸಿ ಆ ಕಥೆಯನ್ನು ರಸಭರಿತವಾಗಿಯೂ ಆಪ್ಯಾಯಮಾನವಾಗಿಯೂ ಬರೆದಿರುವುದೇ ಈ

ಮಹಾಕಾವ್ಯ ಎಷ್ಟೋ ಹಸ್ತಪ್ರತಿಗಳಲ್ಲಿ, ತಾಲಪತ್ರಗಳಲ್ಲಿ ಆರು ಅಧ್ಯಾಯಗಳಿಂದಲೇ ಈ ಗ್ರಂಥವು ಕೊನೆಗೊಂಡಿದೆ. ಕುಮಾರ ಸಂಭವವೆನ್ನುವ ಹೆಸರಿಗೆ ತಕ್ಕಂತೆ ಕುಮಾರನ ಜನನಕ್ಕೆ ಹೇತುವಾದ ಪಾರ್ವತಿ ಪರಮೇಶ್ವರ ವಿವಾಹವು ಇಲ್ಲಿ ಕೊನೆಗೊಂಡಿದೆ.. ಆದರೂ ಮುಂದೆ ಬೆಳೆದು 17 ಸರ್ಗಗಳಾಗಿವೆ. ಆದ್ದರಿಂದ ಕೆಲವರು ಇದನ್ನು "ಕುಮಾರ ಸಂಭವ"ವೆನ್ನುವುದಕ್ಕಿಂತ ಕುಮಾರವಿಜಯವೆನ್ನಬಹುದಾಗಿತ್ತು ಎಂದಿರುವರು. ಆದರೆ ಕಾಳಿದಾಸನು ಹಾಗೆ ಮಾಡಿಲ್ಲ. ಮುಂದಿನ ಸರ್ಗಗಳೆಲ್ಲಾ ಬೇರೆ ಯಾರೋ ಒಬ್ಬನು ಬರೆದು ಸೇರಿಸಬೇಕು. ಕವಿತೆಯಲ್ಲಿ ಈ ಅಧಿಕ ಸರ್ಗಗಳು ಕಾಳಿದಾಸನೆಂದು ಕಷ್ಟವಾಗುತ್ತದೆ. ವೃತ್ತವು ಗಂಭೀರವಾಗಿಲ್ಲ. ಪೂರಕವ್ಯರ್ಥ ಪದಗಳು ಜಾಸ್ತಿಯಾಗಿವೆ. ಕಾಳಿದಾಸನ ಗಂಭೀರ ಶೈಲಿ ಇಲ್ಲಿಲ್ಲ. ಜಾಕೊಬಿ ಹೇಳಿರುವಂತೆ ಯಾವನೋ ಮರಾಠ ದೇಶದ ಕವಿಯು ಈ ಅಧಿಕ ಸರ್ಗಗಳನ್ನು ಸೇರಿಸಿರಬೇಕು ಎಂದು A.A.ಮ್ಯಾಕ್‌ಡೊನೆಲ್ ಹೇಳಿರುವರು. ಮತ್ತೆ ಕೆಲವರು ಮಲ್ಲಿನಾಥನ ವ್ಯಾಖ್ಯಾನವು ಮೊದಲಿನ 7 ಸರ್ಗಗಳಿಗಿರುವುದರಿಂದ ಅವೆಲ್ಲವೂ ಕಾಳಿದಾಸನದೆಂದೂ, 8ನೇ ಸರ್ಗವು ಸಿಕ್ಕಿದ ಮೇಲೆ ಅದು ಮೊದಲಿನ 7 ಸರ್ಗಗಳಿಗೆ ಎಲ್ಲಾ ಭಾಗದಲ್ಲಿಯೂ ಸರಿಹೋಗುವುದರಿಂದ ಅದನ್ನೂ ಅವನೇ ಬರೆದಿರಬೇಕೆಂದೂ ಹೇಳುವರು. ಇವೆಲ್ಲವೂ ಕೇವಲ ಊಹೆಗಳು. ಸತ್ಯಾಂಶವಾವುದೆಂದು ಹೇಳುವುದು ಕಷ್ಟ. ಕವಿತಾ ಪ್ರೌಢಿಮೆ, ಪದಲಾಲಿತ್ಯ, ಅರ್ಥಗೌರವ ಇತ್ಯಾದಿ ವಿಷಯಗಳಲ್ಲಿ ಪಂಡಿತರಲ್ಲೇ ಭಿನ್ನಾಭಿ[illegible]ಯ ಬರುವುದು ಸಹಜ. ಆದರೆ " ಉಪಮಾ ಕಾಳಿದಾಸಸ್ಯ" ಎನ್ನುವ ಪ್ರಶಸ್ತಿಗೆ ಮುಂದಿನ 11 ಸರ್ಗಗಳು ಯಾವ ರೀತಿಯಲ್ಲೂ ಕುಂದಕ ತಂದಿಲ್ಲ. ವ್ಯರ್ಥ ಪೂರಣಾರ್ಥ ಪದಗಳೆನ್ನುವ ಶಬ್ದಗಳನ್ನೂ ಯೋಚನಾ ಭೇದದಿಂದ ಸಾರ್ಥಕಗೊಳಿಸಬಹುದು. ಈಗಿರುವ 17 ಸರ್ಗಗಳೂ ಕಾಳಿದಾಸನೇ ಬರೆದಿರಬಹುದೆನ್ನುವುದಕ್ಕೂ ಕಾರಣಗಳೂ ಇವೆ. ಅಂತೂ ಕಾವ್ಯವನ್ನೂ ಪೂರ್ತಿ ಮಾಡುವುದಕ್ಕಿಂತ ಮುಂಚೆ ಅವನು ಸತ್ತಿರಬೇಕೆನ್ನುವ ಊಹೆಯೂ ಸರಿಯಲ್ಲ. ಈ ಕಾವ್ಯವಾದ ಮೇಲೆಯೇ ಕಾಳಿದಾಸನು ರಘುವಂಶವನ್ನು ಬರೆದನೆನ್ನುವುದಕ್ಕೆ ಕಾರಣಗಳು ಅನೇಕವಿವೆ. ಆದರ್ಶವನ್ನು ರಾಮಾಯಣದಿಂದ ಕವಿಯು ತೆಗದುಕೊಂಡಂತಿದೆ. ಕಿಷ್ಕಿಂಧೆಯಲ್ಲಿ ವಸಂತ ಋತು ವರ್ಣನೆಯು ಇಲ್ಲಿ ಅನುಕರಿಸಲ್ಪಟ್ಟಿದೆ. ಹಾಗೆಯೇ ರತಿಯ ಪ್ರಲಾಪವು ತಾರೆಯ ಪ್ರಲಾಪದಂತೆಯೂ, ತಾರಕಾಸುರ ವರ್ಣನೆಯೂ ರಾವಣಾಸುರನ ವರ್ಣನೆಯಂತೆಯೂ ಕಾಣುತ್ತದೆ. ಪಾರ್ವತಿ ಪರಮೇಶ್ವರರು ಬಂದಾಗ ಪುರಸ್ತ್ರೀಯರ ಸಡಗರ ವರ್ಣನೆಯೂ, ಅಶ್ವಘೋಷನ ಬುದ್ಧ ಚರಿತ್ರೆಯಲ್ಲಿರಾಜಕುಮಾರನು ಬಂದ ವೇಳೆಯಲ್ಲಿ ಅಂತಃಪುರ ಸ್ತ್ರೀಯರ ಸಂಭ್ರಮವಾಗಿ ವರ್ಣಿತವಾಗಿದೆ. "ಅಭ್ಯುನ್ನತಾಂಗುಷ್ಠನ ಖತ್ರಭಾಭಃ"ಎನ್ನುವ ಶ್ಲೋಕದಿಂದ ಪ್ರಾರಂಭವಾಗಿ " ಸರ್ವೋಪಮಾದ್ರವ್ಯ ಸಮುಚ್ಚಯೇನ"ಎನ್ನುವ ಶ್ಲೋಕಪರ್ಯಂತವೂ 19 ಶ್ಲೋಕಗಳಲ್ಲಿ ಪಾರ್ವತಿಯ ವರ್ಣನೆಯು ಅನುಪಮ ರೀತಿಯಲ್ಲಿದೆ.

ಸರ್ವೋಪಮಾದ್ರವ್ಯ ಸಮುಚ್ಚಯೇನ ಯಥಾಪ್ರದೇಶಂ ವಿನಿವೇಶಿತೇನ
ಸಾನಿರ್ಮಿ ತಾ ವಿಶ್ವ ಸೃ ಜಾಪ್ರಯತ್ನಾತ್ ಏಕಸ್ಥಸೌಂದರ್ಯ ದಿಧೃಕ್ಷಯೇವ

ಎನ್ನುವ ಕೊನೆಯ ಶ್ಲೋಕದಲ್ಲಿ ಹಿಂದಿನ 18 ಶ್ಲೋಕಗಳ ಸಾರವೆಲ್ಲವೂ ನದಿಯು ಸಮುದ್ರವನ್ನು ಸೇರುವಂತೆ ಸೇರಿದೆ. ಬಿಂಬಾಧರ ವರ್ಣನೆ, ಸ್ಮಿತವರ್ಣನೆ, ನಿರ್ಜರ ಜಲಕಿರಣಗಳಲ್ಲಿ ರವಿಕಿರಣ ಸಂಕ್ರಾಂತಿ, ಶೋಭ, ರೂಪಾಚಿತ್ರಣ -ಇವುಗಳಲ್ಲಿ ಕಾಳಿದಾಸನ ಪ್ರತಿಭೆಯು ಎದ್ದು

ಕಾಣುತ್ತದೆ. ಇವನಿಗೆ ಅಭಿಧಾವೃತ್ತಿಯಲ್ಲಿ ಅಭಿಮಾನಕ್ಕಿಂತ ವ್ಯಂಜನದಲ್ಲಿಯೇ ಪ್ರೀತಿಯು ಅಧಿಕವಾಗಿರುವಂತಿದೆ. ಅಂಗಿರರು ವರವನ್ನು ತಿಳಿಸಿ ಕನ್ಯಾರ್ಥಿಯಾಗಿ ಬಂದಾಗ ಪಾರ್ವತಿಯು ವರ್ಣನೆಯು ಅನ್ಯಾದೃಶ್ಯವಾಗಿದೆ.

ಏವಂ ವಾದಿ ನಿದೇವರ್ಷೌಪಾರ್ಶ್ವೇಪಿತುರಧೋಮುಖೀ
ಲೀಲಾ ಕಮಲಾ ಪತ್ರಾಣಿ ಗಣಯಾ ಮಾಸ ಪಾರ್ವತೀ

**ರಘುವಂಶ:**

ಇದೊಂದು ಮಹಾ ಕಾವ್ಯ. ಮಹಾಕಾವ್ಯದ ಲಕ್ಷಣಗಳೆಲ್ಲವೂ ಇಲ್ಲಿವೆ. ದಂಡಿಯು ಹೇಳಿರುವ ಲಕ್ಷಣಗಳೆಲ್ಲವನ್ನೂ ಇಲ್ಲಿ ಕಾಣಬಹುದು. ಇದು ಇಕ್ಷ್ವಾಕುವಂಶದ ಕಥೆಯಾದರೂ ರಘು ಮಹಾರಾಯನ ತೇಜಸ್ಸೇ ಪ್ರಧಾನವಾದುದರಿಂದ ಈ ಕಾವ್ಯಕ್ಕೆ ಈ ಹೆಸರು ಸಂದಿದೆ. ಋಗ್ವೇದದಲ್ಲಿ ಪ್ರಸಿದ್ಧ ಇಕ್ಷ್ವಾಕುವಿನ ವಂಶದ ಕಥೆ ಇದೆ. ಕಾವ್ಯವು ದಿಲೀಪನ ಆಳ್ವಿಕೆಯಿಂದ ಪ್ರಾರಂಭವಾಗುತ್ತದೆ. ಅವನಿಗೆ ಮಕ್ಕಳಿಲ್ಲ. ಇಂದ್ರನಿಗೆ ಸಹಾಯ ಮಾಡಿ ಹಿಂತಿರುಗುವಾಗ ಕಾಮಧೇನುವಿಗೆ ನಮಸ್ಕರಿಸದೆ ಬಂದುದರಿಂದ ಅದು ಇವನನ್ನು "ಮಕ್ಕಳಿಲ್ಲದವನಾಗು"ಎಂದು ಶಪಿಸಿತು. ಅದನ್ನು ತಿಳಿದು ಕಾಮಧೇನುವಿನ ಮಗಳಾದ ನಂದಿನಿಯ ಸೇವೆಮಾಡಿ ಬಂದು ಪ್ರಕರಣದಲ್ಲಿ ಅದನ್ನು ರಕ್ಷಿಸಲು ತನ್ನ ದೇಹವನ್ನೇ ಅರ್ಪಿಸಿದ್ದರಿಂದ ಆನಂದಿನಿಯು ಇವನಿಗೆ ಪುತ್ರನು ಜನಿಸಲಿ ಎಂದು ಹರಸಿತು. ರಘುವು ಹುಟ್ಟಿದನು. ವೀರಯುವಕನಾದನು. ಇಂದ್ರನೊಡನೆ ಹೋರಾಡಿ ಯಜ್ಞ ಪಶುವನ್ನೂ ತಂದನು. ಅಶ್ವಮೇಧ ಯಾಗಕ್ಕೆ ಅಣಿಯಾದನು. ತಂದೆಯಿಂದ ಪಟ್ಟಾಭಿಷಿಕ್ತನಾಗಿ. ತಂದೆಯ ವಾನಪ್ರಸ್ಥಾಶ್ರಮಕ್ಕೆ ಅವಕಾಶ ಕಲ್ಪಿಸಿದನು. ಇದು ಮೊದಲಿನ ಮೂರು ಅಧ್ಯಾಯಗಳ ಸಾರ.

4 ರಲ್ಲಿ ರಘುವಿನ ದಿಗ್ವಿಜಯ; ಪರ್ಶಿಯಾದೇಶದಿಂದ ಹಿಡಿದು ಮಲಯಾದವರೆಗೂ ಹಿಮಾಲಯದಿಂದ ಕೇರಳದವರೆಗೂ ತನ್ನ ಬಾಹುಬಲವನ್ನು ವಿಸ್ತರಿಸಿಕೊಂಡಿದ್ದು.

5ರಲ್ಲಿ ಇವನ ಔದಾರ್ಯ ಗುಣ. ಕೌತ್ಸನೆಂಬ ಬ್ರಾಹ್ಮಣನಿಗಾಗಿ ಕುಬೇರನೊಡನೆ ಯುದ್ಧ ಸನ್ನಾಹ. ಹಣಗಳಿಸಿದ್ದು. ಬ್ರಾಹ್ಮಣನ ಆಶೀರ್ವಾದ ಬಲದಿಂದ ಅವನ ಜನನ. ಅವನ ವೀರ್ಯ ಇತ್ಯಾದಿ

6 ಮತ್ತು 7ರಲ್ಲಿ -ಅಜನು ಸ್ವಯಂವರದಲ್ಲಿ ಸುನಂದಾ ರಾಜಕುವರಿಯನ್ನೂ ಮದುವೆಯಾಗಿದ್ದು. ಶತ್ರುರಾಜರನ್ನು ಮಾಯಾಶಕ್ತಿಯಿಂದ ಜಯಸಿದ್ದು 8ರಲ್ಲಿ -ರಘುವು ಸತ್ತಿದ್ದು -ಯೋಗಿಗಳಿಗೆ ಸಲ್ಲುವ ಸನ್ಮಾನ-ಕೊಟ್ಟಿದ್ದು ಅಜನ ಪತ್ನಿ ವಿಯೋಗ -ದಿಲೀಪನು ರಾಜ್ಯವಹಿಸಿಕೊಂಡದ್ದು ಇತ್ಯಾದಿ.

9ರಲ್ಲಿ-ವಸಂತ ಋತುವರ್ಣನೆ -ದಶರಥನಿಗೆ ಶಾಪ ಬಂದದ್ದು

10,11,12 - ರಾಮಾಯಣ. ಪುರ್ವಭಾಗ

13,14 -ರಾಮಾಯಣ -ಉತ್ತರ ಕಾಂಡ
16-ಕುಶನ ರಾಜ್ಯಭಾರ
17 ವಂಶಾವಳಿ
18 ಮತ್ತು 19 ಕಥಾಪೂರಣ

ರಘುವಂಶವನ್ನು ಓದದಿದ್ದರೆ ಕಾಳಿದಾಸನನ್ನು ಹೇಳಿದಂತೆ ಆಗುವುದಿಲ್ಲ. ಇದಕ್ಕೆ 20ಕ್ಕಿಂತಲೂ ಜಾಸ್ತಿ ವ್ಯಾಖ್ಯಾನಗಳಿವೆ. ಆದರೆ ದಕ್ಷಿಣಾವರ್ತನಾಥ, ಮಲ್ಲಿನಾಥ, ದಿನಕರ ಮಿಶ್ರ, ಚರಿತ್ರ ವರ್ಧನ ಇವರದು ಮುಖ್ಯವಾದವು. ಮಲ್ಲಿನಾಥರದೇ ಸರ್ವೋತ್ಕೃಷ್ಟವೆಂದು ಪರಿಗಣಿಸಲಾಗಿದೆ. ಇದರ ಹೆಸರು ಸಂಜೀವಿನೀ. ಈ ಕಾವ್ಯದಲ್ಲಿ ಕಾಳಿದಾಸನ ವಿಶ್ವವ್ಯಾಸಕ ಜ್ಞಾನವು, ಶಾಸ್ತ್ರ ಜ್ಞಾನವು ಚೆನ್ನಾಗಿ ಕಾಣುತ್ತದೆ. ಇಲ್ಲಿರುವ ಉಪಮೆಗಳನ್ನೇ ತೆಗೆದು ಅದನ್ನು ವಿಸ್ತರಿಸಿದರೆ, ಜ್ಞಾನಕ್ಕೆ ಎಲ್ಲಾ ವಿದ್ಯೆಗಳ ಸವಿಯೂಟವು ಸಿಕ್ಕಿದಂತಾಗುತ್ತದೆ.

**ಮೇಘದೂತ**

ಇದು ಒಂದು ಗೀತ ಕಾವ್ಯ. ಇದು ಪೂರ್ವ ಮೇಘ ಮತ್ತು ಉತ್ತರ ಮೇಘವೆಂದು ಎರಡು ಭಾಗದಲ್ಲಿದೆ. ಇದು ಪಕ್ವ ಬುದ್ಧಿಯಲ್ಲಿ ಬರೆದ ಗ್ರಂಥ. ಮಿತವಾಕ್ಯಗಳಲ್ಲಿ ವಿಶಾಲಭಾವನೆ. ರಸ ಪೂರ್ತಿ ಮೊದಲಾದವುಗಳನ್ನು ಇಲ್ಲಿ ನೋಡಬಹುದು. ಇದು ಒಬ್ಬ ಯಕ್ಷನ ಸಂದೇಶ. ಕರ್ತವ್ಯ ಲೋಪದಿಂದ ಶಿವನ ಶಾಪಕ್ಕೆ ತುತ್ತಾಗಿ ರಾಮಗಿರಿ ಎನ್ನುವ ತನ್ನ ಅಜ್ಞಾತ ವಾಸಸ್ಥಾನದಿಂದ ಮಾನಸಸರೋವರದ ಸಮೀಪದಲ್ಲಿರುವ ಅಲಕಾ ಎಂಬಲ್ಲಿಗೆ ಅವನ ಅರಮನೆ ಮತ್ತು ರಾಣಿ ವಾಸಕ್ಕೆ ಮೇಘವನ್ನು ದೂತನನ್ನಾಗಿ ಕಳುಹಿಸಿರುವ ಕಥೆಯೇ ಇಲ್ಲಿರುವುದು. ಜಿನಸೇನನು ಈ ಕಾವ್ಯವನ್ನು ಆಧಾರವಾಗಿ ತೆಗೆದುಕೊಂಡು ಅದರಲ್ಲಿ 120 ಪದ್ಯಗಳಿಂದ ಪಾರ್ಶ್ವನಾಥನ ಜೀವನ ಚರಿತ್ರೆಯನ್ನೂ ಬರೆದಿರುವನು. ಈ 120 ಪದ್ಯಗಳು ಮೇಘದೂತದ ಶ್ಲೋಕಗಳಿಗೆ ಸಮವಾಗಿರುವುದರಿಂದಲೂ ವಲ್ಲಭದೇವನು ಈ ಮೇಘದೂತನದ 111 ಶ್ಲೋಕಗಳಿಗೆ ಮಾತ್ರ ವ್ಯಾಖ್ಯಾನ ಬರೆದಿರುವುದರಿಂದಲೂ ದಕ್ಷಿಣಾವರ್ತನ ವ್ಯಾಖ್ಯಾನವು 110 ಪದ್ಯಗಳಿಗೆ ಮಾತ್ರ ವಿರುವುದರಿಂದಲೂ, ಮಲ್ಲಿನಾಥನ ವ್ಯಾಖ್ಯಾನವು 118 ಪದ್ಯಗಳಿರುವುದರಿಂದಲೂ, ಈ ಕಾವ್ಯಕ್ಕೆ ಪಾಠ ಭೇದವಿರುವುದೆಂದು ತಿಳಿಯಬಹುದು.

**ಋತುಸಂಹಾರ**

ಇದು ಗ್ರೀಷ್ಮ ಋತು ವರ್ಣನೆಯಿಂದ ಪ್ರಾರಂಭವಾಗಿದೆ. ವಸಂತ ಋತುವಿನಲ್ಲಿ ಕೊನೆಗೊಂಡಿದೆ. ಋತುಗಳು ವಸಂತದಿಂದ ಪ್ರಾರಂಭವಾದರೂ ಇವನು ಗ್ರೀಷ್ಮ ಋತುವಿನಿಂದ ಪ್ರಾರಂಭಿಸಿರುವುದನ್ನು ನೋಡಿದರೆ ಇವನಿಗೆ ಕಾವ್ಯ ದೃಷ್ಟಿಯೇ ಪ್ರಧಾನವಾಗಿರುವುದು ಕಂಡು ಬರುತ್ತದೆ. ರೈತರಿಗಾಗಿ ಬರೆದ ಜೋತಿಷ್ಯ ಗ್ರಂಥದಲ್ಲಿ ಯುವ ಪ್ರೇಮಿಗಳಿಗಾಗಿ ಬರೆದದ್ದು. ಪ್ರೇಮವು ಹೇಗೆ ಋತುಗಳನ್ನು ಅನುಕರಿಸುತ್ತದೆಂದು ತೋರಿಸುವ ಕಾವ್ಯವಿದು. ಭಾಷೆಯು ಸುಲಭವಾಗಿದೆ. ಹಾಗಿರುವುದರಿಂದಲೆ

ಇದಕ್ಕೆ ಯಾವ ವ್ಯಾಖ್ಯಾನವೂ ಇಲ್ಲ ಇದು ಕಾಳಿದಾಸನ ಪ್ರಾಯದ ಕಾವ್ಯ. ಕಾವ್ಯಾದರ್ಶ ಮತ್ತು ಕಾವ್ಯ ಪ್ರಕಾಶದಲ್ಲಿ ಇದರಿಂದ ಶ್ಲೋಕಗಳು ಉದಹರಿಸಲ್ಪಟ್ಟಿಲ್ಲ.

ಆಯಾ ಋತುವಿನಲ್ಲಿ ಮಾನವನ ಸ್ವಾಭಾವಿಕ ಪ್ರೇಮಸ್ವರೂಪವು ಬಾಹ್ಯ ಪ್ರಪಂಚದಲ್ಲಿ ಪ್ರಕೃತಿಯಲ್ಲಿ ಹೇಗೆ ಪ್ರತಿಬಿಂಬಿಸುತ್ತದೆ ಎನ್ನುವುದು ಈ ಕೆಳಗಿನ ಪಟ್ಟಿಯಲ್ಲಿ ಕಾಣಬಹುದು.

| ಹಿಂದೂ ತಿಂಗಳು | ಇಂಗ್ಲಿಷ್ ತಿಂಗಳು | ಋತುವಿನ ಹೆಸರು | ಪ್ರಕೃತಿ ಪ್ರತಿಬಿಂಬ |
|---|---|---|---|
| ಚೈತ್ರ, ವೈಶಾಖ | April-May | ವಸಂತ -Spring | ಲವಲವಿಕೆ Freshness |
| ಜೇಷ್ಠ, ಆಷಾಢ | June-July | ಗ್ರೀಷ್ಮ -Summer | ರಾತ್ರಿ ಹೃದಯಂಗಮ ಮತ್ತು ಚಂದ್ರಕಾಂತಿ Night delightful and Summer Brightness |
| ಶ್ರಾವಣ, ಭಾದ್ರಪದ | Aug-Sept | ವರ್ಷ -Rainy Season | ಮೇಘಾಚ್ಛನ್ನ Cloudy |
| ಆಶ್ವಯುಜ, ಕಾರ್ತೀಕ | Oct-Nov | ಶರತ್ -Autumn | ನವಯೌವನ Young Bride |
| ಮಾರ್ಗಶಿರ -ಪುಷ್ಯ | Dec-Jan | ಹೇಮಂತ -Winter | ಆಲಿಂಗನ Embrace |
| ಮಾಘ ಫಾಲ್ಗುಣ | Feb-March | ಶಿಶಿರ -cool Season | ಪ್ರಿಯಾಲಿಂಗನ Lovers Embraee |

ಇವನ ನಾಟಕಗಳು ಮುಂದೆ IVನೇ ಭಾಗದಲ್ಲಿ ವಿಮರ್ಶಿಸಲ್ಪಡುತ್ತವೆ.

## ಶೈಲಿ-ವೃತ್ತ-ಭಾಷೆ

ಗೌಡ ಮತ್ತು ವೈದರ್ಭಿ ಎನ್ನುವ ಪೂರ್ವ ಮತ್ತು ದಕ್ಷಿಣ ಕೋಶಗಳ ಭಾಷಾ ವೈಶಿಷ್ಟ್ಯದಲ್ಲಿ ಇವನಲ್ಲಿ ವೈದರ್ಭಿಗೆ ಪ್ರಾಶಸ್ತ್ಯವಿದೆ.

ಮಾಧುರ್ಯ ವ್ಯಂಜಕೈರ್ವರ್ಣೈಂ ರಚನಾಲಲಿತಾತ್ಮಿಕಾ
ಅವೃತ್ತಿರಲ್ಪವೃತ್ತಿರ್ವಾ ವೈದರ್ಭೀ ರೀತಿಷ್ಯತೇ

ಎನ್ನುವ ಲಕ್ಷಣವು ಇವನಲ್ಲಿ ಅಕ್ಷರಶಃ ಅನ್ವಯಿಸುತ್ತದೆ. ವೈದರ್ಭಿಯಲ್ಲಿ ಶಬ್ದರುಚಿ, ಅರ್ಥರುಚಿ, ಕಠಿಣ್ಯ ತ್ಯಾಗ, ಸಾಮಸಂತಾನ, ಸ್ವಾಭವಿಕತೆ, ಅರ್ಥ ವೈಶದ್ಯ, ಭಾವಗಾಂಭೀರ್ಯ ಮತ್ತು ಔನ್ನತ್ಯ ಅಂತರ್ಗತವಾಗಿದೆ ಎಂದು ದಂಡಿಯು ತಿಳಿದಿರುವುದಕ್ಕೆ ಕಾಳಿದಾಸನ ಕೃತಿಗಳೇ ಮೂಲವೆಂದರೂ ಅದು ಸುಳ್ಳಾಗಲಾರದು. ವ್ಯಾಗ್ಯಾರ್ಥ, ಗೂಢಾರ್ಥ, ಧ್ವನಿ -ಇವು ಇವನಿಗೆ ಬಹಳ ಪ್ರಿಯವಾಗಿವೆ. ಸೂರ್ಯನಂತಿರುವುದಕ್ಕಿಂತಲೂ ಚಂದ್ರನಂತಿರಬೇಕೆನ್ನುವುದೇ ಇವನ ಅಭಿಪ್ರಾಯ. ಕೆಳಗಣ ಈ ಎರಡು ಶ್ಲೋಕಗಳಲ್ಲಿ ಸ್ವಾಭಾವಿಕ ಪತಿ ಪತ್ನೀಸ್ನೇಹವನ್ನು ಎಷ್ಟು ಸುಂದರವಾಗಿ ಎಲ್ಲರಿಗೂ ಹಿತವಾಗುವಂತೆ ವರ್ಣಿಸಬಲ್ಲನೆನ್ನುವುದನ್ನು ನೋಡಬಹುದು.

ಮೇಘದೂತದಲ್ಲಿ

ಉತ್ಸಂಗೇ ವಾ ಮಲಿನವಸನೇ ಸೌಮ್ಯ ನಿಕ್ಷಿಪ್ಯ ವೀಣಾಂ
ಮದ್ಗೋತ್ರಾಂಕಂ ವಿರಚಿತಪದಂ ಗೇಯ ಮುದ್ಗಾತು ಕಾಮಾ ||
ತಂತ್ರೀ ಮಾರ್ದ್ರಾಂ ನಯನ ಸಲಿಲೈಃ ಸಾರಮಿತ್ವಾ ಕಥಂಚಿತ್
ಭೂಯೋಭಿಪ್ರಾಯಃ ಸ್ವಯಮಪಿ ಕೃತಾಂ ಮೂರ್ಛನಾಂ ವಿಸ್ಮರಂತೀ ||

ತ್ವಾಮಾಲೋಕ್ಯ ಪ್ರಣಯ ಕುಪಿತಾಂ ಧಾತುರಾಗೈ ಶ್ಶಿಲಾಯಾಂ
ಆತ್ಮಾನಂತೇ ಚರಣಪತಿತಂ ಯಾವದಿಚ್ಛಾಯಕರ್ತುಂ†
ಅಶ್ರೈಸ್ತಾವಾ ಮುಹುರುಪಚಿತೈಃ ದೃಷ್ಟಿ ರಾಲುಪ್ಯತೇಮೇ
ಕ್ರೂರಸ್ತಸ್ಮಿನ್ ಅಪಿನ ಸಹತೇ ಸಂಗ್ಗಮಂ ಸಾ ಕೃತಾಂತಂ ||

ಕುಮಾರ ಸಂಭವದಲ್ಲಿ ಈ ರಸ ಮಾಧುರ್ಯವನ್ನು ನೈಜಿತ ಮನೋಧರ್ಮವನ್ನು ನೋಡಿ ಯಾರುತಾನೆ ಆನಂದಭರಿತಾರಾಗಲಾರರು?

ಅದ್ಯ ಪ್ರಭೃತ್ಯವನತಾಂಗಿ! ತವಾಸ್ಮಿ ದಾಸಃ
ಕ್ರೀತಸ್ತಪೋಭಿಂತಿವಾದಿನಿ ಚಂದ್ರಮೌಳಾ†
ಅಹ್ನಾಯ ಸಾನಿಯಮಜಂ ಕ್ಲಮಮುತ್ಸಸರ್ಜ
ಕ್ಲೇಶಃ ಫಲೇನ ಹಿ ಪುನರ್ನ ವಾಂ ವಿಧತ್ತೇ ||

ಶೃಂಗಾರದ ಸವಿಯಾಟವನ್ನು

ಕೃತವಾನ ಸವಿಪ್ರಿಯಂ ನ ಮೋ ಪ್ರತಿಕೂಲಂನ ಚತೇಮಯಾಕೃತಂ
ಕಿಮಕಾರಣ ಮೇವ ದರ್ಶನಂ ವಿಲಪಂತ್ಯೈ ರತಯೇ ನದೀಯತೇ

ಎನ್ನುವ ಶ್ಲೋಕದಲ್ಲೂ, ಲಜ್ಜೆಯನ್ನು

ವ್ಯಾಹೃತಾ ಪ್ರತಿವಚೋನ ಸಂದಧೇ ಗಂತು ಮೈಚ್ಛದವ ಲಂಬಿತಾಂ ಶುಕಾ।
ಸೇವತೇಸ್ಮ ಶಯನಂ ಪರಾಂ ಜ್ಮುಖೀ ಸಾತಥಾಪಿರತಯೋಪಿನಾಃನಃ॥

ಎನ್ನುವ ಶ್ಲೋಕದಲ್ಲೂ, ಸ್ತ್ರೀ ಸ್ವಭಾವವನ್ನೂ

ಆತ್ಮಾನ ಮೂಲೋಕ್ಯ ಚ ಶೋಭ ಯಾನಾಂ ।
ಆದರ್ಶ ಬಿಂಭೇ ಸ್ಥಿಮಿತಾಯತಾಕ್ಷಿ।
ಹರೋಪಯಾನೇ ತ್ವರಿತಾಲು ಭೂವ
ಸ್ತ್ರೀಣಾಂ, ಪ್ರಿಯಾ ಲೋಕಫಲೋ ಹಿವೇಷಃ ।

ಎನ್ನುವ ಶ್ಲೋಕದಲ್ಲಿ, ರತಿಯ ದುಃಖದಲ್ಲಿ ದೈನ್ಯ ಸ್ಥಿತಿಯನ್ನು

ತೀವ್ರಾಭಿ ಸಂಗಪ್ರಭವೇಣ ವೃತ್ತಿಂ
ಮೋಹೇನ ಸಂಸ್ಥಂಭಯತೇಂದ್ರಿಯಾಣಾಂ
ಅಜ್ಞಾತಭರ್ತೃ -ವ್ಯಸನಾ ಮುಹೂರ್ತಂ
ಕೃತೋಪ ಕಾರೇವ ರತಿರ್ಬಭೂವ ॥

ಎನ್ನುವುದರಲ್ಲಿಯೂ, ಅಜನ ದುಃಖವನ್ನು

ವಿಲಲಾಪ ಸ ಬಾಷ್ಪ ಗದ್ಗದಂ ಸಹಜಾಮಪ್ಯಪಹಾಯ ಧೀರತಾಂ
ಅಭಿತಪ್ತಮಯೋಪಿ ಮಾರ್ದವಂ ಭಜತೇ ಕೈವಕಥಾ ಶರೀರಿಷು ।

ಎನ್ನುವುದರಲ್ಲಿಯೂ, ಪ್ರೇಮವಿಲಾಸವನ್ನು

ಧ್ರುವ ಮಸ್ಮಿ ಶರತ್ಯು ಚಿಸ್ಮಿತೇ ವಿದಿತಃ ಕೈತವವತ್ಸಲಸ್ತವ ।
ಪರಲೋಕಮ ಸನ್ನಿವೃತ್ತಯೇ ಯದನಾಪೃಚ್ಛ್ಯಗತಾಸಿ ಮಾಮಿತಃ॥

ಎನ್ನುವ ಪದ್ಯದಲ್ಲಿಯೂ, ಪತ್ನೀಕರ್ತವ್ಯವನ್ನು

ಗೃಹಣೀ ಸಚಿವಃ ಸಖೀಮಿಥಃ
ಪ್ರಿಯಶಿಷ್ಯಾ ಲಲಿತೇ ಕಲಾವಿಧೌ
ಕರುಣಾವಿಮುಖೇನ ಮೃತ್ಯುನಾ
ಹರತಾ ತ್ವಾಂ ವದಕಿಂ ನಮೇ ಹೃತಂ

ಎನ್ನುವಲ್ಲಿ ನೋಡಿ ನಲಿದಾಡಬಹುದು. ಭಾವನಾಔನ್ನತ್ಯದಲ್ಲಿ ಅದಕ್ಕನುಗುಣವಾದ ಶಬ್ದ ಮತ್ತು ವೃತ್ತ, ಯಮಕ, ಉಪಮೇ, ಅಲಂಕಾರ, ಉತ್ಪ್ರೇಕ್ಷೆ, ರಸ, ಧ್ವನಿ -ಇವೇ ಮೊದಲಾದವುಗಳಲ್ಲಿ ಕಾಳಿದಾಸನನ್ನು, ಇಲ್ಲಿಯವರೆಗೂ ಯಾರೂ ಮೀರಿಸಿಲ್ಲ. ಇವನ ಪ್ರಪಂಚಕ್ಕೆ ಇಳಿದರೆ ನಮ್ಮ ಪ್ರಪಂಚವನ್ನೂ ನಾನೇ ಮರೆಯುವೆ ಎನ್ನುವುದು ಅತಿಶಯೋಕ್ತಿಯಿಲ್ಲ.

## ೪೬. (೨) ಅಶ್ವಘೋಷ (ಕ್ರಿ.ಶ. ೧ನೇ ಶತಮಾನ)

### ಕಾಲ ಮತ್ತು ಜೀವನ

ಬೌದ್ಧ ಸಂಪ್ರದಾಯ ಗ್ರಂಥಗಳ ಪ್ರಕಾರ ಇವನು ಕಾನಿಷ್ಕನ ಗುರುವಾಗಿದ್ದನು. ಮೊದಲು ಬ್ರಾಹ್ಮಣ ಕುಲದಲ್ಲಿ ಹುಟ್ಟಿ ವಿದುಷಿಯಾದ ಸ್ವರ್ಣಾಕ್ಷಿಯ ಮಗನಾಗಿ ನಂತರ ಬೌದ್ಧ ಧರ್ಮವನ್ನು ಅವಲಂಬಿಸಿದನು. ಜನ್ಮಭೂಮಿ ಸಾಕೇತ ಪುರಿ. ಮಹಾಯಾನ ಸಂಪ್ರದಾಯದ ಮೂಲ ಪುರುಷರಲ್ಲಿ ಒಬ್ಬನೀತನು. ಆಚಾರ್ಯ ಪದವಿಗೇರಿದ್ದನು. ಇತ್ಸಿಂಗನು (ಕ್ರಿ.ಶ. 671-95) ತನ್ನ ಕಾಲದಲ್ಲಿ ಇವನ ಗ್ರಂಥಗಳನ್ನು ಓದುತ್ತಿದ್ದರೆಂದಿರುವನು. ಇವನ ಕಾಲ ಕ್ರಿ.ಶ 1ನೇ ಶತಮಾನ.

### ಗ್ರಂಥಗಳು

1. ಮಹಾಯಾನ ಶ್ರದ್ಧೋತ್ಪಾದ

2. ವಜ್ರಸೂಚಿ -ಎನ್ನುವ ಗ್ರಂಥಗಳು ಇವನದೆಂದು ಕೆಲವರು ಹೇಳಿರುವರು. ಇದು. ವಿವಾದಾಸ್ಪದವಾಗಿಯೇ ಉಳಿದಿದೆ. ಇಲ್ಲಿ ಜಾತಿ ಪದ್ಧತಿಯು ಖಂಡಿಸಲ್ಪಟ್ಟಿದೆ.

3 ಸೂತ್ರಾಲಂಕಾರದ ಅಥವಾ ಕಲ್ಪನಾ ಮಂಡಿತಿಕಾ -ಇಲ್ಲಿ ಭಾರತ, ರಾಮಾಯಣ ವೈಶೇಷಿಕ, ಜೈನ ಇವುಗಳ ಪ್ರಸ್ತಾಪವಿದೆ.

4. ಕಾವ್ಯಗಳಲ್ಲಿ ಮೊದಲನೆಯದು ಸೌಂದರಾನಂದ. ಬುದ್ಧನ ತಮ್ಮ ನಂದನನು ತನ್ನ ಪ್ರೇಯಸಿ ಸುಂದರಿಯೊಡನೆ ಬಾಳಿ ಕೊನೆಯಲ್ಲಿ ಹೇಗೆ ಬೌದ್ಧ ಧರ್ಮವನ್ನು ಆಶ್ರಯಿಸಿದನೆನ್ನುವ ಕಥೆಯನ್ನು ಮಹಾ ಮಗ್ಗ ಮತ್ತು ನಿಧಾನವೆನ್ನುವ ಸಂಪ್ರದಾಯ ಗ್ರಂಥದಿಂದ ತೆಗೆದುಕೊಂಡು 18 ಸರ್ಗಗಳಲ್ಲಿ ವರ್ಣಿಸಿರುವನು. ವೈದರ್ಭೀಶೈಲಿ -ಪ್ರಕೃತಿ ವರ್ಣನೆಯು ಹೃದಯಸಂಗಮವಾಗಿದೆ.

5. ಬುದ್ಧ ಚರಿತೆಯು ಎರಡನೆ ಕಾವ್ಯ. ಇದು 18 ಸರ್ಗಗಳಿದ್ದರೂ ಲಭ್ಯವಾಗಿರುವುದು 17 ಮಾತ್ರ. ಪಾಶ್ಚಾತ್ಯರು ಇವನು 13 ಸರ್ಗಗಳನ್ನು ಬರೆದನೆಂದು ಮಿಕ್ಕ ಸರ್ಗಗಳನ್ನು ಅಮೃತಾನಂದನೆನ್ನುವರು ಬರೆದನೆಂದು ಅಭಿಪ್ರಾಯ ಪಟ್ಟಿರುವರು. ಇದರಲ್ಲಿ ರಾಮಾಯಣದ ಪ್ರಭಾವವು ಎದ್ದು ಕಾಣುತ್ತದೆ. ಸುಮಂತ್ರನು ರಾಮನನ್ನು ಬಿಟ್ಟು ಬಂದಂತೆ ಬುದ್ಧನನ್ನು

ಅವನ ಸಾರಥಿಯು ಬಿಟ್ಟು ಬಂದುದು. ಸೀತೆಯ ಪ್ರಲಾಪದಂತೆ ಯಶೋಧರೆಯ ಪ್ರಲಾಪ. ರಾವಣನ ಅಂತಃಪುರದಂತೆ ಬುದ್ಧನ ಅಂತಃಪುರ ಹೀಗೆ ವರ್ಣಿತವಾಗಿದೆ. ಕಾಳಿದಾಸನನ್ನು ಅನುಕರಿಸಲು ಪ್ರಯತ್ನವು ನಡೆದಿದ್ದರೂ ಅವನ ಮಟ್ಟಕ್ಕೆ ಏರಿಲ್ಲ. ಬುದ್ಧ ಚರಿತೆಯ 3 ನೇ ಸರ್ಗದ 13-24 ಶ್ಲೋಕಗಳು ರಘುವಂಶದ 7ನೇ ಸರ್ಗದ 5-9 ಮತ್ತು 15ನೇ ಶ್ಲೋಕಗಳು ಅನುಕರಿಸುತ್ತದೆ.

6. ಗಂಡೀಸ್ತೋತ್ರವು ಇವನ ಹೆಸರಿನಲ್ಲಿದೆ

7 1910ರಲ್ಲಿ ಲೂಡರ್ಸ್ (Luders) ಮಹಾಶಯನು ಶಾರಿಪುತ್ರ ಎನ್ನುವ 9 ಅಂಕಗಳ ನಾಟಕವನ್ನು ತುರಪಾನ್ (Turapan) ಎನ್ನುವ ಕಡೆ ಕಂಡುಹಿಡಿದನು. ಇಲ್ಲಿ ಶಾರಿಪುತ್ರಮೌದ್ಗಲಾಯನನು ಬುದ್ಧನಿಂದ ಉಪದೇಶವನ್ನು ಗ್ರಹಿಸಿದ್ದು ವರ್ಣಿತವಾಗಿದೆ. ಇದು ಒಂದು ರೂಪಕ. ಪ್ರಭೋದ ಚಂದ್ರೋದಯ ಮತ್ತು ಸಂಕಲ್ಪ ಸೂರ್ಯೋದಯವೆನ್ನುವ ನಾಟಕಗಳಂತೆ ಬುದ್ಧಿ, ಧೃತಿ, ಕೀತಿ, ಮೊದಲಾದ ಮನೋಭಾವಗಳು ಸಜೀವಗಳಾಗಿ ಅಭಿನಯಿಸಿದೆ. ಈ ನಾಟಕದ ಶೈಲಿಯನ್ನು ನೋಡಿದರೆ ಅಸಂಸ್ಕೃತವೆಂದು ತೋರುತ್ತದೆ. ಅಶ್ವಘೋಷನದೆಂದು ಹೇಳಲು ಸಾಧ್ಯವಾಗುವುದಿಲ್ಲ.

## ಶೈಲಿ ಮತ್ತು ಭಾಷೆ

ಕಾಳಿದಾಸನಂತೆ ಇವನೂ ವೈದರ್ಭಿಯನ್ನೇ ಆಶ್ರಯಿಸಿರುವನು. ಅರ್ಥಾಲಂಕಾರವೇ ಶಬ್ದಾಲಂಕಾರಕ್ಕಿಂತ ಉತ್ತಮವೆಂದು ಇವನು ಕಾರ್ಯತಃ ತೋರಿಸಿರುವನು. ನೀರಸವೈರಾಗ್ಯ ವಿಷಯ ಹೇಳುವಾಗಲು ರಸಭರಿತವಾಗಿಯೇ ಹೇಳಿರುವನು.

1 ಉಪಮಾ ಮತ್ತು ರೂಪಕವು ರಾಮಾಯಣದಲ್ಲಿರುವಂತಿದೆ.

a ಶಶಿಪತೇ ವೃತ್ತ ಇವೋತ್ಸವೇಧ್ವಜಃ

b. ನಿಶ್ಚಲೈಃಪ್ರೀತಿವಿಕಜ್ಯೈಃ ಪಿಬಂತ್ಯಾ ಇವಲೋಚನೈಃ ||

c. ಸುವರ್ಣ ಕಲಶ ಪ್ರಖ್ಯಾನ್ ದರ್ಶಯಂತ್ಯಃ ಪಯೋದರಾನ್ ||

d. ವಿಬಧೌ ಕರಲಗ್ನ ವೇಣುರನ್ಯಾ ಸ್ತನ ವಿಶ್ರ ಸ್ತಪಿತಾಂಶುಕಾಶಯಾನಾ ||
ಋಜುಷಟ್ಪದ ಪಂಕ್ತಿ ಜುಷ್ಟ ಸದ್ಮಾ
ಜಲಫೇನ ಪ್ರಹಸತ್ತ ಟೌನ ದೀವ

ಸುಲಭ ಮತ್ತು ರಸ ಶೈಲಿ
ತಥಾಪಿದಾವೀಯಸಿ ನಿರ್ಜಿತೇಗತೇ
ದಿಶಃ ಪ್ರಸೇದುಃ ಪ್ರಬಧೌದಿ ಶಾಕರಃ
ದಿವೋನಿಪೇತುಃ ಭುವಿ ಪುಷ್ಪ ವೃಷ್ಟಯೋ
ರರಾಜ ಯೋಷೇವ ವಿಕಲ್ಮಷಾ ನಿಷಾ ॥

ಈ ಶೈಲಿಯು ಭಾಗವತದ ಕೃಷ್ಣಾವತಾರ ಘಟ್ಟದಲ್ಲಿ ಹೇಳಿರುವ

ದಿಶಃ ಪ್ರಸೇದುರ್ಗಗನಂ ನಿರ್ಮಲೋಪಡುಗಣೋದಯಂ ॥
ಮಹೀ ಮಂಗಳ ಭೂಯಿಷ್ಠಪುರಗ್ರಾಮ ಪ್ರಜಾಕರ ॥

ಮೊದಲಾದ ಶ್ಲೋಕಗಳಲ್ಲಿ ಇರುವಂತಿದೆ. ಅದೇ ರೀತಿಯ ವರ್ಣನೆಗಳು ಇವೆ.

3. ಕರುಣಾರಸ

ಪುನಃ ಕಾಮೋರೋ ನಿವೃತ್ತ ಇತ್ಯಥೋ
ಗವಾಕ್ಷ ಮೂಲಾಃ ಪ್ರತಿಪೇದಿರೇಂಗನಾಃ ।
ವಿವಿಕ್ತ ತೃಷ್ಣಂಚ ನಿಶಮ್ಯ ವಾಜಿನಾಂ
ಪುನರ್ಗವಾಕ್ಷಾಣಿ ಪಿಧಾಯ ಚುಕ್ರುಶಃ ॥

4 ಶೋಕ ತೋರಿಸುವಾಗಲೂ ಗಾಂಭೀರ್ಯ

ಶುಚಾ ಶಯಿತ್ವಾ ಶಮನೇ ಹಿರಣ್ಮಯ್ಯೇ
ಪ್ರಬೋಧ್ಯವಾಗೋ ನಿಶಿತೋರ್ಯನಿಷ್ಪನ್ನೈಃ ।
ಕಥಂಬಂತ ಸ್ವಾಪ್ಸ್ಯತಿ ಸೋದ್ಯಮೋ ಪ್ರತೀ
ಪದ್ಮೈ ಕದೇಶಾಂತರೀತೇ ಮಹಾತಲೇ ॥

5. ವೈ ಕ್ಲಬ್ಯ

ಮಹತ್ಯಾತೃಷ್ಣಯಾ ದುಃಖೈಃ ಗರ್ಭೇ ಣಾಸ್ಮಿಯ ಯಾಧೃತಃ
ತಸ್ಯಾನಿಷ್ಫಲಯತ್ನಾಯಾಃ ಕ್ವಾಹಂ ಮಾತುಃ ಕೃಸಾಮಮ ॥

## ಇವನ ಪ್ರಭಾವ

ಇವನ ಪ್ರಭಾವವು ಕವಿತಾ ಮತ್ತು ಕಾವ್ಯ ಪ್ರಪಂಚಕ್ಕಿಂತಲೂ ಬುದ್ಧ ಸಂಪ್ರದಾಯದಲ್ಲಿ ದೀಪ್ತಿಮತ್ತಾಗಿದೆ. ಇವನ ಬುದ್ಧ ಚರಿತ ಮತ್ತು ಸೌಂದರಾನಂದ ಕಾವ್ಯಗಳ ಆಧಾರದ ಮೇಲೆ ಸಂಪ್ರದಾಯಗ್ರಂಥಗಳು ಏಳಲು ಅವಕಾಶವಾಯಿತು. ಶತಪಂಚಾಶತಿಕ ಸ್ತೋತ್ರವನ್ನು ಬರೆದ ಮಾತೃಚೇತು ಎನ್ನುವನು ಅಶ್ವಘೋಷನೇ ಎಂದು ಕೆಲವರು ಅಭಿಪ್ರಾಯಪಟ್ಟಿರುವರು. ಆರ್ಯಶೂರನೇ ಇವನೆಂದು ಮತ್ತು ಕೆಲವರು. ಆದರೆ ಇದು ಸರಿಯಲ್ಲ. ಈ ಗ್ರಂಥವು ಹಿತಶೈಲಿಯಲ್ಲಿ ಬರೆಯಲ್ಪಟ್ಟು ಸಾತ್ವಿಕ ಸ್ವಭಾವವನ್ನೂ ಭಕ್ತಿಯನ್ನೂ ಬೆಳೆಸುವ ಸಾಧನ ಗ್ರಂಥವಾಗಿದೆ. ಬೌದ್ಧರಲ್ಲಿ ಇಂತಹ ಗ್ರಂಥಗಳಿಗೆ ವಿನಯ ಎಂದು ಹೆಸರು. ಸಿರ್ವಾಸ್ತಿವಾದಿಗಳು ಎರಡು ವಿಧ ವಿನಯ ಗ್ರಂಥಗಳನ್ನು ಹೊಂದಿರುವರು. ಮಧುರೆಯಲ್ಲಿ ಒಂದು, ಕಾಶ್ಮೀರದಲ್ಲಿ ಒಂದು. ಮೊದಲನೆಯದರಲ್ಲಿ ಕಥಾ ಭಾಗಗಳು ಸೇರಿವೆ. ಇವುಗಳಿಗೆ ಅವಧಾನ ಅಥವಾ ಜಾತಕವೆಂದು ಹೆಸರು. ಕಾಶ್ಮೀರ ಸಂಪ್ರದಾಯದಲ್ಲಿ ಅವಧಾನಗಳಿಲ್ಲ. ದಿವ್ಯಾವಧಾನಗಳಿಲ್ಲಾ ಮೊದಲನೇ ವಿನಯದಿಂದಲೇ ಎಂದು ಕಂಡುಬರುತ್ತದೆ. ಈ ಕಥೆಗಳು ನಾನಾ ಮುಖವಾಗಿ ಸಿದ್ಧಾಂತದಲ್ಲಿ ಶ್ರದ್ಧೆಯನ್ನೂ, ಬುದ್ಧನಲ್ಲಿ ಭಕ್ತಿಯನ್ನೂ ಬೆಳೆಸಲು ಸಹಕಾರಿಗಳಾಗಿವೆ. ಪಿಟಕದಲ್ಲಿ ವಿನಯಪಿಟಕ ಸೇರಿರುವಂತೆ ಸಂಸ್ಕೃತದಲ್ಲಿ ದಿವ್ಯಾವಧಾನವೆನ್ನುವ ಸಂಸ್ಕೃತ ಗ್ರಂಥವಿದೆ. ಇದರ ಕಥಾಭಾಗದಲ್ಲಿ ಧರ್ಮಸ್ವರೂಪವು ಅಡಗಿದೆ. ಪ್ರಕೃತಿ, ಅನಂತ, ಅಶೋಕನ ಪುತ್ರ ಕುನಾಲನ ಚರಿತ್ರೆ, ರೂಪವತಿಯ ತ್ಯಾಗ, ಮೂರನ ಕಥೆ, ಬೋಧಿಸತ್ವಗ ಚರಿತ್ರೆ -ಇವೆಲ್ಲವೂ ಇವೆ. ಇವೆಲ್ಲಕ್ಕೂ ಆಧಾರ ಬುದ್ಧ ಚರಿತೆ ಮತ್ತು ಸೌಂದರಾನಂದ.

ಈ ಅಶ್ವಘೋಷನ ಪ್ರಭಾವವು ಆರ್ಯಶೂರನ ಮೇಲೆ ಬೀರಿದಂತಿದೆ. ಇವನ ಜಾತಕಮಾಲಾ ಎಂಬ ಸಂಸ್ಕೃತ ಗ್ರಂಥವು ಕಾವ್ಯ ಶೈಲಿಯಲ್ಲಿದೆ. ಇತ್ಸಿಂಗನಿಗೆ ಈ ಗ್ರಂಥ ಪರಿಚಯವುಂಟು. ಅಜಂತಾ ಗುಹೆ ಚಿತ್ರಗಳಲ್ಲಿ ಇಲ್ಲಿಯ ಕಥೆಯೂ ಶ್ಲೋಕಗಳೂ ಇವೆ. ಇವನು 6ನೇ ಶತಮಾನದವನು. ಇವನ ಶೈಲಿ ಹಿತವಾಗಿದೆ. ಸಮಸ್ತಪದಗಳಿದ್ದರೂ ಬಹಳ ಎಚ್ಚರಿಕೆಯಿಂದಲೂ ಮತ್ತು ಹುರುಪಿನಿಂದಲೂ ಕೂಡಿದೆ. ಪಾಲಿಯ ಸಹವಾಸವು ಚೆನ್ನಾಗಿ ಕಂಡುಬರುತ್ತದೆ. ಇದು ಗದ್ಯ ಪದ್ಯ ಮಿಶ್ರ ಗ್ರಂಥ. ಇದರಲ್ಲಿ ಕುಮಾರಲಾತನ ಪ್ರಭಾವವಿದೆ. ಇವನಲ್ಲದೆ ಮಿಕ್ಕ ಬೌದ್ಧ ಗ್ರಂಥಕಾರರು ಸಾಹಿತ್ಯ ಮತ್ತು ಕಾವ್ಯದ ದೃಷ್ಟಿಯಿಂದ ಪ್ರಸಿದ್ಧರಾಗಿಲ್ಲ. ಅಶ್ವಘೋಷನ ಪ್ರಭಾವದಿಂದ ಸಂಸ್ಕೃತದಲ್ಲೇ ವ್ಯವಹರಿಸಿ ಸಾರ್ವಜನಿಕ ವಿಷಯವನ್ನು ತಿಳಿಸಬೇಕೆನ್ನುವ ಕುತೂಹಲವು ಎದ್ದು ನಾಗಾರ್ಜುನನ ಮಾಧ್ಯಮಿಕ ಕಾರಿಕೆ (2ನೇ ಶತ) ಆರ್ಯದೇವನ ಚತುಶ್ಶತಿಕಾ (ಕ್ರಿ.ಶ. 250) ಚಂದ್ರಗೋಮಿಯ ಶಿಷ್ಯಲೇಖಧರ್ಮ ಕಾವ್ಯ ( ಕ್ರಿ.ಶ. 470) ವಲ್ಲಭದೇವನ ಸುಭಾಷಿತಾವಳಿ (7ನೇ ಶತಮಾನ) ಮತ್ತು ಶಾಂತಿದೇವನ ಶಿಕ್ಷಾಸಮುಚ್ಚಯ, ಭೋದಿಚರ್ಯಾವತಾರ (7ನೇ ಶತಮಾನ) ಮೊದಲಾದ ಗ್ರಂಥಗಳು ಎದ್ದವು.

## ೪೭. (೩) ಭರ್ತೃ ಮೆಂಠ (ಕ್ರಿ.ಶ. ೪೩೦)

ಇವನು ಭಟ್ಟಿಯೂ ಅಲ್ಲ. ಭರ್ತೃಹರಿಯೂ ಅಲ್ಲ. ಭಟ್ಟಿ 6ನೇ ಶತಮಾನದ ಕೊನೆ 7ನೇ ಶತಮಾನದ ಮೊದಲು ಇದ್ದವನು. ಭರ್ತೃಹರಿ 7ನೇ ಶತಮಾನದ ಉತ್ತರ ಭಾಗದಲ್ಲಿದ್ದವನು. ಭರ್ತೃ ಮಂಠನು ಮಾತೃಗುಪ್ತನ ಆಸ್ಥಾನ ಪಂಡಿತ. ರಾಜತರಂಗಿಣಿಯಲ್ಲಿ ಇವನ ಪ್ರಸ್ತಾವಿದೆ. ರಾಜಶೇಖರನು ಇವನನ್ನು ಹೇಳಿರುವನು. ಇವನ ಕಾವ್ಯ ಹಯಗ್ರೀವವಧ. ಇದರಿಂದ ಮಮ್ಮಟನು ಶ್ಲೋಕಗಳನ್ನು ಉದಹರಿಸಿ "ಅಂಗಸ್ಯಾಪ್ಯತಿ ವಿಸ್ಮೃತಿಃ" ಎನ್ನುವ ದೋಷವನ್ನು ಹೇಳಿರುವನು

## ೪೮. ಭಾರವಿ (ಕ್ರಿ. ಶ. ೫೫೦)

**ಕಾಲ**

ಹನ್ನೊಂದನೇ ಶತಮಾನದವನಾದ ಮಮ್ಮಟನು ತನ್ನ ಕಾವ್ಯ ಪ್ರಕಾಶದಲ್ಲಿ ಇವನ ಕಿರಾತಾರ್ಜುನೀಯ ಕಾವ್ಯದಿಂದ ಶ್ಲೋಕಗಳನ್ನು ಉದ್ಧರಿಸಿರುವನು. ಏಳನೇ ಶತಮಾನದ ಉತ್ತರ ಭಾಗದಲ್ಲಿದ್ದ ಮಾಘನಲ್ಲಿ ಇವನ ಪ್ರಭಾವವು ಚೆನ್ನಾಗಿ ಕಂಡುಬರುತ್ತದೆ. ಕ್ರಿ. ಶ.. 647 ರಲ್ಲಿದ್ದ ಬಾಣನಲ್ಲಿ ಇವನ ಪ್ರಭಾವವು ಕಂಡುಬರುವುದಿಲ್ಲ. ಚಾಲುಕ್ಯ ರಾಜ ಪುಲಿಕೇಶಿ ದೊರೆಯು ಪ್ರಶಸ್ತಿ ಲೇಖನದಲ್ಲಿ ಭಾರವಿಯ ಉಲ್ಲೇಖವಿದೆ.

> ಯೇನಾಯೋಜಿ ನವೇಶ್ಮ. ಸ್ಥಿರಮರ್ಥವಿಧೌ ವಿವೇಕಿನಾ
> ಜಿನವೇಶ್ಮ । ಸವಿಜಯತಾಂ ರವಿಕೀರ್ತಿಃ ಕವಿತಾಶ್ರಿತ
> ಕಾಳಿದಾಸ ಭಾರವಿಕೀರ್ತಿಃ ॥

ಎರಡನೇ ಪುಲಿಕೇಶಿಯ ತಾಮ್ರ ಶಾಸನದಲ್ಲಿ ಇವನ ಹೆಸರಿದೆ. ಇವರ ಕಾಲ ಕ್ರಿ. ಶ. 634. ಇದಕ್ಕೆ ಪೂರ್ವದಲ್ಲಿ ಭಾರವಿ ಇದ್ದನೆನ್ನುವುದು ನಿಶ್ಚಿತವಾಗುತ್ತದೆ. ಕಾಳಿದಾಸನ ಪ್ರಭಾವವು ಇವನಲ್ಲಿ ಚೆನ್ನಾಗಿ ಕಾಣುವುದರಿಂದ ಕಾಳಿದಾಸನ ಮತ್ತು ಪುಲಿಕೇಶಿಯ ಶ್ರೀ ರಾಹೋಳ ಶಿಲಾ ಶಾಲನದ ಮಧ್ಯವರ್ತಿಕಾಲದಲ್ಲಿದ್ದವನೆಂದು ಹೇಳಬಹುದು. ಪುಲಿಕೇಶಿ ವಿಷ್ಣುವರ್ಧನನ ಸಭಾ ಪಂಡಿತನಾಗಿದ್ದಿರಬೇಕೆನ್ನುವ ಊಹೆಯಿಂದ 6ನೇ ಶತಮಾನದ ಮಧ್ಯಭಾಗದಲ್ಲಿ ಇವನನ್ನಿಡಬಹುದು.

ನೈಷದ ಕಾವ್ಯದಲ್ಲಿರುವ

> ತಾವದ್ಭಾ ಭಾರವೇ ರ್ಭಾತಿ ಯಾವನ್ಮಾಘಸ್ಯ ನೋದಯಃ ।
> ಉದಿತೇ ನೈಷಧೇ ಕಾವ್ಯೇಕ್ವ ಮಾಘಃಕ್ವಚ ಭಾರವಿಃ ॥

ಎನ್ನುವ ಶ್ಲೋಕದ ಆಧಾರದ ಮೇಲೆ ಕೆಲವರು. ಭಾರವಿ -ಮಾಘ ಇಬ್ಬರೂ ಸಮ ಕಾಲಿಕರೆಂದಿರುವರು. ಇದು ಸರಿಯಾಗಿ ಕಾಣುವುದಿಲ್ಲ. ನೈಷಧ ಉತ್ತರ ಕಾಲದಲ್ಲಿಯೂ ಇಂತಹ ಶ್ಲೋಕಗಳಿವೆ.

ಮತ್ತೆ ಕೆಲವರು ಇವನ ಕಿರಾತಾರ್ಜುನೀಯದಲ್ಲಿ ಬಂದಿರುವ

ಉರಸಿಶೂಲಭೃತಃ ಪ್ರತಿಹತಾಯುಹುಃ
ಪ್ರತಿಪತಿಂ ಯಯುರರ್ಜುನ- ಮುಷ್ಟಯಃ ।

ಭೃಶರಯೋ ಇವ ಸಹ್ಯಮಹೀಭೃತಃ ।
ಪ್ರಥನಿರೋಧಸಿ ಸಾಧುಮಹೋ ರ್ಮಮ ॥

ಎನ್ನುವ ಶ್ಲೋಕದಲ್ಲಿ "ಸಹ್ಯ ಮಹೀಭೃತಃ" ಎನ್ನುವುದಕ್ಕೆ ಸಹ್ಯಾದ್ರಿ ಎಂದು ಅರ್ಥ ಮಾಡಿಕೊಂಡು ಇವನು ಮರಾಠ ದೇಶದವನೆಂದು ಊಹಿಸಿರುವನು. ಇದು ಸತ್ಯಾಂಶವಲ್ಲ. ಪದಪ್ರಯೋಗಗಳಿಂದಲೇ ಹೀಗೆ ಊಹೆ ಮಾಡುವುದು ಉಚಿತವಲ್ಲ. ಕವಿಗಳು ಅನೇಕ ನದಿ. ಪರ್ವತ. ವನಸ್ಥಳ ಇತ್ಯಾದಿಗಳನ್ನೂ ಪ್ರಸಂಗಾನುಸಾರವಾಗಿ ವರ್ಣಿಸುವುದುಂಟು. ಇದರಿಂದಲೇ ಕವಿಗಳ ಜನ್ಮಸ್ಥಳವನ್ನು ನಿಶ್ಚಯಿಸುವುದು ಸರಿಯಲ್ಲ.

**ಜೀವನ**

ಕೌಶಿಕಗೋತ್ರದ ನಾರಾಯಣ ಸ್ವಾಮಿಯ ಮಗ. ಇವನಿಗೆ ದಾಮೋದರ ಎನ್ನುವ ಹೆಸರಿತ್ತು. ಹಿಂದೂ ದೇಶದ ವಾಯುವ್ಯ ದಿಕ್ಕಿನಲ್ಲಿದ್ದ ಆನಂದಪುರದಲ್ಲಿ ಇವನ ಪೂರ್ವಿಕರಿದ್ದರು. ನಂತರ ದಕ್ಷಿಣಕ್ಕೆ ಅಂದರೆ ನಾಸಿಕ್ಕಕ್ಕೆ ಬಂದರು. ಒಂದು ಸಲ ಇವನು ಆ ದೇಶದ ರಾಜಕುಮಾರ ವಿಷ್ಣುವರ್ಧನನೊಡನೆ ಬೇಟೆ ಜನಗಳೊಡನೆ ಹೋಗಬೇಕಾಗಿ ಬಂದು ಮಾಂಸವನ್ನು ತಿನ್ನಬೇಕಾಯಿತು. ಆದಕ್ಕಾಗಿ ಆ ಪಾಪವನ್ನು ಹೋಗಲಾಡಿಸಿಕೊಳ್ಳಲು ತೀರ್ಥಯಾತ್ರೆಗೆ ಹೊರಟನು. ದಾರಿಯಲ್ಲಿ ದುರ್ವಿನೀತ ಎನ್ನುವನೊಡನೆ ಪರಿಚಯವಾಯಿತು. ಈ ದುರ್ವಿನೀತನು ಗಂಗ ದೇಶದ ರಾಜಕುಮಾರ. ತಂದೆಯಿಂದ ದೇಶಭ್ರಷ್ಟನಾದನು. ಈ ಭಾರವಿಯ ಕೀರ್ತಿಯು ಕಾಂಚಿ ದೊರೆ ಸಿಂಹ ವಿಷ್ಣುವಿಗೆ ತಲುಪಿತು. ಆ ಸಿಂಹ ವಿಷ್ಣುವಿನ ಮಗ ಮಹೇಂದ್ರ ವಿಕ್ರಮನ ರಾಜಾಸ್ಥಾನದಲ್ಲಿ ಉಳಿದನು. ಇವನ ಮಗ ಮನೋರಥ. ಮನೋರಥನ ಮೊಮ್ಮಗನೇ ಪ್ರಸಿದ್ಧ ಅಲಂಕಾರಕ ಮತ್ತು ಕವಿದಂಡೀ.

ಭಾರವಿಯ ಐಶ್ವರ್ಯ ಮತ್ತು ದಾರಿದ್ರ್ಯದ ವಿಷಯದಲ್ಲಿ ಅನೇಕ ಕಥೆಗಳಿವೆ. "ಸೂರ್ಯನಾರಾಯಣ ಶಾಸ್ತ್ರಿಯು ತನ್ನ "Life of Sanskrit poets" ಎನ್ನುವ ಗ್ರಂಥದಲ್ಲಿ ಇದೆಲ್ಲವನ್ನೂ ಸಂಗ್ರಹಿಸಿರುವನು. ಸಾಮಾನ್ಯವಾಗಿ ಅವನ ದಾರಿದ್ರ್ಯಕ್ಕೆ ಸಂಬಂಧಪಟ್ಟ ಈ ಒಂದು ಕಥೆಯನ್ನು

ಎಲ್ಲರೂ ತಿಳಿದಿರುವರು. ಇವನು ಪರಮದರಿದ್ರನಾಗಿ ಹೆಂಡತಿಯಿಂದ ಮೂದಲಿಸಲ್ಪಟ್ಟು ಆದೇಶದ ದೊರೆಯನ್ನು ಕಾಣಲು ಹೊರಟು ಒಂದು ಸರೋವರದ ಕಮಲದ ಎಲೆಯ ಮೇಲೆ ಉಗುರಿನಿಂದ ತೋರಿದ ಒಂದು ಶ್ಲೋಕವನ್ನು ಬರೆದು ತೇಲಿಬಿಟ್ಟನು. ಆದೇಶದ ರಾಜನು ಅಲ್ಲಿಗೆ ಬೇಟೆಯ್ಯಾಡ್ದದಲ್ಲಿ ಬಂದು ನೀರು ಕುಡಿಯುವಾಗ ಆ ಶ್ಲೋಕವನ್ನು ನೋಡಿ ಅದನ್ನು ಬರೆದ ಇವನನ್ನು ಅರಮನೆಗೆ ಬರುವಂತೆ ಹೇಳಿ ಹೋದನು. ಆದರೆ ಭಾರವಿಗೆ ಅರಮನೆಗೆ ಕಾವಲುಗಾರರಿಂದ ಪ್ರವೇಶ ಸಿಗಲಿಲ್ಲ. ದೊರೆಯು ತನ್ನ ರಾಣಿವಾಸದಲ್ಲಿ ಭಾರವಿಯು ಬರೆದಿದ್ದ ಶ್ಲೋಕವನ್ನು ಕಣ್ಣಿಗೆ ಕಾಣುವಂತೆ ಬರೆಸಿದ್ದನು. ಕಾಲಕಳೆಯಿತು. ಒಂದು ವರ್ಷವಾದ ಮೇಲೆ ದೊರೆಯು ಒಂದು ವಾರ ಬೇಟೆಗೆ ಹೋಗುವುದಾಗಿ ಹೇಳಿಹೋದನು. ಆದರೆ ಮೂರನೇ ರಾತ್ರಿ ಒಂದು ನೋಡಲಾಗಿ ರಾಣಿಯು ಒಬ್ಬ ಪ್ರಾಯದವನೊಡನೆ ಮಲಗಿರುವುದನ್ನು ಕಂಡು ರಾಣಿಯನ್ನು ಕೊಲ್ಲಲು ಪ್ರಯತ್ನಿಸಿದಾಗ ಆ ಶ್ಲೋಕವು ಕಣ್ಣಿಗೆ ಕಾಣಿಸಿತು. ರಾಣಿಯನ್ನು ಎಬ್ಬಿಸಿ ವಿಚಾರಿಸಲಾಗಿ, ಆ ಹುಡುಗನು ಹಿಂದೆ ತಪ್ಪಿಸಿಕೊಂಡಿದ್ದ ತನ್ನ ಮಗನೆಂದು ತಿಳಿದು ಸಂತೋಷಪಟ್ಟು, ಭಾರವಿಯನ್ನು ಕರೆಯಿಸಿ ಅವನನ್ನು ಸತ್ಕರಿಸಿದನು. ಆ ಶ್ಲೋಕವು ಹೀಗಿದೆ

> ಸಹಸಾವಿದಧೀತ ನ ಕ್ರಿಯಾಮ ವಿವೇಕಃ ಪರಮಾಪದಾಂಪದಂ
> ವೃಣತೇ ಹಿವಿಮೃಶ್ಯಕಾರಿಣಂ ಗುಣಲುಬ್ಧಾಃ ಸ್ವಯಮೇವ ಸಂಪದಃ
> (ಕಿರಾತಾರ್ಜುನೀಯ (II-30)

ಕಿರಾತಾರ್ಜುನೀಯ ಕಾವ್ಯವೊಂದೇ ಇವನದಾಗಿ ಈಗ ಲಭ್ಯವಾಗಿದೆ. ಇದು 18 ಅಧ್ಯಾಯವುಳ್ಳದ್ದು. ಇದು ಒಂದು ಮಹಾ ಕಾವ್ಯ. ಸ್ವಲ್ಪ ಪದಗಳಿಂದ ವಿಷದಾರ್ಥ ವರ್ಣನೆಯೇ ಈ ಕಾವ್ಯದ ವೈಶಿಷ್ಟ್ಯ, ಅದಕ್ಕಾಗಿಯೇ "ಭಾರವೇರ್ಥ ಗೌರವಂ" ಎನ್ನುವ ಕೀರ್ತಿಯೂ ಇವನಿಗೆ ಸಂದಿದೆ. ಮಲ್ಲಿನಾಥನು (ವ್ಯಾಖ್ಯಾನಾ) ಕಾವ್ಯದ ಈ ಸ್ವರೂಪವನ್ನು ಹೀಗೆ ಹೇಳಿರುವನು.

> ನೇತಾ ಮಧ್ಯಮ ಪಾಂಡವೋ ಭಗವತೋ ನಾರಾಯಣಸ್ಯಾಂಶಜಃ
> ತಸ್ಯೋತ್ಕರ್ಷಕೃತೇನುವರ್ಣ್ಯ ಚರಿತೋದಿವ್ಯಃ ಕಿರಾತಃ ಪುನಃ
> ಶೃಂಗಾರಾದಿರಸೋಂಗಯತ್ರ ವಿಜಯೀ ವೀರಪ್ರಧಾನೋರಸಃ
> ಶೈಲಾದ್ಯಾನೀಚ ವರ್ಣಿತಾನಿ ಬಹುಶೋ ದಿವ್ಯಾಸ್ತ್ರಲಾಭಃ ಫಲಂ

ಇದರ ರಚನೆಯಲ್ಲಿ ಕಾಳಿದಾಸನ ಪ್ರತಿಬಿಂಬವು ಕಂಡುಬಂದು ಕಾಳಿದಾಸನ ಔತ್ಕರ್ಷವು ಸಿದ್ಧವಾಗುತ್ತದೆ. ಕಥಾಭಾಗವು ಭಾರತದಿಂದ ಬಂದಿದೆ. ದ್ವೈತವನದಲ್ಲಿ ಪಂಚಪಾಂಡವರು ತಮ್ಮ 12ವರ್ಷಗಳನ್ನು ಕಳೆಯುತ್ತಿರುವಲ್ಲಿ ದ್ರೌಪದಿಯು ಅವರ ವೀರ್ಯವನ್ನು ಮೂದಲಿಸಲು ಧರ್ಮರಾಯನು ಅರ್ಜುನನಿಗೆ ದಿವ್ಯಾಸ್ತ್ರವನ್ನು ಸಂಪಾದಿಸುವಂತೆ ಹೇಳಿದನು. ವ್ಯಾಸರ ಅನುಜ್ಞೆಯಂತೆ ಪಾಂಡವರೆಲ್ಲರೂ ಕಾಮ್ಯಕವನಕ್ಕೆ ಹೋದಮೇಲೆ ಅರ್ಜುನನು ಹಿಮಾಲಯಕ್ಕೆ ಹೋಗಿ ತಪಸ್ಸು ಮಾಡಿ ಕಿರಾತ ರೂಪದಲ್ಲಿ ಬಂದ ರುದ್ರನೊಡನೆ ಯುದ್ಧಮಾಡಿ, ಅವನು ಪ್ರಸನ್ನನಾದಾಗ ಅವನಿಂದ ದಿವ್ಯಾಸ್ತ್ರಗಳನ್ನು, ಮಿಕ್ಕ ದೇವತೆಗಳಿಂದ ನಾನಾಸ್ತ್ರಗಳನ್ನು ಹೊಂದಿ ಹಿಂತಿರುಗಿದನು. ಈ ಕಥಾ ಭಾಗವನ್ನು ತೆಗೆದು

ಕೊಂಡು ತನ್ನ ಕವಿತಾ ಚಾತುರ್ಯದಿಂದ ಅದನ್ನು ಚೆನ್ನಾಗಿ ಹೇಳಿದಿರುವನು. ಧರ್ಮರಾಯನಿಂದ ಕಳುಹಲ್ಪಟ್ಟ ದೂತನಿಂದ ಸುಯೋಧನನು ಧರ್ಮಪ್ರಭುವೆಂದು ತಿಳಿದು. ದ್ರೌಪದಿಯಿಂದ ಮೂದಲಿಸಲ್ಪಟ್ಟು ಶೀಘ್ರದಲ್ಲಿಯೇ ಯುದ್ಧಸನ್ನದ್ಧರಾಗಬೇಕೆಂದು ಬೋಧೆಯು ಕೊಡಲ್ಪಡುವುದು (I ಸರ್ಗ) ಧರ್ಮರಾಜನ ಧರ್ಮಚಿಂತನೆ. ಭೀಮನ ಯುದ್ಧ ಪ್ರೋತ್ಸಾಹ (II ಸರ್ಗ). ವ್ಯಾಸರ ಸಲಹೆ. ಅರ್ಜುನನು ತಪಸ್ಸಿಗಾಗಿ ಯಕ್ಷನಿಂದ ಶರದೃತುವಿನ ವರ್ಣನೆ (IV) ಹಿಮಾಲಯದ ವರ್ಣನೆ. ಇಂದ್ರಕೀಲ ಪರ್ವತದಲ್ಲಿ ತಪಸ್ಸು ಮಾಡುವಂತೆ ಹೇಳಿ ಯಕ್ಷನು ಅದೃಶ್ಯನಾದುದು (V) ಅರ್ಜುನನ ತಪಸ್ಸನ್ನು ಕೆಡಿಸಲು ಗಂಧರ್ವಾಪ್ಸರೆಯರ ಪ್ರಯತ್ನ (VI) ಅನೆಗಳ ವರ್ಣನೆ (VII) ಗಂಗೆಯಲ್ಲಿ ಅಪ್ಸರ ಸ್ತ್ರೀಯರ ಜಲಕ್ರೀಡೆ (VIII). ಸೂರ್ಯೋದಯ ಸೂರ್ಯಾಸ್ತಮಯ ವರ್ಣನೆ (XI) ಅಪ್ಸರೆಯರ ಪ್ರಯತ್ನವು ನಿಷ್ಫಲವಾದುದು (X) ಋಷಿಯಂತೆ ಬಂದ ಇಂದ್ರನೊಡನೆ ಚರ್ಚೆ. ಇಂದ್ರನು ವಾದದಲ್ಲಿ ಪರಾಜಿತನಾಗಿ ಪ್ರಸನ್ನನಾಗಿ ಪ್ರಯತ್ನವನ್ನು ಮುಂದುವರಿಯುವಂತೆ ಹೇಳಿದ್ದು (XI) ಇಲ್ಲಿಯವರೆಗೂ ಕವಿತಾ ಚಾತುರ್ಯವು ಸಂತಸವಾಗಿ ನಡೆದಿದೆ.

ಅರ್ಜುನನು ತಪಸ್ಸು. ಋಷಿಗಳ ಕಾತರತೆ. ಅರ್ಜುನನು ನರನೆಂದು ಹೇಳಿ ಶಿವನು ಅವರನ್ನು ಸಮಾಧಾನಪಡಿಸಿದ್ದು. ಮೂಕನೆಂಬ ರಾಕ್ಷಸನು ಹಂದಿರೂಪದಲ್ಲಿ ಅರ್ಜುನನ ಕಡೆಗೆ ಧಾವಿಸಿದ್ದು. ಈಶ್ವರನು ತನ್ನ ಪ್ರಮಥಾಧಿಗಣಗಳನ್ನು ಅರ್ಜುನನ ರಕ್ಷಣೆಗಾಗಿ ನಿಯಮಿಸಿದ್ದು (XII) ಆ ಹಂದಿಯು ಕಿರಾತ ರೂಪದಲ್ಲಿದ್ದ ಈಶ್ವರನ ಮತ್ತು ಅರ್ಜುನನ ಬಾಣದಿಂದ ಸತ್ತಿದ್ದು. ಕಿರಾತನು ಹಂದಿಯು ತನ್ನದೆಂದು ವಾದಿಸಿದ್ದು (XIII) ಯುದ್ಧ (XIV) ಯುದ್ಧ -ಸ್ಕಂದಾದಿವರಿಂದ (XV) ಅರ್ಜುನನ ಪರಾಜಯ (XVI) ಮತ್ತೆ ಅವನ ಪ್ರಯತ್ನ (XVII) ದ್ವಂದ್ವ ಯುದ್ಧ ಶಿವನು ಪ್ರತ್ಯಕ್ಷನಾದುದು. ಪ್ರಾರ್ಥನೆ ವರಪ್ರದಾನ ದೇವತೆಗಳು ಅನುಗ್ರಹಿಸಿದ್ದು (XVIII) ಯುದ್ಧವೆಲ್ಲವೂ ಕವಿಯ ಕಲ್ಪನೆ. ದಿವ್ಯಾಸ್ತ್ರ ಪ್ರಯೋಗವು ಸ್ವಾಭಾವಿಕವಾಗಿ ಅದರಲ್ಲಿ ವಾಲ್ಮೀಕಿಯ ಪ್ರಭಾವವು ಕಾಣುತ್ತದೆ. ಮೊದಲಿನ ಎರಡು ಅಧ್ಯಾಯಗಳಲ್ಲಿ ಆಗಿನ ರಾಜ್ಯಾಂಗ ನೀತಿಯ ವರ್ಣನೆಯು ಚೆನ್ನಾಗಿದೆ.

## ಭಾಷೆ ಮತ್ತು ಶೈಲಿ

ಅರ್ಥಗಾಂಭೀರ್ಯದಿಂದ ಜಟಿಲವಾಗಿದೆ. ಆದರೆ ರಸವು ತುಂಬಿರುವುದರಿಂದ ಮಾಧುರ್ಯವನ್ನು ಬಿಟ್ಟಿಲ್ಲ. ಅದಕ್ಕಾಗಿಯೇ ಮಲ್ಲಿನಾಥನು

ನಾರಿಕೇಳ ಫಲ ಸಂಮಿತಂ ವಚೋಭಾರವೇಸ್ಸ ಪದಿ ತದ್ವಿಭಾಧ್ಯತೇ
ಸ್ವಾದಯಂತು ರಸ ನಿರ್ಭರಂ ರ ಸಂಸಾರ ಮಸ್ಯ ರಸಿಕಾಯಧೇಪ್ಸಿತಂ

ಎಂದಿರುವನು. ಕ್ಷೇಮೇಂದ್ರನು.

ವೃತ್ತಚ್ಛತ್ರಸ್ಯ ಸಾ ಕಾಪಿ ವಂಶಸ್ಥಸ್ಯ ವಿಚಿತ್ರತಾ
ಪ್ರತಿಭಾ ಭಾರವೇರ್ಯೇನ ಸಚ್ಛಾಯೋ ನಾಧಿಕೀ ಕೃತಾ

ಎಂದಿರುವನು ಏಕಾಕ್ಷರಮಯ, ನಿರೋಷ್ಠಕ, ದ್ವ್ಯಕ್ಷರ ಮೊದಲಾದ ಚಿತ್ರಬಂಧ ರಚನೆಯಲ್ಲಿ ಪ್ರಸಿದ್ಧನು. 15ನೇ ಸರ್ಗ ಪೂರ್ಣವಾಗಿ ಇದೇ ಆಗಿದೆ. ಇವರಲ್ಲಿ ಭಾವನಾ ಮಾಧುರ್ಯಕ್ಕಿಂತಲೂ ವ್ಯಾಕರಣ ಪಾಂಡಿತ್ಯವು ಕಂಡು ಬರುತ್ತದೆ. ಇದರಲ್ಲಿ ಮಾಘ ಮತ್ತು ನೈಷಧ ಕಾವ್ಯದೊಡನೆ ತೋಲನ ಮಾಡಿರುವ

ನವಸರ್ಗಗತೇ ಮಾಘೇನದ ಸರ್ಗೇ ಚನ್ಯೆಷಧೇ
ನವಸರ್ಗೇ ಕಿರಾತೇ ಚ ನವಶಬ್ದೋ ನವಿದ್ಯತೇ

ಎನ್ನುವ ಶ್ಲೋಕವು ಪ್ರಸಿದ್ಧವಾಗಿದೆ. ವೃತ್ತ ವೈಶಿಷ್ಟ್ಯ, ಅಸಂಭಾವಿತ ಪದವ್ಯೂಹ, ಅಪ್ರಸಿದ್ಧ ಕ್ರಿಯಾಪದ ಪ್ರಯೋಗ, ಲಕಾರ ಪ್ರಯೋಗ, ಇವು ಸ್ವಲ್ಪ ಜಾಸ್ತಿಯಾಗಿವೇ ಇ॰ ಎನ್ನಬಹುದು. ಕರ್ಮಣೀ ಪ್ರಯೋಗವು ಇವನಿಗೆ ಪ್ರಿಯವಾದಂತಿದೆ. ವರ್ಣನೆಯಲ್ಲಿ ಕೆಲವು ಕಡೆ ಹಿತವಿಲ್ಲ. ಉದಾಹರಣೆಗಾಗಿ ದುರ್ಯೋಧನನ ಧಾರ್ಮಿಕ ರಾಜ್ಯಪಾಲನೆಯನ್ನು ವರ್ಣಿಸುವಾಗ

ನತೇನ ಸಜ್ಯಂ ಕ್ವಚಿದುದ್ಯತಂ ಧನುಃ
ಕೃತಂ ನ ವಾತೇನ ವಿಜಿಹ್ಮ ಮಾನನಂ
ಗುಣಾನು ರಾಗೇಣ ಶಿರೋಭರುದ್ಯತೇ
ನರಾಧಿಪೈ ರ್ಮಾನ್ಯ ಮಿವಾಸ್ಯ ಶಾಸನಂ

ಎನ್ನುವ ಶ್ಲೋಕವಿದೆ.

ಪ್ರಕೃತಿ ಸೌಂದರ್ಯವರ್ಣನೆಯೂ ಎಷ್ಟೋ ಕಡೆ ಹಿತವಾಗಿಲ್ಲ. ಸಾಯಂಸಂಧ್ಯಾ ವರ್ಣನೆಯು ಹೀಗಿದೆ.

ಅಂಶುಪಾಣಿ ಭಾರತೀವ ಪಿಪಾಸುಃ ಪಂಕಜಂ ಮಧು ಭೃಶಂರಸಮಿತ್ವಾ
ಕ್ಷೀಬತಾಮಿನಗತಃ ಕ್ಷಿತಿಮೇಷ್ಯನ್ ಲೋಹಿತಂ ವ ಪುರುವಾಚಪತಂಗಃ

**ರಾತ್ರಿವರ್ಣನೆ**

ಸಂವಿಧಾತು ಮಭಿಷೇಕ ಮುದಾಸೆ ಮನ್ಮಥಸ್ಯ ಲಸದಂಶು ಜಲೌಘೈಃ

ಯಾಮಿನೀ ವನಿತ ಯಾತತ ಚಿನ್ಹಃ ಸೋತ್ಪಲೋ ರಜತಕುಂಭ ಇವೇಂದುಃ

ಕತಿಪಯ -ಸಹಕಾರ -ಪುಷ್ಪರಮ್ಯ ಸ್ತನುಲೌಹಿನ್ಯೋಲ್ಪ ವಿನಿದ್ರ ಸಿಂಧುವಾರಃ
ಸುರಭಿ ಮೂರು ಮಹಿಮಾಂಗ ಮಾಂತ ಶಂಪೀಸಮುಪಯಯೌ ಶಿಶಿರಸ್ಮರೈಕ
ಬಂಧುಃ†
ಸ್ಮರೈಕಬಂಧುಃ

ಸ್ತ್ರೀ ಸೌಂದರ್ಯ ಮತ್ತು ಪ್ರೇಮವಿಲಾಸ

ಪ್ರಿಯಾ ಪರಾ ಯಚ್ಛತಿ ವಾಚಮುನ್ಮುಖೀ
ನಿಬದ್ಧ ದೃಷ್ಟಿಃ ಶಿಥಿಲಾ ಕುಲೋಚ್ಚಯಾ
ಸಮಾದಧೇ ನಾಂಶುಕ ಮಾಹಿತಂ ದೃಥಾ
ವಿವೇದ ಪುಷ್ಪೇಷುನ ಪಾಣೆ ಪಲ್ಲವಂ

ವಿಹಸ್ಯ ಪಾಣೌ ವಿಧೃತೇ ದೃತಾಂಭಸಿ
ಪ್ರಿಯೇಣ ವಧ್ವಾ ಮದನಾರ್ದ್ರಚೇತಸಃ
ಸಖೀವಕಾಂಚೀ ಪಯಸಾ ಘನೀಕೃತಾ
ಬಭಾರವೀತೋಚ್ಛ ಯ ಬಂಧ ಮಂಶುಕಂ

ಈ ಕವಿಯ ರಸಾಸ್ವಾದವೇ ಅತಿ ವಿಜಾತೀಯವಾಗಿದೆ. ಸ್ವಾಭಾವಿಕವಾಗಿಲ್ಲ. ಕಾಳಿದಾಸನನ್ನು ಮೀರಿಸಲು ಪ್ರಯತ್ನ ಮಾಡಿ ವಿಫಲನಾಗಿರುವುದು ಅನೇಕ ಕಡೆ ಕಂಡುಬರುತ್ತದೆ. ಶ್ಲೋಕಗಳನ್ನು ಹಿಂಡು ಮುಂದು ಓದಿದರೂ ಒಂದೇ ಆಗಿರುವಂತೆ ಬರೆಯುವುದರಲ್ಲಿ, ವೃತ್ತ, ಬಂಧ, ಚಿತ್ರಬಂಧ, ಇವುಗಳಲ್ಲಿ ತನ್ನ ವೈದುಷ್ಯವನ್ನು ತೋರಿಸಿಕೊಳ್ಳಬೇಕೆನ್ನುವ ಹೆಮ್ಮೆ ಇರುವಂತಿದೆ.

## ೪೯. (5) ಭಟ್ಟಿ (6ನೇ ಶತಮಾನದ ಕೊನೆ ಮತ್ತು 7ನೇ ಶತಮಾನದ ಆದಿ)

**ಕಾಲ**

ಶ್ರೀಧರಸೇನನೆನ್ನುವ ನಾಲ್ಕು ದೊರೆಗಳಿದ್ದರೂ ಕೊನೆಯವನಾದ ಮಹೀಪಾಲ ಶ್ರೀವರ ಸೇನ ಆಸ್ಥಾನ ಪಂಡಿತನಾಗಿದ್ದನೆಂದು ಅನೇಕ ಕಾರಣಗಳಿಂದ ಊಹಿಸಬಹುದು. ಅಲ್ಲದೇ "ವ್ಯಾಖ್ಯಾಗಮ್ಯಂ" ಎನ್ನುವ ಕವಿಶ್ಲೋಕವು ಭಾಮಹನಿಂದ ಉದ್ಧೃತವಾಗಿದೆ. ದಂಡೀ ಮತ್ತು ಭಾಮಹರ ಅಲಂಕಾರ ಸ್ವರೂಪವು ಈ ಕವಿಯಲ್ಲಿ ಅಷ್ಟಾಗಿ ಕಂಡು ಬರುವುದಿಲ್ಲ. ಆದ್ದರಿಂದ ಇವರಿಬ್ಬರ ಹಿಂದಿನವೆಂದು ನಿಶ್ಚಯಿಸಬಹುದು. ಅಂದರೆ 6ನೇ ಶತಮಾನದ ಕೊನೆ ಮತ್ತು 7ನೇ ಶತಮಾನದ ಆದಿ ಭಾಗದಲ್ಲಿದ್ದವನೆಂದು ಹೇಳಬಹುದು.

**ಜೀವನ**

ಇವನ ಜೀವನದ ವಿಷಯದಲ್ಲಿ ಏನೂ ತಿಳಿಯದು. ವಾಲಭೀನಗರದಲ್ಲಿ ಹುಟ್ಟಿದನು. ಶ್ರೀವರಸೇನನ ಆಸ್ಥಾನ ಪಂಡಿತನಾಗಿದ್ದನು ಎಂದು ಮಾತ್ರ ತಿಳಿದಿದೆ.

**ಗ್ರಂಥ**

"ರಾವಣವಧ" ಎನ್ನುವುದೇ ಇವನ ಕಾವ್ಯ. ಇದು 12ಸರ್ಗವುಳ್ಳದ್ದು. ಮೊದಲಿನ 4ಸರ್ಗಗಳಲ್ಲಿ ವ್ಯಾಕರಣ ಪ್ರಕೀರ್ಣ ನಿಯಮಗಳು. 9ರವರಿಗೂ ವಿಶೇಷ ನಿಯಮಗಳು. 13ರ ಕೊನೆಯವರಿಗೂ ಅಲಂಕಾರಗಳೂ. ಮಿಕ್ಕ ಸರ್ಗಗಳಲ್ಲಿ ಲಕಾರ ಪ್ರಯೋಗಗಳೂ ಉದಾಹೃತಗಳಾಗಿವೆ. ವ್ಯಾಕರಣ ಶಾಸ್ತ್ರಾಧ್ಯಯನಕ್ಕೆ ಮೀಸಲಾದ ಕಾವ್ಯವಿದು. ವ್ಯಪದೇಶ್ಯನೊಬ್ಬನು ಈ ಕಾವ್ಯದ ವಿಷಯದಲ್ಲಿ ಹೀಗೆ ಹೇಳಿರುವನು.

ವ್ಯಾಕೃತಿ ಚಷ ಕವೇಯಂ ರಾಮ ರಾಜಕಥಾಮೃತಂ†
ಶಬ್ದವಾಕ್ಯ- ಪದಚ್ಛೇದ- ಸ್ಥೂಲಾಕ್ಷರ- ವಿಶೇಷ ದೃಕ್††
ವ್ಯಾಕೃತ್ಯಾ ಕೋಶ- ಛಂದೋಭ್ಯಾ ಮಲಂಕೃತ್ಯಾರ ಸೇನಚ
ಪಂಚಕೇನಾನ್ವಿತಂ ಕಾವ್ಯಾಂಭಟ್ಟಿ ಕಾವ್ಯಂ ವಿರಾಜತೇ

ಇದರಿಂದಲೇ ಇವನ ಕಾವ್ಯವು 'ಭಟ್ಟಿ ಕಾವ್ಯ'ವೆಂದು ಪ್ರಸಿದ್ಧಿಯನ್ನು ಹೊಂದಿದೆ. ಕವಿಯೋತ್ತಮನು ಕಾವ್ಯದ ಪ್ರಾಶಸ್ತ್ಯವನ್ನು ಹೇಗೆ ಹೇಳಿಕೊಂಡಿರುವನು

ದೀಪತುಲ್ಯಃ ಪ್ರಬಂದೋ ಯಂಶಬ್ದ ಲಕ್ಷಣ ಚಕ್ಷುಷಾಂ
ಹಸ್ತಾಮರ್ಶ ಇವಾಂಧಾನಾಂ ಭವೇ ವ್ಯಾಯಕರಣಾದೃತೇ||
ವ್ಯಾಖ್ಯಾಗಮ್ಯಂ ಕಾವ್ಯ ಮುತ್ಸವ ಸ್ಸುಧಿಯಾಮಿದ|
ಹತಾದುರ್ಮೇಧಸಶ್ಚಾಸ್ಮಿನ್ ವಿದ್ವತ್ಪ್ರಿಯತಯಾ ಮಯಾ||

ಈ ಕಾವ್ಯದ ಮಹತ್ವವನ್ನೂ ತಿಳಿಸುವ ಮತ್ತೊಂದು ಪದ್ಯವಿದೆ

ಯುದ್ಯಪಿ ಬಹುನಾಧೀ ಷೇ ತಥಾಪಿ ಪಠಪುತ್ರ ವ್ಯಾಕರಣಂ
ಸ್ವಜನಃ ಶ್ವಜನೊ ಯಭೂತ್ ಸಕಲಂಶ ಕಲಂ ಸಕೃತ ತಕೃತ್

**ವ್ಯಕ್ತಿ ಪರಿಚಯ**

ಈ ಭಟ್ಟಿಯು ವತ್ಸಭಟ್ಟಿ ಎಂದೂ ಭರ್ತೃಹರಿಯೋ ಅಪಭ್ರಂಶದಿಂದ ಹೀಗೆ ಕರೆಯಲ್ಪಡುವನೆಂದೂ ಹೇಳುವುದರಲ್ಲಿ ಅರ್ಥವಿಲ್ಲ. ವತ್ಸಭಟ್ಟಿಯ ಕೃತಿಗಳಲ್ಲಿ ವ್ಯಾಕರಣ ಭ್ರಂಶಗಳಿವೆ.

ಭರ್ತೃಹರಿಯ ಶೈಲಿ ರೀತಿಗಳು ಈ ಕಾವ್ಯದಲ್ಲಿರುವುದಕ್ಕಿಂತಲೂ ಭಿನ್ನವಾಗಿದೆ. ಆದ್ದರಿಂದ 'ಭಟ್ಟಿ' ಎನ್ನುವ ಕವಿಯೇ ಇವರಿಬ್ಬರಿಗಿಂತಲೂ ಭಿನ್ನನು.

## ೫೦ (೬) ಬಾಣ (೬ ನೇ ಶತಮಾನದ ಉತ್ತರ ಭಾಗ)

### ಜೀವನ

ಅರ್ಥಪತಿ ಎನ್ನುವ ಬ್ರಾಹ್ಮಣನಿಗೆ ಹನ್ನೊಂದು ಮಕ್ಕಳು. ಅವರಲ್ಲಿ ಚಿತ್ರಭಾನು ಎನ್ನುವವನು ಒಬ್ಬನು. ರಾಜ್ಯದೇವಿಯಲ್ಲಿ ಅವನಿಗೆ ಹುಟ್ಟಿದವನೇ ಬಾಣ. ಇವನು ಮಗುವಾಗಿದ್ದಾಗಲೇ ತಾಯಿಯು ಸತ್ತಳು. ತಂದೆ ಇವನ 11ನೇ ವರ್ಷದಲ್ಲಿ ಸತ್ತನು. ಅನಾಥನಾದನು. ಎಲ್ಲೆಲ್ಲೂ ಅಲೆದಾಡಿದನು. ಚಿತ್ರಕಲೆ, ಸಂಗೀತ, ಅಭಿನಯ, ನಾಟಕ ಈ ಕಲೆಯಲ್ಲಿ ನಿರತರಾದವರೊಡನೆಯೇ ಬಹಳವಾಗಿ ತಿರುಗಿದನು. ಅಪಕೀರ್ತಿಯನ್ನೂ ಸಂಪಾದಿಸಿದನು. ಕೊನೆಗೆ ತನ್ನ ಊರಾದ ಪ್ರತಿಕೂಟಕ್ಕೆ ಬಂದು ಸೇರಿದನು. ಆಗ ರಾಜನಾಗಿದ್ದ ಹರ್ಷವರ್ಧನನ ಅಣ್ಣನ ಆಹ್ವಾನದ ಮೇಲೆ ಕ್ರಮೇಣ ರಾಜಾಸ್ಥಾನವನ್ನು ಸೇರಿ ಅಲ್ಲಿ ಸ್ಥಾನಮಾನಗಳನ್ನು ಆಕರ್ಷಿಸಿದನು.

### ಕಾಲ

ಇವನ ಕಾಲದ ವಿಷಯವು ಜಟಿಲವಾದ ಪ್ರಶ್ನೆಯೇ ಅಲ್ಲ. ಹರ್ಷವರ್ಧನನು ರಾಜನಾಗಿ ತನ್ನ ಸಹೋದರನ ಮರಣಕ್ಕಾಗಿ ಗೌಡದೊರೆಯ ಮೇಲೆ ನಡೆದ ದಂಡಯಾತ್ರೆಯ ಪ್ರಸ್ತಾಪವು ಹರ್ಷಚರಿತೆ ಎನ್ನುವ ಬಾಣನ ಕಾವ್ಯದಲ್ಲಿರುವುದರಿಂದ ಹರ್ಷನ ಉತ್ತರ ವಯಸ್ಸಿನಲ್ಲಿ ಯುವಾವಾದ ಬಾಣನಿಗೆ ಅವನ ಸಂಬಂಧವು ಬಂದಿರಬೇಕು. ಹರ್ಷವರ್ಧನನ ಕಾಲ ಮುಗಿದಿದ್ದು, ಕ್ರಿ.ಶ. 647. ಬಾಣನು ಸುಮಾರು ಈ ಕಾಲದವನಾಗಿದ್ದಿರಬೇಕು.

### ಗ್ರಂಥಗಳು ಮತ್ತು ಅವುಗಳ ವೈಶಿಷ್ಟ್ಯ, ಕಥಾ, ಆಖ್ಯಾಯಿಕಾ

ಹರ್ಷಚರಿತೆ ಮತ್ತು ಕಾದಂಬರಿ ಇವೆರಡೂ ಇವನದು. ಚಂಡೀಶತಕ, ಪಾರ್ವತಿ ಪರಿಣಯ ಮತ್ತು ರತ್ನಾವಳಿ ಇವನದೆಂದು ಪ್ರತೀತಿ ಇದೆ. ಆದರೆ ಭಾಷೆ ಮತ್ತು ಭಾವನೆಯನ್ನೂ ನೋಡಿದರೆ ಇವು ಬಾಣನ ಕೃತಿಗಳೆಂದು ಹೇಳಲು ಕಷ್ಟವಾಗುತ್ತದೆ. ತನಗೆ ಯಾವುದು ಇಷ್ಟ, ಇಷ್ಟವಿಲ್ಲ ಎನ್ನುವುದನ್ನು ತಾನೇ ಹರ್ಷಚರಿತ್ರೆ ಪ್ರಾರಂಭದಲ್ಲಿ ಹೇಳಿರುವನು. ತನಗೆ ಇಷ್ಟವಾದ ಪದ್ಯರೀತಿ, ವ್ಯಾಸರಲ್ಲಿ ತನಗಿರುವ ಗೌರವ ಮತ್ತು ಭಕ್ತಿ, ಶಾತವಾಹನನ ಸಂಗೀತ ನಿಧಿ, ಪ್ರವರ ಸೇನನ ಪದ್ಯ ಗಾಂಭೀರ್ಯ, ಭಾಸನ ನಾಟಕಗಳ ಸರಳತೆ, ಕಾಳಿದಾಸನ ಅಲಂಕಾರಗಳ ಮಾಧುರ್ಯ, ಬೃಹತ್ಕತೆಯ ನಡೆ, ಔತ್ತರೇಯರ ಶಬ್ದಾಂಡಂಬರದಲ್ಲಿ ಪ್ರೀತಿ, ಪಶ್ಚಿಮ ದೇಶದವರಲ್ಲಿದ್ದ ಅರ್ಥಗೌರವ, ದಾಕ್ಷಿಣಾತ್ಯರ ಉತ್ಪ್ರೇಕ್ಷಾ ಪ್ರಿಯತೆ ಮತ್ತು ಗೌಡ ಭಾಷೆಯ ಆಡಂಬರ ಇವೆಲ್ಲವನ್ನೂ ಹೇಳಿರುವನು. ತನ್ನ ರಾಜನಲ್ಲಿದ್ದ ಭಕ್ತಿಯ ಗುರುತಾಗಿ ಹರ್ಷಚರಿತೆಯನ್ನೂ ತನ್ನ ಕವಿತಾ ಹೆಮ್ಮೆಯನ್ನೂ ತೋರಿಸಿಕೊಳ್ಳಲು ಕಾದಂಬರಿಯನ್ನೂ ಬರೆದನು. ಹರ್ಷಚರಿತ್ರೆಯು ಆಖ್ಯಾಯಿಕಾ

ಕಾದಂಬರಿಯ ಕಥೆ. ಇವೆರಡೂ ಗದ್ಯ ಕಾವ್ಯಗಳಲ್ಲಿ ಪ್ರಭೇಧ ಗದ್ಯಕಾವ್ಯದಲ್ಲಿ ಪ್ರಸಿದ್ಧನಾದ ಬಾಣನು ಈ ಎರಡು ಪ್ರಭೇದಕ್ಕೆ ಎರಡು ಕೃತಿಗಳನ್ನು ಕೊಟ್ಟಿರುವನು.




ಗದ್ಯ ಕಾವ್ಯದಲ್ಲಿ ಈ ಪ್ರಭೇದವಿರಬೇಕೆಂದು ಭಾಮಹನು ಅಭಿಪ್ರಾಯಪಟ್ಟಿರುತ್ತಾನೆ ದಂಡಿಗೆ ಈ ಪ್ರಭೇದವು ಬೇಡ. ಅವನಿಗೆ ಎರಡೂ ಒಂದೇ . ರುದ್ರಟನಿಗೆ ರೀತಿ ಭೇದವುಂಟು. ಕಥೆಯಲ್ಲಿ ವಕ್ತ್ರ, ಅಪರ ವಕ್ತ್ರ, ಉಚ್ಛ್ವಾಸ ವಿಭಾಗವಿಲ್ಲದಿರುವಿಕೆ ಇವು ಇದೆ ನಾಮಿಕನು ತನ್ನ ಕಥೆಯನ್ನು ಹೇಳಕೂಡದು. ಸಂಸ್ಕೃತದಲ್ಲೇ ಅಪಭ್ರಂಶದಲ್ಲೋ ಇರಬಹುದು ಆಖ್ಯಾಯಿಕೆಯು ಸಂಸ್ಕೃತದಲ್ಲೇ ಇರಬೇಕು. ವಕ್ತ್ರ ಎಂದರೆ ಮಧ್ಯೆ ಮಧ್ಯೆ ಪದಗಳು (Metrical pieces) ಉದಾತ್ತಾರ್ಥ (exalted meaning) ಸಂಗ್ರಾಮ (fight) ವಿಪ್ರಲಂಬ, ಅಭ್ಯುದಯ (Triumph) ಇವೆಲ್ಲವೂ ಇರಬೇಕು. ಇದು ನಮಸ್ಕ್ರಿಯಾದಿಂದ ಪ್ರಾರಂಭವಾಗಬೇಕು. ಹಳೇ ಕವಿಗಳ ಪ್ರಶಂಸೆ, ತನ್ನ ಅಯೋಗ್ಯತೆ, ಆದರೂ, ತನ್ನ ಆಶ್ರಿತದೊರೆಯಲ್ಲಿ ಭಕ್ತಿ, ಆತ್ಮ ಕಥೆ, ಉಚ್ಛವಾಸ ಅಂದರೆ ಅಧ್ಯಾಯ, ವಿಭಾಗ, ಇವು ಇರುವುದಲ್ಲದ ಮೊದಲಿನ ಉಚ್ಛ್ವಾಸ ಅಂದರೆ ಅಧ್ಯಾಯ, ವಿಭಾಗ, ಇವು ಇರುವುದಲ್ಲದೆ. ಮೊದಲಿನ ಉಚ್ಛ್ವಾಸವನ್ನು ಬಿಟ್ಟು ಮಿಕ್ಕ ಉಚ್ಛ್ವಾಸಗಳ ಪ್ರಾರಂಭದಲ್ಲಿ ಅರ್ಯಾವೃತ್ತದ 2 ಪದ್ಯಗಳು ಇರಬೇಕು.

ಈ ರೀತಿಯ ಪ್ರಭೇದವನ್ನು ಅಲಂಕಾರಿಕರು ಕಲ್ಪಿಸಿಕೊಂಡಿರುವುದು ಬಾಣನ ಕೃತಿಗಳ ಆಧಾರದ ಮೇಲೆಯೇ ಎಂದು ಹೇಳಬಹುದು. ಗದ್ಯಗ್ರಂಥಗಳು ಅತಿ ಪ್ರಾಚೀನ ಕಾಲದಿಂದಲೂ ಸಂಸ್ಕೃತ ಸಾಹಿತ್ಯವಿಲ್ಲದೆ ಯಜುರ್ವೇದ ಸಂಹಿತೆ, ಬ್ರಾಹ್ಮಣ, ಮಹಾಭಾರತ, ಪುರಾಣ ಇವುಗಳಲ್ಲಿ ಕಾಣಬಹುದು. ಸೂತ್ರಗಳು, ವೃತ್ತಿಗಳು, ವ್ಯಾಖ್ಯಾನಗಳು ತಿಳಿದವು. ಶಾಸ್ತ್ರೀಯ ಗದ್ಯಗಳಿವು. ಮನೋರಂಜನಗಾಗಿ ಬರೆಯುವ ಗದ್ಯಗಳಿಗಿಂತಲೂ ಭಿನ್ನವಾದವು. ಕಾತ್ಯಾಯನನ ಕಾಲಕ್ಕೆ ಹಿಂದೆ ಆಖ್ಯಾಯಿಕೆಯು ಇದ್ದುದಕ್ಕೆ ಆಧಾರವಿದೆ ಪತಂಜಲಿಯು ತನ್ನ ಮಹಾಭಾಷ್ಯದಲ್ಲಿ ಸುಮನೋತ್ತರ ಮತ್ತು ಭೈಮರ ಥೀ ಎನ್ನುವ ಎರಡು ಗದ್ಯ ಗ್ರಂಥಗಳನ್ನು ಹೇಳಿರುವುದಲ್ಲದೆ ವಾಸವದತ್ತವನ್ನು ಆಖ್ಯಾಯಿತಾ ಎಂದು ಹೇಳಿರುವರು. ಇವರ ಮುಂದೆಯೂ ಹರದತ್ತ, ಹರಿಚಂದ್ರ ಮೊದಲಾದವವರು ಇಂತಹ ಗದ್ಯಕಾವ್ಯವಿದ್ದುದಕ್ಕೆ ಪ್ರಮಾಣವಾಗಿರುತ್ತಾರೆ. ಒಟ್ಟಿನಲಿಕ್ಲಿ ಬಾಣನ ಹಿಂದೆ ಗದ್ಯಗಳಿದ್ದರೂ ಅದು ಕಾವ್ಯದ ಮಟ್ಟಕ್ಕೆ ಬಂದುದು ಬಾಣನಿಂದ ಎಂದು ನಿಶ್ಚಯಿಸಬಹುದು.

## ಹರ್ಷಚರಿತೆ

ಇದು ಎಂಟು ಉಚ್ಛ್ವಾಸವುಳ್ಳ ಆಖ್ಯಾಯಿಕೆ

I ಬಾಣನು ತನ್ನ ಪ್ರಾಯದವರಿಗೂ ಜೀವನವನ್ನು ವರ್ಣಿಸಿರುವನು

II. ರಾಜಸಂಗಮ ಮತ್ತು ಅವನ ಪ್ರಭುತ್ವದ ಗಾಂಭೀರ್ಯ

III. ರಾಜನ ವಂಶ ಮತ್ತು ಸನ್ನಿಹಿತಪ್ರಿಯರು

IV ರಾಜನು ರಾಜಕುಮಾರನಾಗಿದ್ದಾಗ ಅವನ ಸಾಂಸಾರಿಕ ಜೀವನ

V. ಯುದ್ಧಕ್ಕೆ ಹೊರಟು ತಂದೆಯ ಖಾಯಿಲೆಯ ಪ್ರಯುಕ್ತ ಹಿಂತಿರುಗಿದ್ದುದು. ತಂದೆಯ ಸಂದಿಗ್ಧ ಸ್ಥಿತಿ. ತಾಯಿಯ ಆತ್ಮಹತ್ಯೆ. ತಂದೆಯ ಮರಣ.

VI. ಯುದ್ಧ- ಭಾವನಾದ ಗೃಹವರ್ಮನು ಮಾಲವ ದೊರೆಯಿಂದ ಸತ್ತಿದ್ದು. ತಂಗಿ ರಾಜ್ಯಶ್ರೀಯ ಬಂಧನ. ಮಾಳವ ದೊರೆಯ ಮೇಲೆ ಅಣ್ಣ ರಾಜವರ್ಧನನ ಜಯ. ಆದರೆ ಗೌಡ ದೊರೆಯಿಂದ ಸಾವು. ಹರ್ಷನ ಯುದ್ಧಸನ್ನಾಹ.

VII ಯುದ್ಧ ಯಾತ್ರೆ -ಅಸ್ಸಾಂ ರಾಯಭಾರಿ -ವಿಂಧ್ಯ ಪರ್ವತದ ವರ್ಣನೆ ಇತ್ಯಾದಿ

VIII ನಿರ್ಘಾಟನೆನ್ನುವ ವೀರನೊಡನೆ ಸೆರೆಯಿಂದ ತಪ್ಪಿಸಿಕೊಂಡು ವಿಂಧ್ಯದಲ್ಲಿ ಅಡಗಿರುವ ರಾಜ್ಯಶ್ರೀಯನ್ನು ಹುಡುಕುವುದು. ದಿವಾಕರ ಮಿತ್ರ ಯೋಗಿಯ ಸಮಾಗಮ. ಬೌದ್ಧ ಭಿಕ್ಷುಕನಾದ ಇವನಿಂದ ರಾಜ್ಯಶ್ರೀಯು ಆತ್ಮಹತ್ಯೆಯಿಂದ ರಕ್ಷಿಸಲ್ಪಟ್ಟಿದ್ದು. ರಾಜನು ಗೌಡ ದೊರೆಯನ್ನು ಕೊಂದ ಮೇಲೆ ತಾನೂ ತಂಗಿಯೂ ಭಿಕ್ಷುಗಳಾಗುವೆವೆಂದು ಹೇಳಿದ್ದು ಕಥೆಯು ಇಲ್ಲಿಗೆ ಮುಗಿದಿದೆ.

**ಕಾದಂಬರಿ -ಇದು ಕಥಾ.**

ಇದನ್ನು ಬರೆದು ಮುಗಿಸುವುದರೊಳಗಾಗಿ ಬಾಣನು ಸತ್ತನೆಂದು ಕಾಣುತ್ತದೆ. ಮಿಕ್ಕ ಭಾಗವನ್ನು ಮಗನಾದ ಭೂಷಣಭಟ್ಟನು ಬರೆದಿರುವನು. ಕಥೆಯು ಹೀಗಿದೆ.

ತಾರಾಪೀಡನು ಉಜ್ಜಯಿನಿಯ ದೊರೆ. ಅವನಿಗೆ ಶುಕನಾಸನೆನ್ನುವನು ಮಂತ್ರಿ. ಚಂದ್ರಾಪೀಡನು ರಾಜಕುಮಾರ. ವೈಶಂಪಾಯನನು ಮಂತ್ರಿಯ ಮಗ ಇಬ್ಬರೂ ಪರಮಮಿತ್ರರು. ತನ್ನ 16ನೇ

ವರ್ಷದೊಳಗೆ ಗುರುಕುಲವಾಸನನ್ನೂ ತೀರಿಸಿಕೊಂಡು ಚಂದ್ರಾಪೀಡನು ಹಿಂತಿರುಗಿದ ಮೇಲೆ ತಂದೆಯು ಇವನಿಗೆ ಇಂದ್ರಾಯುಧವೆನ್ನುವ ಕುದುರೆಯನ್ನೂ ಇವನ ಶುಶ್ರೂಷೆಗಾಗಿ ಕುಲೂತ ದೊರೆಯ ಮಗಳಾದ ಪತ್ರಲೇಖೆಯನ್ನು ದಾಸಿಯನ್ನಾಗಿಯೂ ಕೊಡುವನು. ಮೂರು ವರ್ಷಾಂತದಲ್ಲಿ ಒಂದು ಪ್ರಸಂಗದಲ್ಲಿ ಕಿನ್ನರನನ್ನು ಹಿಂಬಾಲಿಸುವನು. ಕಾಡಿನೊಳಗೆ ಪ್ರವೇಶಿಸಿ ಬಹಳ ದೂರ ಹೋದಮೇಲೆ ಅವರು ಅದೃಶ್ಯರಾಗಲು, ಹಾಗೆಯೇ ಹಿಂತಿರುಗುತ್ತಿರುವಲ್ಲಿ ಮಹಾಶ್ವೇತ ಎನ್ನುವ ಒಬ್ಬ ಸನ್ಯಾಸಿನಿಯನ್ನು ಕಾಣುವನು. ಅವಳಿಂದ ಅವಳ ಶೋಚನೀಯ ಕಥೆಯನ್ನು ಕೇಳುವನು. ಅವಳು ಒಬ್ಬ ಗಂಧರ್ವನ ಮತ್ತು ಅಪ್ಸರೆಯ ಮಗಳು. ಒಂದು ದಿನ ಅವಳು ಪುಂಡರೀಕನೆನ್ನುವ ಒಬ್ಬ ಸುಂದರ ಬಾಲಕನನ್ನು ನೋಡಿ ಮೋಹಿತಳಾಗುವಳು.

ಪುಂಡರೀಕನೂ ಮೋಹಿತನಾಗುವನು. ಇವನು ಲಕ್ಷ್ಮಿಯ ಮಾನಸ ಪುತ್ರ. ಇವನ ಸ್ನೇಹಿತ ಕಪಿಂಜಲನೆನ್ನುವನು ಇವನನ್ನು ಬಹಳ ಪ್ರೀತಿಸುತ್ತಿದ್ದನು. ಪುಂಡರೀಕನು ತನ್ನ ಪ್ರೇಮವು ಸಫಲವಾಗುವುದಿಲ್ಲವೆಂದು ಸಾಯಲು ನಿಶ್ಚಯಿಸುವನು. ಕಪಿಂಜಲನು ಎಷ್ಟು ಸಮಾಧಾನ ಹೇಳಿದರೂ ಅವನನ್ನು ಸಾವಿನಿಂದ ತಡೆಗಟ್ಟಲಾಗಲಿಲ್ಲ. ಪುಂಡರೀಕನು ಸಾಯುವನು. ಇದನ್ನು ಕಂಡು ಮಹಾಶ್ವೇತೆಯೂ ದುಃಖಿತಳಾಗಿ ತಾನೂ ಸಾಯಲು ಸಿದ್ಧಳಾದಾಗ ಒಂದು ದೇವತಾ ವ್ಯಕ್ತಿಯು ಮೇಲಿಂದ ಕೆಳಗೆ ಇಳಿದುಬಂದು ಪುಂಡರೀಕನ ಶರೀರವನ್ನು ತೆಗೆದುಕೊಂಡುಹೋಯಿತು. ಹೋಗುವುದಕ್ಕೆ ಮುಂಚೆ ಮಹಾ ಶ್ವೇತೆಯು ಇವನೊಡನೆ ಸೇರುವಳೆಂದು ಆಶ್ವಾಸವನ್ನು ಕೊಟ್ಟು ಹೋಯಿತು. ಅಲ್ಲಿಂದ ಇವಳು ಅಚ್ಛೋದ ಸರೋವರದ ಹತ್ತಿರ ಯೋಗಿನಿಯಾಗಿರುವಳು. ಮಹಾಶ್ವೇತೆಯ ಸಖಿ ಕಾದಂಬರಿ. ಅವಳನ್ನು ನೋಡಲು ಚಂದ್ರಾಪೀಡನನ್ನು ಕರೆದೊಯ್ಯುವಳು. ಚಂದ್ರಾಪೀಡ ಮತ್ತು ಕಾದಂಬರಿ ಇಬ್ಬರು ಪರಸ್ಪರ ಅನುರಕ್ತರಾಗುವರು. ಅಷ್ಟರಲ್ಲಿ ತಂದೆಯಿಂದ ಕರೆಬಂದುದರಿಂದ ಚಂದ್ರಾಪೀಡನು ಹಿಂತಿರುಗಬೇಕಾಗುವುದು. ಪತ್ರಲೇಖೆಯನ್ನು ಬಿಟ್ಟು ಸೈನ್ಯದೊಡನೆ ಹಿಂದೆ ಬರುವಂತೆ ವೈಶಂಪಾಯನನಿಗೆ ಹೇಳಿ ತಾನು ಮೊದಲು ಹೊರಟು ಹೋಗುವನು. ಇಲ್ಲಿಗೆ ಬಾಣ ಬರೆದ ಭಾಗವು ಮುಗಿದಿದೆ. ಮುಂದಿನ ಕಥೆಯನ್ನು ಬಾಣನ ಮಗನು ಬರೆದಿರುವನು.

ಚಂದ್ರಾಪೀಡನು ತನ್ನ ಪಟ್ಟಣಕ್ಕೆ ಬಂದಮೇಲೆ, ಅಲ್ಲಿನ ಕೆಲಸ ಕಾರ್ಯಗಳು ಮುಗಿದ ಮೇಲೆ ಕಾದಂಬರಿಯನ್ನೂ ನೋಡಲು ಕಾತುರ ಪಟ್ಟು ವೈಶಂಪಾಯನ ಬರುವಿಕೆಗೆ ಕಾಯುವನು. ಅಷ್ಟರಲ್ಲಿ ವೈಶಂಪಾಯನನು ಹುಚ್ಚನಂತಾಗಿ ಸತ್ತನೆನ್ನುವ ಸಮಾಚಾರವನ್ನೂ ಕೇಳಿ ಕಾಡಿಗೆ ಹೋಗಿ ಮಹಾಶ್ವೇತೆಯಿಂದ ಎಲ್ಲಾ ವಿವರವನ್ನೂ ತಿಳಿಯುವನು. ಚಂದ್ರಾಪೀಡನು ಪಟ್ಟಣಕ್ಕೆ ಹೊರಟಮೇಲೆ, ವೈಶಂಪಾಯನನು ಅಕಸ್ಮಾತ್ತಾಗಿ ಮಹಾಶ್ವೇತೆಯನ್ನು ಕಂಡು ಅವಳಲ್ಲಿ ಅನುರಕ್ತನಾಗಿ ಅವಳನ್ನು ಕಾಮಿಸಲು ಪ್ರಯತ್ನ ಪಡುವನು. ಅವಳು ಇವನನ್ನು ಗಿಳಿಯಾಗೆಂದು ಶಪಿಸುವಳು. ಈ ದುಃಖವಾರ್ತೆಯನ್ನು ಕೇಳಿ ಚಂದ್ರಾಪೀಡನು ಸಾಯುವನು. ಕಾದಂಬರಿಯು ಬಂದು ವಿರಹ ತಾಪವನ್ನು ತಾಳಲಾರದೇ ತಾನೂ ಸಾಯಲು ನಿಶ್ಚಯಿಸುವಳು. ಆಗ ಆಕಾಶವಾಣಿಯು ಇವನ ಶರೀರವನ್ನೂ ರಕ್ಷಿಸುತ್ತಿರಬೇಕೆಂದೂ ಇವನೊಡನೆ ಕಾದಂಬರಿಯು ಮುಂದೆ ಸೇರುವಳೆಂದೂ, ಪುಂಡರೀಕನು ಸುರಕ್ಷಿತನಾಗಿರುವನೆಂದೂ ಹೇಳುತ್ತದೆ. ಪತ್ರಲೇಖೆಯು ಇಂದ್ರಾಯುಧವನ್ನೂ ಹತ್ತಿ ಅಚ್ಛೋದ ಸರೋವರದೊಳಗೆ ಇಳಿಯಲು ಅಲ್ಲಿಂದ ಎದ್ದು ಬಂದು ಚಂದ್ರನೇ ಚಂದ್ರಾಪೀಡನೆಂದೂ

ಪುಂಡರೀಕನೇ ವೈಶಂಪಾಯನನೆಂದೂ ಹೇಳಿ ಶ್ವೇತಕೇತುವಿನ ಹತ್ತಿರಕ್ಕೆ ಹೋಗಿ ಶಾಪವಿಮೋಚನೆಯನ್ನು ಕೇಳುವುದಲ್ಲದೆ ಪತ್ರಲೇಖೆಯು ಯಾರೆಂದು ಕುತೂಹಲದಿಂದ ಕೇಳುವನು. ಇಷ್ಟರಲ್ಲಿ ತಾರಾಪೀಡನೂ ಮಂತ್ರಿ ಶುಕನಾಸನೂ ಅಲ್ಲಿಗೆ ಬರುವರು.

ಶೂದ್ರಕನೆನ್ನುವ ದೊರೆ ಅವನಲ್ಲಿಗೆ ಒಬ್ಬ ಚಂಡಾಲ ಸ್ತ್ರೀಯು ಬಂದು ವಿಜಾತಿಯ ಗಿಣಿಯನ್ನು ತಂದೊಪ್ಪಿಸಿ ಅದೇ ಕಥೆಯನ್ನು ತಿಳಿಸುವುದೆಂದು ಹೇಳುವಳು. ಮೇಲೆ ಹೇಳಿದ ಕಥೆನ್ನು ಈ ಗಿಣಿಯು. ತಾನು ಇದನ್ನು ಜಾಬಾಲಿ ಋಷಿಯಿಂದ ಕೇಳಿದನೆಂದು ಹೇಳಿದನೆಂತಹ ಮುಂದೆ ಸಾಗುತ್ತಾ "ಎಲೈ ದೊರೆಯೇ ಇಷ್ಟು ನನ್ನ ಕಥೆಯನ್ನು ಕೇಳಿ ನಾನು ಜಾಬಾಲಿಯ ಆಶ್ರಮದಿಂದ ಓಡಿ ಹೋದೆ. ಚಂಡಾಲನೊಬ್ಬನ ಕೈಗೆ ಸಿಕ್ಕಿಬಿದ್ದೆ. ಚಂಡಾಲಸ್ತ್ರೀಯು ನನ್ನನ್ನು ಈಗ ನಿನಗೆ ಕೊಟ್ಟಿರುವಳು" ಎಂದಿತು. ಚಂಡಾಲಸ್ತ್ರೀಯೇ ಲಕ್ಷ್ಮಿ. ರಾಜನೂ ಹಕ್ಕಿಯೂ ಸಾಯುವರು ಚಂದ್ರಾಪೀಡನು ಬದುಕುವನು. ಪುಂಡರೀಕನು ಮೇಲಿಂದ ಕೆಳಗೆ ಇಳಿಯುವನು. ಚಂದ್ರಾಪೀಡನು ಪುಂಡರೀಕನನ್ನು ಸಿಂಹಾಸನದಲ್ಲಿರಿಸಿ ತಾನು ಹೇಮಕೂಟದಲ್ಲೂ ಉಜ್ಜಯಿನಿಯಲ್ಲಿ ಚಂದ್ರನಲ್ಲೂ ಇರುವನು. ಪತ್ರಲೇಖೆಯೇ ರೋಹಿಣಿ ನಕ್ಷತ್ರ.

### ಭಾಷೆ ಮತ್ತು ಪಾಂಡಿತ್ಯ

ಬಾಣನ ಕಾದಂಬರಿ ಎಂದರೆ ಸಂಸ್ಕೃತ ಸಾಹಿತ್ಯಕ್ಕೆ ಒಂದು ಶಿರೋಭೂಷಣ. ಗದ್ಯದಲ್ಲಿ ಪದ್ಯ ಕಾವ್ಯದ ಮಹಿಮೆಯನ್ನು ಅದರಲ್ಲೂ ಮಹಾಕಾವ್ಯದ ಮಟ್ಟವನ್ನು ಮುಟ್ಟಿರುವುದರಲ್ಲಿ ಇವನಿಗೆ ಮಿಗಿಲಾದವರು ಮತ್ತಾರು ಇಲ್ಲವೆನ್ನಬಹುದು. ಇದನ್ನು ಹೊಗಳದವರೇ ಇಲ್ಲ. ಒಂದು ಮಾತಿನಲ್ಲಿ ಹೇಳುವುದಾದರೆ "ಕಾದಂಬರೀ ರಸಜ್ಞಾನರು ಆಹಾರೋಪಿನರೋಚಿತೇ" ಎನ್ನಬಹುದು. ಪದಪುಷ್ಟಿ ಮತ್ತು ಮಾಧುರ್ಯ, ಸಾದೃಶ್ಯ ಮತ್ತು ಉಪಮೆಗಳ ಸುರುಮಳೆ. ಅತಿಶಯೋಕ್ತಿಯಲ್ಲೂ ಅತಿಶಯೋಕ್ತಿ. ಸಮಸ್ತಪದಗಳ ಸಮಷ್ಟಿ ನಿಧಿ. ನಾನಾವಿಧ ಲೋಕವಿಚಾರ ಸೂಚಕದಿಂದ ಭಾವನಾ ಔನ್ನತ್ಯ ಮತ್ತು ಹಿರಿಮೆ ಇವೆಲ್ಲದರಲ್ಲೂ ಇವನ ಹೆಸರು ಶಾಶ್ವತವಾಗಿ ಉಳಿದಿದೆ. ಸಂಗೀತದಲ್ಲಿ ನೀಲಾಂಬರಿರಾಗದಂತೆ ಸಂಸ್ಕೃತದಲ್ಲಿ ಕಾದಂಬರಿ. " ಚಂಪುವಿದ್ದರೆ ಕಂದವಿಲ್ಲ; ಬಾಣನಿದ್ದರೆ ಮಾನವಿಲ್ಲ" ಎನ್ನುವ ಗಾದೆಯೂ ಇದೆ. ಇದೇ ಇವನ ಕಾವ್ಯದ ಹಿರಿಮೆಯ ಗುರುತು. ಒಬ್ಬ ಪಂಡಿತನ ವಿದ್ವತ್ತನ್ನು ಪರೀಕ್ಷಿಸಬೇಕಾದರೆ ಬಾಣನ ಕಾದಂಬರಿ ಒಂದೇ ಸಾಕು. " ಬಾಣೋಚ್ಛಿಷ್ಟಂ ಜಗತ್ಸರ್ವಂ"ಎನ್ನುವ ಮಾತು ಕವಿಗಳಲ್ಲಿ ಈಗಲೂ ಪ್ರಚಾರದಲ್ಲಿದೆ.

## ೫೧ (7)ಮಾಘ (ಕ್ರಿ.ಶ. ೭ನೇ ಶತಮಾನದ ಅಂತ್ಯಭಾಗ)

### ಕಾಲ

ಇವನ ಕಾಲವು ಇನ್ನೂ ಸಂದಿಗ್ಧವಾಗಿದೆ ಎಂದು ಹೇಳಲಾಗಿದೆ. ಆದರೆ ಧೃಡಾಧಾರಗಳಿಂದ ಇವನು 7ನೇ ಶತಮಾನದ ಉತ್ತರ ಭಾಗದಲ್ಲಿದ್ದನೆಂದು ಹೇಳಬಹುದು.

1. ಇವನ ತಾತ ಸುಪ್ರಭುದೇವನ ಗುರ್ಜರಾಧಿಪತಿ ವರ್ಮಲಾತನ ಆಶ್ರಯದಲ್ಲಿದ್ದನೆನ್ನುವುದಕ್ಕೆ ಒಂದು ಶಿಲಾಲೇಖವಿದೆ. ಇದರ ಕಾಲ ಕ್ರಿ. ಶ. 625

2. ಸೋಮದೇವನ ಯಶಸ್ತಿಲಕ ಚಂಪುವಿನಲ್ಲಿ ಇವನ ಉಲ್ಲೇಖವಿದೆ

3. ಆನಂದವರ್ಧನನು (ಕ್ರಿ. ಶ. 850) ಧ್ವನ್ಯಾಲೋಕದಲ್ಲಿ ಇವನ ಶ್ಲೋಕಗಳನ್ನೂ ಉದಹರಿಸಿರುವನು.

4. ಕನ್ನಡ ದೇಶದ ರಾಷ್ಟ್ರಕೂಟ ದೊರೆ ನೃಪತುಂಗನ 'ಕವಿರಾಜಮಾರ್ಗ'ಎನ್ನುವ ಕನ್ನಡ ಗ್ರಂಥದಲ್ಲಿ ಇವನ ಹೆಸರನ್ನು ಕಾಳಿದಾಸನ ಕಾಲದಲ್ಲಿ ಇಡಲಾಗಿದೆ. ಈ ದೊರೆಯ ಕಾಲದಲ್ಲಿ ಅಂದರೆ ಕ್ರಿ.ಶ.9 ನೇ ಶತಮಾನದಲ್ಲಿ ಮಾಘನು ಪ್ರಸಿದ್ಧನಾಗಿದ್ದನು ಎಂದು ನಿರ್ದಿಷ್ಟವಾಗಿ ಹೇಳಬಹುದು.

5. ಶಿಶುಪಾಲ ವಧೆಯಲ್ಲಿರುವ

ಅನುತ್ಸೂತ್ರ ಪದನ್ಯಾಸಾ ಸದ್ವೃತ್ತಿಃ ಸನ್ನಿಬಂಧನಾ
ಶಬ್ದವಿದ್ಯೇವ ನೋಭಾತಿ ರಾಜನೀತಿ ರಪಸ್ಪಶಾ

ಎನ್ನುವ ಶ್ಲೋಕದಲ್ಲಿ ಕಾಶಿಕಾವೃತ್ತಿ ಮತ್ತು ನ್ಯಾಸ ಗ್ರಂಥಗಳ ಉಲ್ಲೇಖವಿದ್ದಂತಿದೆ. ವೃತ್ತಿಕಾರರಿಂದ ವಾಮನ ಮತ್ತು ಜಯಾದಿತ್ಯರು ಮತ್ತು ನ್ಯಾಸ ಗ್ರಂಥ ಪ್ರಣೋತಾಜಿನೇಂದ್ರ ಬುದ್ಧಿ ಇವರು ಇವನ ಹಿಂದಿನವರೆಂದು ಚೆನ್ನಾಗಿ ಊಹಿಸಬಹುದು. ಕಾಶಿಕೆಯ ಕಾಲ ಕ್ರಿ. ಶ. 650 ಭಾಮಹನಿಗೆ ವ್ಯಾಸವ್ಯಾಖ್ಯಾನ ತಿಳಿದಿದೆ. ಅವನ ವೃದ್ಧಾಪ್ಯದಲ್ಲಿ ದಂಡಿಯು ಪ್ರಾಯದವನು. ಅಂದರೆ ಈ ಕಾಲ 7ನೇ ಶತಮಾನದ ಉತ್ತರ ಭಾಗ.

ಈ ಕಾರಣಗಳಿಂದ ಮಾಘನನ್ನು 7ನೇ ಶತಮಾನದ ಅಂತ್ಯದಲ್ಲಿಡಬಹುದು.

**ಜೀವನ**

ವರ್ಮಲಾಖ್ಯ ಅಥವಾ ಧರ್ಮಲಾತನೆನ್ನುವ ದೊರೆಯ ಮಂತ್ರಿ ಸುಪ್ರಭದೇವ. ಅವನ ಮಗ ದತ್ತಕ ಸರ್ವಾಶ್ರಯ. ಅವನ ಮಗನೇ ಮಾಘ. ಇದಕ್ಕಿಂತಲೂ ಜಾಸ್ತಿ ಏನೂ ತಿಳಿಯದು.

**ಇವನ ಕೃತಿ**

ಇವನ ಒಂದೇ ಒಂದು ಕಾವ್ಯ "ಶಿಶುಪಾಲವಧೆ". ಪ್ರೌಢಿಮೆ ಮತ್ತು ಪಾಂಡಿತ್ಯದಲ್ಲಿ ಇದರ ಹೆಸರು ಶಾಶ್ವತಾಗಿ ಉಳಿದಿದೆ.

ನವಸರ್ಗಗತೇ ಮಾಘೇ ನವಶಬ್ದೋನವಿದ್ಯತೇ

ಎನ್ನುವ ಕೀರ್ತಿಯ ಸತ್ಯಾಂಶವನ್ನು ಗ್ರಂಥಪರಿಶೀಲನೆಯಿಂದ ತಿಳಿಯಬಹುದು. ಈ ಕವಿಯು "ಘಂಟಾರಾಘ" ನೆಂದು ಪ್ರಸಿದ್ಧನು. ಅವನ ಕಾವ್ಯದ ಒಂದು ಶ್ಲೋಕವೇ ಇದಕ್ಕೆ ಆಧಾರ. ರೈವತ ಪರ್ವತದ ವರ್ಣನೆಯನ್ನು ಮಾಡುವಾಗ ಸೂರ್ಯೋದಯ ಮತ್ತು ಚಂದ್ರಾಸ್ತಮಯವನ್ನು ಇರ್ಕಡೆಯಲ್ಲಿ ಭಾವಿಸಿಕೊಂಡು, ಒಂದು ಸಲಗದ ಕತ್ತಿಗೆ ಕಟ್ಟಿರುವ ಘಂಟೆಗಳಂತಿದೆ ಎಂದಿರುವನು. ಆ ಶ್ಲೋಕವು ಈ ರೀತಿ ಇದೆ.

ಉದಯತಿ ವಿತತೋರ್ಧ್ವರಶ್ಮಿರ ಜ್ಜಾವಹಿಮರು ಚೌಹಿಮ
ಧಾಮ್ನಿ ಯಾತಿ ಚಾಸ್ತಂ ವಹತಿಗಿರಿರಯಂ ವಿಲಂಬಿ ಘಂಟಾ
ದ್ವಯ ಪರಿವಾರಿವಾರಣೇಂದ್ರ ಲೀಲಾಂ

ಈ ಕಾವ್ಯದಲ್ಲಿ 20 ಸರ್ಗಗಳೂ 1650 ಶ್ಲೋಕಗಳೂ ಇವೆ. ಮಹಾಭಾರತದಲ್ಲಿ ಧರ್ಮರಾಜನು ಮಾಡಿದ ರಾಜಸೂಯ ಯಾಗದ ಪ್ರಕರಣದಲ್ಲಿ ಅಗ್ರಪೂಜೆ ವಿಷಯದಲ್ಲಿ ಚರ್ಚೆ ನಡೆದು ಶಿಶುಪಾಲನಿಗೂ ಶ್ರೀ ಕೃಷ್ಣನಿಗೂ ವೈಮನಸ್ಯ ಬಂದು ಕೊನೆಗೆ ಶ್ರೀ ಕೃಷ್ಣನಿಂದ ಶಿಶುಪಾಲನು ಸತ್ತನೆನ್ನುವ ಚಿಕ್ಕಕಥೆಯನ್ನು ವಸ್ತುವಾಗಿ ತೆಗೆದುಕೊಂಡು ಮಾಘನು ತನ್ನ ಪಾಂಡಿತ್ಯದ ದೃಷ್ಟಿಯನ್ನು ಕೊಟ್ಟಿರುವನು.

1 ನೇ ಸರ್ಗ -ನಾರದರುದ್ವಾರಕೆಗೆ ಬಂದು ಶಿಶುಪಾಲನ ವಧೆಗೆ ಪ್ರೇರೆಪಿಸಿದ್ದು.

2 ರಾಜಸಭೆ -ಬಲರಾಮನು ಯುದ್ಧಕ್ಕೆ ಪ್ರೋತ್ಸಾಹಕೊಡುವನು. ಯುದ್ಧವನ್ನು ಸಾಚಿವ್ಯದ ಪ್ರಕಾರ ಧರ್ಮರಾಜನ ಆಮಂತ್ರಣವನ್ನು ಸ್ವೀಕರಿಸಲಾಗುವುದು. ಈ ಎರಡು ಅಧ್ಯಾಯಗಳಲ್ಲಿ ರಾಜ್ಯಾಂಗ ತಂತ್ರದ ವರ್ಣನೆಯು ವೈದುಷ್ಯ ಭೂಷಿತವಾಗಿದೆ.

3. ದ್ವಾರಕೆಯನ್ನು ಬಿಟ್ಟು ಇಂದ್ರಪ್ರಸ್ಥಕ್ಕೆ ಹೊರಟಿದ್ದು

4. ಕೃಷ್ಣನ ಸಾರಥಿಯಾದ ದಾರುಕನಿಂದ ರೈವತ ಪರ್ವತವರ್ಣನೆ

5. ಬಿಡಾರದಲ್ಲಿ ಸೈನ್ಯದ ವರ್ಣನೆ ಇತ್ಯಾದಿ

6. ಸೈನ್ಯದೊಡನೆ ಬಂದಿದ್ದ ಸ್ತ್ರೀಯರ ವರ್ಣನೆ. ಋತುವರ್ಣನೆ

7. ಸ್ತ್ರೀಯರೊಡನೆ ವನವಿಹಾರ

8. ಜಲಕ್ರೀಡೆ

9. ಸೂರ್ಯಾಸ್ತಮಯ ಚಂದ್ರೋದಯ

10. ಸುರತ ಕ್ರೀಡೆ

11. ಸೂರ್ಯೋದಯ ವರ್ಣನೆ

12. ಯಮುನೆಯನ್ನು ದಾಟಿದ್ದು

13. ಇಂದ್ರಪ್ರಸ್ಥಕ್ಕೆ ಬಂದದ್ದು ಸ್ತ್ರೀಯರು ಶ್ರೀ ಕೃಷ್ಣನನ್ನು ನೋಡಲು ನೆರೆದಿದ್ದು ಇಲ್ಲಿ ಕಾಳಿದಾಸ ಮತ್ತು ಅಶ್ವಘೋಷನ ಅನುಕರಣ ಇಲ್ಲಿರುವವರಿಗೂ ಎಲ್ಲವೂ ಕವಿಯ ಕಲ್ಪನೆ

14. ರಾಜಸೂಯ ಅಗ್ರಪೂಜೆ

15. ಶಿಶುಪಾಲನ ಕ್ರೋಧ –ಭೀಷ್ಮನ ಉಪೇಕ್ಷೆ –ಶಿಶುಪಾಲನ ಸಭಾತ್ಯಾಗ ಯುದ್ಧ ಸನ್ನಾಹ

16. ಸಾತ್ಯಕಿ –ಶಿಶುಪಾಲನ ಯುದ್ಧ

17. ಎರಡು ಪಕ್ಷಗಳ ಯುದ್ಧ

18. 19.20-ಕೃಷ್ಣ ಶಿಶುಪಾಲರ ಯುದ್ಧ –ಶಿಶುಪಾಲವಧೆ.

ಈ ಕಾವ್ಯದಲ್ಲಿ ಶ್ರೀ ಕೃಷ್ಣ ಶಿಶುಪಾಲರ ವ್ಯಾಗ್ಯುದ್ಧವು ಕಡಿಮೆ. ಭಾರವಿಯ ಕಿರಾತಾರ್ಜುನೀಯದಲ್ಲಿರುವಂತೆ ಅನುಚರರ ಯುದ್ಧವಾದ ನಂತರ ದ್ವಂದ್ವ ಯುದ್ಧ. ಭಾರವಿಯಲ್ಲಿರುವುದಕ್ಕಿಂತಲೂ ಇವನಲ್ಲಿ ಭಾಷಾ ಸ್ವಾರಸ್ಯ ಮತ್ತು ಭಾವನೆಯ ಹಿರಿಮೆಯು ಇದೆ. ಅವನೇ ಹೇಳಿರುವಂತೆ ಕಾಮಸೂತ್ರಕ್ಕೆ ಅಡಿಯಾಳಾಗಿರುವನು. ಕಿರಾತಾರ್ಜುನೀಯದಲ್ಲಿ ವಿರಕ್ತಿಮಾರ್ಗದಲ್ಲಿ ವರ್ಣನೆಯು ಚೆನ್ನಾಗಿದೆ. ಇದರ ಆಧಾರದ ಮೇಲೆ ಕನ್ನಡದಲ್ಲಿ "ಮಾಘ ಓದಿ ಮಗ ಕೆಟ್ಟ –ಭಾರವಿ ಓದಿ ಅಳಿಯ ಕೆಟ್ಟ" ಎನ್ನುವ ಗಾದೆ ಇದೆ.

## ಭಾಷೆ, ಶೈಲಿ, ಪಾಂಡಿತ್ಯ

ಕಾಳಿದಾಸ, ಭಾರವಿ ಮತ್ತು ದಂಡಿ ಈ ಮೂವರು ಇವನಲ್ಲಿ ಒಂದಾಗಿರುವರು ಎಂಬುದನ್ನು

ಉಪಮಾಕಾಳಿದಾಸಸ್ಯ ಭಾರವೇರರ್ಥಗೌರವಂ
ದಂಡಿನಃ ಪದಲಾಲಿತ್ಯಂ ಮಾಘೇ ಸಂತಿತ್ರಯೋ ಗುಣಾಃ

ಎನ್ನುವ ಶ್ಲೋಕವು ತಿಳಿಸುತ್ತದೆ. ಈ ಶ್ಲೋಕದಲ್ಲಿ "ದಂಡಿನಃ ಪದಲಾಲಿತ್ಯಂ" ಎನ್ನುವ ಕಡೆ "ನೈಷಧೆ ಪದಲಾಲಿತ್ಯಂ" ಎಂದು ಹೇಳುವುದೂ ಉಂಟು. ಮಲ್ಲಿನಾಥನು ಇವನ ವಿಷಯದಲ್ಲಿ ಹೀಗೆ ಹೇಳಿರುವುದು.

ಯೇಶಬ್ದಾರ್ಥ ಪರೀಕ್ಷಣ ಪ್ರಣಯಿನೋಯೇವಾ ಗುಣಾಲಂಕ್ರಿಯಾ
ಶಿಕ್ಷಾ ಕೌತುನ ಅನೋ ವಿಹರ್ತುಮಸೋಯೇಬಧ್ವನೇರಧ್ವನಾಃ
ಕ್ಷುಭ್ಯದ್ಭಾವತರಂಗಿತೇ ರಸಸುಧಾಪೂರೇವಿಮಂಕ್ಷಂತಿಯೇ
ತೇಷಾಮೇವ ಕೃತೀ ಕರೋತಿ ವಿವೃತಿಂ ಮಾಘಸ್ಯ ಸರ್ವಂ ಕಷಾಂ
ನೇತಾಸ್ಮಿನ್ ಯದುನಂದನ ಸ್ವಭಗವಾನ್ ವೀರಪ್ರಧಾನನೋರಸಃ
ಶೃಂಗಾರಾದಿಭಿರಂಗವಾನ್ ವಿಜಯತೇ ಪೂರ್ಣ ಪುನರ್ವರ್ಣನಾ

ಭಾರವಿಕವಿಯ ಧಾರ್ಮಿಕ ದೃಷ್ಟಿಯನ್ನು ಅನುಕರಿಸಿರುವುದಲ್ಲದೆ ವೇದಾಂತದ ನಿಶ್ಚಿತಾರ್ಥವನ್ನು ಕೆಲವು ಕಡೆ ಕೊಟ್ಟಿರುವನು.

ನಾಲಂಬತೇ ದೈಷ್ಟಿಕತಾಂನ ನಿಷೇದ ತಿ ಪೌರುಷೇ
ಶಬ್ದಾರ್ಥೌ ಸತ್ಕವಿರಿವ ದ್ವಯಂ ವಿದ್ವಾನಪೇಕ್ಷತೇ
ಸಂಪದಾಸುಸ್ಥಿರಂ ಯನ್ಯೋ ಭವತಿ ಸ್ವಲ್ಪಯಾಪಿಯಃ
ಕೃತಕೃತ್ಯೋ ವಿಧಿರ್ಮನ್ಯೇನ ವರ್ಧಯತಿ ತಸ್ಯತಾಂ

ನೃಸಿಂಹಾವತಾರದ ವರ್ಣನೆಯು ಹೃದಯಂಗಮವಾಗಿದೆ.

ಪಟಾಭಟಾಭಿನ್ನ ಘನೇನ ಬಭ್ರುತಾ
ನೃಸಿಂಹಸ್ಯೆಂಹೀಂ ಆತನಂ ತಮಂತ್ವಯಾ
ಸಮುಗ್ಧ ಕಾಂತಸ್ತನ ಸಂಗಭಂಗುರೈಃ
ಉರೋವಿದಾರಂ ಪ್ರತಿಚಸ್ಕರೇ ನಖೈಃ

ವೀರ್ಯ ವರ್ಣನೆ ಅದರಲ್ಲಿ ಗಾಂಭೀರ್ಯ. ಭೀಕರ ಯುದ್ಧದಲ್ಲಿ ಪ್ರೇಮ ವಿಲಾಸವನ್ನು ತೋರಿಸುವುದು ಅತಿ ಸುಂದರವಾಗಿದೆ

ಕಶ್ಚಿನ್ಮ್ರ ಧರ್ಾ ಮೇತ್ಯ ಗಾಢ ಪ್ರಹಾರಃ
ಸಿಕ್ತಶ್ಶೀತೈಃ ಶೀಕರೈರ್ವಾರಣಸ್ಯ
ಉಚ್ಛ್ವಶ್ವಾಸ ಪ್ರಸ್ಥಿತಾ ತಂ ಜಿಘೃಕ್ಷುಃ
ವ್ಯರ್ಥಾಕೂತಾನಾಗನಾರೀ ಮು ಮೂರ್ಛ

ತ್ಯಕ್ತ ಪ್ರಾಣಂ ಸಂಯುಗೇಃ ಹಸ್ತಿನಿಷ್ಠ
ವೀಕ್ಷ್ಯ ಪ್ರೇಮ್ಣಾ ತತ್‌ಕ್ಷಣಾದುದ್ಗತಾಸುಃ
ಪ್ರಾಪ್ಯಾಖಂಡಂ ದೇವಭೂಯಂ ಸತೀತ್ವಾತ್
ಆಶಿಶ್ಲೇಷ ಸ್ವೈವ ಕಾಚಿತ್‌ಪುರಂಧ್ರೀ

ಕೃಷ್ಣನನ್ನು ಪೂಜಿಸಿದ್ದಕ್ಕಾಗಿ ಯುಧಿಷ್ಠರನನ್ನು ನಿಂದಿಸಿ ಶಿಶುಪಾಲನು ಹೇಳಿರುವ ಕ್ರಮವು ಸ್ವಾರಸ್ಯವಾಗಿದೆ.

ಯದ ಪೂರ್ವಜಸ್ತ್ವ ಮಿಹಪಾರ್ಥಮುರಜಿತಂ ಅಪೂಜಿತಂಸತಾಂ
ಪ್ರೇಮಮಿಲಸತಿ ಮಹದ ಹೋದಯಿತಂ ಜನಃ ಖಲುಗುಣೇತಿಮನ್ಯತೇ
ಅನ್ಯತಂ ನಗದಸೀತಿ ಜಗತಿಪಟಹೈಃ ವಿಘೋಷ್ಯಸೇ
ನಿಂಧ್ಯ ಮಥ ಹರಿ ಮರ್ಚಯತಸ್ತವಕರ್ಮಣ್ಯೈವ ವಿಕಸತ್ಯಸತ್ಯತಾ

ಅಲಂಕಾರದಲ್ಲಿ ಇವನದೇ ಒಂದು ಮಾರ್ಗವಿದೆ. ಶಬ್ದಾಲಂಕಾರದಲ್ಲಿ ಒಂದು ನವೀನತೆ ಇದೆ. ಭಾಷಾ ವೈಖರಿಯಲ್ಲೇ ವ್ಯಾಕರಣನಿಯಮಗಳನ್ನು ಉಪಯೋಗಿಸುವುದು ಭಟ್ಟಿಯ ಅನುಕರಣವನ್ನು ತೋರಿಸುತ್ತದೆ. ವೃತ್ತಗಳಲ್ಲಿ ವಿಪುಲತ್ವವು ಇವನ ವೈಶಿಷ್ಟ್ಯ.

## ೫೨ –೮. ದಂಡೀ (ಕ್ರಿ.ಶ. ೬೬೦)

**ಕಾಲ**

ಇವನ ಕಾಲ ವಿಷಯದಲ್ಲಿ ಕ್ರಿ.ಶ. ೮೦೦, ೮೪೬, ೮೬೬ ಇತ್ಯಾದಿ ಭಿನ್ನಾಭಿಪ್ರಾಯವಿದೆ. ಇವನ ಕಾಲದಲ್ಲಿ ಕಾಳಿದಾಸನ ಪ್ರಭಾವವು ಚೆನ್ನಾಗಿ ಕಾಣುತ್ತದೆ. " ಮಲಿನ ಮಪಿ ಹಿಮಾಂಶೋರ್ಲಕ್ಷ್ಮ ಲಕ್ಷ್ಮೀಂತನೋತಿ"

ಎನ್ನುವ ಕಾಳಿದಾಸನ ವಾಕ್ಯಕ್ಕೆ ದಂಡಿಯ

"ಲಕ್ಷ್ಮ ಲಕ್ಷ್ಮೀಂ ತನೋತೀತಿಪ್ರತೀತಿ ಸುಭಗಂ ವಚಃ (ಕಾ.ದ II-197) ಎನ್ನುವ ವಾಕ್ಯವು ಸರಿಹೊಗುತ್ತದೆ.

ಅರತ್ನಾ ಲೋಕಸಂಹಾರ್ಯ ಮವಾಪ್ಯ ಸೂರ್ಯರಶ್ಮಿಭಿಃ
ದೃಷ್ಟಿರೋಧಕರಂಯೂನಾಂ ಯೌವನ ಪ್ರಭವಂ ತಮಃ

ಎನ್ನುವ ದಂಡಿಯ ಶ್ಲೋಕಕ್ಕೆ ಕಾದಂಬರಿಯಲ್ಲಿ ಶುಕನಾಸನ ಉಪದೇಶವು ಆಧಾರವಾಗಿರುವಂತಿದೆ. ಅಲ್ಲದೆ ಇವನು ಬಾಣ. ಮಯೂರರನ್ನು ನಮೂದಿಸಿರುವನು. ಅದಕ್ಕೆ ಈ ಎರಡು ಆಧಾರ.

1. ಭಿನ್ನ- ತೀಕ್ಷ್ಣ -ಮುಖೇನಾಪಿ ಚಕ್ರಂ ಬಾಣೇನ ನಿರ್ವ್ಯಥಃ

2. ವ್ಯಾವಹಾರೇಷು ಜಹೌಲೀಲಾಂ ನ ಮಯೂರಃ

ಅಲ್ಲದೆ ಅವಂತೀಸುಂದರಿಯ ಕಥೆಯಲ್ಲಿ ಕಾದಂಬರೀ ವರ್ಣನೆಯನ್ನು ನೋಡಿದರೆ ಬಾಣನಾದ ಮೇಲೆ ಇವನು ಬಂದನೆನ್ನಬಹುದು. ಸಿಂಹಳದ " ಸ್ವಭಾಷಾಲಂಕಾರ"ವೆನ್ನುವ ಅಲಂಕಾರ ಗ್ರಂಥವು (ಕ್ರಿ. ಶ. 846-866) ಮತ್ತು 'ಕರ್ಮಾದರೀಯ' ಗ್ರಂಥವು (814) ಕಾವ್ಯಾದರ್ಶದ ಛಾಯೆಯಂತೆ ತೋರುತ್ತದೆ. ಅಂದರೆ ಕ್ರಿ.ಶ .೮ನೇ ಶತಮಾನಕ್ಕೆ ಹಿಂದಿನವನು ಎಂದು ಡಾ.ಬಾರ್ನೆಟ್ (Dr. Barrett) ಅವರು ಅಭಿಪ್ರಾಯಪಟ್ಟಿರುವರು. ೫ನೇ ಶತಮಾನದ ಪ್ರವರಸೇನನ ಸೇತುಬಂಧ ಕಾವ್ಯವು ಕಾವ್ಯಾದರ್ಶನದಲ್ಲಿ ಸೂಚಿತವಾಗಿದೆ. ಆದ್ದರಿಂದ 5ಮತ್ತು 8ನೇ ಶತಮಾನದ ಯುದ್ಧವರ್ತಿಕಾಲ ಇವನೆಂದು ಹೇಳಬಹುದು. ಇವನ ದಶರಾಮನ ಚರಿತೆಯು ರಾಜವರ್ಮನ ಮಗನಿಗಾಗಿ ಬರೆಯಲ್ಪಟ್ಟಿತೆನ್ನುವ ಐತಿಹ್ಯವಿದೆ. ಈ ದೊರೆಯ ಕಾಲ 690-725ಪ್ರೊಫೆಸರ್ ಕಾಣೆ (Kane) ಅವರು ಹೇಳುವಂತೆ ಇವನ ಕಾಲ ಆರನೇ ಶತಮಾನ. ಅಲ್ಲದೆ ಎರಡನೇ ಪುಲಿಕೇಶಿಯ ಮಗ ಚಂದ್ರಾದಿತ್ಯನ ಮಹಿಷೀ ವಿಜಯಭಟ್ಟಾರಿಕೆಯು " ವಿಜಯಾಂಕಕಾ"ಎಂದು ಪ್ರಸಿದ್ಧಳಾಗಿದ್ದಳು. ಇವಳೂ "ವಿಜ್ಜಿಕಾ" ಎನ್ನುವಳೂ ಒಂದಾದರೆ "ಶಾರ್ಙ್ಗಧರಪದ್ಧತಿ" ಎನ್ನುವ ಗ್ರಂಥದಲ್ಲಿ

ನೀಲೋತ್ಪಲದಲಶ್ಯಾಮಾಂ ವಿಜ್ಜಿಕಾಂ ಮಾಮಜಾನತಾ
ವ್ಯಥೈವ ದಂಡಿನಾ ಪ್ರೋಕ್ತಂಸರ್ವಶುಕ್ಲಾಸರಸ್ವತೀ
ಸರಸ್ವತೀವ ಕರ್ಣಾಟೀ ವಿಜಯಾಂಕಾ ಜಯತ್ಯಸಾ
ಯಾವಿದರ್ಭಗಿರಾಂ ವಾಸಃ ಕಾಲಿದಾಸಾದನಂತರಂ

ಈ ಶ್ಲೋಕಗಳಿರುವುದರಿಂದ. ಇವಳ ಕಾಲವೇ ಅಂದರೆ ಕ್ರಿ.ಶ. 660ಇವನ ಕಾಲವಾಗಿರಬಹುದು.

## ಜೀವನ ಪರಿಚಯ

ದಾಮೋದರನೇ ಭಾರವಿ ಎಂದು ಕೆಲವರು ಹೇಳುವರು. ಇದು ನಿಜವಾದರೆ -ಭಾರವಿಯ ಮಗ ಮನೋರಥ. ಇವನ ನಾಲ್ವರ ಮಕ್ಕಳಲ್ಲಿ ಕೊನೆಯವನು ದಾರ್ಶನಿಕ ವೀರದತ್ತ. ಅವನ ಹೆಂಡತಿ ವಿದೂಷಿಯಾದ ಗೌರಿ. ಇವರಿಬ್ಬರ ಮಗನೇ ದಂಡೀ. ಇವನ ಊರು ಕಾಂಚೀಪುರ. ಇವನ ಬಾಲ್ಯದಲ್ಲಿ ತಂದೆತಾಯಿಗಳು ಪುರಂದರ ಪುರದಲ್ಲಿದ್ದರು. ಇವನ ಮಲತಾಯಿ ಮತ್ತು

ತಂದೆ ಸರಸ್ವತೀ ಮತ್ತು ಶುಕ್ರ. ಚಾಲುಕ್ಯ ದೊರೆ ವಿಕ್ರಮಾದಿತ್ಯನು ಕಾಂಚಿಯನ್ನು ಮುತ್ತಿಗೆ ಹಾಕಿದ ಮೇಲೆ (ಕ್ರಿ.ಶ. 655) ದಂಡಿಯು ಅಲೆದು ವೇದ ಮತ್ತು ಕಲೆಗಳಲ್ಲಿ ಪ್ರವೀಣನಾದನು. ಪಲ್ಲವ ದೊರೆ ನರಸಿಂಹವರ್ಮನು ಮತ್ತೆ ಕಾಂಚೀಪುರವನ್ನು ಗೆದ್ದ ಮೇಲೆ ಅವನ ಸಭೆಯಲ್ಲಿ ಸ್ಥಾನಮಾನಗಳನ್ನು ಹೊಂದಿದನು. ಇವನು ದಂಡಧಾರಿ. ನೈಷ್ಠಿಕ ಬ್ರಹ್ಮಚಾರೀ ಆದಕ್ಕಾಗಿಯೇ ಅವನ ಹೆಸರು ದಂಡೀ. ಇವನ ವಿಷಯದಲ್ಲಿ ಒಂದು ಕಥೆ ಇದೆ. ಅವನ ವೈದುಷ್ಯಕ್ಕೆ ಮೆಚ್ಚಿ ದೊರೆಯು ಇವನನ್ನು ತನ್ನ ಮಗಳ ಗುರುವನ್ನಾಗಿ ಮಾಡಿದನು. ಅವಳಿಂದ ಇವನ ರಸಿಕತೆಯನ್ನು ದೊರೆಯು ತಿಳಿದು ಇವನ ನಿಷ್ಠೆಯಲ್ಲಿ ಸಂಶಯಪಟ್ಟನು. ಇದನ್ನು ದಂಡಿಯು ತಿಳಿದು ರಾಜನಿಗೆ ಒಂದು ಪ್ರಸಂಗದಲ್ಲಿ ದಾರಿದ್ರ್ಯದ ಮೇಲೆ ಕವಿತೆ ಬರೆಯುವಂತೆ ಕೇಳಿಕೊಂಡನು. ರಾಜನೂ ಹಾಗೆಯೇ ಮಾಡಿದ ಮೇಲೆ. ಇದರ ಸ್ವಾರಸ್ಯವನ್ನು ಶ್ಲಾಘಿಸಿ "ದಾರಿದ್ರ್ಯದ ಅನುಭವವೇ ಇಲ್ಲದ ನೀನು ಅದನ್ನು ಕೇವಲ ಕಲ್ಪನೆಯಿಂದ ಊಹಿಸಿ ಬರೆದಂತೆ ನನ್ನ ಅಲಂಕಾರದ ಅನುಭವ " ಎಂದು ಹೇಳಿ ರಾಜನ ಮನಸ್ಸಿನಲ್ಲಿದ್ದ ಸಂಶಯವನ್ನು ಹೋಗಲಾಡಿಸಿದನು.

ರಾಮಶರ್ಮ ಮತ್ತು ಮಾತೃದತ್ತ ಎನ್ನುವರು ಇವನ ಸ್ನೇಹಿತರು. ಹಿರಣ್ಯಕೇಶಿಯ ಶ್ರೌತ ಮತ್ತು ಗೃಹ್ಯಸೂತ್ರಕ್ಕೆ ವ್ಯಾಖ್ಯಾನ ಬರೆದವನು ಮಾತೃದತ್ತ. ಅಚ್ಯುತೋತ್ತರ ಕಾವ್ಯ ಬರೆದವನು ರಾಮಶರ್ಮ. ಇವನನ್ನು ಭಾಮಹನು ಖಂಡಿಸಿರುವನು. ಇವನು ಕೇರಳದವನು. ದಂಡಿಗೆ ಶಿಲ್ಪಕಲೆಯು ತಿಳಿದಿತ್ತು. ಒಂದು ಕಾಲದಲ್ಲಿ ಮಹಾಮಲ್ಲಪುರಂ (ಮಹಾಬಲಿಪುರಂ) ಎನ್ನುವ ಸ್ಥಳದಲ್ಲಿ ಸಮುದ್ರಜಲವನ್ನು ತಾಗುವಂತಿದ್ದ ತ್ರಿವಿಕ್ರಮ ವಿಗ್ರಹದ ಮುರಿದು ಹೋಗಿದ್ದ ಕೈಯನ್ನು ನೋಡಿ ಧ್ಯಾನಾಸಕ್ತನಾಗಿದ್ದ ವೇಳೆಯಲ್ಲಿ ಒಂದು ಮೀನು ಸಮುದ್ರದಿಂದ ಬಂದು ಈ ವಿಗ್ರಹವನ್ನು ತಾಗಿತೆಂದೂ. ತಕ್ಷಣವೇ ಆ ವಿಗ್ರಹದಿಂದ ಒಬ್ಬ ದಿವ್ಯಾಧರನು ಎದ್ದು ಅದೃಶ್ಯನಾದನೆಂದೂ. ಈ ವೈಚಿತ್ರ್ಯವನ್ನೂ ಚಿಂತಿಸುತ್ತಿರುವಲ್ಲಿ ಅವಂತೀಸುಂದರೀ ಕಥೆಯೂ ಇವನಿಗೆ ಗೋಚರವಾಯಿತೆಂದೂ ಹೇಳಲಾಗಿದೆ.

ಕಾಳಿದಾಸ ಮತ್ತು ದಂಡಿಯ ವಿಷಯದಲ್ಲಿ ಈ ಶ್ಲೋಕಗಳನ್ನು ಹೇಳುವುದುಂಟು:

ಕವಿರ್ದಂಡೀ ಕವಿರ್ದಂಡೀ ಕವಿರ್ದಂಡೀ ನಸಂಶಯಃ
ಕೋಹಂರಂಡೇತೀಪೃಷ್ಟಾ ಸಾ ಕಾಲಿದಾಸೇನ ಭಾರತೀ
ತ್ವಮೇವಾಹಂ ತ್ವಮೇವಾಹಂ ತ್ವಮೇವಾಹಂ ನ ಸಂಶಯಃ
ಇತಿ ಪ್ರತ್ಯವದತ್ ಕ್ಷಿಪ್ರಂ ಕಾಲಿದಾಸಂಶುಚಿಸ್ಮಿತಾ

ಇದರಿಂದ ದಂಡಿಯು ಒಬ್ಬ ಉದ್ದಾಮ ಪಂಡಿತ ಮತ್ತು ಪ್ರತಿಭಾವಂತ ಎಂದು ಮಾತ್ರ ತಿಳಿಯಬೇಕು.

ಮಯೂರ ವಿಜಯ ಎನ್ನುವ ಕವಯತ್ರಿಯು ಇವನ ವಿಷಯದಲ್ಲಿ ಹೀಗೆ ಹೇಳಿರುವಳು.

ಆಚಾರ್ಯ ದಂಡಿನೋ ವಾಚಾ ಮಾಚಾಂತಾಮೃತ ಸಂಪದಾಂ
ವಿಕಾಸೋವೇಧಸಃ ಪತ್ನ್ಯಾವಿಲಾಸ ಮಣಿದರ್ಪಣಂ

ಇವರ ಆಧಾರದ ಮೇಲೆಯೇ ಹಿಂದಿನ ಎರಡು ಶ್ಲೋಕಗಳನ್ನು ಯಾರೋ ಬರೆದಿರಬಹುದು.

**ಇವನ ಗ್ರಂಥಗಳು.**

1. ಅವಂತಿ ಸುಂದರೀ ಕಥೆ –ಇದು ಅವನದಲ್ಲವೆನ್ನುವರು ಕೆಲವರು.

2. ದಶಕುಮಾರ ಚರಿತೆ –ಇದು 5 ರಾಜಕುಮಾರರ ಮತ್ತು 5 ಮಂತ್ರಿ ಮಕ್ಕಳ ದೊಡ್ಡ ಚರಿತ್ರೆ.

3. ಕಾವ್ಯಾದರ್ಶ–(ಅಲಂಕಾರ ಗ್ರಂಥ)

4. ದ್ವಿಸಂಧಾನ –ಭೋಜನು ಇದರ ವಿಷಯದಲ್ಲಿ ರಾಮಾಯಣ ಮಹಾಭಾರತಯೋಃ ದಂಡಿನಃ ದ್ವಿಸಂಧಾವಮನ ಎಂದಿರುವನು.

"ಛಂದೋವಿಚಿತಿ" ಎನ್ನುವುದೂ ಇವನ ಬರೆದ ಗ್ರಂಥವೆಂದು ಕೆಲವರು ಹೇಳುವರು. ಕಾವ್ಯಾದರ್ಶಕ್ಕೆ ಈ ಹೆಸರಿದೆ ಎನ್ನುವ ಅಭಿಪ್ರಾಯಕ್ಕೆ ಮಾನ್ಯತೆ ಇದೆ. "ಲಿಂಪತೀವ ತಮ್ಯೋಂಗಾನಿ" ಎನ್ನುವ ಶ್ಲೋಕದ ಆಧಾರದ ಮೇಲೆ ಮೃಚ್ಛಕಟಿಕವು ಇವನದು ಎಂದು ಕೆಲವರು ಹೇಳುವರು. ಆದರೆ ಮೃಚ್ಛಕಟಿಕವನ್ನು ಬರೆದವನು ಉತ್ತಮ ರಂಗನಾಥ ಕವಿ ಎಂದು ಈಗ ನಿಶ್ಚಿತವಾಗಿದೆ.

**ಇವನ ಪಾಂಡಿತ್ಯ**

ಇವನ ಕವಿತಾ ಪ್ರಾಗಲ್ಭ್ಯವೂ ದಶಕುಮಾರ ಚರಿತೆಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಇವನದೇ ಆದ ಅಲಂಕಾರ ಶಾಸ್ತ್ರ ಕಾವ್ಯಾದರ್ಶವಾದ ನಿಯಮಗಳಿಗೆ ನಿದರ್ಶನಗಳನ್ನು ಈ ಕಾವ್ಯದಲ್ಲಿ ನೋಡಬಹುದು. ಇವನ ವಿಷಯದಲ್ಲಿ ಒಂದು ಪ್ರಶಸ್ತಿ ಶ್ಲೋಕವಿದೆ.

ಕವಿರುವಿರುದಿತೋದಂಡಿ ಭೂಮಂಡಲ ಮಂಡನೀಭುತಸ್ಸತತಂ
ಯಸ್ಯ ಹಿ ಕವಿತಾ ಸಾರ್ಥಂ ಸುಧಾಸದೃಶಂ ಬುಧಾಭಜಂತೇ

ಇವನ ಭಾವನೆಯಲ್ಲಿ ವೈದರ್ಭೀ ಮತ್ತು ಗೌಡೀ ಎನ್ನುವ ಎರಡು ಶೈಲಿಯೂ (Style) ಗ್ರಾಹ್ಯವಾಗಿದೆ. ವೈದರ್ಭಿಯು ಕೇವಲ ಅಕ್ಷರ ಮತ್ತು ಪದಗಳ ಜೋಡಣೆಯಿಂದ ಆಗುವುದಿಲ್ಲ. ಅದರಲ್ಲಿ ಸುಖಮಯ ಭಾವನೆಗಳಿರಬೇಕು. ವೈದರ್ಭಿಯಲ್ಲಿ ಮಾರ್ದವ ಮತ್ತು ಸೌಂದರ್ಯವಿದೆ. ಗೌಡಿಯಲ್ಲಿ ಕರ್ಕಶತ್ವ ಮತ್ತು ಆಡಂಬರವಿದೆ. ಆಯಾ ಮನೋಧರ್ಮವನ್ನು ಹೇಳುವಾಗ ಈ

ಶೈಲಿಯು ಸಾರ್ಥಕವಾಗುವುದು. ಭಾಮಕನು ಅಲಂಕಾರವೆಂದರೆ ಅದನ್ನೇ ದಂಡಿಯ ಗುಣವೆನ್ನುವರು. ಗುಣವೇ ಕಾವ್ಯಾತ್ಮ. ಅಲಂಕಾರವು ಅರ್ಥಕ್ಕೆ ರಸವನ್ನು ಸೇರಿಸುವುದು. ಭಾಮಹನು ರಸವನ್ನು ಅಲಂಕಾರಕ್ಕೆ ಅಧೀನ ಮಾಡಿದರೆ ಇವನು ಇವೆರಡನ್ನೂ ರೀತಿಗೆ ಅಧೀನ ಮಾಡಿರುವನು. ಇದನ್ನು ತನ್ನ ಕಾವ್ಯದಲ್ಲಿಯೇ ತೋರಿಸಿರುವನು. ಇದನ್ನು ವಿಮರ್ಶಕರು "ದಂಡಿನ ಪದಲಾಲಿತ್ಯಂ" ಎಂದು ಹೇಳಿರುವುದು.

## ೫೩. (9) ಕುಮಾರದಾಸ (ಕ್ರಿ.ಶ. 675-750)

### ಕಾಲ

ಕೆಲವರು ಇವನ ಕಾಲ ಕ್ರಿ.ಶ. 517-528 ಎಂದು ಹೇಳುವರು. ಅದು ಸರಿಯಲ್ಲ. ಇವನಿಗೆ ಕಾಶಿಕವು (ಕ್ರಿ.ಶ.650) ಗೊತ್ತು. ವಾಮನನಿಗೆ (8ನೇ ಶತಮಾನ) ಇವನು ತಿಳಿದಿದೆ. ಮಾಘನು ಇವನನ್ನು ಅನುಕರಿಸಿರುವಂತಿದೆ. ಆದ್ದರಿಂದ ಕ್ರಿ. ಶ. 675-750ರ ಮಧ್ಯವರ್ತಿ ಕಾಲದಲ್ಲಿ ಇವನನ್ನು ಇಡಬಹುದು.

### ಜೀವನ

ಇದರ ವಿಷಯದಲ್ಲಿ ಇವನ ಗ್ರಂಥಗಳಲ್ಲಿ ಯಾವ ಸೂಚನೆಯೂ ಇಲ್ಲ. ಬಾಹ್ಯ ಪುರಾಣಗಳಿಂದಲೂ ಕಂಡುಹಿಡಿಯಲು ಸಾಧ್ಯವಾಗಿಲ್ಲ. ಇವನೂ ಕಾಳಿದಾಸನೂ ಸಮಕಾಲಿಕರೆನ್ನುವ ಭಾವನೆಯಲ್ಲಿ ಒಂದು ಕಥೆಯೂ ಕಲ್ಪಿತವಾಗಿದೆ. ಇವನು ಸಿಂಹಳ ದೊರೆ. ಕಾಳಿದಾಸನು ಅಲ್ಲಿಗೆ ಹೋಗಿದ್ದಾಗ ಪರಸ್ಪರ ಸ್ನೇಹವು ಬೆಳೆದು ಒಂದು ಪ್ರಸಂಗದಲ್ಲಿ ಅವನನ್ನು ಕಾಳಿದಾಸನು ಅಗಲಿದನು. ಅದನ್ನು ಸಹಿಸಲಾರದೆ. ಕಾಳಿದಾಸನಿಗೆ ಪ್ರೇಯಸಿಯಾದ ಸೂಳೆಯೊಬ್ಬಳ ಮನೆಯಲ್ಲಿ__

ಕಮಲೇ ಕಮಲೋತ್ಪತ್ತಿ ಶ್ರೂಯತೇನ ಚದೃಶ್ಯತೇ

ಎಂದು ಬರೆದು ಇದನ್ನು ಪೂರ್ತಿ ಮಾಡುವವನನ್ನು ತಿಳಿಸೆಂದು ಹೇಳಿ ಬಂದನು. ಕಾಳಿದಾಸನು,

ಬಾಲೇ! ತವ ಮುಖಾಂ ಬೋಜೇಕಥಮಿಂದೀವರದ್ವಯಂ

ಎಂದು ಪೂರ್ತಿ ಮಾಡಿದನು. ಧನದಾಶೆಯಿಂದ ಆ ಗಣಿಕೆಯು ಕಾಳಿದಾಸನನ್ನು ಕೊಂದು ಈ ಶ್ಲೋಕವನ್ನು ತಾನು ಮಾಡಿದಳೆಂದು ದೊರೆಗೆ ಹೇಳಲು ಅದು ಕಾಳಿದಾಸನಲ್ಲದೆ ಮತ್ತೊಬ್ಬರಿಂದ ಬರೆಯಲು ಸಾಧ್ಯವಿಲ್ಲ. ಅವಳಿಗೆ ಶಿಕ್ಷೆ ವಿಧಿಸಿದನಂತೆ. ಕಥೆಯಲ್ಲಿ ಯಾವ ಸತ್ಯಾಂಶವೂ ಇಲ್ಲ.

## ಇವನ ಕೃತಿ ಮತ್ತು ಪಾಂಡಿತ್ಯ

ಜಾನಕೀ ಹರಣವೆನ್ನುವ ಕಾವ್ಯವು ಇವನದು. ಇದರಲ್ಲಿ ಇವನಿಗೆ ಕಾಳಿದಾಸ ಭಾರವೀ ಇವರಿಬ್ಬರ ಆದರ್ಶವು ಕಂಡುಬರುತ್ತದೆ. ಇದು 20 ಸರ್ಗಗಳ ಕಾವ್ಯ. ಆದರೆ 15 ಸರ್ಗಗಳಿಂದ ಕೊನೆಗೊಂಡಿದೆ. ಅಂಗದನ ದೌತ್ಯವೇ ಕೊನೆ. ಭಟ್ಟಿ ಕಾವ್ಯದಂತೆ ಇದೂ ಪೂರ್ಣ ರಾಮಾಯಣವಾಗಿರಬೇಕು. ಮಿಕ್ಕ ಸರ್ಗಗಳು ನಷ್ಟವಾಗಿರಬೇಕು. ಇದರಲ್ಲಿರುವ ಶೈಲಿ ವೈದರ್ಭೀ. ಇದು ಉತ್ತಮ ದರ್ಜೆಯ ಕಾವ್ಯ. 9ನೇ ಶತಮಾನದ ರಾಜ ಶೇಖರನು ತನ್ನ ಸೂಕ್ತಿ ಮುಕ್ತಾವಳಿಯಲ್ಲಿ ಇದನ್ನು–

ಜಾನಕೀಹರಣಂ ಕರ್ತುಂ ರಘುವಂಶೇಸ್ಥಿತೇಸತಿ
ಕಪಿಃ ಕುಮಾರದಾಸಶ್ಚ ರಾವಣಶ್ಚ ಯದಿಕ್ಷಮಃ

ಎಂದು ಪ್ರಶಂಸೆ ಮಾಡಿರುವನು. ವಾಮನು ಇದರಿಂದ ಉದಾಹರಣೆಗಳನ್ನು ತೆಗೆದು ಕೊಂಡಿರುವನು.

ರಾಮನ ಬಾಲಚೇಷ್ಟೆಯನ್ನೂ ಸುಂದರವಾಗಿ ವರ್ಣಿಸಿರುವನು.

ನಸರಾಮ ಇಹ ಕ್ವಯಾತ ಇತ್ಯನುಯುಕ್ತೊವನಿತಾಭಿರಗ್ರತಃ

ನಿಜಹಸ್ತ ಪುಟಾವೃತಾನೋವಿದಧೇಲಿಕನಿಲೀ ನಮರ್ಧಕಃ

ಕಾಳಿದಾಸನ ಅನುಕೃತಿಯು ಇಲ್ಲಿ ಕಾಣುತ್ತದೆ.

ಪುಷ್ಪರತ್ನ ವಿಭವೈರ್ಯಥೇಪ್ಸಿತಂ ಸಾ ವಿಭೂಷ ಯತಿರಾಜನಂದನೇ

ದರ್ದಣಂ ತುನ ಚಕಾಂಕ್ಷ ಯೋಷಿತಾಂ ಸ್ವಾಮಿಸಮ್ಮತ ಫಲಂಹಿ ಮಂಡನಂ ಪ್ರೇಮವಿಲಾಸವು ಇಲ್ಲಿ ಚೆನ್ನಾಗಿದೆ.

ಕೈತವೇನ ಕಲಹೇಷು ಸುಪ್ತಯಾ ಸಕ್ಷಿಪನ್‌ವಸನ ಮಾತ್ರ ಸಾಧ್ವಸಃ
ಚೋರ ಇತ್ಯುದಿತಹಾಸ ವಿಭ್ರಮಾಂ ಸಪ್ರಗಲ್ಭಮವ ಖಂಡಿತೋದರೇ
ತಸ್ಯ ಹಸ್ತ ಮಖಿಲಂ ವ್ಯಪೋಹಿತಂ ಮೇಖಿಲಾ ಗುಣಸಮೀಪಸಂಗಿನಂ
ಮಂಡ ಶಕ್ತಿರರತಿಂ ನ್ಯವೇದಯಲ್ಲೋಲ ನೈರ ನಗಲಿತೇನ ವಾರಿಣಾ

ಪ್ರಕೃತಿ ವರ್ಣನೆಯು ಸುಂದರವಾಗಿದೆ.

ವಾಸಂತಿ ಕಸ್ಯಾಂ ಶುಚಯೋನ ಭಾನೋ
ರ್ಹೇಮಂತ ಮಯೋಕ್ಷಹತ ಪ್ರಭಾವಂ
ಸರೋರುಹಾಮುದ್ಧೃತ ಕಂಟಕೇನ
ಪ್ರೀತ್ಯೇವ ರಮ್ಯಂ ಜಹಸೇನವೇನ

## ೫೪. ಕಾವ್ಯ ಸಾಹಿತ್ಯದ ಅವನತಿ ಮತ್ತು ಪುನರುದ್ಧಾರ

ಮಹಾ ಕಾವ್ಯ ರಚನೆಯಲ್ಲಿ ಕುತೂಹಲವು 8, 9, 10, ಮತ್ತು 11ನೇ ಶತಮಾನಗಳಲ್ಲಿ ಕುಂಠಿತವಾಗಿರುವುದು ಕಂಡುಬರುತ್ತದೆ. ಇದಕ್ಕೆ ಅನೇಕ ಕಾರಣಗಳನ್ನು ಊಹಿಸಬಹುದು ಹಿಂದಿನಿಂದಲೂ ಭಾರತ ಸಂಸ್ಕೃತಿಯಲ್ಲಿ ವೇದಾಂತ ಮತ್ತು ಧಾರ್ಮಿಕ ದೃಷ್ಟಿಯು ರಕ್ತಗತವಾಗಿ ಕಾವ್ಯ ಸಾಹಿತ್ಯದ ಅಣುರೇಣುವಿನಲ್ಲಿಯೂ ಸೇರುವಂತಾಯಿತು. ವೇದ ಸಂರಕ್ಷಣಕ್ಕಾಗಿ ಪಾರಮಾರ್ಥಿಕ ದೃಷ್ಟಿಯು ಪುಷ್ಟಿ ಹೊಂದಲು ಇತಿಹಾಸ ಪುರಾಣಗಳು ರಚಿಸಲ್ಪಟ್ಟವೆನ್ನುವ ಪೂರ್ಣ ವಿಶ್ವಾಸವು ಭಾರತೀಯರ ಮನಸ್ಸಿನಲ್ಲಿ ನೆಲೆಯಾಗಿ ನಿಂತು. ಸಂಸ್ಕೃತ ಭಾಷೆಯಲ್ಲಿತಮಗಿದ್ದ ಅತಿ ಪ್ರೇಮದಿಂದ ರಾಜಮಹಾರಾಜರು ಕಾವ್ಯ ಪಂಡಿತರಾಗಿ. ಪಂಡಿತರಿಗೂ ಪೂರ್ಣ ಸಹಕಾರ ಮತ್ತು ಪ್ರೋತ್ಸಾಹ ಕೊಟ್ಟು ಬಂದುದರಿಂದ ಕಾಳಿದಾಸ. ಅಶ್ವಘೋಷ. ಭಾರವಿ. ಮಾಘ.ಬಾಣ ದಂಡೀ. ಮೊದಲಾದ ಉದ್ದಾಮ ಪಂಡಿತರು ತಮ್ಮ ಕೃತಿಗಳಿಂದ ಸಂಸ್ಕೃತ ಕಾವ್ಯ ಸಾಹಿತ್ಯಕ್ಕೆ ಅತ್ಯುತ್ತಮ ಸೇವೆಯನ್ನು ಸಲ್ಲಿಸುವಂತಾಯಿತು. ಕಥಾ ಭಾಗವೆಲ್ಲವೂ ರಾಮಾಯಣ ಮಹಾಭಾರತಗಳಿಂದ ಮತ್ತು ಪುರಾಣಗಳಿಂದ ತೆಗೆಯಲ್ಪಟ್ಟರೂ ಮೇಧಾವಿಗಳ ಭಾವನಾ ಪುಷ್ಟಿಯಿಂದ ಕವಿಗಳ ಪ್ರತಿಭೆಯಿಂದ ವ್ಯಾಕರಣ ಶಾಸ್ತ್ರಾಧ್ಯಯನದ ಬಲದಿಂದ. ವೇದಾಂತ ಪ್ರಾವೀಣ್ಯದಿಂದ, ಕಾವ್ಯಗಳಲ್ಲಿ ರಸಾಲಂಕಾರಗಳೂ ಸ್ವಾಭಾವಿಕವಾಗಿ ಬರುವಂತಾಯಿತು. ರಾಜಮಹಾರಾಜರ ಬೆಂಬಲವು ಕಮ್ಮಿಯಾಗುತ್ತಾ ಬಂದರೂ ಸಂಸ್ಕೃತ ಮತ್ತು ಕಾವ್ಯ ಪ್ರೇಮವೂ ಅಳಿಯಲಿಲ್ಲ. ಸಾಮಾಜಿಕ ಜೀವನದಲ್ಲಿ ವೇದಾಂತ ಸಿದ್ಧಾಂತಗಳ ಸೋಂಕು ಎಲ್ಲರನ್ನೂ ಆದರಿಸುವಂತಾಯಿತು. ಶೈವ. ವೈಷ್ಣವ ಸಂಪ್ರದಾಯಗಳು ಬೇರ್ಪಡುತ್ತಾ ಬಂದವು. ಶೈವ ವೈಷ್ಣವ ಸಂಪ್ರದಾಯಗಳ ಬೆಂಬಲಿಗರೂ ಅಧಿಕವಾಗುತ್ತಾ ಬಂದರು. ಕಾಶ್ಮೀರವು ಶೈವ ಸಂಪ್ರದಾಯದ ಅಗ್ನಿಕುಂಡವಾಯಿತು. ಮಧ್ಯದಕ್ಷಿಣ. ಮತ್ತು ಪಶ್ಚಿಮಪ್ರದೇಶಗಳಲ್ಲಿ ವೈಷ್ಣವ ಸಂಪ್ರದಾಯಗಳು ತಲೆ ಎತ್ತಿದವು. ತರ್ಕ ಮತ್ತು ವಾದ ಕ್ಕೆ ಭೂಮಿಕೆಯು ಪರಿಷ್ಕರಿಸಲ್ಪಟ್ಟು ಬೆಳೆಯಿತು. ಕ್ರಿ. ಶ. 788ರಲ್ಲಿ ಶಂಕರಾಚಾರ್ಯರು ಜನ್ಮತಾಳಿ. ಭಾರತದ ಮೂಲೆ ಮೂಲೆಗೂ ವೇದಾಂತವು ಹರಡುವಂತಾಯಿತು. ಕಾವ್ಯ ಸಾಹಿತ್ಯವೇ ನಿಲ್ಲುವಂತಾಯಿತು. ಈ ಸಂದಿಗ್ಧ ಕಾಲದಲ್ಲಿ ಕುತೂಹಲಿಗಳಾದ ಕೆಲವರಿಂದ ಪ್ರಚಾರ ರೂಪದಲ್ಲಿ ಕೆಲವು ನಾಟಕಗಳು ಮತ್ತು ಲಘುವಾಕ್ಯಗಳು ರಚಿಸಲ್ಪಟ್ಟವು. ಎಲ್ಲಕ್ಕೂ ಮಿಗಿಲಾಗಿ ಕಾವ್ಯ ಸಾಹಿತ್ಯವನ್ನು ಉಳಿಸಿ ಅಭಿವೃದ್ಧಿಪಡಿಸಲು ಅಲಂಕಾರ ಶಾಸ್ತ್ರವು ಶಾಖೋಪಶಾಖೆಯಲ್ಲಿ ಬೆಳೆಯಲು ಅವಕಾಶವನ್ನು ಕಲ್ಪಿಸಿಕೊಂಡಿತು. ಈ ಕಾಲದಲ್ಲೇ ಅಲಂಕಾರಿಕರಾಗಿಯೂ ಕವಿಗಳಾಗಿಯೂ ಇದ್ದ ಆನಂದವರ್ಧನ. ದಂಡಿ. ಕ್ಷೇಮೇಂದ್ರ. ಹರ್ಷ ಮೊದಲಾದವರು ತಮ್ಮ ಕಾವ್ಯಗಳನ್ನು ಕೊಟ್ಟಿರುವರು. ಆದರೆ ಇವು ಹಿಂದಿನ ಕಾವ್ಯಗಳ ಮಟ್ಟಕ್ಕೆ ಹತ್ತಿಲ್ಲ. ತಮ್ಮ ಹಿಂದಿದ್ದ ಕಾವ್ಯಗಳಲ್ಲಿ ತಾವು ಭಾವಿಸಿದ ಉತ್ತಮ ಕಾವ್ಯ ನಿಯಮಗಳನ್ನು ಒರೆ ಹಚ್ಚಿ ದೂಷಿಸಿಯೂ ಭೂಷಿಸಿಯೂ ಇರುವರು. ಅವರು ತಮ್ಮ ಅಲಂಕಾರ ನಿಯಮಗಳಿಗೆ ತಾವೇ ಹಲವು ಕಡೆ ನಿದರ್ಶನಗಳನ್ನು ಕೊಟ್ಟಿರುವರು.

ಮತ್ತೆ ಕೆಲವರು ಈ ರೀತಿಯ ಕಾವ್ಯಹವ್ಯಾಸವನ್ನೇ ಬಿಟ್ಟು ಭಾಷೆಯನ್ನು ವೃದ್ಧಿಪಡಿಸಿ ಭಾವ ಶುದ್ಧಿಯನ್ನು ಉಂಟುಮಾಡಲು. ಚಂಪೂಸಾಹಿತ್ಯ. ದ್ವಿಸಂಧಾನಾದಿ ಚಿತ್ರ ಕಾವ್ಯ. ಸ್ತೋತ್ರ ಗ್ರಂಥ. ಸಂದೇಶ ಕಾವ್ಯ. ಸುಭಾಷಿತ. ಬಿಡೀ ಶ್ಲೋಕಗಳಾದ ಮುಕ್ತಕಗಳು. ಎರಡು ಛಂದಸ್ಸಿನಲ್ಲಿ ಯುಗ್ಮ ಅಥವಾ ಸಂಧಾನಿತಿಕವೆನ್ನುವ ಪದ್ಯಗಳು. ಮೂರು ಛಂದಸ್ಸಿನ ವಿಶೇಷಕಗಳು. ನಾಲ್ಕು ಛಂದಸ್ಸಿನ ಕಲಾಪಗಳು. ದ್ವದಶಾಂತ ಕುಲಕಗಳು. ಚಾರಿತ್ರಿಕ ಕಾವ್ಯ ನೀತಿ ಕಥೆ (ಕಥಾನಕ) ಇವೇ ಮೊದಲಾದವುಗಳಲ್ಲಿ ತಮ್ಮ ಬುದ್ಧಿಶಕ್ತಿಯನ್ನು ಪ್ರಯೋಗಿಸಿ ಗ್ರಂಥಗಳನ್ನು ಬರೆಯಲು ಉಪಕ್ರಮಿಸಿದನು. 12ನೇ ಶತಮಾನದ ದ್ವಿತೀಯ ಭಾಗದಲ್ಲಿ ಶ್ರೀ ಹರ್ಷನು ಸಂಸ್ಕೃತ ಕಾವ್ಯ ಸಾಹಿತ್ಯಕ್ಕೆ ಬಂದ ಈ ಅವನತಿಯನ್ನು ಕಂಡು ಅದನ್ನು ತಪ್ಪಿಸಲು ತನ್ನ ನೈಷಧ ಚರಿತೆಯನ್ನು ಹಿಂದಿನ ಕಾವ್ಯಗಳಿಗೆ ಸಮನಾಗಿ ಕೆಲವೆಡೆ ಅದಕ್ಕಿಂತ ಮಿಗಿಲಾಗಿ ರಚಿಸಿರುವನು.

## ೫೫. ಕೆಲವು ಲಘು ಕಾವ್ಯಗಳು

## (10) ಆನಂದವರ್ಧನ (ಕ್ರಿ. ಪೂ. 850)

**ಕಾಲ**

ಕಾಶ್ಮೀರ ರಾಜ ಅವಂತೀವರ್ಮನ (ಕ್ರಿ.ಶ. 855-833) ಆಸ್ಥಾನ ಪಂಡಿತನಿವನು. ಉದ್ಭಟನ ಮತವನ್ನು ಇವನು ಪ್ರಸ್ತಾಪಿಸಿರುವುದರಿಂದಲೂ (800A.D) ರಾಜಶೇಖರನು (9ನೇ ಶತಮಾನ ಮತ್ತು 10ನೇ ಶತಮಾನ) ಇವನ ವಿಷಯವಾಗಿ-

ಧ್ವನಿನಾತಿಗಭೀರೇಣ ಕಾವ್ಯತತ್ವನಿವೇದಿನಾ
ಆನಂದವರ್ಧನಃ ಕಸ್ಯ ನಾಸೀದಾ ನಂದವರ್ಧನಃ

ಎಂದು ಮುಕ್ತಕಂಠದಿಂದ ಹೊಗಳಿರುವುದರಿಂದಲೂ ಇವರಿಬ್ಬರ ಮಧ್ಯವರ್ತಿ ಕಾಲದವನೆಂದು ಹೇಳಬಹುದು ಈ ಶ್ಲೋಕವು ಜಲ್ಹಣನ ಸೂಕ್ತಿ ಮುಕ್ತಾವಳಿಯಲ್ಲಿದೆ.

**ಜೀವನ**

ಇವನು ನೋಣನ ಮಗ-ರತ್ನಾಕರ, ಮುಕ್ತಾಕರ ಮತ್ತು ಶಿವಸ್ವಾಮಿ ಇವನ ಸ್ನೇಹಿತರೆಂದು ರಾಜತರಂಗಿಣಿಯಲ್ಲಿ ಹೇಳಿದೆ. ಇವನು ಅಲಂಕಾರಿಕ. ಕವಿ ಮತ್ತು ದಾರ್ಶನಿಕ.

**ಇವನ ಗ್ರಂಥಗಳು.**

1. ಧ್ವನ್ಯಾಲೋಕ 2. ವಿಷಮಬಾಣಲೀಲಾ 3. ಹರಿವಿಜಯಂ 4. ಅರ್ಜುನಚರಿತಂ 5. ಮತಪರೀಕ್ಷ 6. ಧರ್ಮೋತ್ತರ ವಿನಿಶ್ಚಯ ಟೀಕಾ 7. ದೇವೀಶತಕಂ ಇವುಗಳಲ್ಲಿ ಬಹಳ

ಪ್ರಸಿದ್ಧವಾದುದು ಧ್ವನ್ಯಾಲೋಕ. "ಧ್ವನಿಕೃತಾಮಾಲಂಕಾರಿಕ ಸರಣಿ ವ್ಯವಸ್ಥಾಪ ಕತ್ವಾತ್" ಎಂದು ಜಗನ್ನಾಥ ಪಂಡಿತನು ಹೇಳಿರುವಂತೆ ಇವನೇ ಧ್ವನಿವಾದಕ್ಕೆ ಮೂಲ ಪುರುಷನೆನ್ನಬಹುದು. ಅಭಿನವ ಗುಪ್ತನು ಹೇಳಿರುವಂತೆ ಇದರ ಮತ್ತೊಂದು ಹೆಸರು "ಸಹೃದಯಾಲೋಕ ". ಇದರಲ್ಲಿ ಕಾರಿಕೆ, ವೃತ್ತಿ, ಮತ್ತು ಉದಾಹರಣೆ ಎಂಬ ಮೂರು ಭಾಗಗಳಿವೆ. ಜಾಕೋಬಿ (jacobi) ಕೀತ್ (Keith), ಬುಲರ್ (Buller), S.K. ಡೇ (De), ಕಾಣೆ (Kane) ಇವರು ಕಾರಿಕೆಯನ್ನೂ ಯಾರೋ ಬರೆದರೆಂದೂ ವೃತ್ತಿಗಳನ್ನು ಉದಾಹರಣೆಗಳೊಡನೆ ಇವನು ಬರೆದನೆಂದೂ ಅಭಿಪ್ರಾಯಪಟ್ಟಿರುತ್ತಾರೆ. ಇದು ಸರಿಯಾಗಿ ಕಂಡುಬರುವುದಿಲ್ಲ. ಪ್ರತಿಹಾರೇಂದು ರಾಜ, ಕುಂತಕ, ಮಹಿಯಭಟ್ಟ, ಕ್ಷೇಮೇಂದ್ರ,, ಮಮ್ಮಟ ಮೊದಲಾದವರು ಎರಡಕ್ಕೂ ಆನಂದವರ್ಧನನೇ ಕರ್ತಾ ಎಂದು ಹೇಳಿರುವರು. ಅಲ್ಲದೇ ಆನಂದವರ್ಧನನೇ "ಇತಿ ಕಾವ್ಯಾರ್ಥ ವಿವೇಕೋಯಂ ಚೇತಶ್ಚ ಯತ್ಕೃತಿ ವಿಧಾಯಿ ಸೂರಭಿರನುಸೃತ ಸಾರ್ರೈರಸ್ಮದುಪಜ್ಞೋನ ವಿಸ್ಮಾರ್ಯಃ ಎಂದು ತನ್ನನ್ನೇ ಹೇಳಿಕೊಂಡಿರುವನು. ಕೊನೆಯ ಪದ್ಯದಲ್ಲಿ

ಸತ್ಕಾರ್ಯ ತತ್ವವಿಷಯಂ ಸ್ಫುರಿತ ಪ್ರಸುತ್ತ
ಕಲ್ಪಂ ಮನಸ್ಸು ಪರಪಕ್ವಧಿಯಾಂಯದಾಸೀತ್
ತದ್ವ್ಯಾಕ ಕರೋತ್ಸಹೃದಯಾ ದಯಹೇತೋ
ರಾನಂದವರ್ಧನ ಇತಿ ಪ್ರಥಿತಾಭಿದಾನಃ

ಎಂದು ಹೇಳಿಕೊಂಡಿರುವನು.

## ೫೬. (11) ರತ್ನಾಕರ (ಕ್ರಿ. ಶ. ೮೫೦)

ಇವನ ತಂದೆ ಭಾನುವು ಜಯಾ ಪೀಡನ (ಕ್ರಿ . ಶ. 779-816) ಆಸ್ಥಾನ ಪಂಡಿತ. ಕಲ್ಹಣನ ರಾಜತರಂಗಿಣಿಯಂತೆ-

ಮುಕ್ತಾಕಣಃ ಶಿವಸ್ವಾಮೀ ಕವಿರಾನಂದ ವರ್ಧನಃ
ಪ್ರಥಾಂ ರತ್ನಾಕರ ಶ್ಚಾಸನ್ ಸಾಮ್ರಾಜ್ಯೋವಂತಿವರ್ಮಣಃ

ಎನ್ನುವ ಶ್ಲೋಕದ ಪ್ರಕಾರ ಇವನು ಅವಂತಿವರ್ಮನ ಆಸ್ಥಾನ ಪಂಡಿತ ಇವನಿಗೆ ರಾಜನಕ ಮತ್ತು ವಾಗೀಶ್ವರನೆಂಬ ಹೆಸರೂ ಉಂಟು. ಇವನ ಗ್ರಂಥಗಳು .

(1) ವಕ್ರೋಕ್ತಿ ಪಂಚಾಶಿಕಾ (2) ಧ್ವನಿನಾಥಾ ಪಂಚಿಕಾ ಮತ್ತು (3) ಹರವಿಜಯ. ಹರವಿಜಯವು 15ಸರ್ಗದ ಅಂದರೆ 1320 ಶ್ಲೋಕಗಳುಳ್ಳ ಕಾವ್ಯ. ಕೆಲವು ವಿಷಯಗಳಲ್ಲಿ ಮಾಘನ ಪ್ರತಿಭೆಗೂ ಮಿಗಿಲಾದ ಗ್ರಂಥವಿದು. ಅವನ ಪ್ರತಿಬಿಂಬವೂ ಕಾಣುತ್ತದೆ. ಮಾಘನೂ "ಲಕ್ಷ್ಮೀಪತೇಶ್ಚರಿತ ಕೀರ್ತನ ಮಾತ್ರಬಿಂದು "ಎಂದಿದ್ದರೆ ಇವನು "ಚಂದ್ರಾರ್ಧ ಚೂಡಚರಿತಾ ಶಯಚಾರು" ಎಂದಿರುವರು. ರಾಜಶೇಖರನು ಇವನನ್ನು-

ಮಾಸ್ಯಸಂತು ಚ ಚತ್ವಾರಃ ಪ್ರಾಯೋರತ್ನಾಕರಾ ಇಮೇ
ಇತೀವ ಸತ್ಯತೋಧಾತಾ ಕವೀರತ್ನಾಕರರೋಪರಃ

ಎಂದು ಹೊಗಳಿರುವನು.

ಆದೌ ಶ್ರೀ ಕಾಳಿದಾಸಸ್ಸ್ಯಾತ್ ಅಶ್ವಘೋಷೋಸ್ತತಃಪರಂ
ಭಾರವಿಶ್ಚತಥಾ ಭಟ್ಟಿಕುಮಾರಶ್ಚಾಪಿ ಪಂಚಮಃ
ಮಾಘರತ್ನಾಕರೌ ಪಶ್ಚಾತ್ ಹರಿಶ್ಚಂದ್ರಸ್ತಥೈ ಚ
ಕವಿರಾಜಶ್ಚ ಶ್ರೀಹರ್ಷಃ ಪ್ರಖ್ಯಾತಃ ಪಯೋನಶಾ

ಎನ್ನುವ ಶ್ಲೋಕದಲ್ಲಿ ಹೇಳಿರುವಂತೆ 10 ಕವಿಗಳಲ್ಲಿ ಇವನೂ ಒಬ್ಬನು. ಇವನಿಗೆ ವಸಂತ ತಿಲಕಾವೃತ್ತ ಮತ್ತು ಯಮಕವೆಂದರೆ ಬಹಳ ಇಷ್ಟವೆಂದು ಕಾಣುತ್ತದೆ.

## ೫೭. (12) ಶಿವಸ್ವಾಮಿ (ಕ್ರಿ.ಶ. 850)

ಇವನೂ ಆನಂದವರ್ಧನನ ಸ್ನೇಹಿತನು. ಇವನ ತಂದೆ ಭಟ್ಟಾರಕ. ಇವನ ಕಾವ್ಯದ ಹೆಸರು ಕಪಿಫಣಾಭ್ಯುದಯ. ಇಲ್ಲಿ 20 ಸರ್ಗಗಳಿವೆ. ಇದರಲ್ಲಿ ಕಾಳಿದಾಸ, ಭರ್ತೃವೆಂದು. ದಂಡಿ ಇವರ ಪ್ರತಿಬಿಂಬವು ಕಾಣುತ್ತದೆ. ಈ ಕಾವ್ಯದಲ್ಲಿ ದಕ್ಷಿಣ ದೇಶದ ದೊರೆ ಕಪಿಫಣನ ಚರಿತ್ರೆ ಇದೆ ಶ್ರಾವಸ್ತಿ ದೊರೆ ಪ್ರಸೇನಜಿತ್ತನ ಸೋಲು ಇವನ ಬುದ್ಧಿ ಭಕ್ತಿಯಿಂದ ಅವನ ಅನುಗ್ರಹವನ್ನು ಹೊಂದಿ ಮತ್ತೆ ಕಪಿಫಣನನ್ನು ಸೋಲಿಸಿದ್ದು ವರ್ಣಿತವಾಗಿದೆ.

## ೫೮. (13) ಮೇಂಠ (10ನೇ ಶತಮಾನ)

ಇವನು ನಾಟ್ಯಶಾಸ್ತ್ರ ವ್ಯಾಖ್ಯಾತೃವೆಂದು ಹೇಳಲಾಗಿದೆ. ಇವನು ಕಾಶ್ಮೀರದವನು. ಇವನ ಕಾವ್ಯವು ಹಯಗ್ರೀವ ವಧ. ಕಲ್ಹಣನು ಇದನ್ನು ಉತ್ತಮ ಕಾವ್ಯವೆಂದು ಹೇಳಿರುವನು. ಇವನ ಆಶ್ರಿತ ದೊರೆ ಮಾತೃಗುಪ್ತ. ಈ ದೊರೆಯು ಈ ಕಾವ್ಯವನ್ನು ಕೇಳಿ, ಅದನ್ನು ಶ್ಲಾಘಿಸಿ, ಅದನ್ನಿಡಲು ಒಂದು ಚಿನ್ನದ ತಟ್ಟೆಯನ್ನು ಮಾಡಿಸಿಕೊಟ್ಟನಂತೆ. ವಾಲ್ಮೀಕಿಯಾದ ಮೇಲೆ ಇದನ್ನೇ ಕವಿ ಎಂದು ಕೆಲವು ಕಾವ್ಯ ವಿಮರ್ಶಕರು ಹೇಳಿರುವರು. ಹಿಂದೂ ಸಂಪ್ರದಾಯದಲ್ಲಿ ಇವನು ಸುಬಂಧು, ಭಾರವಿ ಮತ್ತು ಬಾಣನಿಗೆ ಸಮನು. ಇದನ್ನು ಮಂಖನು ಹೇಳಿರುವನು. ಇವನ ಕಾವ್ಯರಚನೆ ಶಕ್ತಿಯನ್ನು

ತಥಾಪ್ಯಕೃತ ಕೊಟ್ಟಾ ಲಹಾಸಪಲ್ಲವಿ ತಾಧರಂ
ಮುಖಿಂಗ್ರಾಮ ವಿಲಾಸಿನ್ಯಾಃ ಸಕಲಂರಾಜ್ಯಮರ್ಹತಿ

ಇತ್ಯಂ ಶ್ಲೋಕಗಳಿಂದ ತಿಳಿಯಬಹುದು.

## ೧೯. (14) ಭೌಮಕ (10ನೇ ಶತಮಾನ)

ಮೆಂಥನ ಸನ್ನಿಹಿತ ಉತ್ತರ ಕಾಲದವನಿವನು. ಇವನ ಕಾವ್ಯ ರಾವಣಾರ್ಜುನೀಯ. ಇದರಲ್ಲಿ 27ಸರ್ಗಗಳಿವೆ. ಕಾರ್ತವೀರಾರ್ಜುನ ಮತ್ತು ರಾವಣನ ವಿಷಯವಾದ ಕಾವ್ಯ. ಭಟ್ಟಿಯ ಅನುಕರಣವು ಚೆನ್ನಾಗಿ ಕಾಣುತ್ತದೆ.

## ೨೦. (15) ಕನಕ ಸೇನ ವಾದಿರಾಜ (10ನೇ ಶತಮಾನ)

ಇವನ ಕಾವ್ಯ ೪ ಸರ್ಗಗಳುಳ್ಳ ಯಶೋಧರ ಚರಿತಂ. ಇವನ ಶಿಷ್ಯ ಸೋಮದೇವನು. ಯಶಸ್ತಿಲಕವೆನ್ನುವ ಗ್ರಂಥವನ್ನು ಬರೆದಿರುವನು.

## ೨೧. (16) ಹಲಾಯುಧ (10ನೇ ಶತಮಾನ)

ಇವನ ಕಾವ್ಯವೇ ಕವಿರಹಸ್ಯ. ಇದರಲ್ಲಿ ರಾಷ್ಟ್ರಕೂಟದ ದೊರೆ 3ನೇ ಕೃಷ್ಣರಾಯನ ವರ್ಣನೆ ಇದೆ (ಕ್ರಿ.ಶ.940–956) ಧಾತುಗಳ ವರ್ತಮಾನ ಕಾಲಕಾರಕ್ಕೆ ನಿದರ್ಶನಗಳು ಇಲ್ಲಿ ಹೇರಳವಾಗಿವೆ.

## ೨೨. (17) ಹರಿಚಂದ್ರ (11ನೇ ಶತಮಾನ)

ಇವನು ಈ ಶತಮಾನದ ಪ್ರಸಿದ್ಧ ಕವಿ. ಸೋಮಕ ವಂಶದ ಆರ್ದ್ರದೇವನು ಇವನ ತಂದೆ. ವಿದುಷಿ ರತ್ನಾದೇವಿ ಇವನ ತಾಯಿ. ಇವನು ಜೈನ ಮತದವನು. ಇವನು ಗದ್ಯ ಕಾವ್ಯ ಪ್ರಣೇತಾ ಭಟ್ಟಾರಕ ಹರಿಚಂದ್ರನಿಗಿಂತ ಭಿನ್ನನು. ಧರ್ಮಶರ್ಮಾಭ್ಯುದಯ ಮತ್ತು ಜೀವನ ಚಂಪೂ ಇವನ ಎರಡು ಕಾವ್ಯಗಳು. ಮೊದಲನೆಯದು ವೈದರ್ಭೀ ಶೈಲಿಯಲ್ಲಿದೆ. ಇದು 15ನೇ ತೀರ್ಥಂಕರ ಧರ್ಮನಾಥನ ಜೀವನ ಚರಿತ್ರೆ. ಇದರಲ್ಲಿ 11ನೇ ಸರ್ಗವೆಲ್ಲವೂ ಚಿತ್ರಾಲಂಕಾರದಿಂದ ತುಂಬಿದೆ.

## ೨೩. (18) ಕ್ಷೇಮೇಂದ್ರ (1025–1080)

ಇವನು ಕಾಶ್ಮೀರ ಬ್ರಾಹ್ಮಣ. ಐಶ್ವರ್ಯ ವಂಶದಲ್ಲಿ ಹುಟ್ಟಿದವನು. ಸಿಂಧುವಿನ ಪೌತ್ರ. ಪ್ರಕಾಶೇಂದ್ರನ ಪುತ್ರ. ಅಭಿನವ ಗುಪ್ತನ ಶಿಷ್ಯ . ಮೊದಲು ಶೈವಮತದವನಾಗಿ ವೇದಾಂತ ನಿಷ್ಣಾತನಾಗಿ ಬೌದ್ಧ ಧರ್ಮದಲ್ಲಿ ಅನುರಾಗವನ್ನು ಇಟ್ಟುಕೊಂಡು ಕೊನೆಗೆ ಸೋಮಾಚಾರ್ಯ ಉಪದೇಶದಿಂದ ವೈಷ್ಣವ ಭಾಗವತನಾದನು. ಬುದ್ಧನನ್ನು ವಿಷ್ಣುವಿನ ಅವತಾರವೆಂದು ವರ್ಣಿಸಿರುವನು.

ಇವನು ಒಟ್ಟು 20 ಗ್ರಂಥಗಳನ್ನು ಬರೆದಿರುವನು. ಅವುಗಳಲ್ಲಿ 1 ರಾಮಾಯಣ ಮಂಜರಿ 2. ಭಾರತಮಂಜರಿ 3. ಬೃಹತ್ಕಥಾಮಂಜರಿ 4. ದಶಾವತಾರ ಚರಿತಂ 5. ಔಚಿತ್ಯವಿಚಾರ

ಚರ್ಚಾ. 6.ಕವಿಕಂಠಾಭರಣಂ ಮತ್ತು 7.ಪದ್ಯ ಕಾದಂಬರೀ –ಈ ಏಳು ಪ್ರಸಿದ್ಧವಾಗಿವೆ. ಕಾಶ್ಮೀರ ರಾಜ ಅನಂತ ರಾಜನ (ಕ್ರಿ. ಶ. 1029-1064) ಕಾಲದಲ್ಲಿ ಇವನ 'ಷಮಾತೃಕಾ' ಎನ್ನುವ ಗ್ರಂಥವು ರಚಿಸಲ್ಪಟ್ಟಿತು.

## ೭೪. (19) ಲೋಲಂಬ ರಾಜ (ಕ್ರಿ. ಪೂ. 1050)

ಇವನ ಕಾವ್ಯ. ಹರಿವಿಲಾಸ

## ೭೫. (20) ಮಾಣಿಕ್ಯ ಸೂರಿ (ಕ್ರಿ. ಶ. 11ನೇ ಶತಮಾನ)

ಇವನ ಕಾವ್ಯ ಯಶೋಧರ ಚರಿತಂ

## ೭೬. (21) ಬಿಲ್ಹಣ (ಕ್ರಿ. ಶ. 11ನೇ ಶತಮಾನ)

ಇವನ ಕಾಲದ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಇವನು ಜ್ಯೇಷ್ಠಕಲಶವೆನ್ನುವ ಬ್ರಾಹ್ಮಣನ ಮಗ. ಇವನ ತಾತ ರಾಜಕಲಶ. ಮುತ್ತಾತ ಮುಕ್ತಿ ಕಲಶ. ಇವರೆಲ್ಲರೂ ಅಗ್ನಿಹೋತ್ರಿಗಳು. ಇವನ ತಾಯಿ ನಾಗದೇವಿ. ಇಷ್ಟರಾಮ ಮತ್ತು ಆನಂದ ಇಬ್ಬರು ಸಹೋದರರು. ಇವನಿಗೆ ವೇದಾಧ್ಯಯನವಾಗಿ ಮಹಾಭಾಷ್ಯ ಪೂರ್ತಿ ಮತ್ತು ಅಲಂಕಾರ ಶಾಸ್ತ್ರ ಗ್ರಂಥಗಳು ಅಧ್ಯಯನವು ಪೂರ್ಣವಾಗಿತ್ತು. ಕಾಶ್ಮೀರ ಕಲಶರಾಜನ ಕಾಲದಲ್ಲಿ ಇವನು ಹುಟ್ಟಿದನು. ವಿದ್ಯಾವಂತನಾದ ಮೇಲೆ ಇವನು ತನ್ನ ದೇಶವಾದ ಕಾಶ್ಮೀರವನ್ನು ಬಿಟ್ಟು ಮಧುರೆ. ಕನ್ಯಾಕುಬ್ಜ. ಪ್ರಯಾಗ. ಕಾಶೀ ಮೊದಲಾದ ಊರುಗಳನ್ನು ಸುತ್ತಿ ಚೇದಿ ದೇಶವೆಂದು ಹೇಳಲಾಗುವ ಸಿಂಹಳದ ದೊರೆ ಕರ್ಣ ಪ್ರಭುವಿನೊಡನೆ ಸ್ವಲ್ಪಕಾಲವಿದ್ದು ನಂತರ ಸ್ವಲ್ಪಕಾಲ ಚಾಲುಕ್ಯದೊರೆ ತ್ರೈಲೋಕ್ಯ ಮಲ್ಲಿಕರ್ಣದೇವನೊಡನೆ ಇದ್ದು (ಕ್ರಿ. ಶ1064-1094), ಕಲ್ಯಾಣದ ಚಾಲುಕ್ಯ ದೊರೆ (ಕ್ರಿ. ಶ. 1076-1127)೬ ನೇ ವಿಕ್ರಮಾದಿತ್ಯದಲ್ಲಿ ವಿದ್ಯಾಪತಿಯಾಗಿ ಉಳಿದನು. ಇವನಿಗೆ ಧಾರಾನಗರದ ಭೋಜದೇವನು ಗೊತ್ತು. ಅದನ್ನು ಇವನೇ ಹೇಳಿರುವನು.

ಇವನು ಎರಡು ಕಾವ್ಯಗಳನ್ನು ಕೊಟ್ಟಿರುವನು. 1.ವಿಕ್ರಮಾಂಕದೇವ ಚರಿತಂ 2. ಚೌರ ಪಂಚಾಶಿಕ. ವಿಕ್ರಮಾಂಕದೇವ ಚರಿತೆಯನ್ನು ಕ್ರಿ .ಶ. 1088 ರಲ್ಲಿ ತನ್ನ ದೊರೆಯ ವಿಷಯವಾಗಿ ಬರೆದಿರುವನು. ಈ ರಾಜ್ಯದ ಮೂಲಪುರುಷನು. ಈಶ್ವರನ ಕಮಂಡಲುವಿನಿಂದ ಹುಟ್ಟಿದನು. ಅಯೋಧ್ಯೆಯಲ್ಲಿದ್ದು ನಂತರ ದಕ್ಷಿಣದೇಶಕ್ಕೆ ಬಂದನು. ದೊರೆಯ ತಂದೆ ಆಹವಮಲ್ಲ. (ಕ್ರಿ. ಶ. 1040-1069) ಅವನಿಗೆ ಮಕ್ಕಳಿರಲಿಲ್ಲ. ಈಶ್ವರನ ಪ್ರಸಾದದಿಂದ ಸೋಮೇಶ್ವರ. ವಿಕ್ರಮಾದಿತ್ಯ ಮತ್ತು ಜಯಸಿಂಹನೆಂಬ ಮೂರು ಮಕ್ಕಳನ್ನು ಹೊಂದಿದನು. ವಿಕ್ರಮಾಂಕನೇ ದೊರೆಯಾಗಬೇಕೆಂದು ತಂದೆಯ ಹಂಬಲವಿತ್ತು. ಆದರೆ ಅದಕ್ಕೆ ಇವನೇ ಒಪ್ಪಲಿಲ್ಲ. ತಂದೆಗಾಗಿ ದುಡಿದು ಚೈತ್ರಯಾತ್ರೆ ಮಾಡಿ ಕೀರ್ತಿಯನ್ನು ತಂದನು. ತಂದೆಯೂ ಸಂತೋಷಪಟ್ಟನು. ಆದರೆ ತನ್ನ ಇಷ್ಟಾರ್ಥ ಪೂರ್ತಿಯಾಗುವುದರಲ್ಲಿ ಅವನಿಗೆ ಒಂದು ವ್ಯಾಧಿಯು ತಗುಲಿ ಅದರ

ಬೇನೆಯನ್ನು ಸಹಿಸಲಾರದೆ ತುಂಗಭದ್ರೆಯಲ್ಲಿ ದೇಹವನ್ನು ಅರ್ಪಿಸಿ ಸತ್ತನು. ಆಗ ವಿಕ್ರಮಾದಿತ್ಯನು ಚೈತ್ರಯಾತ್ರೆಯಲ್ಲೇ ಇದ್ದನು. ತಂದೆ ಸತ್ತ ವಿಷಯವನ್ನು ಕೇಳಿ ಊರಿಗೆ ಬಂದನು. ಅಣ್ಣನಾದ ಸೋಮೇಶ್ವರನೊಡನೆ ಬಾಳಲಾಗಲಿಲ್ಲ. ತನ್ನ ತಮ್ಮ ಜಯಸಿಂಹನೊಡನೆ ತುಂಗಭದ್ರಾ ತೀರದ ಒಂದು ಪ್ರದೇಶಕ್ಕೆ ಅಧಿಪತಿಯಾದನು. ಚೋಳ ದೇಶದ ದೊರೆಯೊಡನೆ ಸ್ನೇಹ ಬೆಳೆಸಿಕೊಂಡನು. ಅವನು ಸತ್ತಮೇಲೆ ಆ ಚೋಳದೇಶವು ರಾಜಿಗನೆನ್ನುವವನ ಕೈಯಲ್ಲಿ ಸೇರಿತು. ಅವನು ಸೋಮೇಶ್ವರನೊಡನೆ ಸೇರಿ ವಿಕ್ರಮಾದಿತ್ಯನಿಗೆ ತೊಂದರೆ ಕೊಡಲು ಪ್ರಾರಂಭಿಸಿದನು. ಯುದ್ಧವು ಅನಿವಾರ್ಯವಾಯಿತು. ಗೆದ್ದನು ರಾಜನಾದನು. ಜಯಸಿಂಹನನ್ನು ವನವಾಸವೆಂಬ ದೇಶಕ್ಕೆ ಅಧೀನ ರಾಜನನ್ನಾಗಿ ಮಾಡಿದನು. ಇಲ್ಲಿಯವರೆಗೂ ಕಥೆಯು ಓಡಿದೆ. (I–VII) ಇಲ್ಲಿಂದ ಮುಂದೆ ಕವಿಯು ತನ್ನ ಕವಿತೆಗಾಗಿ ಕಥಾವಸ್ತುವನ್ನು ಬೆಳೆಸಿಕೊಂಡಿರುವುದನ್ನು ವಿಕ್ರಮಾದಿತ್ಯನು ಚಂದನದೇವಿ ಎನ್ನುವ ಒಬ್ಬ ರಾಜಕುಮಾರಿಯನ್ನು ಸ್ವಯಂವರದಲ್ಲಿ ವರಿಸಿದ್ದನು. ವಸಂತ ವರ್ಣನೆ – ಸ್ತ್ರೀವರ್ಣನೆ (VIII) ಮದುವೆ. ದಂಪತಿಗಳ ಪ್ರೇಮ (IX–XI) ಕಲ್ಯಾಣ ನಗರಕ್ಕೆ ಹಿಂತಿರುಗಿದ್ದು, ಜಲಕ್ರೀಡೆ ಇತ್ಯಾದಿ ವರ್ಣನೆ. (XII ಚಂದ್ರೋದಯ (XIII) ಜಯಸಿಂಹನಿಂದ ತೊಂದರೆ. (XIV, XV) ಮೃಗಯಾ ಅಂದರೆ ಬೇಟೆ (XVI) ಮಕ್ಕಳು ಹುಟ್ಟಿದ್ದು, ವಿಕ್ರಮಪುರ ಸೃಷ್ಟಿ, ವಿಷ್ಣು ದೇವಾಲಯವನ್ನು ಕಟ್ಟಿಸಿದ್ದು, ಚೋಳದಿಂದ ಹಿಂಸೆ, ಅವರನ್ನೂ ಜಯಿಸಿ ಕಾಂಚಿಯನ್ನು ಆಕ್ರಮಿಸಿಕೊಂಡಿದ್ದು, ಕೊನೆಯದಾಗಿ ಕವಿಯ ವಂಶ ಮತ್ತು ಜೀವನ ಚರಿತ್ರೆ.

ವಿಕ್ರಮಾಂಕದೇವ ಚರಿತಕ್ಕಿಂತಲೂ ಚೌರ ಪಂಚಾಶಿಕೆಯು ಸ್ವಾರಸ್ಯವಾಗಿದೆ. ಬಿಲ್ಹಣನು ಒಬ್ಬ ರಾಜಕುಮಾರಿಯನ್ನು ಪ್ರೀತಿಸಿದ್ದನೆಂದೂ ಅದು ದೊರೆಗೆ ತಿಳಿದು ಮರಣದಂಡನೆಗೆ ವಶವಾಗುವುದಕ್ಕೆ ಮುಂಚೆ ತಮ್ಮ ಪರಸ್ಪರ ಪ್ರೇಮವನ್ನು ಹೇಳಿಕೊಂಡು ಮನಸ್ಸಿಗೆ ನೆಮ್ಮದಿ ತಂದುಕೊಳ್ಳುವಾಗ ದೊರೆಯು ಕೇಳಿ ಅವರನ್ನು ಮನ್ನಿಸಿ ಮದುವೆ ಮಾಡಿದನೆಂದೂ ವ್ಯಾಖ್ಯಾನಗಳಲ್ಲಿ ಹೇಳಿದೆ. ಆ ಕುವರಿಯು ಚಂದ್ರಲೇಖೆ ಎಂದೂ ಅವಳು ಮಹಿಳಾ ಪಟ್ಟಣದ ದೊರೆ ವೀರ ಸಿಂಹನ ಮಗಳೆಂದೂ ಕಾಶ್ಮೀರದ ಓಲೆಯಲ್ಲಿದೆ. ರಾಮತರ್ಕವಾಗೀಶನೆಂಬ ವ್ಯಾಖ್ಯಾತೃವು ಹೇಳುವಂತಾದರೆ ಚಾರಪಳ್ಳಿಯ ರಾಜಕುಮಾರ ಸುಂದರ. ಅವನು ವಿದ್ಯಾದೇವಿಯಲ್ಲಿ ಪ್ರೀತಿ ಇಟ್ಟಿರುವುದು ಅವನ ತಂದೆ ವೀರ ಸಿಂಹನಿಗೆ ತಿಳಿದು, ಇವನಿಗೆ ಮರಣದಂಡನೆಯನ್ನು ವಿಧಿಸಿದನು. ಸುಂದರನು ಕಾಳಿಕಾದೇವಿಗೆ ಮೊರೆಯಿಟ್ಟನು. ರಕ್ಷಿಸಲ್ಪಟ್ಟನು. ಬಿಲ್ಹಣನೇ ಹೇಳುವಂತೆ ರಾಜ್ಯಾಂಗದಲ್ಲಿ ಇವನಿಗೆ ಯಾವ ವಿಧವಾದ ವೈಯಕ್ತಿಕ ಸಂಬಂಧವಿರಲಿಲ್ಲವೆನ್ನುವುದನ್ನು ಗಮನಿಸಿದರೆ ಈ ಕಾವ್ಯವು ಒಬ್ಬ ಕಲ್ಪಿತ ಕಳ್ಳರ ದೊರೆಗೆ ಒಬ್ಬ ರಾಜಕುಮಾರಿಯಲ್ಲಿದ್ದ ಅನುರಾಗವನ್ನು ವರ್ಣಿಸಿರುವನೆಂದು ಭಾವಿಸಬೇಕಾಗುತ್ತದೆ. ರಾಜಕುಮಾರಿ ಇದ್ದುದು ನಿಜ. ಒಂದೇ ಒಂದು ಪದ್ಯದಲ್ಲಿ ಮರಣ ಸಮೀಪಿಸುತ್ತಿರುವುದನ್ನು ಊಹಿಸಬಹುದು. ಅದು ನಿಶ್ಚಿತವಲ್ಲ. ಪದ್ಯಗಳನ್ನು ಓದುತ್ತಿದ್ದರೆ ಆಸಕ್ತಿಯು ಒಂದೇ ರೀತಿಯಲ್ಲಿ ಉಳಿಯುತ್ತದೆ. ಕೆಲವು ಕಡೆ ಮೇಘದೂತದ ಅನುಕರಣವು ಕಂಡುಬರುತ್ತದೆ.

ಕಲ್ಹಣನಿಗೆ ತಾನು ಕವಿಯಾಗಿದ್ದುದು ಬಹಳ ಪ್ರಿಯ. ಕಾವ್ಯಗಳು ವೈದರ್ಭೀ ಶೈಲಿಯಲ್ಲಿವೆ. ಸುಲಭ ಮತ್ತು ಶುದ್ಧವಾದ ಶೈಲಿ. ಯಮಕವು ಅಷ್ಟಾಗಿ ಇಲ್ಲ. 4ನೇ ಸರ್ಗದಲ್ಲಿ ಅಹವ ಮಲ್ಲನು ಸತ್ತಿದ್ದು ಬಹಳ ಚೆನ್ನಾಗಿ ವರ್ಣಿತವಾಗಿದೆ. ಕವಿಗಳ ವಿಷಯದಲ್ಲಿ ಇವನಿಗೆ ಮೆಚ್ಚುಗೆ ಇದೆ. ಉದಾಹರಣೆಗೆ-

ಸ್ವೇಚ್ಛಾ ಭಂಗುರ ಭಾಗ್ಯ ಮೇಘತಟಿತ ಶ್ರಕ್ಯಾನರೋದ್ಧುಂಶ್ರಿಯಃ
ಪ್ರಾಣಾನಾಂ ಸತತಂ ಪ್ರಯಣ ಪಟಹಶ್ರದ್ಧಾನ ವಿಶ್ರಾಮ್ಯತಿ
ತ್ರಾಣಂ ಯೇತ್ರ ಯಶೋಮಯೇ ವಪುವೀ ವಃ ಕುರ್ವಂತಿ ಕಾವ್ಯಾಮೃತ್ಯಃ†

ತಾನಾರಾಧ್ಯ ಗುರೂನ್ ವಿಧತ್ತ ಸುತವೀನ್ ನಿರ್ಗರ್ವ ಮುರೀಶ್ವರಾಃ†
ಹೇರಾಜಾನಸ್ತ್ಯಜತ ಸುಕವಿ ಪ್ರೇಮ ಒಂದೇ ವಿರೋಧಂ
ಶುದ್ಧಾ ಕೀರ್ತಿಂ ಸ್ಫುರತಿ ಭವತಾಂ ನೂನಮೇ ತತ್ಪ್ರಸಾದಾತ್
ತಷ್ಟೈರ್ಬದ್ಧಂ ತದಲಘುರಘು ಸ್ವಾಮಿನ ಸ್ವಚರಿತ್ರಂ
ಕ್ರುದ್ಧೈ ರ್ನೀತ ಸ್ತ್ರೀಭುವನ ಜಯೀಹಾಸ್ಯ ಮಾರ್ಗಂದ ಶಾಸ್ಯಃ

ಋತುವರ್ಣನೆಯೂ ಚೆನ್ನಾಗಿದೆ.

ಶರತ್ಕಾಲಾಪಕ್ರಾಂತ ಕಾಂತ ವಕ್ರೇಂದುವಲ್ಲಭಃ
ಅಥಾಜಗಾಮಹೇಮಂತಃ ಸಾಮಂತ ಸ್ಮರಭೂಪತೇಃ

## ೨೨. (22)ಕಲ್ಹಣ (1100-1165)

ಕ್ರಿ. ಶ. 1089-1303ರಲ್ಲಿ ಕಾಶ್ಮೀರವನ್ನು ಹರ್ಷನೆನ್ನುವ ದೊರೆಯು ಆಳುತ್ತಿದ್ದನು. ಇವನು ಹರ್ಷವರ್ಧನನಲ್ಲ. ಈ ರಾಜನ ಸೇವೆಯಲ್ಲಿ ಕಲ್ಹಣನ ತಂದೆ ಚಂಪಕನೂ ಚಿಕ್ಕಪ್ಪ ಕನಕನೂ ಇದ್ದರು. ಹರ್ಷನು ಸತ್ತ ಮೇಲೆ ಚಂಪಕನು ತನ್ನ ಮಗನನ್ನು ಕರೆದುಕೊಂಡು ರಾಜನ ಸಹವಾಸದಿಂದ ದೂರವಾದನು. ಚಿಕ್ಕಪ್ಪನು ಕಾಶಿಗೆ ಹೊರಟುಹೋದನು. ಕಲ್ಹಣಮಿಗೆ ರಾಜ್ಯಾಂಗದಲ್ಲಿ ಕೆಲಸವಿಲ್ಲದಂತಾಯಿತು. ತನ್ನ ಊರಾದ ಪರಿಹಾಸಪುರದಲ್ಲಿ ವಿದ್ಯಾ ವ್ಯಾಸಂಗಕ್ಕೆ ಅಣಿಯಾಗಿ ರಘುವಂಶ, ಮೇಘದೂತ, ಬಾಣನ ಹರ್ಷಚರಿತೆ, ಇತ್ಯಾದಿಗಳನ್ನು ಚೆನ್ನಾಗಿ ವ್ಯಾಸಂಗ ಮಾಡಿ ಕಾಶ್ಮೀರದ ಸ್ಥಿತಿಗತಿಗಳನ್ನು ಬರೆಯಲು ಸಮರ್ಥನಾದನು. ಇವನು ಹುಟ್ಟಿದ್ದು ಕ್ರಿ. ಶ. 1100ರಲ್ಲಿ. ಜೈನ ಸಂಪ್ರದಾಯಕ್ಕೆ ಸೇರಿದ್ದರೂ ಬೌದ್ಧರ ಅಹಿಂಸಾ ತತ್ವವು ಇವನಿಗೆ ಬಹಳ ಪ್ರಿಯವಾಗಿತ್ತು. ಆ ಕಾಲಕ್ಕೆ ಕ್ಷೇಮೇಂದ್ರನು ಬುದ್ಧನನ್ನು ವಿಷ್ಣುವಿನ ಅವತಾರವೆಂದು ವರ್ಣಿಸಿದ್ದನು. ಆದ್ದರಿಂದ ಬೌದ್ಧರು ಹಿಂದುಗಳೊಡನೆ ಕಲೆತು ಅವರಂತೆ ಬಾಳಲು ಕಲಿತಿದ್ದರು.

ಹರ್ಷನು ಸತ್ತಮೇಲೆ ಕಾಶ್ಮೀರವು ಒಂದು ಗೊಂದಲವಾಯಿತು. ಅವನ ಶತ್ರುಗಳಾದ ಉಚ್ಛಲ ಮತ್ತು ಶುಕ್ಕಲನೆನ್ನುವರು ರಾಜ್ಯವನ್ನು ಭಾಗ ಮಾಡಿಕೊಂಡರು. ಪರಸ್ಪರ ದ್ವೇಷದಲ್ಲಿ

ಕ್ರಿ. ಶ. 1111ರಲ್ಲಿ ಉಚ್ಚಲನು ಕೊಲ್ಲಲ್ಪಟ್ಟನು. ಅವನ ಸೇವೆಯಲ್ಲಿದ್ದ ರಡ್ಡನೆನ್ನುವನೇ ಅದಕ್ಕೆ ಕಾರಣ. ಅವನೇ ಬಂದು ದಿನದ ರಾಜನಾದನು. ನಂತರ ಗಂಗ ಚಂದ್ರನು 4ತಿಂಗಳ ದೊರೆಯಾದನು. ಅವನೊಡನೆ ಕುಶ್ಶಲನು ಸ್ನೇಹ ಬೆಳಿಸಿ ತಾನು ದೊರೆಯಾದನು. ಅವನೂ ಕಷ್ಟಪರಂಪರೆಗೆ ಸಿಲುಕಿ ಕೊನೆಗೆ ಕ್ರಿ. ಶ. 1128ರಲ್ಲಿ ಕೊಲ್ಲಲ್ಪಟ್ಟನು. ಇವನ ಮಗನೇ ಜಯಸಿಂಹ. ರಾಜತಂತ್ರದಲ್ಲಿ ನಿಪುಣವಾಗಿ ರಾಜ್ಯವಾಳಲು ಪ್ರಾರಂಭಿಸಿದನು. ಇವನೇ ಕಲ್ಹಣರ ಆಶ್ರಿತ ದೊರೆ. ಕ್ರಿ. ಶ. 1149ತನ್ನ ಗ್ರಂಥವಾದ ರಾಜತರಂಗಿಣಿಯನ್ನು ಪ್ರಾರಂಭಿಸಿ ಮುಂದಿನ ವರುಷದಲ್ಲಿ ಮುಗಿಸಿದನು. ಅಷ್ಟರಲ್ಲಿ ಭೋಜನೆನ್ನುವ ರಾಜಕುಮಾರನು ರಾಜನಿಗೆ ವಶವಾಗಿದ್ದನು. (1145)

ಆ ಕಾಲದ ಕಾಶ್ಮೀರದ ಅವ್ಯವಸ್ಥೆ, ಸೈನಿಕರ ಹೇಡಿತನ, ಗೆದ್ದವರನ್ನು ಆಶ್ರಯಿಸುವ ಮನೋಧರ್ಮ, ಆ ಕಾಲದಲ್ಲೂ ಸಹಾಯಕರಾದ ರಾಜಪುತ್ರರ ರಾಜಭಕ್ತಿ, ಜನಗಳ ಸೋಮಾರಿತನ, ಸುಖಲಾಲಸೆ, ಅಧರ್ಮ ಪ್ರವೃತ್ತಿ, ರಾಜ್ಯಾಂಗದಲ್ಲಿ ಸೇರಿದವರ ದುಷ್ಟವರ್ತನೆ, ಅನೀತಿ, ಧರ್ಮದ ಹೆಸರಿನಲ್ಲಿ ಪುರೋಹಿತರ ದೌಷ್ಟ್ಯ, ಇತ್ಯಾದಿಗಳನ್ನು ಇದ್ದಂತೆ ವರ್ಣಿಸಿರುವನು. ಆದರೆ ಮಂತ್ರಿಗಳಾದ ರಿಲ್ಹಣ ಮತ್ತು ಅಲಂಕಾರ ಇವರನ್ನು ಭೂಷಿಸಿರುವನು. ಭೋಜ ಮತ್ತು ರಾಜವದನರೆಂಬ ಸಾಮಂತರೊಡನೆ ಸ್ನೇಹದಿಂದಿದ್ದು ಗಡೀ ಪ್ರದೇಶಕ್ಕೆ ಸೈನ್ಯಾಧಿಪತಿಯಾದ ಉದಯನನ್ನು ಗೌರವದಿಂದ ಕಂಡದ್ದು ವರ್ಣಿತವಾಗಿರುವುದನ್ನು ನೋಡಿದರೆ ಕಲ್ಹಣನು ಕೇವಲ ಕವಿ ಮಾತ್ರವಲ್ಲ, ರಾಜತಂತ್ರಜ್ಞನೂ ಆಗಿದ್ದನೆಂದೂ ಹೇಳಬಹುದು.

ತನ್ನ ಹಿಂದಿದ್ದ 11 ಗ್ರಂಥಗಳಿಂದ ವಿಷಯಗಳನ್ನು ತೆಗೆದುಕೊಂಡು, ಶಾಸನಗಳು ತಾಮ್ರ ಶಾಸನಗಳು, ಕಟ್ಟಡ ದೇವಸ್ಥಾನಗಳ ಮೇಲೆ ಕೆತ್ತನೆಯಲ್ಲಿದ್ದ ಶ್ಲೋಕಗಳು ಆಯಾ ವಂಶದಲ್ಲಿದ್ದ ಸಮಾಚಾರಗಳು, ತಂದೆಯಿಂದ ತಿಳಿದ ವಿಷಯ, ತಾನೇ ಕೇಳಿ ನೋಡಿದ ವಿಷಯ ಇವೆಲ್ಲವನ್ನೂ ಕ್ರೋಢೀಕರಿಸಿ ರಾಜ ತರಂಗಿಣಿಯನ್ನು ಬರೆದನೆಂದಿರುವನು. ಇದರಲ್ಲಿ ತನ್ನ ದೃಷ್ಟಿ ಧಾರ್ಮಿಕವೆಂದೂ ಎಲ್ಲವೂ ವಿಧಿ ನಿರ್ಮಿತವೆಂದು ತಿಳಿದು ಎಲ್ಲರೂ ಬುದ್ಧಿವಂತರಾಗಿಯೂ, ಒಳ್ಳೆಯವರಾಗಿಯೂ, ಬಾಳಬೇಕೆನ್ನುವುದೇ ತನ್ನ ಆಶಯವೆಂದು ತಿಳಿಸಿರುವನು. ಚಾರಿತ್ರಿಕ ದೃಷ್ಟಿಗಿಂತಲೂ ಈ ಗ್ರಂಥದಲ್ಲಿ ಐತಿಹಾಸಿಕ ದೃಷ್ಟಿಯೇ ಪ್ರಬಲವಾಗಿದೆ. ಕವಿಯಾದ ತನ್ನ ಕರ್ತವ್ಯವೇನೆಂದು ಚೆನ್ನಾಗಿ ತಿಳಿಸಿರುವನು. ಮಾಘ ಭಾರವಿಯರಂತೆ ಕಾವ್ಯದ ಲಕ್ಷಣಗಳನ್ನು ತುಂಬುವ ಪ್ರಯತ್ನವನ್ನು ಮಾಡಿಲ್ಲ. ಇವನ ಗ್ರಂಥದಲ್ಲೇ ಪ್ರಪ್ರಥಮವಾಗಿ ರಾಜ್ಯಾಂಗದ ಅನೇಕ ಪಾರಿಭಾಷಿಕ ಪದಗಳು ಕಂಡು ಬರುತ್ತವೆ. ಕವಿಯ ಪ್ರಾಶಸ್ತ್ಯವನ್ನು ಹೇಳಿವಾಗ ಹೀಗೆಂದಿರುವನು-

ಭುಜತರುವನ ಚ್ಛಾಯಾಂ ಯೇಷಾಂ ನಿಷೇವ್ಯಮಹಾಜಸಾಂ
ಜಲಧಿರಶನಾ ಮೇದಿನ್ಯಾಸೀ ದ ಸಾವ ಕುತೋಭಯಾ
ಸ್ಮೃತಿಮಪಿನ ತೇಯಾಂತಿ ಕ್ಷಾಪಾವಿನಾಯದಮಗ್ರಹಂ
ಪ್ರಕೃತಿಯಹ ತೇ ಕುರ್ಮಸ್ತಸ್ಮೈನಮಃ ಕವಿಕರ್ಮಣೇ
ಯೇಷ್ಯಾಸನ್ ಇಭಕುಂಭಿ ಶಾಯಿತಪದಾಃಯೇಃಶ್ರಿಯಂ ಲೇಭಿರೇ

ಯೇಷಾವಂತ್ಯವಸನ್ ಪುರಾಯವತಯೋ ಗೇಹೇಷ್ವಿಚ್ಛಂದ್ರಿಕಾಃ
ತಾನ್‌ಲೋಕೋಯಮ ವೈತಿ ಲೋಕ ತಿಲಕಾನ್ ಸ್ವಪ್ನೇಷ್ವ ಬಾತಾನಿವ
ಬ್ರಾತಃ ಸತ್ಯವಿಕೃತ್ಯಕಿಂಸ್ತುತಿಶಕ್ತೆಃ ಅಂಧಂಜಗತ್ ತ್ವಾಂ ವಿನಾ

## ೭೮. (23) ಮಂಖ (ಕ್ರಿ. ಶ. 12ನೇ ಶತಮಾನ)

ಇವನು ರಮ್ಯಕನ ಶಿಷ್ಯ (1129-1150). ತನ್ನ ಅಲಂಕಾರ ಸರ್ವಸ್ವದಲ್ಲಿ ಶ್ರೀ ಕಂಠ ಚರಿತಂ ಎನ್ನುವ ಕಾವ್ಯವನ್ನು ಹೇಳಿರುವನು. ತ್ರಿಪುರ ರಾಕ್ಷಸನನ್ನು ಶಿವನು ಕೊಂದ ಕಥೆಯನ್ನು ವಸ್ತುವಾಗಿ ಉಳ್ಳ 25 ಸರ್ಗಗಳಿಂದ ಕೂಡಿರುವ ಕಾವ್ಯ. ಇದರಲ್ಲಿ 25ನೇ ಸರ್ಗ ಮಾತ್ರ ಸ್ವಾರಸ್ಯವಾಗಿದೆ. ಜಯಸಿಂಹನ (1229-1150) ದರ್ಬಾರಿನಲ್ಲಿ ತನ್ನ ಸಹೋದರನಾದ ಅಲಂಕಾರನು ಸೇರಿಸಿದ ಪಂಡಿತ ಮಂಡಲಿಯ ವಿಚಾರವಾಗಿ ಹೇಳುವಾಗ ಆ ಕಾಲದ ಪಾಂಡಿತ್ಯ, ಕವಿತೆಯ ಶಕ್ತಿ, ಸಭೆ ಸೇರಲು ಕಾರಣ, ತನ್ನ ಕವಿತೆಗೆ ಪೂರ್ಣತೆಯನ್ನು ಕೊಡುವುದಕ್ಕಾಗಿಯೇ ಇತ್ಯಾದಿ ವಿಷಯಗಳನ್ನು ತಿಳಿಸಿರುತ್ತಾನೆ. ಇದರಿಂದ ಇವನು ನಾಲ್ಕು ಸಹೋದರರಲ್ಲಿ ಒಬ್ಬನೆಂದೂ, ಎಲ್ಲರೂ ರಾಜಸ್ಥಾನದಲ್ಲಿದ್ದರೆಂದು ತಿಳಿದು ಬರುತ್ತದೆ. ಇದೇ ಕಾಲದ ಜಯರಥನ "ಹರಚರಿತ ಶಿಖಾಮಣಿ " ಎನ್ನುವ ಗ್ರಂಥವು ಶೈವಸಂಪ್ರದಾಯಕ್ಕೆ ಉಪಯುಕ್ತವಾದ ವಿಷಯಗಳನ್ನೊಳಗೊಂಡಿದೆ. ಜೈನರು ಜೈನರ ಇತಿಹಾಸ ಪುರಾಣಗಳನ್ನು ತಗೆದುಕೊಂಡು ಗ್ರಂಥ ಬರೆಯಲು ಪ್ರಾರಂಭಿಸಿದ್ದು ಈ ಕಾಲದಲ್ಲೇ.

## ೭೯. (24) ಹೇಮಚಂದ್ರ (ಕ್ರಿ. ಶ. 1088-1172)

ಗುಜರಾತಿನ ಕುಮಾರ ಪಾಲನನ್ನು ಪರಿವರ್ತನೆ ಮಾಡಿದವನಿವನು. ಇವನ ಕಾವ್ಯ "ತ್ರಿಷಷ್ಟಿಶಲಾಕ ಪುರುಷ ಚರಿತಂ" ಇದು 63ನೇ ಜೈನ ತೀರ್ಥಂಕರರ ಚರಿತ್ರೆ. ಅದರಲ್ಲೂ ಮಹಾವೀರ ಚರಿತ್ರೆ ಪ್ರಧಾನವಾಗಿದೆ.

## ೮೦. (25) ವಾಗ್ಭಟ (ಕ್ರಿ. ಶ. 1094-1143)

ಇವನ ಸೋಮನ ಮಗ. ಚಾಲುಕ್ಯದೊರೆ. ಜಯಸಿಂಹ ರಾಜನಮಂತ್ರಿ. ಇವನು ಅಲಂಕಾರಿಕ ಮತ್ತು ಕವಿ. 5 ಅಧ್ಯಾಯವುಳ್ಳ ವಾಗ್ಭಟಾಲಂಕಾರವನ್ನೂ, 15 ಸರ್ಗಗಳುಳ್ಳ ನೇಮಿನಾಥ ಚರಿತ್ರೆಯನ್ನೂ ಬರೆದಿರುವನು.

# ೭೧. (26) ಶ್ರೀ ಹರ್ಷ (ಕ್ರಿ. ಶ. 12ನೇ ಶತಮಾನದ ದ್ವಿತೀಯ ಭಾಗ)

## ಜೀವನ

ಇವನು ಹೀರನ ಮಗ. ವಿದುಷೀ ಮಾಮಲ್ಲದೇವಿಯು ಇವನ ತಾಯಿ. ಇವನು ಮೈಥಿಲ ಬ್ರಾಹ್ಮಣ. ತಂದೆಯನ್ನು ವಾದದಲ್ಲಿ ಜಯಸಿದ ಉದಯನಾಚಾರ್ಯರನನ್ನು ಸೋಲಿಸಬೇಕೆಂದು ತಂದೆಯಿಂದ ಆಜ್ಞಪ್ತನಾಗಿ. ಚಿಂತಾಮಣಿ ಮಂತ್ರ ಜಪದ ಬಲದಿಂದ ಸರಸ್ವತಿಯ ಅನುಗ್ರಹವನ್ನು ಹೊಂದಿ ಪ್ರತಿಭಾವಂತನಾಗಿ ಹಾಗೆಯೇ ಮಾಡಿದನೆಂದು ಹೇಳಲಾಗಿದೆ. ಇವನ ತಂದೆಯು ಕಾಶೀರಾಜ ವಿಜಯ ಚಂದ್ರನ ಪ್ರಧಾನ ಪಂಡಿತ. ಕನ್ಯಾಕುಬ್ಜದಲ್ಲಿ ಶ್ರೀ ಹರ್ಷನು ಉದಯನನ್ನು ಸೋಲಿಸಿದನು. ಆದೇಶದ ದೊರೆಯ ಆಸ್ಥಾನದಲ್ಲಿ ಗರಿಷ್ಠನೂ ವರಿಷ್ಠನೂ ಆದನು. ಕನ್ಯಾಕುಬ್ಜದ ಜಯಚಂದ್ರ, ಕಾಶಿರಾಜ ವಿಜಯಚಂದ್ರ –ಇವರಿಬ್ಬರ ಪ್ರೇರಣೆಯೇ ಇವನನ್ನು ಉದಯನನ್ನು ಗೆಲ್ಲುವಂತೆ ಮಾಡಿತು. ಇವನು ಕಾವ್ಯ ಪ್ರಕಾಶಕರ್ತಾ. ಮಮ್ಮಟನ ಸಹೋದರ ಮಗನೆಂದು ಹೇಳಲಾಗಿದೆ. ಇತಿಹಾಸವು ಇವನ ಹಸ್ತಗತವಾದಂತಿದೆ. ಕಾಳಿದಾಸ. ಭಾರವಿ ಮತ್ತು ಮಾಘನಾಚ ಮೇಲೆ ಇವನೇ ಮಹಾಕವಿ.

## ಗ್ರಂಥಗಳು

1. ನೈಷಧ ಕಾವ್ಯ 2. ಶಿವಭಕ್ತ ಸಿದ್ಧಿ 3. ಸಿಂಹಸಾಹಸಾಂಕ ಚಂಪು 4. ಛಂದಪ್ರಶಸ್ತಿ. 5. ವಿಜಯ ಪ್ರಶಸ್ತಿ 6. ಗೌಡೋರ್ವೀಶ ಪ್ರಶಸ್ತಿ – ಇವುಗಳಲ್ಲದೆ ಇವನಿಗೆ ಕೀರ್ತಿ ತಂದ 7. ಖಂಡನ ಖಂಡ ಖಾದ್ಯ ಇವನ ವಿಷಯದಲ್ಲಿ ಒಂದು ಪ್ರಶಸ್ತಿ ಶ್ಲೋಕವೂ ಇದೆ.

ತಾನಾದ್ಭಾ ಭಾರ ವೇರ್ಭಾತಿ ಯಾ ವನ್ಮಾ ಘಸ್ಯ ನೋದಯಃ
ಉದಿತೇ ಚಪುನರ್ಮಾಘೇ ಭಾರವೇರ್ಭಾ ರವೇರಿದ

ಎನ್ನುವ ಶ್ಲೋಕವನ್ನು "ಉದಿತೇ ನೈಷಧೇ ಕಾವ್ಯ ಮಾಘಶ್ಚಟ ಭಾರವಿಃ "ಎಂದು ಸ್ವಲ್ಪ ವ್ಯತ್ಯಾಸ ಮಾಡಿ ಶ್ರೀ ಹರ್ಷನ ವಿಷಯದಲ್ಲಿ ಪ್ರತಿಭಾವಂತರು ಗೌರವ ತಾಳಿರುವರು. ಲೋಕೋತ್ತರ ಪ್ರತಿಭೆ. ಮೃದು ಲಲಿತಪದ ವಿನ್ಯಾಸ. ಅಲಂಕಾರ. ಚಮತ್ಕಾರ. ಅನುಪ್ರಾಸ. ಉತ್ಪ್ರೇಕ್ಷೆ. ತರ್ಕ ಕಲೆಯಲ್ಲಿ ಅತಿ ನೈಪುಣ್ಯ –ಇವೇ ಇವನಿಗೆ ಈ ಪ್ರಶಸ್ತಿಯನ್ನು ತಂದಿತು. ಕಾಶ್ಮೀರದಲ್ಲಿ ನೈಷಧ ಕಾವ್ಯವು ಪ್ರಸಿದ್ಧಿ ಹೊಂದಿತು. ಆದರೆ ಇವನ ಖ್ಯಾತಿ ಖಂಡನ ಖಂಡ ಖಾದ್ಯದಿಂದ. ಇದನ್ನು ಖಂಡನ ಖಾದ್ಯ ಮತ್ತು ಖಾದ್ಯ ಖಂಡನನೆಂದು ಹೇಳುವುದೂ ಉಂಟು. ನೈಷೇಧ ಕಾವ್ಯವು ಈಗ ಎಲ್ಲರಿಗೂ ಪ್ರಿಯವಾಗಿದೆ. ಭಾರತದ ನಳ ದಮಯಂತಿ ಕಥೆಯನ್ನು ಹೃದಯಂಗಮವಾಗಿ ವರ್ಣಿಸಿರುವನು. ಇದು ಎಲ್ಲರಿಗೂ ತಿಳಿದ ಕಥೆಯಾದರೂ ಇವನ ಕಾವ್ಯದಲ್ಲಿ ಮತ್ತೆ ಮತ್ತೆ

ಓದೋಣವೇ ಎನ್ನಿಸುತ್ತದೆ. ಈ ಕೆಳಗಿನ ಎರಡು ಶ್ಲೋಕಗಳನ್ನು ನೋಡಿದರೆ ಅದರ ಸತ್ಯಾಂಶವು ಗೋಚರವಾಗುವುದು.

ಧ್ವಾರಿತದ್ರುಮಾಂತಾನ ಭಿಸಾರಿ ಕಾಂಸ್ತ್ವಂ ಶಂಕಸ್ವ ಸಂಕೇತನಿಕೇ ತಮಾಪ್ತಾ:
ಛಾಯಾ ಛಲಾದುಜ್ಝಿ ತನೀಲ ಚೇಲಾ ಜೋತ್ಸ್ನನು ಕೂಲ್ಯೆ ಶ್ಯೆಲಿತಾದುಕೂಲ್ಯೆ:
ತ್ವದಾಸ್ಯಲಕ್ಷ್ಮೀ ಮುಕುರಂ ಚಕೋತ್ಕಿ: ಸ್ವಕೌಮುದೀಯೋದಯಮಾನಮಿಂದು
ದೃಶಾ ನಿಶೀಂದೀವರ ಚಾರುಭಿಸಾಪೀಬೋರು ರಂಭಾತರು ಪೀವರೋರು

## ೭೧. (27) ಕವಿರಾಜ (ಕ್ರಿ. ಶ. 12ನೇ ಶತಮಾನ – ಉತ್ತರ ಭಾಗ)

ಇವನು ಕೀರ್ತಿನಾರಾಯಣ ಮತ್ತು ಚಂದ್ರಮುಖಿಯ ಮಗ. ಇವನ ಹೆಸರು ಮಾಧವ ಭಟ್ಟ. ಕಾಮದೇವನು ಇವನ ಆಶ್ರಿತ ದೊರೆ. ಗೌತಮ ಗೋತ್ರದವನಿವನು. ತಂದೆಯ ಪ್ರೀತಿಗಾಗಿ 10ಸರ್ಗವುಳ್ಳ " ಪಾರಿಜಾತಾಪಹರಣ"ವೆನ್ನುವ ಕಾವ್ಯವನ್ನು ಬರೆದನು. ಇವನು ತನ್ನನ್ನು ವಕ್ರೋಕ್ತಿ ಕಾವ್ಯ ನಿಪುಣನೆಂದೂ ಸುಬಂಧು ಮತ್ತು ಬಾಣಭಟ್ಟನಿಗೆ ಸಮನೆಂದೂ.

ಸುಬಂಧು ರ್ಬಾಣ ಭಟ್ಟಶ್ಚಕವಿರಾಜ ಇತಿತ್ರಯಃ
ವಕ್ರೋಕ್ತಿ ಮಾರ್ಗ ನಿಪುಣಾಃ ಚತುರ್ಥೋೀವಿದ್ಯತೇ ನವಾ

ಎನ್ನುವ ಶ್ಲೋಕದಿಂದ ಹೇಳಿಕೊಂಡಿರುವನು. ಇವನ ವಕ್ರೋಕ್ತಿ ಕಾವ್ಯವೇ "ರಾಘವ ಪಾಂಡವೀಯ" ಇದಕ್ಕೆ ಕಾಮದೇವಾಂಕ ಎನ್ನುವ ಹೆಸರೂ ಇದೆ. ಇದಕ್ಕೆ ಅನೇಕ ವ್ಯಾಖ್ಯಾನ ಗಳಿವೆ. ಇದನ್ನು ಇವನು ಶ್ರುತಕೀರ್ತಿ ಎಂದು ಪ್ರಸಿದ್ಧನಾದ ಜೈನ ದಿಗಂಬರ ಧನಂಜಯನೊಡನೆ (ಕ್ರಿ.ಶ.1123-1140) ಸೇರಿ ಬರೆದನೆಂದು ಹೇಳುವುದೂ ಉಂಟು. ಈ ಕಾವ್ಯದ ಪ್ರತಿಯೊಂದು ಶ್ಲೋಕದಲ್ಲಿಯೂ ರಾಮಾಯಣ ಮತ್ತು ಪಾಂಡವರ ಕಥೆಯ ಅರ್ಥದಲ್ಲಿ ಬರುವಂತೆ ಬರೆದಿರುವುದೇ ಈ ಕಾವ್ಯದಲ್ಲಿ ಕಾಣುವ ಐತಿಹ್ಯ. ಒಂದು ಉದಾಹರಣೆಯಿಂದ ಇದನ್ನು ಕಾಣಬಹುದು.

ನೃಪೇಣ ಕನ್ಯಾ ಜನಕೇನ ದಿತ್ಸಿತಾಂ ಅಯೋನಿಜಾಂಲಂಬಯಿತುಂ ಸ್ವಯಂವರೇ
ದ್ವಿಜ ಪ್ರಕರ್ಷೇಣ ಸಧರ್ಮ ನಂದನಃ ಸಹನುಜಸ್ತಂಭುವ ಮಪ್ಯನೀಯತ

ಇಲ್ಲಿ 'ಜನಕೇನ' ಎಂದರೆ "ಜನಕ ಮಹಾರಾಜನಿಂದ" ಮತ್ತು ತಂದೆಯಾದ "ದ್ರುಪದನಿಂದ" ಎಂತಲೂ , "ಅಯೋನಿಜಾಂ" ಎಂದರೆ ಸೀತೆ ಮತ್ತು ದ್ರೌಪದೀ ಎಂತಲೂ ಅರ್ಥ ಬರುವಂತೆ ಮಾಡಿದೆ. ಇಂತಹ ಕಾವ್ಯಗಳಿಗೆ ಚಿತ್ರಕಾವ್ಯವೆಂದು ಲಘುಕಾವ್ಯ ಪ್ರಭೇದವಾಗಿ ಆಲಂಕಾರಿಕರು ಹೇಳಿರುವರು.

# ೭೩. (28) ಜಯದೇವ (ಕ್ರಿ. ಶ. 12ನೇ ಶತಮಾನ )

## ಕಾಲ

ಇವನು ಬಂಗಾಳದ ದೊರೆ. ಲಕ್ಷ್ಮಣಸೇನನ ಆಸ್ಥಾನ ಪಂಡಿತನಾಗಿದ್ದನೆಂದು ನಿಶ್ಚಿತನಾಗಿರುವುದರಿಂದ ಇವನ ಕಾಲ ಕ್ರಿ. ಶ. 1116ಎಂದು ಸಿದ್ಧವಾಗಿವೆ.

## ಜೀವನ

ಇವನು ಭೋಜದೇವ ಮತ್ತು ವಾಮದೇವಿಯರ ಮಗ. ಬಂಗಾಳ ದೇಶದ ಕಿಂದುಬಿಲ್ವದಲ್ಲಿ ಹುಟ್ಟಿದನು. ಚಿಕ್ಕಂದಿನಿಂದಲೂ ಇವನಿಗೆ ಶ್ರೀ ಕೃಷ್ಣನಲ್ಲಿ ಅತಿಭಕ್ತಿ ಇತ್ತು. ಪಾಂಡಿತ್ಯವನ್ನು ಸಂಪಾದಿಸಿದನು. ತನಗೆ ಅನುರೂಪಳೂ ಅನುಕೂಲಳೂ ಆದ ಪದ್ಮಾವತಿ ಎನ್ನುವಳನ್ನು ಮದುವೆಯಾದನು. ವಿದ್ಯಾವಂತನಾದ ಮೇಲೆ ಮಧುರೆ. ಬೃಂದಾವನ ಮೊದಲಾದ ಕೃಷ್ಣಸ್ಮಾರಕ ದಿವ್ಯ ದೇಶಗಳನ್ನು ತಿರುಗಿ ಪುರಿ ಜಗನ್ನಾಥಕ್ಕೆ ಬಂದು ಅಲ್ಲಿ ಪದ್ಮಾವತಿಯನ್ನು ಮದುವೆಯಾದನು. ಲಕ್ಷ್ಮಣಸೇನನ ಆಸ್ಥಾನದಲ್ಲಿ ಗೋವರ್ಧನದೋಯಿ. ಶರಣ. ಕವಿರಾಜ. ಶ್ರುತಧರ ಮತ್ತು ಉಮಾಪತಿ ಎನ್ನುವರೊಡನೆ ಇದ್ದನೆಂದೂ ತಿಳಿದು ಬರುತ್ತದೆ. ಇವನು ಪರಮ ಭಕ್ತನೆಂದೂ ತನ್ನ ಕಾಲದಲ್ಲಿಯೇ ಎಲ್ಲರಿಗೂ ಪೂಜ್ಯನಾಗಿದ್ದನೆಂದೂ. ಶ್ರೀಕೃಷ್ಣನೇ ಇವನ ಬಾಯಿಂದ ಗೀತ ಗೋವಿಂದವನ್ನು ನುಡಿಸಿದನೆಂದೂ ಪ್ರತೀತಿ ಇದೆ. ಕ್ರಿ.ಶ. 1499ರಲ್ಲಿ ಪ್ರತಾಪ ರುದ್ರ ದೇವನು ತನ್ನ ದೇಶದ ಎಲ್ಲಾ ಗಣಿಕೆಯರೂ ಸಂಗೀತಗಾರರೂ ಇವನ ಪದ್ಯಗಳನ್ನೇ ಹಾಡಬೇಕೆಂದು ವಿಧಿಸಿದ್ದನಂತೆ. ಕ್ರಿ. ಶ. 1192ರ ಒಂದು ಶಾಸನವೂ ಇವನ ಪದ್ಯವನ್ನೊಳಗೊಂಡಿದೆ.

## ಇವನ ಕಾವ್ಯ

ಇವನು ಏಕೈಕ ಕಾವ್ಯ ಗೀತ ಗೋವಿಂದ. ಇದು ಭಾಗವತದಂತೆ 12 ಅಧ್ಯಾಯವುಳ್ಳದು. ಗಾಯತ್ರೀಯಂತೆ 24 ಅಷ್ಟಪದೀ ಉಳ್ಳದ್ದು. ಇದನ್ನು 4 ಮುಖದಿಂದ ಓದುವುದುಂಟು. 1.ಕಾವ್ಯ ದೃಷ್ಟಿಯಿಂದ (Literary) 2.ಭಕ್ತಿ ದೃಷ್ಟಿಯಿಂದ (Devotional) 3. ಸಂಗೀತ ದೃಷ್ಟಿಯಿಂದ (Musical) 4.ಅಂತರಾರ್ಥ ದೃಷ್ಟಿಯಿಂದ (Mystic). ಪಾಶ್ಚಾತ್ಯರಲ್ಲಿ ಸರ್‌ವಿಲಿಯಂಜೋನ್ಸ್ (Sirwilliam Jones) ಲಾಸೆನ್ (Lassen) ಪಿಸ್ಚೆಲ್ (Pischel) ಲೆವಿ (Levi) ಮತ್ತು ಶ್ರೋಡರ್ (Schrodeber) ಇವರೆಲ್ಲರೂ ಈ ಕಾವ್ಯವನ್ನು ಶ್ಲಾಘಿಸಿರುವರು. ಈ ದೇಶದವರಿಗಂತೂ ಅತಿಪ್ರಿಯವಾಗಿದೆ. ಕೆಲವರು ಇದನ್ನು ಗ್ರಾಮ್ಯ ನಾಟಕವೆಂದೂ (Pastoral drama) ಮತ್ತೆ ಕೆಲವರು ಗೀತವೆಂದೂ (Lyric)ಹೇಳಿರುವರು. ಆದರೆ ಸರ್ಗಗಳಾಗಿ ಕವಿಯೇ ವಿಂಗಡಿಸಿರುವುದರಿಂದ ಇದು ಕಾವ್ಯವೆಂದೇ ನಿಶ್ಚಿತವಾಗಿದೆ. ಇದು ಶೃಂಗಾರ ಪ್ರಧಾನವಾಗಿ ಮಿಶ್ರ

ಎಂಟು ರಸಗಳನ್ನು ಅಂಗವಾಗಿ ಹೊಂದಿದೆ. ಪದಲಾಲಿತ್ಯ ಅರ್ಥ ಗಾಂಭೀರ್ಯ, ಉನ್ನತ ಭಾವ, ಪ್ರೇಮಿಗಳ ಸ್ವಾಭಾವಿಕ ಮನಃಸ್ಥಿತಿ, ಇತ್ಯಾದಿಗಳಲ್ಲಿ ಇದಕ್ಕೆ ಗಣ್ಯ ಸ್ಥಾನವಿದೆ.

ಮೇಘೈ ರ್ಮದುರ ಮುಂಬರಂ ಘನಲತಾ ಶ್ಯಾಮ ಸ್ತಮಾಲದ್ರುಮೈಃ
ನಕ್ತಂ ಬೀರುರಿ ಮಂತ್ರಮೇವ ರಾಥೇಗೃಹಂಪ್ರಾಪಯ
ಇತ್ಥಂ ನಂದ ನಿದೇಶ ತಶ್ಚಲಿಯೋಃ ಪ್ರತ್ಯಧ್ವ ಕುಂಜ ದ್ರುಮಂ
ರಾಧಾ ಮಾದವ ಯೋರ್ಜಯಂತಿ ಯ ಮನಾಕೂಲೇರ ಹಃ ಕೇಳಯಃ

ಎನ್ನುವ ಮಂಗಳ ಶ್ಲೋಕದಿಂದ ಪ್ರಾರಂಭವಾಗಿ ಪ್ರತಿಸರ್ಗದ ಕೊನೆಯಲ್ಲಿಯೂ ಅಲ್ಲಿನ ಮಹತ್ವವು ಹೇಳಲ್ಪಟ್ಟು, ಅಂತಹ ಕೃಷ್ಣ ಮಹಾತ್ಮ್ಯವೇ ಎಲ್ಲರನ್ನೂ ರಕ್ಷಿಸಲೆಂದು ಪಲ್ಲವಿಯಂತೆ ಇದ್ದು, ಕೊನೆಯದಾಗಿ ಕವಿಯ ಶಕ್ತಿ, ಸಂಗೀತ ಜ್ಞಾನ, ವಿಷ್ಣು ಭಕ್ತಿ ಮತ್ತು ಭಾವನಾಔನ್ನತ್ಯ ಇವುಗಳ ವಿವೇಚನೆಯಿಂದ ಮುಗಿದಿದೆ. ಕೊನೆಯ ಸರ್ಗದಲ್ಲಿ ರಾಧಾ ಕೃಷ್ಣರ ಸಂವಾದವು ಅತಿ ಸುಂದರವಾಗಿದೆ.

ಇದು ಒಂದು ಶಬ್ದ ಚಿತ್ರವೆನ್ನಬಹುದು. ಶೃಂಗಾರದ ನೈರಾಶ್ಯ ಮತ್ತು ಅಂತಿಮ ವಿಯೋಗ ಇವುಗಳನ್ನು ಬಿಟ್ಟು ಮಿಕ್ಕ ಶೃಂಗಾರದ ಎಲ್ಲಾ ಪರ್ವಗಳೂ ವರ್ಣಿತವಾಗಿವೆ. ಭಾಷೆಯು ಅತಿ ಲಲಿತವಾಗಿದೆ. ಉದಾಹರಣೆಗಾಗಿ–

ಚಂದನ –ಚರ್ಚಿತ–ನೀಲಕಲೇ–ಬರಪೀತ್ –ವಸನವನಮಾಲೀ
ಕೇಳಿ–ಚಲನ್ಮಣಿಕುಂಡಲ–ಮಂಡಿತ–ಗಂಡಯುಗ ಸ್ಮಿತ ಶಾಲೀ
ಹರಿರಿಹ ಮುಗ್ಧವಧೂನಿಕರೇ –ಮಾಲಿನಿ। ವಿಲಸತಿ ಕೇಳಿಪರೇ

ಇದೇ ರೀತಿಯಲ್ಲಿ ಶಬ್ದಗಳು ಭಾವದೊಡನೆ ಮಿಲಿತವಾಗಿ ಹರಿಯುವಂತಿದೆ. ಇವನು ಶ್ರೀಕೃಷ್ಣನನ್ನು ವರ್ಣಿಸಿರುವ ಪದಗಳನ್ನೇ ತೆಗೆದುಕೊಂಡರೆ –

ಲಲಿತ–ಲವಂಗಲತಾ–ಪರಿಶೀಲನ–ಕೋಮಲ–ಮಲಯ–ಸಮೀರದಂತಿದೆ. ಇವನ ಕಾವ್ಯ, ಮಾತು, ಭಾವ ಮತ್ತು ರಸ.

## ೭೯. (29) ವೆಂಕಟನಾಥ (1269-1370)

**ಕಾಲ**

ವಿಶ್ವಗುಣಾದರ್ಶ ಮಹಾಕಾವ್ಯದಲ್ಲಿ (ಕ್ರಿ. ಶ. 17ನೇ ಶತಮಾನ) ಈ ಕವಿಯು ಕಾಳಿದಾಸ, ಭಾರವಿ, ಮಾಘ ಮೊದಲಾದ ಕವಿಗಳೊಡನೆ ಸೇರಿಸಲ್ಪಟ್ಟಿರುವನು.

ಮಾಘಶ್ಚೋರೋ ಮಯೂರೋ ಮುರ ರಿಪುರ ಪರೋಭಾರವೀ ಸ್ಸಾರವಿಧ್ಯಃ
ಶ್ರೀಹರ್ಷಃ ಕಾಳಿದಾಸಃ ಕವಿರಥ ಧವಭೂತ್ಯಾಹ್ವಯೋ ಭೋಜರಾಜಃ
ಶ್ರೀದಂಡೀ ದಿಂಡಿಮಾಖ್ಯಃ ಶ್ರುತಿ ಮಕುಟ ಗುರುಃ ಭಲ್ಲತೋಭಟ್ಟ ಬಾಣಃ
ಖ್ಯಾಥಾ ಶ್ಚಾನ್ಯೇ ಶಠಾರ್ಯಾದಯಃ ಇತಿ ವೈವಿಶ್ವ ಮಾಹ್ಲಾದಯಂತಿ

ಈ ಪದ್ಯದಲ್ಲಿ ಮಹಾ ಕವಿಗಳು ಮತ್ತು ಮಿಕ್ಕವರೂ ಸೇರಿಸಲ್ಪಟ್ಟರೂ ಕವಿತಾ ಮಾಧುರ್ಯದಿಂದ ಇವರೆಲ್ಲರೂ ಏಕದೃಷ್ಟಿಯಿಂದ ಪರಿಗಣಿಸಲ್ಪಟ್ಟಿರುವರು. ವೆಂಕಟನಾಥನು ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಪ್ರಸಿದ್ಧನಾದ ಆಚಾರ್ಯ. ಇವನು ಮಹಾ ಕವಿಯಾಗಿ ಇಲ್ಲಿರುವರಿಂದ ಪರಿಗಣಿಸಲ್ಪಟ್ಟಿಲ್ಲ. ಶ್ರೀ ಹರ್ಷನಾದ ಮೇಲೆ ಇವನೇ ಮಹಾ ಕವಿ. ಇವನ ಏಕೈಕ ಮಹಾಕಾವ್ಯವೆಂದರೆ " ಯಾದ ವಾಭ್ಯದಯ". ಇವನ ಕಾಲವು ಕ್ರಿ. ಶ. 1269-1370 . ಎಂದು ನಿಶ್ಚಿತವಾಗಿದೆ.

**ಜೀವನ**

ಅನಂತಸೂರಿ ಮತ್ತು ತೋತಾಂಬ ದಂಪತಿಗಳ ಏಕೈಕಪುತ್ರ. ಚಿಕ್ಕವಯಸ್ಸಿನಿಂದಲೂ ಪ್ರತಿಭಾಶಾಲಿ. ತನ್ನ 20ನೇ ವರುಷದಲ್ಲಿ ಸಕಲ ಶಾಸ್ತ್ರ ಪಾರಂಗತನಾಗಿ ಆಚಾರ್ಯ ಪೀಠಕ್ಕೆ ಯೋಗ್ಯನಾದನು. ಆದರೆ ಆ ಪದವಿಗೆ ಪೂರ್ಣಾಧಿಕಾರವನ್ನು ಹೊಂದಲು ತನ್ನ ಹುಟ್ಟೂರಾದ ಕಾಂಚೀಪುರವನ್ನು ಬಿಟ್ಟು ದಕ್ಷಿಣ ದೇಶದ ತಿರುವು ಹೀಂದ್ರಪುರಂ ಎನ್ನುವ ಗರುಡನದೀ ತೀರ ಗ್ರಾಮಕ್ಕೆ ಹೋಗಿ ಅಲ್ಲಿ ಯೋಗಾಭ್ಯಾಸದಿಂದ ಹಯಗ್ರೀವನನ್ನು ಸಾಕ್ಷಾತ್ಕರಿಸಿಕೊಂಡು ಅವನ ಅನುಗ್ರಹದಿಂದ ಅನೇಕಾನೇಕ ಶ್ರೀ ವೈಷ್ಣವ ಸಿದ್ಧಾಂತ ಗ್ರಂಥಗಳನ್ನೂ, ಸಂಕಲ್ಪ ಸೂರ್ಯೋದಯವೆನ್ನುವ ನಾಟಕವನ್ನೂ. ಯಾದವಾಭ್ಯುದಯವೆನ್ನುವ ಕಾವ್ಯವವನ್ನೂ ಬರೆದನು. ಈ ತಿರುವಹೀಂದ್ರ ಪುರದಲ್ಲಿ 15ವರುಷ ಕಾಲವಿದ್ದು ನಂತರ ತೀರ್ಥಯಾತ್ರಾರ್ಥಿಯಾಗಿ ಅನೇಕ ದೇಶಗಳನ್ನು ತಿರುಗಿ ಕೊನೆಗೆ ಶ್ರೀರಂಗಕ್ಕೆ ಬಂದು ಅಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತದ ಮೂಲ ಪುರುಷರಾದ ರಾಮಾನುಜರ ಪೀಠದಲ್ಲಿ ಪ್ರತಿಷ್ಟಾಪಿಸಲ್ಪಟ್ಟನು.ಇವನು ತನ್ನ ನಾಟಕವಾದ ಸಂಕಲ್ಪ ಸೂರ್ಯೋದಯದಲ್ಲಿ-

ವಿಂಶತ್ಯಬ್ದೇ ವಿಶ್ರುತ ನಾನಾವಿಧ ವಿದ್ಯಃ
ತ್ರಿಂಶದ್ವಾರಂ ಶ್ರಾವಿತ -ಶಾರೀರಕ ಭಾಷ್ಯಃ

ಎಂದು ಹೇಳಿರುವನು.

**ಇವನ ಕಾವ್ಯ**

ಯಾದವಾಭ್ಯುದಯವು ಇಪ್ಪತ್ನಾಲ್ಕು ಸರ್ಗಗಳುಳ್ಳ ಮಹಾ ಕಾವ್ಯ. ಇದರಲ್ಲಿ ಭಾಗವತ ಮತ್ತು ವಿಷ್ಣು ಪುರಾಣದ ಆಧಾರದ ಮೇಲೆ ಶ್ರೀಕೃಷ್ಣನ ಚರಿತ್ರೆಯು ಕೊಡಲ್ಪಟ್ಟು ಮಹಾಭಾರತ ಯುದ್ಧವಾದ ಮೇಲೆ ಎಲ್ಲರಿಗೂ ಆನಂದದಾಯಿಯಾಗಿ ದ್ವಾರಕೆಯಲ್ಲಿ ವಿರಾಜಿಸುತ್ತಿರುವನು

ಎನ್ನುವುದರಿಂದ ಕೊನೆಗೊಂಡಿದೆ. ಶ್ರೀಕೃಷ್ಣನ ದಿವ್ಯ ಚರಿತ್ರೆಯನ್ನು "ಜನ್ಮ ಕರ್ಮಚಮೇದಿವ್ಯಂ " ಎಂದು ಅವನೇ ಭಗವದ್ಗೀತೆಯಲ್ಲಿ ಹೇಳಿಕೊಂಡಿರುವಂತೆ ಕಾವ್ಯರೂಪದಲ್ಲಿ ತನ್ನ ಅದ್ವಿತೀಯ ಪಾಂಡಿತ್ಯದಿಂದ ತೋರಿಸಿಕೊಟ್ಟಿರುವನು. ಇವನ ಮಾತಿನಲ್ಲಿ ಹೇಳುವುದಾದರೆ–

ಅನಿತರ ಜನಲಭ್ಯಾಂ ಪ್ರೀತಿ ಮಾಸೇದುಷೀಭಿಃ
ಸುಚಿತ ಮನುಬಭೂವೇಸ್ಸ್ವರ್ಗಮೋಕ್ಷಾತಿಶಾಯೀ
ನಿರುಪಧಿಕರ ಸಾಬ್ಧಿಂ ನಿರ್ವಿಶಂತೀ ಭೀರಾದ್ಯಂ
ಕಲಯುವತಿ ಭರಿತ್ವಂ. ಕೋಪಿಶೃಂಗಾರ ಭೂಮಾಃ || ೧ ||
ಸಹಜ ಬಲಸಮೇತಃ ಶಕ್ರ ಪೂರ್ವೈ ರಜಯ್ಯಃ
ಸಮುದಿತ ನಿಷಮಾಸ್ತ್ರಃ ತಾದೃಶಾನಂದ ಹೇತುಃ
ಅವಿದಿತರ ಚನೇನ ಸ್ವೇನ ಪಾರ್ಥಾಯಗೀತಃ
ಸ್ವಯಮಜನಿ ಪಕಾಮಃ ಕೋಪಿಧರ್ಮಾವಿರುದ್ಧಃ || ೨ ||

ಈ ಎರಡು ಶ್ಲೋಕಗಳಿಂದ ಚೆನ್ನಾಗಿ ತಿಳಿಯಬಹುದು. ಈ ಕಾವ್ಯವನ್ನು ಬರೆದಿರುವುದರಿಂದ ತಾನು ಅಪೇಕ್ಷಿಸುವ ಫಲವನ್ನು ಈ ಕೆಳಗಿನ ಶ್ಲೋಕದಲ್ಲಿ ಹೇಳಿರುವನು.–

ಗುರುಭಿರನಘ ಚಿತ್ತೈ ದಾಹಿತೋದಾರ ಭೂಮಾ
ಸುರಭಿತರಸಮೇತತ್ಸೂನ್ನತಂ ವೆಂಕಟೇಶಃ
ಧೃತಸುತ ಯದು ವೀರ ಪ್ರೀತಿಯಿಚ್ಛನ್ ಪ್ರಭೂತಾಂ
ಕವಿಕದಮ್ಯಗೇಂದ್ರಃ ಕ್ಷೇಮದಂ ಕಾವ್ಯರತ್ನಂ

ಇಲ್ಲಿ ತಾನು ಕಾವ್ಯದ ಮಹತ್ವಕ್ಕಾಗಿ ಅಮೃತವನ್ನು ನುಡಿದಿಲ್ಲವೆನ್ನುವುದೇ ಈ ಕವಿಯತೃಪ್ತಿಯಾಗಿ ಕಾಣುತ್ತದೆ. ಭಾಮಹನು ಹೇಳಿರುವ "ಸಾಧು ಕಾವ್ಯ ನಿಷೇವಣಂ"ಎನ್ನುವುದನ್ನು ಎಲ್ಲರೂ ಸಾರ್ಥಕ ಮಾಡಿಕೊಳ್ಳುವುದಲ್ಲದೆ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಲಿ ಎನ್ನುವುದೇ ಇವನ ಸದುದ್ದೇಶವಾದಂತಿದೆ. ಕಾವ್ಯವನ್ನು ವೇದಾಂತಾನುಷ್ಠಾನಕ್ಕೆ ಹಂತವನ್ನಾಗಿ ಕಲ್ಪಿಸಿಕೊಟ್ಟಿರುವ ಕವಿ ಇವನೊಬ್ಬನೇ. ಶ್ರೀ ಭಗವದ್ಗೀತೆಯ 12ನೇ ಅಧ್ಯಾಯದಲ್ಲಿ ಪರಮಾತ್ಮನಲ್ಲಿ ಭಕ್ತಿ ಇಡುವುದೇ ಪರಮ ಸಾಧನವೆಂದು "ಮಯ್ಯೇವ ಮನ ಅಧತ್ಸ್ವ ಮಯ ಬುದ್ಧಿಂ ನಿವೇಶಯ"ಎನ್ನುವ ಶ್ಲೋಕದಲ್ಲಿ ಹೇಳಿ, ಇದು ಸಾಧ್ಯವಾಗದಿದ್ದರೆ ಇದಕ್ಕೆ ಸಾಧನವಾಗಿ-

ಅಥಚಿತ್ತಂ ಸಮಾಧಾತುಂನ ಶಕ್ನೋಷಿ ಮಯಿಸ್ಥಿರಂ
ಅಭ್ಯಾಸಯೋಗೇನತತೋ ಮಾಮಿಚ್ಛಾಪ್ತುಂ ಧನಂಜಯ

ಎನ್ನುವ ಶ್ಲೋಕದಲ್ಲಿ ಹೇಳಿರುವಂತೆ ಪರಮಾತ್ಮನ ದಿವ್ಯ ಜನ್ಮ ಮತ್ತು ಕರ್ಮವನ್ನು ಅನುಸಂಧಾನ ಮಾಡುವುದೆನ್ನುವ ಅಭ್ಯಾಸ ಪ್ರಯೋಗವು ಕಾವ್ಯದಲ್ಲಿ ಅಭಿರುಚಿಯುಳ್ಳವರಿಗೆ ಲಭಿಸಲು ಎನ್ನುವುದೇ ಈ ಕವಿಯ ಆಶಯವೆಂದೂ ಕಾಣುತ್ತದೆ.

### ಶೈಲಿ, ಪಾಂಡಿತ್ಯ, ಇತ್ಯಾದಿ

ಈ ಕವಿಯು ತನ್ನನ್ನು ತಾನೇ ಹೇಳಿಕೊಳ್ಳುವಾಗ ತಾನು ಕವಿತಾರ್ಕಿಕ ಸಿಂಹನೆಂದು ಎಲ್ಲರೂ ಹೇಳುತ್ತಿರುವರು ಎಂದು ಸಂಕಲ್ಪ ಸೂರ್ಯೋದಯದಲ್ಲಿ ಬರೆದಿರುವನು. ತಾನು ಆಶ್ರಯಿಸಿರುವ ಶೈಲಿಯ ವಿಷಯವಾಗಿಯೂ,

ಗೌಡ–ವೈದರ್ಭ, ಪಾಂಚಾಲ–ಮಾಲಾಕಾರಾಂ ಸರ್ವಸ್ವವೇಂ
ಯಸ್ಯನಿತ್ಯಂ ಪ್ರಶಂಸಂತಿ ಸಂತಃ ಸೌಭವೇದಿನಃ

ಎಂದು ಹೇಳಿಕೊಂಡಿರುವನು ಇವನಿಗೆ ಕಾಳಿದಾಸನೇ ಪರಮಾದರ್ಶವಾಗಿರುವಂತಿದೆ. ಶಬ್ದಾಲಂಕಾರದಿಂದ ಅನುಪ್ರಾಸ ಮತ್ತು ಯಮಕವನ್ನು ಅರ್ಥಾಲಂಕಾರಕ್ಕೆ ಸೇರಿಸಿ ಒಮ್ಮುಖ ಮಾಡಿರುವುದರಲ್ಲಿ ಈ ಕವಿಯ ಪ್ರತಿಭೆಯು ಎಲ್ಲೆಲ್ಲೂ ಕಾಣುತ್ತದೆ. ಈ ಕಾವ್ಯಕ್ಕೆ ಅಪ್ಪಯ್ಯದೀಕ್ಷಿತರ ವ್ಯಾಖ್ಯಾನವಿದೆ. ಅವನ ಮಾತಿನಲ್ಲಿ ಈ ಕವಿಯ ಪ್ರಾಶಸ್ತ್ಯವನ್ನು ಹೇಳುವುದಾದರೆ–

ಇತ್ಥಂ ವಿಚಿಂತ್ಯಾ ಸ್ಸರ್ವತ್ರ ಭಾವಾಸ್ಸಂತಿ ಪದೇ ಪದೇ
ಕವಿತಾರ್ಕಿಕ ಸಿಂಹಸ್ಯ ಕಾವ್ಯೇಷು ಲಲಿತೇಷ್ವಪಿ

ಎನ್ನುವ ಒಂದು ಶ್ಲೋಕವೇ ಸಾಕು. ಈ ಕವಿಯು ಒಂದು ಸಂದೇಶ ಕಾವ್ಯವನ್ನೂ ಕೊಟ್ಟಿರುವನು. ಅದರ ವಿಮರ್ಶೆಯು ಮುಂದೆ ಬರುತ್ತದೆ.

## ೭೫. (30) ರಾಮಚಂದ್ರ (ಕ್ರಿ. ಶ. 1542)

ಇವನು ಲಕ್ಷ್ಮಣ ಭಟ್ಟನ ಮಗ. ಕ್ರಮವಾಗಿ ಓದಿದರೆ ಕಾಮವರ್ಣನೆಯಾಗಿಯೂ ಹಿಂದಿನಿಂದ ಓದಿದರೆ ವೈರಾಗ್ಯ ವಿಷಯವಾಗಿಯೂ ಆಗುವ ರಸಿಕ ರಂಜನೆವೆನ್ನುವ ಕಾವ್ಯವನ್ನು ಕೊಟ್ಟಿರುವನು.

## ೭೬. (31) ಜಗನ್ನಾಥ (ಕ್ರಿ. ಶ. 1660–1680)

ಇವನು ಪ್ರಸಿದ್ಧ ಅಲಂಕಾರಿಕ ಮತ್ತು ಕವಿಯೂ ಆಗಿರುವನು. ಇವನು ಷಹಜಾಹನನ ಕಾಲದವನೆಂದು ಹೇಳಲಾಗಿದೆ. ಒಂದು ದಿನ ಅವನೊಡನೆ ಇವನು ಶತ್ರಂಜ್ ಆಟವನ್ನಾಡುತ್ತಿದ್ದಾಗ ಲವಂಗೀ ಎನ್ನುವ ತರುಣಿಯು ನೀರು ತಂದು ಕೊಡಲು ಅವಳನ್ನು ವರ್ಣಿಸುವಂತೆ ದೊರೆಯು ಹೇಳಲಾಗಿ ಜಗನ್ನಾಥನು–

ಇಂದುಂಸುಸ್ತನೀ ಮಸ್ತಕ ನ್ಯಸ್ತಕುಂಭಾ ಕುಸಂಭಾರುಣಂ ಚಾರುಚೇಲಂ ವಸಾನಾ
ಸಮಸ್ತಸ್ಯಲೋಕಸ್ಯ ಚೇತಃ ಪ್ರವೃತ್ತಿ ಗೃಹೀತ್ವಾ ಘಟೇನಸ್ಯಯಾತೀವ ಭಾತಿ

ಎಂದು ವರ್ಣಿಸಿದನಂತೆ. ಈ ವರ್ಣನೆಗೆ ತೃಪ್ತನಾಗಿ ದೊರೆಯು ಅವಳನ್ನೇ ಮದುವೆಯಾಗಿ ಬಾಳಲು ವರವನ್ನು ಕೊಟ್ಟನಂತೆ. ಇದರಲ್ಲಿ ಸತ್ಯಾಂಶವಿರುವಂತಿದೆ. ಷಹಜಾಹಾನನ ಮಗ ದಾರಾಶಹ ಅಥವಾ ಧಾರಶೊಕೋ ಇವನ ಆಶ್ರಯದಾತ ಎಂದೂ ಹೇಳಲಾಗಿವೆ (ಇವನ ವಿಷಯದಲ್ಲಿ ಮುಂದೆ ಆಲಂಕಾರಿಕರನ್ನೂ ತಿಳಿಸುವಾಗ ವಿವರಗಳು ಕೊಡಲ್ಪಡುತ್ತವೆ.)

### ಇವನ ಗ್ರಂಥಗಳು

1. ಪೀಯೂಷಲಹರೀ (52 ಶ್ಲೋಕ) 2. ಸುಧಾಲಹರೀ (32 ಶ್ಲೋಕ) 3. ಅಮೃತಲಹರೀ (11ಶ್ಲೋಕ) 4. ಕರುಣಾಲಹರೀ (64 ಶ್ಲೋಕ) 5. ಲಕ್ಷ್ಮೀಲಹರಿ (41 ಶ್ಲೋಕ) 6. ಪ್ರಾಣಭರಣಂ (53 ಶ್ಲೋಕ) ಕಾಮರೂಪಾಧಿ ಪತಿಯ ಪ್ರಶಸ್ತಿ 7. ಜಗದಾಭರಣಂ (ಉದಯಪುರ ಮಹಾರಾಜ ರಾಣಾ) ಕರ್ಣ ಸಿಂಹನ ಮಗ ಜಗತ್ಸಿಂಹನ ಪ್ರಶಂಸೆ. ) 8. ಚಿತ್ರ ಮೀಮಾಂಸಾ ಖಂಡನಂ 9. ಮನೋರಮಾ ಕುಚಮರ್ದನಂ 10. ಭಾಮಿನೀ ವಿಲಾಸ ಇವನ ಪ್ರಸಿದ್ಧ ಗ್ರಂಥವೇ ರಸಗಂಗಾದರ. ಇದರ ವಿಮರ್ಶೆಯು ಮುಂದೆ ಬರುತ್ತದೆ.

## ೭೮. ಚಿತ್ರಕಾವ್ಯ

ಇದರ ಲಕ್ಷಣವು ಅಲಂಕಾರ ಗ್ರಂಥಗಳಲ್ಲಿ ಕಂಡುಬರುತ್ತದೆ. ಹೇಮಚಂದ್ರನು ಇದರ ಲಕ್ಷಣವನ್ನು ತನ್ನ ಕಾವ್ಯಾನುಶಾಸನದಲ್ಲಿ ಸ್ವರ. ವ್ಯಂಜನ. ಸ್ಥಾನ-ಗತಿ-ಆಕಾರ-ನಿಯಮ-ಚ್ಯುತ-ಗೂಢಾದಿ ಚಿತ್ರಂ -ಎಂದು ಹೇಳಿರುವನು. ಚ್ಯುತ ಮತ್ತು ಗೂಢವೆನ್ನುವುದರ ಲಕ್ಷಣವನ್ನು

ಚ್ಯುತಂ ಮ್ರಾತಾರ್ಥ ಮಾತ್ರಾ ಬಿಂದು ವರ್ಣಗತತ್ವೇನಚತುರ್ಧಾ
ಗೂಢಂ ಕ್ರಿಯಾಕಾರಕಾ ಸಂಬಂಧ ಪಾದ ವಿಷಯತ್ವೇನ ಚತುರ್ಧಾ

ಎಂದು ಹೇಳಿರುವನು. ಇಂತಹ ಚಿತ್ರಕಾವ್ಯವು ಅನುಪ್ರಾಸಯಮಕ. ಮತ್ತು ಶ್ಲೇಷ ಎಂದು ಮೂರು ಪ್ರಕಾರವಾಗಿದೆ. ಯಮಕದಲ್ಲಿ ಮೂರು ಶೃಂಖಲ. ಪರಿವರ್ತಕ ಮತ್ತು ಚೂರ್ಣಕ. ಶ್ಲೇಷದಲ್ಲಿ ಶಬ್ದ ಶ್ಲೇಷ ಮತ್ತು ಅರ್ಥಶ್ಲೇಷವೆಂದು ಎರಡು ವಿಭಾಗವಿದೆ. ಶಬ್ದ ಶ್ಲೇಷವು ಅಭಂಗ ಸಭಂಗವೆಂದು ಎರಡಾಗಿದೆ. ಇವರ ಚಿತ್ರವು ಹೀಗಿದೆ.




ಮತ್ತು ಬೇರೆ ಕ್ರಮದಲ್ಲಿ




ಅಲಂಕಾರ ಶಾಸ್ತ್ರವು ರೂಪುಗೊಂಡ ಮೇಲೆಯೇ ಈ ವಿಧ ವಿಭಾಗಕ್ಕೆ ಒಳಗಾಗುವ ಚಿತ್ರ ಕಾವ್ಯಗಳು ತಲೆದೋರಿದವೆಂದು ಹೇಳಿದರೂ ಭಾರವಿ ಮತ್ತು ಮಾಘ. ಇವರ ಕಾವ್ಯಗಳಲ್ಲಿ ಇಂತಹ ಶ್ಲೋಕ ರಚನೆಯು ಹೇರಳವಾಗಿ ಕಾಣುತ್ತದೆ. ಅನುಪ್ರಾಸ ಮತ್ತು ಯಮಕ ಇವೆರಡೂ ಶಬ್ದಾಲಂಕಾರದಲ್ಲಿ ಸೇರುತ್ತವೆ. ಶಬ್ದ ಶ್ಲೇಷೆಯೂ ಶಬ್ದಾಲಂಕಾರವೇ ಆದರೆ ಅರ್ಥಾಲಂಕಾರ ಮಯವಾದ ಶ್ಲೇಷೆ ಯುದ್ಧಿ ಸಂಧಾನ, ತ್ರಿಸಂಧಾನಾದಿ ಕಾವ್ಯಗಳಲ್ಲಿ ಕಾಣಬಹುದು. ಮಮ್ಮಟನು–

ತಚ್ಚಿತ್ರಂಯತ್ರವರ್ಣಾನಾಂ ಖಡ್ಗಾದ್ಯಾಕೃತಿಹೇತುತಾ

ಎಂದು ಲಕ್ಷಿಸಿರುವ ಬಂಧ ಕಾವ್ಯಕ್ಕೆ ಭಾರವಿ ಮತ್ತು ಮಾಘನ ಏಕಾಕ್ಷರಮಯ. ನಿರೋಷ್ಠ್ಯ. ದ್ವ್ಯಕ್ಷರ ಶ್ಲೋಕಗಳೇ ಉದಾಹರಣೆಯಾಗಿವೆ. ಇದೇ ಮಮ್ಮಟನ ಮತ್ತೊಂದು ಲಕ್ಷಣವಾದ

ಯದುಕ್ತ ಮನ್ಯಥಾವಾಕ್ಯ ಮನ್ಯಥಾನ್ಯೇನ ಯೋಜ್ಯತೇ
ಶ್ಲೇಷೇಣ ಕಾಕ್ವಾವಾ ಜ್ಞೇಯೋಸೌಸಾವಕ್ರೋಕ್ತಿ ಸ್ತಥಾ ದ್ವಿಧಾ

ಎನ್ನುವ ಶ್ಲೋಕದಿಂದ ದ್ವಿ ಸಂಧಾನ. ತ್ರಿಸಂಧಾನಾದಿ ಕಾವ್ಯಗಳು ಲಕ್ಷ್ಯಗಳಾಗಿವೆ. ಇಂತಹ ಕಾವ್ಯಗಳನ್ನೇ ಕುರಿತು 12ನೇ ಶತಮಾನದ ಕವಿರಾಜನು–

ಸುಬಂಧುರ್ಬಾಣಭಟಶ್ಚ ಕವಿರಾಜ ಇತಿತ್ರಯಃ
ವಕ್ರೋಕ್ತಿ ಮಾರ್ಗನಿಪುಣಾಃ ಚತುರ್ಥೋವಿದ್ಯತೇನ ವಾ

ಎಂದು ಹೇಳಿ ಸುಬಂಧು. ಬಾಣಮತ್ತು. ತಾನು ಮೂವರೇ ವಕ್ರೋಕ್ತಿ ಕಾವ್ಯನಿಪುಣರು ಎಂದು ಹೇಳಿಕೊಂಡಿರುವನು. ಆದರೆ ಇವನ ಹಿಂದೆಯೇ 10ನೇ ಶತಮಾನದಲ್ಲಿ ಶೋಭನನು ತನ್ನ ಚತುರ್ವಿಂಶತಿಕಾದಲ್ಲಿ 1. ತೀರ್ಥಂಕರರ ವರ್ಣನೆ. 2. ಜಿನರ ವರ್ಣನೆ 3. ಜೈನ ಸಿದ್ಧಾಂತ ಮತ್ತು 4. ಅನೇಕ ದೇವತೆಗಳು –ಇವೆಲ್ಲವೂ ಏಕಕಾಲದಲ್ಲಿ ಶ್ಲೇಷಾರ್ಥದಲ್ಲಿ ಬರುವಂತೆ ಶ್ಲೋಕಗಳನ್ನು ಮಾಡಿರುವನು. ಕವಿರಾಜನ ಸಮಕಾಲಿಕನಾದರೂ ಚಿಕ್ಕ ವಯಸ್ಸಿನವನಾದ ವಿದ್ಯಾಮಾಧವನು "ಪಾರ್ವತೀ ರುಕ್ಮಿಣೀಯ"ದಲ್ಲಿ ಪಾರ್ವತೀ ರುಕ್ಮಿಣೀ ಪರವಾದ ದ್ವಿಸಂಧಾನ ಕಾವ್ಯನನ್ನು ಕೊಟ್ಟಿರುವನು. ಕ್ರಿ. ಶ. 1542ರಲ್ಲಿ ರಾಮಭದ್ರನು (ರಾಮಚಂದ್ರ) ರಸಿಕರಂಜನಿಯನ್ನುರಚಿಸಿರುವನು (30ನೇ ಕವಿ) ಸೋಮೇಶ್ವರನು ರಾಘವ ಮಾಧವೀಯವೆನ್ನುವ ದ್ವಿಸಂಧಾನ ಕಾವ್ಯವನ್ನೂ. ಕ್ರಿ. ಶ. 1586-1614ರ ಚಿದಂಬರನು "ರಾಘವ ಯಾದವ ಪಾಂಡವೀಯ" ಎನ್ನುವ ತ್ರಿ ಸಂಧಾನ ಕಾವ್ಯವನ್ನೂ. 17ನೇ ಶತಮಾನದ ವೆಂಕಟಾಧ್ವರಿಯ "ಯಾದವ ರಾಘವೀಯ "ದ್ವಿಸಂಧಾನ ಕಾವ್ಯವನ್ನೂ. ಇದೇ ಚಿದಂಬರನು ರಾಮ–ಕೃಷ್ಣ–ವಿಷ್ಣು–ಶಿವ–ಸುಬ್ರಹ್ಮಣ್ಯ–ಪರವಾದ ಪಂಚಕಲ್ಯಾಣ ಚಂಪುವನ್ನೂ. ಕ್ರಿ. ಶ. 1671ರ ಮೇಘ ವಿಜಯ ಘನಿಯು ಸಪ್ತ ಸಂಧಾನವನ್ನೂ.ಸೋಮಪ್ರಭಾಚಾರ್ಯನು "ಶತಾರ್ಥ ಕಾವ್ಯ" ವನ್ನೂ ಕೊಟ್ಟಿರುವನು. ಇವುಗಳಲ್ಲದೆ ನಲ ಹರಿಶ್ಚಂದ್ರೀಯ. ಹರದತ್ತನ ರಾಘವ ನೈಷಧೀಯ. ಅನಂತ ಸೂರಿಯ ಹರಿಶ್ಚಂದ್ರೋದಯ ರಾಮಕೃಷ್ಣ ವಿಲೋಮ ಕಾವ್ಯ ಇತ್ಯಾದಿಗಳೂ ಇವೆ.

ಯಮಕ ಪ್ರಧಾನವಾದ ನೀತಿವರ್ಮನ ಕೀಚಕವಧಂ ಎನ್ನುವ ಕಾವ್ಯವನ್ನು ಪ್ರೇಮ ಚಂದ್ರನು ಕಾವ್ಯಾದರ್ಶ ವ್ಯಾಖ್ಯಾನದಲ್ಲಿ ನಮೂದಿಸಿರುವನು. ಇದು 5 ಸರ್ಗದ ಕಾವ್ಯ ಧ್ವನ್ಯಾಲೋಕದಲ್ಲಿ ಇಂತಹ ಕಾವ್ಯದ ಲಕ್ಷಣವು.

ಯತ್ರ ರ ಸವಂತಿ ಕಾನಿಚಿದ್ಯ ಮಕಾದೀನಿ ದೃಶ್ಯಂತೀ ತತ್ರರ ಸಾದೀನಾ ಮಂಗತಾ ಯಮಕಾದೀನಾಮಂಗಿಶ್ಚೈವ. ಎಂದಿದೆ.

## ೭೮. ನೀತಿಕಾವ್ಯಗಳು

ಇವುಗಳನ್ನು ಎರಡು ಪಂಗಡ ಮಾಡಬಹುದು. -1-ಸುಭಾಷಿತಗಳು ಮತ್ತು ನೀತಿ ಕಥೆಗಳು.

**ಸುಭಾಷಿತಗಳು**

ಮಾನವನ ಜೀವಿತದಲ್ಲಿ ಸುಖಕ್ಕೂ ಪಾರಮಾರ್ಥಿಕ ಪ್ರವೃತ್ತಿಗೂ ಬೇಕಾದ ತತ್ವಗಳನ್ನೊಳಗೊಂಡ ಶ್ಲೋಕಗಳ ಸಮೂಹಕ್ಕ ಸುಭಾಷಿತಗಳೆಂದು ಹೆಸರು. ಐತರೇಯ ಬ್ರಾಹ್ಮಣ, ಉಪನಿಷತ್ತುಗಳು, ಮಹಾಭಾರತ ಮೊದಲಾದವುಗಳಲ್ಲಿ ಇಂತಹ ನೀತಿ ಮತ್ತು ಧರ್ಮಬೋದ ವಾಕ್ಯಗಳ ಶ್ಲೋಕಗಳಿವೆ. (1) ಸತ್ಯಂವದ, ಧಮಂಚರ. (2) ಸತ್ಯೇನ ವಾಯುರಾವಾತಿ (3) ತಪಸಾದೇವಾಃ ಅಗ್ರಅಯನ್ತ (4) ಪ್ರಾಣೈರ್ಬಲಂ, ಬಲೇನ ತಪಃ ತಪಸಾಶ್ರದ್ಧಾಃ ಶ್ರದ್ಧಯಾಯೋಧಾ, ಮೇಧಯಾ ಮನೀಷಾ, ಮನೀಷಯಾ ಮನಃ ಮನಸಾಶಾಂತಿ, ಶಾಂತ್ಯಾ ಚಿತ್ತಂ, ಚಿತ್ತೇನ ಸ್ಮೃತಿಂ, ಸ್ಮೃತ್ಯಾ ಸ್ಮಾರಾಂ, ಸ್ಮಾರೇಣ ವಿಜ್ಞಾನಂ, ವಿಜ್ಞಾನೇನಾತ್ಮಾನಾಂವೇದಯತಿ, ಇತ್ಯಾದಿಗಳು ಉಪನಿಷತ್ತುಗಳಲ್ಲಿ ಹೇರಳವಾಗಿವೆ. ಪತಂಜಲಿ ಮಹಾಭಾಷ್ಯದಲ್ಲಿ (ಕ್ರಿ. ಪೂ. 150. ಇಂತಹ ಶ್ಲೋಕಗಳು ನಾನಾ ಮುಖವಾಗಿ ಜನಗಳಿಗೆ ಆದರ್ಶವಾಗಿದ್ದವೆಂದು ಹೇಳಲಾಗಿದೆ. ಬೌದ್ಧರ ಧರ್ಮಪಾದದಲ್ಲಂತೂ ಇದ್ದೇ ಇವೆ. ಇಂತಹ ಕೆಲವು ಶ್ಲೋಕಗಳ ಕರ್ತೃಗಳನ್ನು ಗುರ್ತಿಸಲಾರದಾದರೂ ಅವು ಒಬ್ಬ ಕವಿಯ ಕೈಯಲ್ಲಿ ಸಿಕ್ಕಿ ಅವನೂ ಕೂಡ ಅವುಗಳೊಡನೆ ತನ್ನ ಕವಿತೆಯನ್ನೂ ಸೇರಿಸಿ ಒಂದು ಗ್ರಂಥವಾಗಿ ಕೊಟ್ಟಿರುವನು. ರಾಜನೀತಿ ಸಮುಚ್ಚಯ, ಚಾಣಕ್ಯನೀತಿ, ವೃದ್ಧಚಾಣಕ್ಯ, ಲಘು ಚಾಣಕ್ಯ ಮೊದಲಾದ ಗ್ರಂಥಗಳು ಅವರವರೇ ಬರೆದಿದ್ದೆಂದು ಹೇಳಲು ಸಾಧ್ಯವಿಲ್ಲ. ಪ್ರಸಿದ್ಧ ಹೆಸರನ್ನು ತೆಗೆದುಕೊಂಡು ತಮ್ಮ ಗ್ರಂಥವು ಜನರಿಗೆ ಪ್ರಯೋಜನವಾಗಲೀ ಎನ್ನುವ ಸದುದ್ದೇಶವೇ ಇಂತಹ ಗ್ರಂಥಗಳು ಬರಲು ಕಾರಣವೆಂದು ಹಿಂದೂ ಸಂಸ್ಕೃತಿಗೆ ಸರಿಹೋಗಿದ್ದರೂ ಕೀತ್ (Keith) ವಿಮರ್ಶಕನು ಇದ್ದನು. ಅನುಮೋದಿಸುವುದಿಲ್ಲ. ಇದೇ ಧಾಟಿಯಲ್ಲಿ ಬೌದ್ಧರ ಅಂಗುತ್ತರ ನಿಕಾಯ ಮತ್ತು ಜೈನರ ಸ್ಥಾನಾಂಗವಿದೆ. ಇವುಗಳಲ್ಲಿ ನಾವು ಸಿಂಹ, ಪಕ್ಷಿ, ಕೋಳಿ, ಕಾಗೆ, ಕತ್ತೆ, ಮೊದಲಾದ ಮೃಗಗಳಿಂದಲೂ ಕಲಿಯಬೇಕಾದ ಗುಣಗಳು ಹೇಳಲ್ಪಟ್ಟಿವೆ. ಸೃಷ್ಟಿ ವೈಚಿತ್ರ್ಯವನ್ನು ಶ್ಲಾಘಿಸಿ ಮಾನವನು ಕಣ್ದೆರದು ಕಲಿಯಬೇಕಾದರೆ ಎಲ್ಲಾ ಸದ್ಗುಣಗಳಿಗೂ ನಿದರ್ಶನಗಳು ಕಣ್ಣು ಮುಂದೆಯೇ ಇರುತ್ತವೆ ಎನ್ನುತ್ತದೇ ಇಂತಹ ಗ್ರಂಥಗಳಿಗೆ ಮೂಲ. ಇದು ಒಂದು ವಿಧವಾದ ಸಮಾಜಸೇವೆಯೇ. ಕೆಲವು . ಶ್ಲೋಕಗಳಲ್ಲಿ ಮೋಸ ಮಾಡುವವರನ್ನೂ ದ್ರೋಹಿಗಳನ್ನೂ, ಚಾರರನ್ನೂ, ಹೇಳಿ ವರ್ಣಿಸಿರುವುದು ಮಾನವನ ಬುದ್ಧಿ ಪರಿಷ್ಕಾರಕ್ಕಾಗಿ ಕೆಳಗಿನ ಶ್ಲೋಕದಲ್ಲಿ ಗೀತೆಯನ್ನು ಎಲ್ಲರೂ ಓದಿ ಆನಂದಿಸದಿರರು.

ನಿರ್ವಿಷೋಣಾಪಿ ಸರ್ಪೇಣ ಕರ್ತವ್ಯಾ ಮಹತೀಫಣಾ
ವಿಷವಸ್ತು ವ ವಾಷ್ಯಸ್ತು ಖಟಾಟೋಪೋ ಭಯಂಕರಃ.

ವರರುಚಿಯ ನೀತಿ ರತ್ನ, ಘಟಕ ರ್ಪರದದ ಇತಿಹಾಸ, ವೇತಾಳ ಭಟ್ಟನ ನೀತಿ ಪ್ರದೀಪ –ಈ ದಾರಿಯನ್ನೇ ಅನುಸರಿಸಿವೆ.

## ೭೯ (32) ಘಟಕರ್ಪರ

ಇಲ್ಲಿ 22 ಶ್ಲೋಕಗಳಿವೆ. ಇದು ಮೇಘದೂತಕ್ಕೆ ಪ್ರತಿ ಸಂದೇಶ. ಇಲ್ಲಿ ಕವಿಯು ತಾನು ಪ್ರಯೋಗಿಸಿರುವ ಯಮಕವನ್ನು ಮತ್ತೊಬ್ಬನು ಪ್ರಯೋಗಿಸಲು ಸಮರ್ಥನೆಂದು ತೋರಿಸಿಕೊಟ್ಟರೆ ತಾನು ತೂತಾದ ಮಡಕೆಯಲ್ಲಿ ನೀರು ತರುವೆನೆಂದು ಹೇಳಿರುವುದರಿಂದ ಇದಕ್ಕೆ ಈ ಹೆಸರು ಬಂತು. ಜಾಕೋಬಿಯ ಈ ಶ್ಲೋಕಗಳು ಕಾಳಿದಾಸನಿಗಿಂತ ಹಿಂದಿನವೆಂದಿರುವನು ಈ ಕವಿಯೂ ವಿಕ್ರಮಾದಿತ್ಯನ ಆಸ್ಥಾನದಲ್ಲಿ ನವಮಣಿಗಳಲ್ಲೊಬ್ಬನೆಂದು ಹೇಳಿರುವುದನ್ನು ಗಮನಿಸಬೇಕು. ಈ 22 ಶ್ಲೋಕಗಳುಳ್ಳ ಕಾವ್ಯಕ್ಕೆ ಘಟಕರ್ಪರ ಕಾವ್ಯವೆಂದು ಹೆಸರು ಬಂದಿದೆ ಈ ಕೃತಿಯೇ ಕವಿಯ 21 ಶ್ಲೋಕಗಳುಳ್ಳ ನೀತಿಸಾರ.

## ೮೦ (33) ಭರ್ತೃಹರಿ (ಕ್ರಿ. ಶ. 6ನೇ ಶತಮಾನಕ್ಕೆ ಹಿಂದಿನವನು)

ಇತ್ಸಿಂಗ್ ಯಾತ್ರಿಕನು ಬರೆದಿರುವಂತೆ ಕ್ರಿ. ಶ. 651ರಲ್ಲಿ ಭರ್ತೃ ಹರಿಯು ವ್ಯಾಕರಣ ವಿಷಯದಲ್ಲಿ "ವಾಕ್ಯ ಪದೀಯ" ವನ್ನು ಬರೆದನು. ಇವನು ಏಳಾವರ್ತಿ ಸನ್ಯಾಸಾಶ್ರಮಕ್ಕೂ ಗೃಹಸ್ಥಾಶ್ರಮಕ್ಕೂ ಹಿಂದು ಮುಂದು ತಿರುಗುತ್ತಿದ್ದನೂ ಎಂದೂ, ಒಂದಾವರ್ತಿ ಆಶ್ರಮದೊಳಗೆ ಹೋಗುವುದಕ್ಕೆ ಮೊದಲು ಒಬ್ಬ ಶಿಷ್ಯನನ್ನು ಕರೆದು ಒಂದು ರಥವನ್ನು ಸಿದ್ಧವಾಗಿ ಇಡುವಂತೆ ಹೇಳಿ, ಇಷ್ಟವಿಲ್ಲದಿದ್ದರೆ ಸಂಸಾರಕ್ಕೆ ತಿರುಗಲು ಅವಕಾಶ ಕಲ್ಪಿಸಿಕೊಂಡಿದ್ದನೆಂದೂ, ತನ್ನ ಅನಿಶ್ಚಿತ ವರ್ತನಕ್ಕೆ ತನ್ನನ್ನೇ ದೂಷಿಸಿಕೊಳ್ಳುತ್ತಿದ್ದನೆಂದೂ ತಿಳಿದುಬರುತ್ತದೆ. ಇವನು ಚಂದ್ರಗುಪ್ತನೆನ್ನುವ ಬ್ರಾಹ್ಮಣನಿಗೆ ಶೂದ್ರಸ್ತ್ರೀಯಲ್ಲಿ ಹುಟ್ಟಿದನೆಂದೂ ಹೇಳಲಾಗಿದೆ. ಮ್ಯಾಕ್ಸ್ ಮುಲ್ಲರ್ ವಿಮರ್ಶಕನು ಇವನು ಬೌದ್ಧನೆಂದೂ, ಕೀತ್ ವಿಮರ್ಶಕನೂ ಇವನು ಶೈವನೆಂದೂ ಹೇಳಿರುವರು. ಇವನು ಪ್ರಸಿದ್ಧ ವಿಕ್ರಮಾದಿತ್ಯನು ಸಹೋದರರನೆಂದೂ, ಭಟ್ಟಿ ಕಾವ್ಯದ ಭಟ್ಟಿಯೇ ಇವನೆಂದೂ, ಹೇಳಿರುವುದು ನಂಬಲರ್ಹವಾದುವುಗಳಲ್ಲ.

ಸುಭಾಷಿತಗಳಲ್ಲಿ ಸೇರಿಸಲ್ಪಟ್ಟಿರುವ ಮೂರು ಶತಕಗಳು ಇವನದೇ. ಸಿ.ಆರ್. ನರಸಿಂಹ ಶಾಸ್ತ್ರಿ ಅವರು (Sprdies in Sanskrit Literature) ಎನ್ನುವ ಗ್ರಂಥದಲ್ಲಿ ಶತಕತ್ರಯವನ್ನು ವಿಚಾರಮಾಡಿ ಗ್ರಾಹ್ಯಾಂಶ ವಿಷಯಗಳನ್ನು ತಿಳಿಸಿರುವರು. ನೀತಿ ಶತಕ, ಶೃಂಗಾರ ಶತಕ, ಮತ್ತು ವೈರಾಗ್ಯ ಶತಕವೆನ್ನುವುದೇ ಈ ಶತಕತ್ರಯ. ಈ 3 ಶತಕಗಳಲ್ಲಿ ಎಲ್ಲಾ ಶ್ಲೋಕಗಳೂ ಬಿಡಿ ಶ್ಲೋಕಗಳು ಪರಸ್ಪರ ಸಂಬಂಧವಿಲ್ಲದಿದ್ದರೂ ಪ್ರತಿ ಶ್ಲೋಕದಲ್ಲಿಯೂ ಒಂದು ಭಾವನಾ ಪ್ರಪಂಚವನ್ನೇ ಕಲ್ಪಿಸಿರುವನು. ಕವಿತೆಯ ಸ್ವಾರಸ್ಯವೂ ರಸಭರಿತವೂ ಆಗಿದೆ.

ಒಂದು ದೊಡ್ಡ ಜ್ಞಾನ ಪ್ರಪಂಚವನ್ನು ಒಂದೊಂದು ಶ್ಲೋಕಗಳಲ್ಲಿ ಅಡಗಿಸಿರುವನು. ಇವನ ಗ್ರಂಥವನ್ನು ಧಾರ್ಮಿಕ (Gromic) ನೈತಿಕ (Didacti) ಮತ್ತು ಗೀತಗಳೆಂದೂ (Lyric) ಪರಿಗಣಿಸಬಹುದು.

ಶೃಂಗಾರವನ್ನು ನೈಚಿಕವಾಗಿ ವರ್ಣಿಸಿರುವನು ಸ್ತ್ರೀವ್ಯಕ್ತಿಯೇ ಒಂದು ಕಾಮದ ಪುಂಜ-

ಆದರ್ಶನೇ ದರ್ಶನ -ಮಾತ್ರ-ಕಾಮಾಃದೃಷ್ಟ್ವೌ ಪರಿಷ್ವಂಗರಸೈಕ ಲೋಲಾಃ
ಆಲಿಂಗತಾಯಾಂ -ಪುನರಾಮತಾಕ್ಷ್ಯಂ ಆಶಾಸ್ಮಹೇ ವಿಗ್ರಹ ಯೋರಭೇದಂ

ಅವಳಲ್ಲಿ ಎಲ್ಲವೂ ಮೋಹಜನಕ.

ಸ್ಮಿತೇನ ಭಾವೇನ ಚಲಜ್ಜಯಾಭಿಯಾ
ಪರಾಂಙ್ಮು ಖೈ ರರ್ಧ ಕಟಾಕ್ಷ ದೀಕ್ಷಣೈಃ
ವಚೋಭಿ ದೀರ್ಘ್ಯಾ ಕಲಹೇನ ಲೀಲಯಾ.
ಸಮಸ್ತ ಭಾವೈಃ ಖಲು ಬಂಧನಂ ಸ್ತ್ರೀಯಃ

ಅವಳು ಹೇಗೆ ಅಬಲೆಯಾದಳು?

ಮಾನಹಿತೇ ಕವಿವರಾ; ವಪರೀತ ಬೋಧಾಃ
ಯೇನಿತ್ಯ ಮಾಹುರಬಲಾ ಇತಿಕಾಮಿನೀನಾಂ
ಯಭಿರ್ವಿಲೋಲ ತರತಾರಕದೃಷ್ಟಿಪಾತೈಃ
ಶಕ್ರಾದಯೋಽಪಿ ವಿಜಿತಾಸ್ತ್ವ ಬಲಾಃ ಕಥಂತಾಃ

ಪ್ರಾಪಂಚಿಕ ಸುಖವನ್ನು ಇವಳು ಕೊಡುವಂತೆ ಯಾವುದೂ ಕೊಡುವುದಿಲ್ಲವೆಂದರೂ ಇವಳಲ್ಲಿಯೇ ಲೀನವಾಗಬಾರದೆಂದು ತೋರಿಸಿರುವನು

ಕಾಮಿನೀಕಾಯ ಕಾಂತಾರೇಕುಚುಪರ್ವತ ದುರ್ಗಮೇ
ಮಾಸಂಚರ ಮನಃ ಪಂಥಾಃ ತತ್ರಾಸ್ತೇ ಸ್ಮರತಸ್ಕರಃ

ಇದನ್ನೇ ಬೆಳೆಯಿಸಿ ನೀತಿಮಾರ್ಗವನ್ನು ತೋರಿಸಿರುವನು. ಹಾಗೆ ಮಾಡುವಾಗ, ಧಾರ್ಮಿಕ ದೃಷ್ಟಿಯವನು ಪ್ರಕೃತಿಯಿಂದ ಮತ್ತು ಪ್ರಾಣಿಗಳಿಂದ ಹೊಂದಬಹುದು ಎಂದು ತೋರಿಸಿರುವನು. ಅದನ್ನೇ ಮತ್ತೂ ಬೆಳೆಯಿಸಿ ವಿರಕ್ತಿಗೆ ಕಾರಣವಾಗುವಂತೆ ಬರೆದಿರುವನು.

ವಿಪಧಿಧೈರ್ಯ ಮಥಾ ಭ್ಯುದಯೋಕ್ಷಮಾ
ಸದಸಿವಾಕ್ಪಟುತಾಯುಧಿ ವಿಕ್ರಮಃ
ಯಶಸಿ ಚಾಭರುಚಿಃ ವ್ಯಸನಂ ಶ್ರುತೌ
ಪ್ರಕೃತಿ ಸಿದ್ಧ ಮಿದಂ ಹ ಮಹಾತ್ಮನಾಂ

ಆಯುರ್ವರ್ಷ ಶತಂನ್ನೃಣಾಂ ಪರಿಮಿತಂ ರಾತ್ರೌ ತತರ್ಧಂ ಗತಂ
ತಸ್ಯಾರ್ಧಸ್ಯ ಪರಸ್ಯ ಚೌರ್ಧ ಮಪರಂ ಬಾಲತ್ವ ವೃದ್ಧತ್ವ ಯೋಃ

ಶೇಷಂವ್ಯಾಧಿ ವಿಯೋಗ ದುಃಖಸಹಿತಂ ಸೇವಾದಿಭಿರ್ನೀಯತೇ
ಜೀವೇವಾರಿತರಂಗ ಬುದ್ಬುದಸಮೋ ಸೌಖ್ಯಂ ಕುತಃ ಪ್ರಾಣಿನಾಂ
ಆಕ್ರಾಂತಂ ಮರಣೇನ ಜನ್ಮ ಜರಸಾ ಯಾತ್ಯುತ್ತಮಂ ಯೌವನಂ
ಸಂತೋಷೋ ಧನಲಿಪ್ಸಯಾಶಮಸುಖಂ ಪ್ರೌಡಾಂಗನಾ ವಿಭ್ರಮೈಃ
ಲೋಕೈರ್ಮಾಂತ್ಸರಿಭಿ ಗುಣಾ ವನ ಭುಮೋ ವ್ಯಾಳೈಃ ನೃಪಾದುರ್ಜನ್ಯೈಃ
ಅಸ್ಥೈರ್ಯೇಣ ವಿಭೂತ ಯೋ ಪ್ಯಹತಾಗ್ರಸ್ತಂ ನಕಿಂ ಕೇನವಾ

ಹೀಗೆಯೇ ಅನೇಕ ಶ್ಲೋಕಗಳನ್ನು ಉದಹರಿಸಬಹುದು.

## ೮೧. ಇತರ ಸುಭಾಷಿತಗಳು

ಕಾಶ್ಮೀರದ ಶಂಕರವರ್ಮನ (ಕ್ರಿ. ಶ 883-902) ಆಶ್ರಯದಲ್ಲಿ ಭಲ್ಲಟನೂ ಒಂದು ಗ್ರಂಥವನ್ನು ಕೊಟ್ಟಿರುವನು. ಇದು ಸುಲಭ ಶೈಲಿಯಲ್ಲಿದೆ. ಇದರಂತೆ ಅದೇ ಕಾಶ್ಮೀರದ ಸಿಲ್ಹಣ ಗ್ರಂಥವೂ ಇದೆ. ಇದು ಭರ್ತೃಹರಿಯ ನೀತಿ ಶತಕವನ್ನು ಅನುಸರಿಸಿರುವಂತಿದೆ. ಸದುಕ್ತಿಕರ್ಣಾಮೃತ ವೆನ್ನುವ ಗ್ರಂಥದಲ್ಲಿ (ಕ್ರಿ. ಶ. 1205) ಇವನನ್ನು ಹೇಳಲಾಗಿದೆ. ಇವನು ಯಾಚನೆಯನ್ನು ಒಂದು ವಿಜಾತಿಯ ರೀತಿಯಲ್ಲಿ ವರ್ಣಿಸಿರುವನು.

ತಾಸ್ಯೋವಲ್ಕಾಲಂ. ಆಸ್ತಲಂಕಿಸಲಯಾನಿ. ಓಕಸ್ತರೂಣಾಂ ತಲಂ
ಮೂಲಾನಿ ಕ್ಷತ ಯೇ ಕ್ಷುದಾಂಗಿರಿನದಿತೋಯಂ ತೃಷಾ ಶಾಂತಯೇ
ಕ್ರೀಡಾಮುಗ್ಧಾ ಮೃಗೈಃ ವಿಮಾಂಸಿ ಸುಹೃಧೋನೌಕ್ತಂ ಪ್ರದೀಪಶ್ಯತಿ

ಸ್ವಾಧೀನೇ ವಿಭವೇ ತಥಾಪಿಕೃಪಣಾ ಯಾಚಂತ ಇತ್ಯದ್ಭುತಂ

ಕಾಶ್ಮೀರದ ಹರ್ಷನ (1089-1101) ಉತ್ತೇಜನದಿಂದ ಶಂಭುವು ಅನ್ಯೋಕ್ತಿ ಮುಕ್ತಾ ಲತ ಶತಕವನ್ನು 108 ಶ್ಲೋಕಗಳಲ್ಲಿ ಕೊಟ್ಟಿರುವನು. ಇವುಗಳಲ್ಲದೇ ಕವೀಂದ್ರ ವಚನ ಸಮುಚ್ಚಯ (12ನೇ ಶತಮಾನ) ವಟುದಾಸನ ಮಗನಾದ ಶ್ರೀಧರದಾಸನ ಸದುಕ್ತಿ ಕರ್ಣಾಮೃತ ಲಕ್ಷ್ಮೀ ದೇವನ ಮಗ ಮತ್ತು ಕೃಷ್ಣದೊರೆಯ ಮಂತ್ರಿಯಾದ (ಕ್ರಿ. ಶ. 1247)

ಜಲ್ಹಣನ ಸುಭಾಷಿತ ಮುಕ್ತಾವಳಿ, ದಾಮೋದರನ ಮಗ ನಾದ ಶಾರ್ಙ್ಗಧರನ (ಕ್ರಿ. ಶ. 1363) 4689 ಪದ್ಯಗಳುಳ್ಳ ಶಾರ್ಙ್ಗಧರ ಪದ್ಧತಿ, ಇದರ ಸಹಾಯದಿಂದ ಕ್ರಿ. ಶ. ೧೫ನೇ ಶತಮಾನದಲ್ಲಿ 101 ಅಧ್ಯಾಯವುಳ್ಳ ಮತ್ತು 3527ಶ್ಲೋಕಗಳುಳ್ಳ ವಲ್ಲಭದೇವನ ಸುಭಾಷಿತಾವಳಿ, ಅದೇ ಕಾಲದ ಶ್ರೀವರನ ಸುಭಾಷಿತಾವಳಿ –ಹೀಗೆ ಅನೇಕ ಗ್ರಂಥಗಳು ಇವೆ

## ೮೨. ನೀತಿಕಥೆಗಳು

ಇತಿಹಾಸಗಳಿಗೂ ಹಿಂದೆ ನಡೆದ ಕಥೆಗಳನ್ನು ಆಧಾರವಾಗಿಟ್ಟು ಕೊಂಡು ನೈತಿಕ, ಧಾರ್ಮಿಕ, ಮತ್ತು ಪಾರಮಾರ್ಥಿಕ ದೃಷ್ಟಿಯು ಮಾನವರಲ್ಲಿ ಬೆಳೆಯಲು ಅನುಕೂಲವಾಗಿರುವಂತೆ, ಕೇವಲ ನೈತಿಕ ಮತ್ತು ಧಾರ್ಮಿಕ ಬುದ್ಧಿ ಬೆಳೆಯಲು ಅನುಕೂಲವಾಗುವುದಕ್ಕಾಗಿ ಕಲ್ಪಿತ ಕಥೆಗಳನ್ನು ಆಧಾರವಾಗಿಟ್ಟುಕೊಂಡು ಅದರ ವ್ಯಾಜದಿಂದ ಜೀವನದಲ್ಲಿ ಬರುವ ಎಡರು ತೊಡರುಗಳನ್ನು ದಾಟಲು ಇರಬೇಕಾದ ಮನೋಧರ್ಮವನ್ನು ತಿಳಿಸುವ ಗ್ರಂಥಗಳೇ ಈ ಗುಂಪಿಗೆ ಸೇರಿವೆ. ಈ ನೀತಿ ಕಥೆಗಳನ್ನು ಎರಡು ವಿಭಾಗಕ್ಕೆ ಒಳಪಡಿಸಬಹುದು. 1.ಗದ್ಯಕಾವ್ಯ. ಅದರಲ್ಲೂ ಆಖ್ಯಾಯಿಕಾವಲ್ಲದ ಕಥಾ 2.ಕಥಾನಕ. ಗದ್ಯಕಾವ್ಯದ ಸ್ವರೂಪವು ಹಿಂದೆ ಹೇಳಲ್ಪಟ್ಟಿದೆ. ಇವುಗಳಲ್ಲಿ ಮುಖ್ಯವಾದುವುಗಳು. ಗುಣಾಢ್ಯನ ಬೃಹತ್ಕಥಾ. ಇದು ಶ್ಲೋಕದ ರೂಪದಲ್ಲಿದೆ. 2.ಸುಬಂಧುವಿನ ವಾಸವದತ್ತ 3.ಬಾಣನ ಕಾದಂಬರಿ 4.ದಂಡಿಯ ದಶಕುಮಾರ ಚರಿತೆ. ಕಥಾನಕದಲ್ಲಿ ಪ್ರಧಾನವಾಗಿ ಮೂರನ್ನು ಹೇಳಬಹುದು. 1.ಪಂಚತಂತ್ರ 2. ಹಿತೋಪದೇಶ ಮತ್ತು 3. ಶುಕಸಪ್ತತಿ ಕ್ರಿ. ಶ. 12ನೇ ಶತಮಾನ.

ಗದ್ಯಕಾವ್ಯಗಳಲ್ಲಿ ಮಾನವನ ದೈವಾಂಗ ಜೀವದೆ ವರ್ಣನೆಯನ್ನೂ ಮಾಡಿ ಕವಿಯು ತನ್ನ ಕವಿತೆಯ ಹಿರಿಮೆಯನ್ನು ತೋರಿಸಿಕೊಳ್ಳುವುದಲ್ಲದೆ ನೈತಿಕ ಮತ್ತು ಧಾರ್ಮಿಕ ಆದರ್ಶಗಳನ್ನೂ ಕೊಡುವನು. ಈ ಕಥೆಗಳಲ್ಲಿ ನಾವೂ ಪ್ರವಹಿಸಿ ಹೋಗಿ, ಹಾಗೆ ಅನ್ವಯಿಸುವುದರಿಂದ ನಮ್ಮ ಸುಖ ದುಃಖಗಳನ್ನೂ ಸನ್ಮಾರ್ಗವನ್ನೂ ನೋಡಿಕೊಳ್ಳುವೆವು. ಕಥಾನಕದಲ್ಲಿ ಹಾಗಲ್ಲ. ಇದು ಮೃಗಗಳ ಮತ್ತು ಪಕ್ಷಿಗಳ ಪ್ರಪಂಚ. ಆಯಾ ಮೃಗಗಳ ಮತ್ತು ಪಕ್ಷಿಗಳ ಗುಣ ವಿಶೇಷವನ್ನೂ ಚೆನ್ನಾಗಿ ಗಮನಿಸಿ ಅವರ ಆಧಾರದ ಮೇಲೆಯೇ ಕಥೆಯು ಕಲಿಸಲ್ಪಟ್ಟು ಗದ್ಯ ಪದ್ಯಾತ್ಮಕವಾಗಿದ್ದು ಮಾನವನು ಬುದ್ಧಿವಂತನಾಗಲು ದಾರಿಯನ್ನು ತೋರಿಸುತ್ತದೆ. ಮೃಗಪಕ್ಷಿಗಳೇ ಬಾಳಿ ಬದುಕಿ ವ್ಯವಹರಿಸುತ್ತವೆ. ಇಂತಹ ಸಾಹಿತ್ಯದಲ್ಲಿ ಪ್ರಥಮಸ್ಥಾನವು ಹಿಂದೂ ಸಂಸ್ಕೃತಿಗೇ ಸಂದಿದೆ. ಪಾಶ್ಚಾತ್ಯ ದೇಶಕ್ಕೆ ಹರಡಿಸುವ ಇಂತಹ ಉತ್ತಮ ಕಥೆಗಳೆಲ್ಲವೂ ಹಿಂದೂ ದೇಶದ್ದೆ. ಕೀತ್ ವಿಮರ್ಶಕನು ತನ್ನ Sanskrit Literatureಎನ್ನುವ ಗ್ರಂಥದಲ್ಲಿ ಹಾಗೆ ಹೇಳಿರುವನು (Page 360) Cosquin has done much to refend the theries to prove thet the better motived tales are often Indian. ಹಾಗೆಯೇ ನೋಡಿದರೆ Arabian Nightಕಥೆಗಳಿಗೂ ಮೂಲ ಹಿಂದೂ ಕಥೆಗಳು. ಪಂಚತಂತ್ರದ ಆಧಾರದ ಮೇಲೆ ಸಿಂದಬಾದನ ಕಥೆ ಎಂದು ಅರಬ್ಬೀದೇಶದ ಮಸೂದಿ ಎನ್ನುವ ಚಾರಿತ್ರಕನು ಹೇಳಿರುವನು. ಜೈನ ಸಂಪ್ರದಾಯದಲ್ಲಿ ಬೆಳೆದು ಬಂದಿರುವ ಕನಕ ಮಂಜರಿ ಕಥೆಯ ಆಧಾರದ ಮೇಲೆ Arabian Nightsಕಥೆಗಳು

ಆಗಿರುವುದು ನಿಶ್ಚಿತವಾಗಿ ಕಂಡುಬರುತ್ತದೆ. ಕನಕಮಂಜರಿಯು ರಾಜನ ಪ್ರೇಮವನ್ನು 6 ತಿಂಗಳು ಒಂದೇ ರೀತಿಯಲ್ಲಿ ಇಟ್ಟುಕೊಳ್ಳಲು ಒಂದು ರಾತ್ರಿಯಲ್ಲಿ ಒಂದು ಕಥೆಯನ್ನು ಪ್ರಾರಂಭಿಸಿ ಅದನ್ನೂ ಮುಗಿಸದೇ ಮೂರನೇ ರಾತ್ರಿಯಲ್ಲಿ ಮುಗಿಸಿ. ಮತ್ತೊಂದನ್ನು ಪ್ರಾರಂಭಿಸಿ ಅದನ್ನೂ ಹಾಗೆಯೇ ಮಾಡಿ ಮುಂದುವರಿಯುತ್ತಿದ್ದಳು. ಅರೇಬಿಯನ್ ಕಥೆಗಳೂ ಹೀಗಿವೆ. ಕಥಾಸರಿತ್ಸಾಗರ ಕಥೆಗಳೂ ಈ ಜಾತಿಗೆ ಸೇರಿದವುಗಳು.

ಮೊದಲು ನಮ್ಮ ಪಂಚತಂತ್ರ ಮತ್ತು ಶುಕಸಪ್ತತಿ ಕಥೆಗಳು ಪಶ್ಚಿಮ ದೇಶಗಳಿಗೆ ಹರಡಿದವು. ಇದರಲ್ಲೂ ನಾನಾ ಅಭಿಪ್ರಾಯಗಳಿವೆ. ವೇದಿನರ್ ಎನ್ನುವ ವಿಮರ್ಶಕ ಗ್ರೀಕ್ ದೇಶದ ಇಂತಹ ಕಥೆಗಳಿಗೆ ಇಂಡಿಯಾ ಆಧಾರವೆಂದರೆ ವೆಬರ್ ಮತ್ತು ಬೆನಫ್ ಮೊದಲಾದವರು ಗ್ರೀಕ್ ದೇಶದ ಪ್ರಭಾವವೇ ಹಿಂದೂ ದೇಶದ ಮೇಲೆ ಬಿದ್ದರು ಎಂದಿರುವರು. ಮತ್ತೆ ಕೆಲವರು ಗ್ರೀಕಿಗೂ ಹಿಂಧೂ ದೇಶಕ್ಕೂ ನಡುವಣ ಪ್ರದೇಶಗಳಾದ ಏಷ್ಯಾ ಮೈನರ್. ಸಿರಿಯ. ಈಜಿಪ್ಟ್ ಮೊದಲಾದ ದೇಶಗಳಿಂದ ಈ ಸಂಸ್ಕೃತಿಯು ಹರಿದು ಬಂದಿತೆಂದಿರುವರು. ಇಂತಹ ಊಹೆಗಳಿಗಿಂತಲೂ. ಮಾನವನ ಮನಸ್ಸನ್ನು ಅರಿತವರು ಒಂದೇ ಕಾಲದಲ್ಲಿ ಅಥವಾ ಭಿನ್ನ ಕಾಲಗಳಲ್ಲಿ ಪರಸ್ಪರ ಸಂಪರ್ಕ ಮತ್ತು ಸಹವಾಸವಿಲ್ಲದೆಯೂ ಒಂದೇ ವಿಧವಾದ ಭಾವನೆಗಳು ಬರುವುದು ಸಹಜವೆಂದಿರುವರು. ಆದರೆ ಬುರ್ಜೊ ಎನ್ನುವ ವೈದ್ಯನು ಅನೋಘವಾನ್ ಎನ್ನುವನ ಸಹಾಯದಿಂದ ಕ್ರಿ.ಶ. 6 ನೇ ಶತಮಾನದಲ್ಲಿ ಈ ಪಂಚತಂತ್ರವನ್ನು ಪಲ್ಲವೀ ಭಾಷೆಗೆ ಪರಿವರ್ತನೆ ಮಾಡಿದನು.ಅದಾದ ಮೇಲೆ ನಾನಾ ಭಾಷೆಗಳಲ್ಲಿ ಅದು ಪರಿವರ್ತನೆ ಹೊಂದಿ 17ನೇ ಶತಮಾನದವರಿಗೂ ಈ ಗ್ರಂಥದಲ್ಲಿ ಆಸಕ್ತಿ ಬೆಳೆದು ಬಂದಿದೆ. ಹಾಗೆಯೇ 12ನೇ ಶತಮಾನದ ಶುಕಸಪ್ತತಿಯು 14ನೇ ಶತಮಾನದಲ್ಲಿ ಪರ್ಷಿಯಾ ಭಾಷೆಗೆ ಪರಿವರ್ತನೆಯನ್ನು ಹೊಂದಿ ಅಲ್ಲಿಂದ ತುರ್ಕಿ ದೇಶಕ್ಕೂ ಅಲ್ಲಿಂದ ಇತರ ಪಾಶ್ಚಾತ್ಯ ದೇಶಗಳಿಗೂ ಹರಡಿರುವುದು ನಿಶ್ಚಿತವಾಗಿದೆ.

## ೮೩. ಗುಣಾಢ್ಯನ ಬೃಹತ್ಕಥಾ

7ನೇ ಶತಮಾನದ ಸುಬಂಧು ಮತ್ತು ಬಾಣನು ಇವನನ್ನು ಹೇಳಿರುವುದರಿಂದಲೂ, ದಂಡಿಯು ತನ್ನ ಕಾವ್ಯಾದರ್ಶದಲ್ಲಿ ಈ ಗ್ರಂಥದ ಪ್ರಾಶಸ್ತ್ಯವನ್ನು ತಿಳಿಸಿರುವುದರಿಂದಲೂ, ತ್ರಿವಿಕ್ರಮನು ತನ್ನ ಚಂಪುವಿನಲ್ಲೂ, ಸೋಮದೇವ ಸೂರಿಯು ತನ್ನಯ ಶಸ್ತಿಲಕದಲ್ಲಿ, ಈ ಗ್ರಂಥದ ವಿಷಯವಾಗಿ ತಿಳಿಸಿರುವುದರಿಂದಲೂ. ಕಾಂಬೋಡಿಯಾ ದೇಶದ ಕ್ರಿ.ಶ. 875ರ ಶಾಸನವು ಇವನಿಗಿದ್ದ ಪ್ರಾಕೃತ ಭಾಷಾದ್ವೇಷವನ್ನು ಹೇಳಿರುವುದರಿಂದಲೂ ಈ ಗುಣಾಢ್ಯನು ಕ್ರಿ. ಶ. 600ರಲ್ಲಿ ಇದ್ದಿರಬಹುದೆಂದು ಹೇಳಬಹುದು.

ಇವನ ಚರಿತ್ರೆಯು ಎರಡು ವಿಧವಾಗಿದೆ. ಒಂದು ಕಾಶ್ಮೀರದಲ್ಲಿ ಪ್ರಸಿದ್ಧಿಯನ್ನು ಹೊಂದಿದೆ. ಮತ್ತೊಂದು ನೇಪಾಳದಲ್ಲಿ. ಕಾಶ್ಮೀರದ ರೀತಿಯಲ್ಲಿ ಇವನ ಕಥೆಯು ಹೀಗಿದೆ. ಶಿವ ಪಾರ್ವತಿಯರು ಒಂದು ಕಥೆಯಲ್ಲಿ ನಿರತರಾಗಿದ್ದರು. ಪುಷ್ಪನಂತನೆನ್ನುವ ಒಬ್ಬ ಗಣ ಇದನ್ನು ಕೇಳಿ ತನ್ನ ಹೆಂಡತಿ ಜಯಳಿಗೆ ಹೇಳಿದನು. ಇವಳು ಅದನ್ನು ಮತ್ತೆ ಪಾರ್ವತಿಗೆ ಹೇಳಿದಳು. ಪಾರ್ವತಿಯು ಕೋಪಿಸಿಕೊಂಡು ಪುಷ್ಪದಂತನು ಮಾನವನಾಗಿ ಹುಟ್ಟಿ ಈ ಕಥೆಯನ್ನು ಕಾಣಭೂತಿ ಎನ್ನುವ

ಯಕ್ಷನಿಗೆ ಹೇಳಿ ನಂತರ ಶಾಪ ವಿಮುಕ್ತನಾಗಬೇಕೆಂದು ಶಪಿಸಿದಳು. ಈ ಗಣನ ಸ್ನೇಹಿತ ಮಾಲ್ಯವಂತ. ಇವನು ತನ್ನ ಸ್ನೇಹಿತನ ಪರವಾಗಿ ವಾದಿಸಿದ್ದಕ್ಕೆ ಕಾಣಭೂತಿಯಿಂದ ಈ ಕಥೆಯನ್ನು ಕೇಳಿದ ಮೇಲೆ ಶಾಪ ವಿಮುಕ್ತನಾಗೆಂದು ಅವನನ್ನು ಶಪಿಸಿದಳು.

ಕಾಲಕಳೆಯಿತು. ಪುಷ್ಪದಂತನು ವರರುಚಿ ಕಾತ್ಯಾಯನನಾಗಿ ಕೌಶಾಂಬಿಯಲ್ಲಿ ಜನಿಸಿ. ನಂದನ ಮಂತ್ರಿಯಾಗಿ ಕೊನೆಯಲ್ಲಿ ವಾನಪ್ರಸ್ಥಾಶ್ರಮವನ್ನು ಸ್ವೀಕಾರ ಮಾಡಿ ಕಾಣಭೂತಿಗೆ ಕಥೆಯನ್ನು ಹೇಳಿ ಶಾಪವಿಮುಕ್ತನಾದನು.

ಮಾಲ್ಯವಂತನು ಪ್ರತಿಷ್ಠಾನವೆನ್ನುವ ಊರಿನಲ್ಲಿ ಜನಿಸಿ ಗುಣಾಢ್ಯನೆನ್ನುವ ಹೆಸರಿನಿಂದ ಬಾಳಿ ಶಾತವಾಹನನಿಗೆ ಪ್ರಿಯವಾಗಿದ್ದನು. ಶಾತವಾಹನನೂ ಕ್ಷತ್ರಸನೂ ಪರಸ್ಪರ ಶತ್ರುಗಳು ಕ್ಷತ್ರಪನಿಗೆ ಸಂಸ್ಕೃತ ಇಷ್ಟ. ಶಾತವಾಹನನಿಗೆ ಪ್ರಾಕೃತ ಇಷ್ಟ. ಶಾತವಾಹನನು ಒಂದು ದಿನ ತನ್ನ ರಾಣಿಯೊಡನೆ ಜಲಕ್ರೀಡೆಯನ್ನು ಆಡುತ್ತಿದ್ದಾಗ ಇವನು ನೀರನ್ನು ಎರಚುತ್ತಿರಲು ಸಂಸ್ಕೃತಜ್ಞಳಾದ ಅವಳು "ಮೊದಕಂ ದೇಹಿರಾಜೇಂದ್ರ" ಎಂದಳಂತೆ. ರಾಜನು ಮೋದಕವನ್ನು ತರಿಸಿಕೊಟ್ಟ ಮೇಲೆ ಅವನು ನಕ್ಕು "ಸ್ವಾಮಿ ನಾನು ಹೇಳಿದ್ದು ಮಾಂಉದಕಂದೇಹಿ ಎಂದು. ಮೋದಕವನ್ನು ಕೇಳಲಿಲ್ಲ" ಎಂದು ಹೇಳಿದಳಂತೆ. ರಾಜನಿಗೆ ಅವಮಾನವಾಗಿ ಸಂಸ್ಕೃತವನ್ನು ಕಲಿಯಬೇಕೆಂದು ಆಶಿಸಿದನು. 6 ತಿಂಗಳಲ್ಲಿ ಕಲಿಯಬೇಕೆಂದು ಹಂಬಲಿಸಿದನು. ಶರ್ಮವರ್ಮನೆನ್ನುವ ಪಂಡಿತನು ಹಾಗೆಯೇ ಮಾಡುವೆನೆಂದನು. ಗುಣಾಢ್ಯನು ಅದು ಸಾಧ್ಯವಿಲ್ಲವೆಂದೂ. ಹಾಗಾದರೆ ತಾನು ಸಂಸ್ಕೃತವನ್ನೇ ತ್ಯಾಗಮಾಡುವೆನೆಂದು ಪಣತೊಟ್ಟನು. ಶರ್ಮವರ್ಮನು ಗೆದ್ದನು. ಗುಣಾಢ್ಯನು ವಿಂಧ್ಯಕ್ಕೆ ಹೋಗಿ ಕಾಣಭೂತಿಯನ್ನು ಕಂಡು ಅವನಿಂದ ಕಥೆಯನ್ನು ಕೇಳಿದನು. ಅದನ್ನು ಪೈಶಾಚ ಭಾಷೆಯಲ್ಲಿ ಬರೆದು ತನ್ನ ದೊರೆಗೆ ಕಳುಹಿಸಿದನು. ಅವನು ಅದನ್ನು ಉಪೇಕ್ಷಿಸಿದನು. ಅದಕ್ಕಾಗಿ ಕಾಡಿನ ಮೃಗಗಳಿಗೂ ಪಕ್ಷಿಗಳಿಗೂ ಹೇಳಿ ಹೇಳಿ ತನ್ನ ಗ್ರಂಥವನ್ನು ಹಾಳುಮಾಡುತ್ತಾ ಬಂದನು. ಈ ಕಥೆಯ ಸ್ವಾರಸ್ಯವನ್ನು ಸವಿದು ಮೃಗಪಕ್ಷಿಗಳು ಕೃಶವಾಗಿ ದೊರೆಗೆ ಆಹಾರವೇ ಇಲ್ಲದಂತಾಯಿತು. ಆದ್ದರಿಂದ ಗುಣಾಢ್ಯನು 7,00,000 ಶ್ಲೋಕಗಳುಳ್ಳ ಕಥೆಯು ಭಾಗದಲ್ಲಿ 1/7 ಭಾಗವನ್ನು ಅವನು ರಕ್ಷಿಸುವಂತಾಯಿತು. ಅದೇ ಬೃಹತ್ಕಥಾ. ನೇಪಾಳ ಮಾಹಾತ್ಮ್ಯದಲ್ಲಿ ಇವನ ಕಥೆಯೂ ಹೀಗಿಲ್ಲ. ಭೃಂಗಿಯು ಶಿವಪಾರ್ವತಿಯರ ಏಕಾಂತ ಗೃಹಕ್ಕೆ ಭೃಂಗ ರೂಪದಲ್ಲಿ ಪ್ರವೇಶಿಸಿ ಅದರಿಂದ ಶಾಪಗ್ರಸ್ತನಾಗಿ ಮಧುರೆಯಲ್ಲಿ ಗುಣಾಢ್ಯನಾಗಿ ಹುಟ್ಟಿದನು. ಉಜ್ಜಯಿನಿಯ ಮದನನೆಂದು ಹೆಸರುಳ್ಳ ದೊರೆಯಲ್ಲಿ ಪಂಡಿತನಾದನು. ಶಾರ್ವವರ್ಮನಿಂದ ಜಿತನಾದನು. ಪುಲಸ್ತ್ಯ ಋಷಿಯಿಂದ ಪೈಶಾಚ ಭಾಷೆಯಲ್ಲಿ ಗ್ರಂಥವನ್ನು ಬರೆಯುವಂತೆ ಆಜ್ಞಾಪಿಸಲ್ಪಟ್ಟನು. ಹಾಗೆಯೇ ಬರೆದನು. ಅದೇ ಬೃಹತ್ಕಥಾ.

ಈ ಗ್ರಂಥವು ಈಗಿಲ್ಲ. ಆದರೆ ಬುಧ ಸ್ವಾಮಿಯು ತನ್ನ ಬೃಹತ್ಕಥಾ ಶ್ಲೋಕ ಸಂಗ್ರಹದಲ್ಲಿ ಇದರ ಕಥೆಯನ್ನು ತೋರಿಸಿರುವನು. ಇದರಲ್ಲಿ 28 ಸರ್ಗಗಳು ಲಭ್ಯವಾಗಿವೆ. 4539 ಪದ್ಯಗಳಿವೆ. ಇವನ ಕಾಲ ಕ್ರಿ. ಶ. 12ನೇ ಶತಮಾನ. ಇದರ ಕಥೆಯು ಹೀಗಿದೆ. ಪ್ರದ್ಯೋತನೆಂಬ ದೊರೆಯು ಸತ್ತಮೇಲೆ ಅವನ ಹಿರಿಯ ಮಗನಾದ ಗೋಪಾಲನಿಗೆ ಪಟ್ಟಾಭಿಷೇಕವಾಗಬೇಕಾಗಿದ್ದಿತು.

ಆದರೆ ತಂದೆಯ ಮರಣಕ್ಕೆ ಇವನೇ ಕಾರಣನೆಂದು ಅಪವಾದಕ್ಕೆ ಗುರಿಯಾಗಿ ತನ್ನ ತಮ್ಮನಾದ ಪಾಲಕನಿಗೆ ರಾಜ್ಯವನ್ನು ಒಪ್ಪಿಸಿದನು. ಇವನು ಮಾತಂಗ ದೊರೆಯ ಮಗಳು ಸುರಸಮಂಜರಿಯನ್ನು ಮದುವೆಯಾದನು. ಇವಳು ವಿದ್ಯಾಧರ ಸ್ತ್ರೀ. ಇಪ್ಪಕನೆಂಬೊಬ್ಬ ವಿದ್ಯಾಧರನು ಇವಳನ್ನು ಅಪಹರಿಸಿದನು. ಮತ್ತೊಬ್ಬನು ಇವಳನ್ನು ಬಂಧನದಿಂದ ಬಿಡಿಸಿದನು. ನರವಾಹನನೆನ್ನುವ ದೊರೆಯು ಇವರಿಬ್ಬರ ಮದುವೆಯನ್ನು ಅಂಗೀಕರಿಸಿದನು. ಋಷಿಗಳು ಈ ಚಕ್ರವರ್ತಿಯ ನ್ಯಾಯ ಪಕ್ಷಪಾತವನ್ನು ಶ್ಲಾಘಿಸಿ ಅವನಿಂದ 26 ಮದುವೆ ಕ್ರಮಗಳನ್ನು ತಿಳಿದುಕೊಂಡರು.

ಕಾಶ್ಮೀರ ಪ್ರತಿಯಲ್ಲಿಯೂ ಕಥಾ ಭಾಗವೂ ಸುಮಾರು ಹೀಗೆಯೇ ಇದೆ. ಮೂಲ ಬೃಹತ್ಕಥಾದಿಂದ ಕಥಾಸರಿತ್ಸಾಗರ ಮತ್ತು ಬೃಹತ್ಕಥಾಮಂಜರಿ ಬಂದಿವೆಂದು ಹೇಳುವುದು ತಪ್ಪು. ಕ್ಷೇಮೇಂದ್ರರ ಬೃಹತ್ಕಥಾಮಂಜರಿಯಲ್ಲಿಯೂ, ಸೋಮದೇವನ ಕಥಾ ಸರಿತ್ಸಾಗರದಲ್ಲಿಯೂ, ಬೃಹತ್ಕಥೆಯ ಕಥೆಯು ಇದ್ದರೂ, ಬರೆದಿರುವ ಕ್ರಮ ಮತ್ತು ಪ್ರಕರಣಗಳು ಬೇರೆ ಬೇರೆಯಾಗಿಯೂ, ಹೆಸರುಗಳು ಬೇರೆಯಾಗಿಯೂ ಇವೆ.

## ೮೪. (35) ಸುಬಂಧುವಿನ ವಾಸವ ದತ್ತ

ಬಾಣನು ಸುಬಂಧುವನ್ನು ನಮೂದಿಸಿರುವನು. ಸುಬಂಧವೂ ವಿಕ್ರಮಾದಿತ್ಯನನ್ನು ತೋರಿಸಿರುವನು. ಇವನು ಶಕಪುರುಷನಾಗಿ ಅವನ ಆಸ್ಥಾನದಲ್ಲಿ ಸುಬಂಧುವು ಇದ್ದಿದ್ದರೆ ಇವನ ಕಾಲವನ್ನು ಕ್ರಿ. ಪೂ. 56ರಲ್ಲಿ ಇಡಬೇಕಾಗುತ್ತದೆ. ಆದರೆ ಇದು ಸರಿಯಲ್ಲ. ಭೋಜನು ತನ್ನ ಶೃಂಗಾರ ಪ್ರಕಾಶದಲ್ಲಿ ಲೀಲಾವತಿ ಆಖ್ಯಾಯಕಾವನ್ನೂ ಹೇಳಿರುವನು. ಇದು ಈಗಿಲ್ಲ. ಕನ್ನಡ ಕವಿ ನೇಮಿನಾಥನು ಈ ಕಥೆಯ ಆಧಾರದ ಮೇಲೆ ಒಂದು ಆಖ್ಯಾಯಿಕಾವನ್ನೂ ಬರೆದಿರುವನು. ಆದರೆ ಲೀಲಾವತಿ ಎನ್ನುವ ಹೆಸರನ್ನು ವಾಸವದತ್ತ ಎಂದಿರುವನು. ಇದು ಸುಬಂಧುವಿನ ಕಥೆಯಂತಿದೆ. ವಾಮನನು ತನ್ನ ಕಾವ್ಯಾಲಂಕಾರದಲ್ಲಿ ಸುಬಂಧುವನ್ನು ನಮೂದಿಸಿರುವನು. ವಾಚಸ್ಪತಿ ಮಿಶ್ರನ ಭಾಮತಿಯಲ್ಲಿರುವ ಶ್ಲೋಕದಿಂದ ಸುಬಂಧುವಿನ ಕಾವ್ಯಕ್ಕೆ ಅನಾಮಧೇಯ ಒಂದು ವ್ಯಾಖ್ಯಾನವು ಇರುವಂತಿದೆ. ಸುಬಂಧುವು ಭವಭೂತಿಯನ್ನು ಅನುಕರಣ ಮಾಡಿರುವುದು ಚೆನ್ನಾಗಿ ಕಾಣುತ್ತದೆ. ಆದ್ದರಿಂದ ಬಾಣ ವಾಮನರ ಮಧ್ಯಕಾಲದಲ್ಲಿ ಅಂದರೆ 8ನೇ ಶತಮಾನದ ಪೂರ್ವ ಭಾಗದಲ್ಲಿ ಇದ್ದಿರಬೇಕು. ಭಾಷೆಯು ಬಹಳ ಗಂಭೀರವಾಗಿದೆ. ಕಥೆ ಹೇಳುವುದರಲ್ಲಿ ಚಾತುರ್ಯ ಮತ್ತು ಪಾಂಡಿತ್ಯವು ಕಂಡುಬರುತ್ತದೆ. ಕಥೆಯು ಹೀಗಿದೆ –ಚಿಂತಾಮಣಿ ದೊರೆಯ ಮಗ ಕಂದರ್ಪಕೇತು. ಮಕರಂದನು ಅವನ ಸ್ನೇಹಿತ. ಶೃಂಗಾರ ಶೇಕರನ ಮಗಳು ವಾಸವದತ್ತ. ಅವಳ ಸಖಿ ತಮಾಲಿಕಾ. ಇವಳು ವಿದ್ಯಾಧರ ರಾಜಕುಮಾರನಾದ ಪುಷ್ಪಕೇತುವಿಗೆ ನಿಶ್ಚಿತವಾಗಿದ್ದಳು. ಕೊನೆಗೆ ಇವಳು ಕಂದರ್ಪ ಕೇತುವನ್ನು ಮದುವೆಯಾಗಿ ಸುಖವಾಗಿರುವಳು.

ಬಾಣನ ಕಾದಂಬರಿ ಮತ್ತು ದಂಡಿಯ ದಶಕುಮಾರ ಚರಿತೆಯು ಹಿಂದೆ ಪ್ರಸ್ತಾಪಿಸಲ್ಪಟ್ಟಿವೆ.

## ೮೫. (36) ಪಂಚತಂತ್ರ- ವಿಷ್ಣುಶರ್ಮ

ಅಮರ ಶಕ್ತಿ ಎನ್ನುವ ರಾಜನ ಮಕ್ಕಳು ಅನೀತಿ ಮಾರ್ಗದಲ್ಲಿ ಹೋಗುತ್ತಿರುವುದನ್ನು ಕಂಡು ಅವರನ್ನು 6 ತಿಂಗಳಲ್ಲಿ ಸರಿಯಾದ ದಾರಿಗೆ ತರುವುದಾಗಿ ಹೇಳಿದ ವಿಷ್ಣುಶರ್ಮನಿಗೆ ಅಮರ ಶಕ್ತಿಯು ತನ್ನ ಮಕ್ಕಳನ್ನು ಒಪ್ಪಿಸಿದನು. ಇವರಿಗಾಗಿ ವಿಷ್ಣುಶರ್ಮನು ಬರೆದ ಕಥೆಯೇ ಪಂಚತಂತ್ರ. ಇದರ ಕಥೆಯು ಹೀಗಿದೆ. ಪಿಂಗಳಕನೆನ್ನುವ ಸಿಂಹ. ಸಂಜೀವಕನೆನ್ನುವ ಗೂಳಿ ಸಿಂಹವು ಗೂಳಿಯನ್ನು ಒಂದು ಪ್ರಕರಣದಲ್ಲಿ ರಕ್ಷಿಸಿ ತನ್ನ ಮಿತ್ರನನ್ನಾಗಿ ಮಾಡಿಕೊಂಡಿತು. ಆದರೆ ಆ ಸಿಂಹದ ಮಂತ್ರಿಗಳಾದ ಕರಟಕ. ದಮನಕರೆನ್ನುವ ಎರಡು ನರಿಗಳಿಗೆ ಇದು ಹಿಡಿಸಲಿಲ್ಲ. ಇವರಿಬ್ಬರಿಗೂ ಜಗಳ ತಂದು ಗೂಳಿಯು ಸಾಯುವಂತೆ ಮಾಡಿದರೆ ತಮಗೆ ಮೃಷ್ಟಾನ್ನ ಭೋಜನವು ಸಿಗುವುದೆಂಬ ಆಕಾಂಕ್ಷೆ. ಇದರ ಆಧಾರದ ಮೇಲೆ ಕಥೆಯು ಬೆಳೆದಿದೆ. ಇಲ್ಲಿ ಐದು ಅಧ್ಯಾಯಗಳಿವೆ.

ಭಾಷೆಯು ಸುಖವಾಗಿದೆ. ಕೆಲವು ಶ್ಲೋಕಗಳಲ್ಲಿ ಸಮಸ್ತ ಪದಗಳು ಉದ್ದವಾಗಿವೆ. ಕೆಲವು ಕಡೆ ಹಾಸ್ಯ ರಸವಿದೆ. ಸಾಮಾನ್ಯ ಮಾತನಾಡುವ ಭಾಷೆಯಲ್ಲಿದೆ. ಕರ್ಮಣಿ ಪ್ರಯೋಗವು ಹಿತವಾಗಿದೆ. ಉತ್ತಮ ಶ್ಲೋಕಗಳು ಅನೇಕವಿದೆ.

## ೮೬ (37) ಹಿತೋಪದೇಶ ನಾರಾಯಣ

ಪಂಚತಂತ್ರದಿಂದ ಹುಟ್ಟಿದ ಗ್ರಂಥವಿದು. ಕವಿ. ನಾರಾಯಣ. ದೊರೆಯ ಹೆಸರು ಧವಳ ಚಂದ್ರ. ಕಾಲ ಕ್ರಿ. ಶ. 1373. ಪಂಚತಂತ್ರವನ್ನು ಅನುಕರಿಸಿದ್ದರೂ ಹೊಸ ವಿಷಯಗಳನ್ನು ಕವಿಯು ಸೇರಿಸಿಕೊಂಡಿರುವನು. ನೀತಿ ವಿಷಯದಲ್ಲಿ ಕಾಮಂದ ಕೀಯ ನೀತಿ ಸಾರವೇ ಆಘಾತವಾಗಿದೆ. ಭಾಷೆಯು ಸುಲಭವಾಗಿದೆ. ಅನೇಕ ಶ್ಲೋಕಗಳು ಈ ಕವಿಯ ಕಲ್ಪಿತಗಳೇ.

## ೮೭. ಚಾರಿತ್ರಕ ಕಾವ್ಯ

1) ಹಿಂದೂ ಸಂಸ್ಕೃತಿಯಲ್ಲಿ ಪ್ರಾಚೀನ ಕಾಲದಿಂದಲೂ ಶುದ್ಧವಾದ ಚಾರಿತ್ರಕ ದೃಷ್ಟಿಯು ಬೆಳೆದು ಬರಲಿಲ್ಲ. ಪ್ರಾಚೀನ ಕಾಲದಿಂದಲೂ ಯೋಗಮಾರ್ಗದಲ್ಲಿ ಅಭಿರುಚಿಯುಳ್ಳ ಈ ಜನಾಂಗದಲ್ಲಿ ಪ್ರಾಕೃತಿಕ ಸ್ವಾಭಾವಿಕ ದೃಷ್ಟಿಯು ಬೆಳೆದು ಬಾರದಿದ್ದರೂ ಕ್ರಿ. ಪೂ. 4ನೇ ಶತಮಾನದಿಂದ ಗ್ರೀಕ್ ಪಾರ್ಥಿಮನ್. ಶಕರು. ಕುಶನ್ನರು. ಇವರ ಧಾಳಿಯಿಂದಲೂ ಅದಾದ ಮೇಲೆ ರಾಜರುಗಳ ಪರಸ್ಪರ ದ್ವೇಷ ವೈಯುಕ್ತಿಕ ಶಕ್ತಿಯನ್ನು ಹೆಚ್ಚು ಮಾಡಿಕೊಳ್ಳಲು ಪ್ರಯತ್ನ ಇತ್ಯಾದಿಗಳಿಂದ ಸಮಾಜ ಶಕ್ತಿಯು ಬೆಳೆಯಲಿಲ್ಲ.

2) ಮಾನಸಿಕವಾಗಿಯೂ "ಧಾತಾಯುಥಾ ಪೂರ್ವಮಕಲ್ಪಯತ್" ಎಂದು ವೇದವು ಹೇಳುತ್ತಿರುವಂತೆ ಎಲ್ಲವೂ ಕರ್ಮಬದ್ಧವೆನ್ನುವ ಭಾವವು ರಕ್ತಗತವಾಗಿ ಸ್ವಾಭಾವಿಕವಾಗಿ

ಮುಂದು ಮುಂದೆ ಮಾನಸಿಕ ಶಕ್ತಿ ಮತ್ತು ನಾಗರೀಕತೆ ಬೆಳೆಯುತ್ತದೆ ಎನ್ನುವುದರಲ್ಲಿ ನಂಬಿಕೆಯೂ ಇರಲಿಲ್ಲ.

3) ಧರ್ಮಸಂರಕ್ಷಣಕ್ಕಾಗಿ ಪರಮಾತ್ಮನ ಅವತಾರ, ಅನೇಕ ಬುದ್ಧರಿದ್ದುದು, ಜೈನ ತೀರ್ಥಂಕರರ ಅವತಾರ ಇತ್ಯಾದಿಗಳಲ್ಲಿ ಮಹಾ ವಿಶ್ವಾಸವಿದ್ದು ಯಥಾರ್ಥ ಸ್ಥಿತಿಯಲ್ಲಿ ಗಮನವಿರಲಿಲ್ಲ.

4) 5ನೇ ಶತಮಾನದ ಬೌದ್ಧರ ಮಹಾವಂಶವೆನ್ನುವ ಮಹಾಯಾನ ಸಂಪ್ರದಾಯದ ಚಾರಿತ್ರಕ ಕಾವ್ಯದಲ್ಲಿಯೂ ಅನ್ಯಾದೃಶವಾದ, ಅಸಂಬದ್ಧವಾದ ಮತ್ತು ನಂಬಲಾಗದ ವಿಷಯಗಳು ಸೇರಿಸಲ್ಪಟ್ಟು ಅದರಲ್ಲಿರುವ ಚಾರಿತ್ರಕ ವಿಷಯಗಳಲ್ಲೇ ನಂಬಿಕೆಯೇ ಕಳೆದು ಹೋಗಿರುವಂತಿದೆ. ಹಾಗೆಯೇ ಜೈನರ ಪಟ್ಟಾವಳಿಯಲ್ಲಿಯೂ ಇದೇ ಕ್ರಮವಿರುತ್ತದೆ. ಅಗ್ನಿಪುರಾಣ, ವಾಯುಪುರಾಣಾದಿಗಳಲ್ಲಿ ಚಾರಿತ್ರಕ ವ್ಯಕ್ತಿಗಳ ವಿಷಯವು ಹೇಳಲ್ಪಟ್ಟರೂ ಅದರಲ್ಲಿ ಅತಿಶಯೋಕ್ತಿಯೇ ಕಂಡುಬರುತ್ತದೆ. ಮುಖ್ಯವಾಗಿ ಗಣ್ಯವ್ಯಕ್ತಿಗಳಲ್ಲಿ ಭಕ್ತಿ ಭಾವವು ಹುಟ್ಟಲೆನ್ನುವ ಸದುದ್ದೇಶವೂ ಇಂತಹ ಗ್ರಂಥಗಳಲ್ಲಿ ಕಂಡುಬಂದರೂ, ಚಾರಿತ್ರಕವಾಗಿ ಇವು ಅಷ್ಟು ಪ್ರಯೋಜನಕಾರಿಯಾಗಿಲ್ಲ. ಚಂದ್ರಗುಪ್ತನ ಅಡಿಗೆ ಮನೆಗೆ ಮೃಗಗಳು ತಾವಾಗಿ ಹೋಗಿ ಬಲಿಯಾಗುತ್ತಿದ್ದವಂತೆ. ಅಶೋಕನ ಅಹಿಂಸಾ ತತ್ತ್ವೋಪದೇಶವನ್ನು ಸಮರ್ಥಿಸುವ ಪ್ರಯತ್ನವಿದು.

5) ಇಷ್ಟಾದರೂ ಶಿಲಾಶಾಸನ, ದೇವಸ್ಥಾನ ಇತ್ಯಾದಿಗಳಲ್ಲಿ ಕೆತ್ತಿಸಿರುವ ಶ್ಲೋಕಗಳು, ತಾಮ್ರಶಾಸನ, ಸತ್ತವರ ಸಮಾಧಿಯಲ್ಲಿರುವ ಚರಮ ಶ್ಲೋಕಗಳು ಇವುಗಳಿಂದ ಕೆಲವು ಚರಿತ್ರೆ ವಿಷಯಗಳು ದೊರೆತಿವೆ.

6) ಕವಿತೆಯು ಇವುಗಳಲ್ಲಿ ಶ್ಲಾಘ್ಯವಿಲ್ಲದಿದ್ದರೂ, ಆತ್ಮಪ್ರಶಂಸೆಗಾಗಿ ಕೆಲವು ಶ್ಲೋಕಗಳು ಈ ಶಾಸನಗಳಲ್ಲಿ ಕಂಡುಬರುತ್ತವೆ. ಉದಾಹರಣೆಗಾಗಿ ಕ್ರಿ. ಶ. 8ನೇ ಶತಮಾನದ ರಾಮನೆನ್ನುವರು ತಾನು ಕವೀಶ್ವರನೆಂದು ಹೇಳಿಕೊಂಡು, ಸರಸ್ವತಿಯು ತಾನು ಹುಟ್ಟುವಾಗಲೇ ತನ್ನ ನಾಲಿಗೆಯಲ್ಲಿ ವಾಸಿಸಲು ಪ್ರಾರಂಭಿಸಿದ್ದರಿಂದ ತಾಯಿಯ ಹಾಲನ್ನು ಕುಡಿಯಲು ಮರೆತೆನೆಂದು ಹೇಳಿಕೊಂಡಿರುವನು. 9ನೇ ಶತಮಾನದ ಲಲಿತಾ ದೇವನು ಒಂದೇ ಸ್ತೋತ್ರದಲ್ಲಿ ರಾಮಕವಿಯಂತೆ ಶಿವಪರವಾಗಿಯೂ, ಪಾರ್ವತೀ ಪರವಾಗಿಯೂ ಅರ್ಥಬರುವಂತೆ ಮಾಡಿ ತನ್ನ ಪಾಂಡಿತ್ಯದ ಹೆಮ್ಮೆಯನ್ನೂ ತೋರಿಸಿಕೊಂಡಿರುವನು.

7) ಬಾಣನು ಹರ್ಷಚರಿತ್ರೆಯಲ್ಲಿ ಚರಿತ್ರೆಗಿಂತಲೂ ಕವಿತಾದೃಷ್ಟಿಯೇ ಜಾಸ್ತಿಯಾಗಿದ್ದು ಸ್ತೋತ್ರ ಪ್ರಿಯತೆಯನ್ನು ತೋರಿಸುತ್ತದೆ.

8) ಕ್ರಿ. ಶ. 750ರಲ್ಲಿ ವಾಕ್ಪತಿ ರಾಜನು ತನ್ನ ದೊರೆ ಕಮಾಜಿನ ಯಶೋವರ್ಮನ ಚರಿತ್ರೆಯನ್ನು ಮಹಾರಾಷ್ಟ್ರ ಪ್ರಾಕೃತದಲ್ಲಿ ಕೊಟ್ಟಿರುವನು. ಇಲ್ಲಿಯೂ ಚಾರಿತ್ರಕ ದೃಷ್ಟಿಗಿಂತಲೂ ಕವಿತಾ ದೃಷ್ಟಿಯೇ ಅಧಿಕವಾಗಿದೆ.

9) ಶಂ ಕುಶನ ಭುವನಾಭ್ಯುದಯ ದಲ್ಲಿ ಮರ್ಮ ಮತ್ತು ಉತ್ಪಲವೆನ್ನುವ ಇಬ್ಬರು ದೊರೆಗಳ ಭೀಕರ ಯುದ್ಧ ವರ್ಣನೆ ಇದೆ. ಈ ದೊರೆಗಳ ಕಾಲ ಕ್ರಿ. ಶ. 850

10) ಕ್ರಿ. ಶ. 1005ರ. ಪದ್ಮಗುಪ್ತನ ನರಸಿಂಹ ಸಾಹಸಾಂಕ ಚರಿತೆ. ಇದು 18 ಸರ್ಗಗಳ ಕಾವ್ಯ ಶಶಿಪ್ರಭಾ ಎನ್ನುವ ಯಾವಳೋ ಕಲ್ಪಿತಕನ್ಯೆಯನ್ನು ವರಿಸುವಂತೆ ಹೇಳುವ ವ್ಯಾಜದಿಂದ ತನ್ನ ದೊರೆ ಮಾನವ ಸಿಂಧುರಾಜ ನರಸಿಂಹನ ಚರಿತೆಯನ್ನು ಹೇಳಿರುವನು.

11) ಬಿಲ್ಹಣನು ಕರ್ಣಸುಂದರಿ - ಯಾವಳೋ ಚಾಲುಕ್ಯರಾಜಕುಮಾರಿಯು ಒಬ್ಬ ವಿದ್ಯಾಧರನನ್ನು ಮದುವೆ ಮಾಡಿಕೊಂಡಿದ್ದನ್ನು ವರ್ಣಿಸಿ ಆ ವ್ಯಾಜದಿಂದ ತನ್ನ ದೊರೆ ವಿಷಯವನ್ನು ತಿಳಿಸಿರುವನು.

12) ಸರಿಯಾದ ಚಾರಿತ್ರಕ ಕಾವ್ಯವೆಂದಿರೆ ಇದೇ ಬಿಲ್ಹಣನ ವಿಕ್ರಮಾಂಕದೇವ ಚರಿತಂ (ಕ್ರಿ ಶ. 1088) ಇದರ ವಿಷಯವನ್ನೂ ಈಗಾಗಲೇ ಹೇಳಲಾಗಿದೆ. (21ನೇ ರವಿ)

13) ಇದರಂತೆಯೇ ಕಲ್ಹಣನ ರಾಜತರಂಗಿಣಿ -(ಕ್ರಿ ಶ. 1100-1165) 22ನೇ ರವಿ.

## ಆಆ. ಸಂದೇಶ ಕಾವ್ಯಗಳು

1. ಕಾಳಿದಾಸನ ಮೇಘದೂತ -ಇದರ ವಿಮರ್ಶೆಯು ಈಗಾಗಲೇ ಕೊಟ್ಟಾಗಿದೆ.

2. ಘಟಕರ್ಪರ -ಮೇಘದೂತಕ್ಕೆ ಪ್ರತಿಸಂದೇಶ

3. ಹಂಸಸಂದೇಶ -ಇದು ವೆಂಕಟನಾಥನು ಬರೆದಿದ್ದು -ಇವನ ಕಾಲ 4ನೇ ಶತಮಾನ (29ನೇ ರವಿ)

### ಸಾಮಾನ್ಯ ಸಮೀಕ್ಷೆ

ಸಂದೇಶ ಕಾವ್ಯವನ್ನು ದೂತವಾಕ್ಯವೆಂದು ಹೇಳಬಹುದು. ಸಮರ್ಥನಾದ ದೂತನನ್ನು ಒಂದು ಕಾರ್ಯನಿರ್ವಹಣೆಗೆ ಕಳುಹಿಸುವಾಗ ಅವನ ಮೂಲಕ ಒಬ್ಬನು ಕಳುಹಿಸುವ ಸಂದೇಶವೇ ದೂತನ ವಾಕ್ಯವಾಗಿ ಹೇಳಲ್ಪಡುವುದರಿಂದ ಇಂತಹ ಕಾವ್ಯಗಳಿಗೆ ಸಂದೇಶ ಕಾವ್ಯಗಳೆನ್ನುವುದೂ ಉಂಟು. ವೇದದಲ್ಲಿ ದೂತವೃತ್ತಿಯಲ್ಲಿ ನಿರತರಾಗುವವರ ಐತಿಹ್ಯವು ಹೇಳಲ್ಪಡುತ್ತಿದೆ. ಗರುಡನು ಅಮೃತ ತರುವುದಕ್ಕೆ ದೂತನು. ಅಗ್ನಿಯು ಸಮಸ್ತ ದೇವತೆಗಳಿಗೆ ಹವ್ಯವಾಹನ, ಪಿತೃಗಳಿಗೆ ಕವ್ಯವಾಹನ.

ದೂತ ವೃತ್ತಿಗೂ ದೂತ ಸಂದೇಶಕ್ಕೂ ವ್ಯತ್ಯಾಸವಿದೆ. ಒಂದು ಕೆಲಸಕ್ಕಾಗಿ ದೂತ ವೃತ್ತಿ ಒಬ್ಬನ ಅಭಿಪ್ರಾಯವನ್ನು ಹೊತ್ತು ಅದನ್ನು ಇದ್ದಂತೆ ಮತ್ತೊಬ್ಬನಿಗೆ ತಿಳಿಸುವಂತಿದ್ದರೆ ಅದು ದೂತಸಂದೇಶ. ಇಂತಹ ದೂತನು ಸಮರ್ಥನೂ ಜ್ಞಾನಿಯೂ ಆಗಿರಬೇಕು. ರಾಮಾಯಣದಲ್ಲಿ ಆಂಜನೇಯ ಶ್ರೀರಾಮನ ಸಂದೇಶವನ್ನು ಸೀತೆಗೆ ಒಯ್ದನು. ಇಂತಹ ಸಂದೇಶಗಳಲ್ಲಿ ಕಳುಹಿಸುವವನ ಮನೋಧರ್ಮವೇ ಪ್ರಧಾನ. ಕಾವ್ಯದ ಮಟ್ಟದಲ್ಲಿ ಇರುವ ಸಂದೇಶ ಕಾವ್ಯವೆಂದರೆ ಮೇಘ ಸಂದೇಶವೇ. ಇದು ಒಬ್ಬ ಯಕ್ಷನು ತನ್ನ ಪ್ರೇಯಸಿಗೆ ಕಳುಹಿಸಿದ ಸಂದೇಶ. ಘಟಕರ್ಪರನು ತನ್ನ 22 ಶ್ಲೋಕಗಳಿಂದ ಆ ಪ್ರೇಯಸಿಯು ತನ್ನ ಪ್ರಿಯನಿಗೆ ಕಳುಹಿಸಿದ ಪ್ರತಿಸಂದೇಶವನ್ನು ಕೊಟ್ಟಿರುವನು ಕಾಳಿದಾಸನಿಗೆ ಆದರ್ಶವಾಗಿದ್ದುದ್ದು ಹನುಮತ್ಸಂದೇಶ ತನ್ನ ಕವಿತಾ ಶಕ್ತಿಯನ್ನು ತೋರಿಸಿಕೊಳ್ಳಲು ಘಟಕರ್ಪರನು ಪ್ರತಿಸಂದೇಶವನ್ನು ಕೊಟ್ಟನು. ಇದಕ್ಕೆ ಅಭಿನವಗುಪ್ತ ವ್ಯಾಖ್ಯಾನವಿದೆ. ಇವೆರಡಕ್ಕೂ ಮಿಗಿಲಾಗಿ ವೆಂಕಟನಾಥನು ಹರಿ ಸಂದೇಶ ಕಾವ್ಯವನ್ನು ಕೊಟ್ಟಿರುವನು. ಇದಕ್ಕೆ ಎರಡು ವ್ಯಾಖ್ಯಾನಗಳಿವೆ. ಒಂದು ಲಘು ವ್ಯಾಖ್ಯಾ. ಎರಡನೆಯದು ಶ್ರೀ ಕೃಷ್ಣ ಬ್ರಹ್ಮ ತಂತ್ರ ಪರಕಾಲ ಸ್ವಾಮಿಗಳಿಂದ ರಚಿತವಾದುದು. ಇದರ ಹೆಸರು "ರಸಾಸ್ವಾದಿನಿ". ಮೈಸೂರು ದೊರೆಯ ಆಸ್ಥಾನ ವಿದ್ವಾನ್ ತರ್ಕತೀರ್ಥ ಪಂಡಿತ ರತ್ನ ಕಸ್ತೂರಿ ರಂಗಾಚಾರ್ಯರು ಇದಕ್ಕೆ ಒಂದು ಟಿಪ್ಪಣಿಯನ್ನು ಕೊಟ್ಟಿರುವರು. ಈ ವ್ಯಾಖ್ಯಾನ ಮತ್ತು ಟಿಪ್ಪಣಿ ಉದ್ದೇಶವೂ ಮಿಕ್ಕ ಸಂದೇಶ ಕಾವ್ಯಗಳಿಗೂ ಇದಕ್ಕೂ ಇರುವ ವೈಲಕ್ಷಣ್ಯ ತೋರಿಸುವುದೇ ಎಂದು ಕಾಣುತ್ತದೆ. ಹನುಮಂತನಿಂದ ಸೀತೆಯು ಅಭೀಷ್ಟವನ್ನು ತಿಳಿದು ರಾಮನು ಒಂದು ಹಂಸದ ಮೂಲಕ ತಾನು ಶೀಘ್ರದಲ್ಲಿಯೇ ಬಂದು ಅವಳ ಬಂಧನವನ್ನು ಬಿಡಿಸುವೆನೆನ್ನುವುದೇ ಇಲ್ಲಿರುವ ಸಂದೇಶ. ವರ್ಷಾಕಾಲದ ಕಾರ್ಮೋಡವು ಯಕ್ಷನಿಗೆ ದೂತನಾದರೆ, ಸ್ವಚ್ಛ ಶರತ್ಕಾಲದಲ್ಲಿ ವಿಹರಿಸುವ ನಿರ್ಮಲ ಎರಡು ಲೆಕ್ಕಗಳುಳ್ಳ ಹಂಸವು ರಾಮನಿಗೆ ದೂತನಾಗಿದೆ. ಕರ್ತವ್ಯ ಭ್ರಷ್ಟವಾದುದರಿಂದ ಶಾಪಗ್ರಸ್ಥನಾದ ಯಕ್ಷನು ಮೇಘಸಂದೇಶದಲ್ಲಿದ್ದರೆ ಸದ್ಗುಣ ಸಂಪನ್ನನಾದ ಶ್ರೀರಾಮನು ಇಲ್ಲಿ ನಾಯಕನು. ವಿಪ್ರಲಂಭ ಶೃಂಗಾರವು ಅಲ್ಲಿ ಪ್ರಧಾನ ರಸವಾದರೆ ಇಲ್ಲಿ ಶಾಂತಿರಸಕ್ಕೆ ವಿಭಾವಾನು ಭಾಗಗಳು ಪ್ರಾಧಾನ್ಯತೆಯನ್ನು ಕೊಟ್ಟಿದೆ. ಮೋಕ್ಷ ಸಂದೇಶದಲ್ಲಿ ರಸಿಕರಿಗೆ ಸವಿಯೂಟ ಸಿಕ್ಕಿ ವಾಚ್ಯಾರ್ಥಕ್ಕೆ ಪ್ರಾಧಾನ್ಯತೆ ಇದ್ದರೆ ಹಂಸಸಂದೇಶದಲ್ಲಿ ಅರಿತರ್ಗತಾರ್ಥ ಪ್ರಧಾನವಾದ ಧ್ವನಿಗೆ ಮೊದಲನೇ ಸ್ಥಾನವಿದೆ. ಒಟ್ಟಿನಲ್ಲಿ ಮೇಘಸಂದೇಶವು ಕೇವಲ ಶೃಂಗಾರಕ್ಕೆ ಮಾನ್ಯತೆಯನ್ನು ಕೊಟ್ಟರೆ ಹಂಸಸಂದೇಶವು "ಶಾಂತೋಪಿನವಮೋರಸಃ" ಎನ್ನುವುದಕ್ಕೆ ನಿದರ್ಶನವಾಗಿ ವೇದಾಂತ ಗ್ರಂಥವಾಗಿಯೂ ಇದೆ.

## ೮೯. ಗೀತ ಕಾವ್ಯ

ಕಾಳಿದಾಸನ ಮೇಘಸಂದೇಶ, ಘಟಕರ್ಪರ ಕಾವ್ಯ ಮತ್ತು ವೆಂಕಟನಾಥನ ಹಂಸಸಂದೇಶಗಳನ್ನು ಗೀತಕಾವ್ಯಗಳನ್ನಾಗಿಯೂ ಕೆಲವು ವಿಮರ್ಶಕರು ಪರಿಗಣಿಸಿರುವರು. ಇವುಗಳಲ್ಲದೆ ಇನ್ನೂ ಕೆಲವು ಗೀತಕಾವ್ಯಗಳು ಸಂಸ್ಕೃತ ಸಾಹಿತ್ಯದಲ್ಲಿವೆ.

1. ಕಾಳಿದಾಸನ ಶೃಂಗಾರ ತಿಲಕ

2. ಹಾಲಶಾತವಾಹನನ ಪ್ರೇಮ ವಿಷಯಕವಾದ ಪ್ರಾಕೃತ ಕಾವ್ಯ ಗಥಾಸಪ್ತಶತೀ ಇವನು ಕ್ರಿ. ಪೂ. ೧ನೇ ಶತಮಾನದವನು. ಇದು ಪ್ರಾಕೃತದಲ್ಲಿದೆ.

3. 7ನೇ ಶತಮಾನಕ್ಕೆ ಸೇರಿದವನಾದ ಮಯೂರನ "ಮಯೂರಾಷ್ಟಕ". ಇವನು ಇಲ್ಲಿ ವರ್ಣಿಸಿರುವ ಸೌಂದರ್ಯವು ಇವನ ಮಗಳ ವಿಷಯವೆಂದೂ. ಅದಕ್ಕೆ ರೂಷಿತಳಾದ ಮಗಳು ಇವನನ್ನು ಶಪಿಸಿದಳೆಂದೂ. ಆಶಾಪದಿಂದ ಇವನಿಗೆ ತೊನ್ನು ವ್ಯಾಧಿಯು ಬಂದು ಅದನ್ನು ಸೂರ್ಯ ಶತಕ ಸ್ತೋತ್ರದಿಂದ ನೀಗಿಸಿಕೊಂಡನೆಂದೂ ಹೇಳಲಾಗಿದೆ. ಇವನು ಪ್ರಸಿದ್ಧ ಬಾಣನ ಮಾವನೆಂದೂ ಹೇಳುವುದುಂಟು.

4. ಬೌದ್ಧನಾದ ಧರ್ಮಕೀರ್ತಿಯ ಕಾವ್ಯ – ಇವನು ತಾರ್ಕಿಕ. 7ನೇ ಶತಮಾನದವನು. ಇವನ ಶ್ಲೋಕಗಳಲ್ಲಿ ಒಂದು ಅನಿರ್ವಚನೀಯ ಮಾಧುರ್ಯ ಮತ್ತು ಸತ್ಯತೆ ಇದೆ.

ಶೈಲೈರ್ಬಂಧ ಯತಿಸ್ಮವಾನರ ಹೃತ್ತೈಃ ವಾಲ್ಮೀಕಿ ರಂಭೋನಿಧಿ
ವ್ಯಾಸಃ ಪಾರ್ಥಶರೈಃ ತಥಾಪಿವತಯೋರತ್ಯುಕ್ತಿರುದ್ಭಾವ್ಯತೇ
ವಾಗಾರ್ಥೌಚ ತುಲಾ ಧೃತಾವಿನತ ಷ್ಮಸ್ಮತ್ಪ್ರಬಾಂಧಾನಯಂ
ಲೋಕೋದೂಷಯಿತುಂ ಪ್ರಸಾರಿತ ಮುಖಿಸ್ತುಭ್ಯಂ ಪ್ರತಿಷ್ಠೇನಮಃ

ಈ ಶ್ಲೋಕದಿಂದ ಇವನ ಕಾಲದಿಂದ ದುರಹಂಕಾರಿಗಳಾದ ಕೆಲವು ಕವಿಗಳು ಈ ಕವಿಯಲ್ಲಿ ಅತಿಶಯೋಕ್ತಿಯು ಜಾಸ್ತಿಯಾಗಿದೆ ಎಂದು ದೂಷಿಸಿರುವಂತಿದೆ.

ಇವನು ಸ್ತ್ರಿಯರ ಸೌಂದರ್ಯವೇ ಪರಮ ಪಾಪವೆಂದು ವರ್ಣಿಸಿರುವುದು ಸುಂದರವಾಗಿದೆ.
ಲಾವಣ್ಯ ದ್ರವಿಣವ್ಯಯೋ ನಗಣಿತಃ ಕ್ಲೇಶೋಮಹಾನ್ ಸ್ವೀಕೃತಃ
ಸ್ವಚ್ಛಂದಸ್ಯ ಸುಖಂ ಜಲಸ್ಯ ವಸತಶ್ಚಿಂತಾವ್ಯತೋ ನಿರ್ಮಿತಃ
ಏಷಾಪಿಸ್ವಯಮೇವ ತುಲ್ಯರ ಮಣಾ ಭಾವಾದ್ವರಾಕೀಹತಾ
ಕೋರ್ಥಶ್ಚೇತಸಿ ವೇಧಸಾ ವಿನಿಹಿತ ಸ್ತನ್ವ್ಯಾಸ್ತನುಂತನ್ವತಾ

5. 7 ನೇ ಶತಮಾನದವನಾದ ಭರ್ತೃ ಹರಿಯ ಶತಕಗಳು. ಇವುಗಳ ವಿಮರ್ಶೆಯೂ ಈಗಾಗಲೇ ಆಗಿದೆ.

6. ಅಮರು ಶತಕ– ಇದನ್ನು ಬರೆದ ಕವಿಯು ಯಾರೆಂದು ಹೇಳಲು ಸಾಧ್ಯವಿಲ್ಲವಾಗಿದೆ. ಶಂಕರಾಚಾರ್ಯರೇ ಪರಕಾಯ ಪ್ರವೇಶ ಕಾಲದಲ್ಲಿ ಕಾಶೀ ರಾಜನ ರಾಣಿವಾಸದ ನೂರು ಸ್ತ್ರೀಯರೊಡನೆ ಕಾಮ ಶಾಸ್ತ್ರವನ್ನು ಕಲಿತರೆಂದೂ ಅದನ್ನು ಶ್ಲೋಕರೂಪದಲ್ಲಿ ಬರೆದಿರುವುದೇ ಈ ಕಾವ್ಯವೆಂದೂ ಹೇಳುವುದುಂಟು. ಅದು ಸಮಂಜಸವಾಗಿ ಕಂಡು ಬರುವುದಿಲ್ಲ. ಈ ಅಭಿಪ್ರಾಯವನ್ನು ಹೊಂದಿರುವ ಚಂದ್ರನೆಂಬ ವ್ಯಾಖ್ಯಾತೃವು ಈ ಶ್ಲೋಕಗಳಿಗೆ ಅಂತರಾರ್ಥವನ್ನು . ನೋಡಲು ಪ್ರಯತ್ನಪಟ್ಟಿರುವನು. 14ನೇ ಶತಮಾನದ ವೇಮ

ಭೂಪಾಲನು ಈ ಶ್ಲೋಕಗಳಲ್ಲಿ ನಾಯಿಕಾ ಲಕ್ಷಣಗಳನ್ನು ನೋಡುವಂತೆ ವ್ಯಾಖ್ಯಾನ ಮಾಡಿರುವನು. ಕೆಲವರು ಮಾತ್ರ ಕಾವ್ಯ ಲಕ್ಷಣ ನೋಡುವಂತೆ ವ್ಯಾಖ್ಯಾನ ಮಾಡಿರುವನು. ಕೆಲವರು ಮಾತ್ರ ಕಾವ್ಯ ಲಕ್ಷಣಗಳನ್ನು ಮಾತ್ರ ಹುಡುಕಿರುವರು. ಆದರೆ ಈ ಶ್ಲೋಕಗಳಲ್ಲಿರುವುದು ಶೃಂಗಾರರಸದ ನಾನಾ ಸವಿಯೂಟವೇ ಆಗಿದೆ. C.R. ನರಸಿಂಹ ಶಾಸ್ತ್ರಿಯು ತನ್ನ Studies in Sanskrit Literature ಎನ್ನುವ ಗ್ರಂಥದಲ್ಲಿ ಈ ಕಾವ್ಯದ ವಿಮರ್ಶೆಯನ್ನು ಕೊಡುವಾಗ, ಈ ಕಾವ್ಯ ಬರೆದವನು ಅಕ್ಕಸಾಲಿ ಎಂದು ಪೀಟರ್‌ಸನ್ ಅವರು ಸುಭಾಷಿತಾವಳಿಗೆ ಕೊಟ್ಟಿರುವ ಪ್ರಸ್ತಾವನೆಯ ಆಧಾರದ ಮೇಲೆ ಹೇಳಿರುವರು.

ಆನಂದವರ್ಧನನು (ಕ್ರಿ.ಶ.850) ಇವರಿಂದ ಉದಹರಿಸಿರುವನು. ವಾಮನನನು (ಕ್ರಿ.ಶ.800) ಇದರಿಂದ ಶ್ಲೋಕಗಳನ್ನು ತೆಗೆದುಕೊಂಡಿರುವನು. ಆದ್ದರಿಂದ ಇದರ ಕಾಲ ಕ್ರಿ.ಶ. 750ರೊಳಗೆ ಇರಬೇಕು.

ಈ ಕಾವ್ಯದಲ್ಲಿ ಪಾಠಭೇದಗಳಿವೆ. 90-115ವರೆಗೆ ಪ್ರತಿಗಳಲ್ಲಿ ಶ್ಲೋಕ ಸಂಖ್ಯಾಭೇದವಿದೆ. 55 ಶ್ಲೋಕಗಳು ಎಲ್ಲಾ ಪ್ರತಿಗಳಲ್ಲಿಯೂ ಇವೆ. ಕ್ರಮದಲ್ಲಿಯೂ ಯಾವ ವ್ಯತ್ಯಾಸವೂ ಇಲ್ಲ. ಶಾರ್ದೂಲ ವಿಕ್ರೀಡಿತ ವೃತ್ತಗಳಲ್ಲಿರುವ ಶ್ಲೋಕಗಳೇ ಮೂಲ ಶ್ಲೋಕಗಳೆಂದು ಕೆಲವರು ಹೇಳಿರುವರು. ಹಾಗಾದರೆ 61 ಶ್ಲೋಕಗಳು ಮಾತ್ರ ಮೂಲ ಶ್ಲೋಕಗಳಾಗುವುವು. ಶತಕವಾಗಲಾರದು. ಆದ್ದರಿಂದ ಕ್ರಿ. ಶ. 1215ರಲ್ಲಿ ಮೊದಲನೇ ವ್ಯಾಖ್ಯಾತೃವಾದ ಅರ್ಜುನವರ್ಮನು ಕೊಟ್ಟಿರುವ ಸಂಖ್ಯೆಯೇ ಸರಿ ಎನ್ನಬಹುದು.

ಶೃಂಗಾರದ ಎಲ್ಲಾ ಸವಿಯೂಟವನ್ನು ತೋರಿಸುವ ಕಾವ್ಯವಿದು. ಶೃಂಗಾರದಲ್ಲಿ ಉಲ್ಲಾಸವಿದೆ. ಭಾವನೆ ಇದೆ ಸ್ವಲ್ಪ ದೃಷ್ಟಿಯಲ್ಲಿಯೂ ಆನಂದವಿದೆ. ಪ್ರೇಮಕಲಹದಲ್ಲಿ ರುಚಿ ಇದೆ. ನಗು ಇದೆ. ಒಟ್ಟಿನಲ್ಲಿ ಮಾನವನ ಹೃದಯದ ಉತ್ತಮ ಧ್ಯೇಯವೆಲ್ಲವೂ ಇದೆ. ನಿದರ್ಶನ ಕೊಡಲು ಎಲ್ಲಾ ಶ್ಲೋಕಗಳೂ ಬೇಕು. ಪ್ರತಿಯೊಂದು ಶೃಂಗಾರ ಪರ್ವದಲ್ಲಿಯೂ ಒಂದು ನಾಟಕಾಂಕವೇ ಕಲ್ಪಿತವಾಗಿದೆ. ಭಾಷೆಯಲ್ಲಿ ಮಾಧುರ್ಯವಿದೆ. ಕಠಿಣವಾದ ಮತ್ತು ಉದ್ದವಾದ ಸಮಸ್ತ ಪದಗಳಿಲ್ಲ. ಪ್ರತಿಯೊಂದು ಪದ್ಯವೂ ಮನಸ್ಸಿನೊಳಗೆ ಇಳಿಯುವಂತಿದೆ.

7. ಕ್ರಿ.ಶ 12ನೇ ಶತಮಾನದ ಗೀತ ಗೋವಿಂದ-ಜಯದೇವ ಕವಿ - ಇವನ ಮತ್ತು ಇದರ ವಿಮರ್ಶೆಯು ಈಗಾಗಲೇ ನಡೆದಿದೆ.

8. ಜಯದೇವನ ಕಾಲದವನಾದ ಗೋವರ್ಧನನು ಆರ್ಯಾವೃತ್ತದಲ್ಲಿ ಪ್ರಾಕೃತ ಕಾವ್ಯಗಳಲ್ಲಿರುವ ಮಾಧುರ್ಯವನ್ನು ಉತ್ತಮ ಸಂಸ್ಕೃತ ಕಾವ್ಯಗಳ ಮಟ್ಟಕ್ಕೆ ತೆಗೆಯುವೆನೆಂದು ಬರೆಯಲು ಹೊರಟು ಯಮುನೆಯನ್ನು ಆಕಾಶಕ್ಕೆ ಏರಿಸುವೆನು -ಎಂದು ಅವನೇ ಹೇಳಿಕೊಂಡಿರುವನು. ಇವುಗಳಲ್ಲದೆ. 9. ವಾಕ್ಕೂಟ ಕಾವ್ಯ-ಶೃಂಗಾರ ವಿಷಯವಾದ ಕೆಲವು ಶ್ಲೋಕಗಳು. 10. ಶಿಲಾಭಟ್ಟಾರಿಕಾ ಎನ್ನುವ ಸ್ತ್ರೀ ಕವಿಯ ಕೆಲವು ಶ್ಲೋಕಗಳೂ ಇವೆ.

## ೯೦. ಚಂಪೂಕಾವ್ಯಗಳು

ಭೋಜನು ಚಂಪೂ ಕಾವ್ಯವನ್ನು ಶ್ಲಾಘಿಸಿ ಹೀಗೆ ಹೇಳಿರುವನು:

"ಗದ್ಯಾನುಬಂಧರ ಸಮಿಶ್ರಿತ ಪದ್ಯ ಸೂಕ್ತಿಃ
ಹೃದ್ಯಾಹಿ ವಾದ್ಯ ಕಲಯಾ ಕಲಿತೇವ ಗೀತಿಃ ।
ತಸ್ಮಾದ್ದಧಾತು ಕವಿಮಾರ್ಗಜುಷಾಂ ಸುಖಾಯ
ಚಂಪೂ ಪ್ರಬಂಧ ರಚನಾಂ ರಸನಾ ಮದೀಯಾ॥

ವಿಶ್ವನಾಥನು ಸಾಹಿತ್ಯದರ್ಪಣದಲ್ಲಿ ಇದರ ಲಕ್ಷಣನ್ನು ಹೇಳುವಾಗ "ಗದ್ಯ ಪದ್ಯಮಯಂ ಕಾವ್ಯಂ ಚಂಪೂ ರಿತ್ಯ ಭಾಧೀಯತೇ "ಎಂದಿರುವನು ಇಂತಹ ಕಾರ್ಯಗಳನ್ನು ಪುರಾಣಗಳಲ್ಲಿ ನೋಡಿದರೂ ಅವುಗಳನ್ನೂ ಕಾವ್ಯವೆಂದೂ ಹೇಳಲಾಗುವುದಿಲ್ಲ. ಕಾವ್ಯದ ಲಕ್ಷಣಕ್ಕೆ ಸರಿಹೋಗುವ ಚಂಪೂ ಗ್ರಂಥಗಳು ಕ್ರಿ. ಶ. 10ನೇ ಶತಮಾನದಿಂದ ದಕ್ಷಿಣದೇಶದಲ್ಲಿ ಪ್ರಚಾರಕ್ಕೆ ಬಂದಿತಿದೆ. ಇಂಥಾ ಕಾವ್ಯಗಳು ಅನೇಕವಿದೆ. ಆದರೆ ಅವುಗಳಲ್ಲಿ ಮುಖ್ಯವಾದವು. ಇವು:

(1) ಸಿಂಹಾದಿತ್ಯ ಅಥವಾ ತ್ರಿವಿಕ್ರಮನ ನಳ ಚಂಪೂ ಇವನು ರಾಷ್ಟ್ರಕೂಟದ ದೊರೆ. ಇಂದ್ರನ (ಕ್ರಿ. ಶ. 914-916) ಆಸ್ಥಾನದಲ್ಲಿದ್ದವನು. ಇವನ ವಿಷಯದಲ್ಲಿ ಒಂದು ಕಥೆ ಇದೆ. ಇವನ ತಂದೆ ಆಸ್ಥಾನ ಪಂಡಿತ. ಅವನು ಸಭೆಯಲ್ಲಿ ಇಲ್ಲದಿರುವ ವೇಳೆಯಲ್ಲಿ ಒಬ್ಬ ಕವಿಯು ಬಂದು ತನ್ನನ್ನು ಜಯಿಸುವುದಿಲ್ಲವೆಂದಾಗ ದೊರೆಯು ಕವಿಯ ಮಗನಾದ ತ್ರಿವಿಕ್ರಮನು ಧ್ಯಾನಾಸಕ್ತನಾಗಿ ಸರಸ್ವತಿಯ ಅನುಗ್ರಹದಿಂದ ಆಗ ಆಶು ಕವಿತೆಯಲ್ಲಿ ನಳ ಚಂಪುವನ್ನು ಮಾಡುತ್ತಿರುವಲ್ಲಿ ತಂದೆಯು ಬಂದನು. ಅಲ್ಲಿಗೆ ತ್ರಿವಿಕ್ರಮನ ಕವಿತೆಯು ನಿಂತಿತು. ಈ ಕಾವ್ಯ 7 ಸರ್ಗಗಳಲ್ಲಿ ನಿಂತಿದೆ. ಇದಕ್ಕೆ ಐದು ವ್ಯಾಖ್ಯಾನಗಳಿವೆ. ಕ್ರಿಯಾ ಪದಗಳ ರೂಪಗಳು ಇಲ್ಲಿ ಚೆನ್ನಾಗಿ ಉದಾಹೃತಗಳಾಗಿವೆ. ಸುಬಂಧುವಿನ ಅನುಕರಣವಿದೆ. ಮದಾಲಸಾ ಚಂಪುವೂ ಇವನದೆಂದು ಹೇಳಲಾಗಿದೆ. ನಳ ಚರಿತ್ರೆಯು ಎಲ್ಲರಿಗೂ ತಿಳಿದಿದೆ. ಮದಾಲಸೆಯು ಒಬ್ಬ ಕವಯತ್ರೀ. ಇವಳ ಕಥೆಯನ್ನು ಮದಾಲಸಾ ಪರಿಣಯ, ಮದಾಲಸಾ ನಾಟಕ ಮೊದಲಾದವುಗಳು ಹೇಳಿವೆ.

(2) (39) ಸೋಮದೇವನ ಯಶಸ್ತಿಲಕ ಚಂಪೂ (ಕ್ರಿ. ಶ. 951)

ಇವನು ಜೈನ. ಚಾಲುಕ್ಯದೊರೆ ಅರಿಕೇಸರಿಯು ಇವನ ಆಶ್ರಯ ದೊರೆ. ಈ ಚಂಪುವಿನಲ್ಲಿ 7 ಆಶ್ವಾಸಗಳಿವೆ. ಅವಂತಿ ದೊರೆಯ ಯಶೋಧರನ ಕಥೆ ಇದು. ಇವನು ತನ್ನ ರಾಣಿಯು ಕುತಂತ್ರ ಮತ್ತು ಮೋಸಕ್ಕೆ ಒಳಗಾಗಿ, ಜೈನನಾಗಿ, ಕೊಲ್ಲಲ್ಪಟ್ಟು ಮತ್ತು ಜನ್ಮತಾಳಿದನು.

(3) (40) ಭೋಜ ದೇವನ ರಾಮಾಯಣ ಚಂಪೂ (ಕ್ರಿ. ಶ. 1018-1063)

ಇವನ ಚರಿತ್ರೆಯು 5ಭಾಗದಲ್ಲಿದೆ. ಇದು ಕಿಷ್ಕಿಂಧಾ ಕಾಂಡದವರಿಗೂ ಇದೆ. ಲಕ್ಷ್ಮಣಕವಿಯು ಯುದ್ಧಕಾಂಡವನ್ನೂ ಸೇರಿಸಿರುವನು

(4) (41) ಅಭಿನವ ಕಾಳಿದಾಸನ ಭಾಗವತ ಚಂಪೂ (ಕ್ರಿ ಶ 1016-1064)

ಇವನ ಸರಿಯಾದ ಹೆಸರು ತಿಳಿಯದು ಪಿನಾಕಿನೀ ನದಿತೀರದ ವಿದ್ಯಾನಗರದ ದೊರೆ ರಾಜಶೇಖರನ ಆಸ್ಥಾನಪಂಡಿತ ಇವನ ಶಿಷ್ಯ ಕವಿ ಕುಂಚರನು ರಾಜಶೇಖರ ಚರಿತ್ರೆಯನ್ನು ಬರೆದಿರುವನು ಅಭಿನವ ಕಾಳಿದಾಸನು ಭಾರತ ಚಂಪೂವನ್ನೂ ಬರೆದಿರುವನು

(5) (42) ಸೋಮಶೇಖರನ ಭಾಗವತ ಚಂಪೂ (ಕ್ರಿ ಶ 1760-1772)

ಪೇಷ್ವೆ ಮಾಧವರಾಯನಿಂದ ಗೌರವಿಸಲ್ಪಟ್ಟವನು ಇವನ ಸ್ಥಳ ವೆರೂರು (ಗೋದಾವರಿ ಡಿಸ್ಟ್ರಿಕ್ಟ್) ಇವನು ವೈದ್ಯರ ವಂಶದವನು ನಾರಾಯಣನೆನ್ನುವ ಪ್ರಸಿದ್ಧ ಮೀಮಾಂಸಕನ ಮೊಮ್ಮಗ

(6) (43) ಅನಂತ ಭಟ್ಟನ ಭಾಗವತ ಚಂಪೂ ಮತ್ತು ಭಾರತ ಚಂಪೂ (ಸುಮಾರು ಕ್ರಿ ಶ 11ನೇ ಶತಮಾನ) - ಭಾರತ ಚಂಪುವು ಶ್ಲಾಘನೀಯವಾಗಿದೆ

7) (44) ವೆಂಕಟಾಧ್ವರಿಯ ವಿಶ್ವಗುಣಾದರ್ಶನಂ (ಕ್ರಿ ಶ 17ನೇ ಶತಮಾನ)

ಇವನು ಪ್ರಸಿದ್ಧ ಲಕ್ಷ್ಮೀಕುಮಾರ ತಾತಾಚಾರ್ಯ ವಂಶದವನು ಪ್ರಸಿದ್ಧ ನೀಲಕಂಠ ಕವಿ ಇವನ ಸಮಕಾಲಿಕ ಆತ್ರೇಯ ಗೋತ್ರದವನಾದ ರಘುನಾಥ ಮತ್ತು ಸೀತಾಂಬಾವನ ಪುತ್ರ ಇವನ ತಾತ ಶ್ರೀನಿವಾಸನು ಅಪ್ಪಯ್ಯ ದೀಕ್ಷಿತನ ಸಮಕಾಲಿಕ ಚಂಪೂ ಕಾವ್ಯದಲ್ಲಿ ವಿಶ್ವಾವಸುಕೃಶಾನು ಎನ್ನುವ ಇಬ್ಬರು ಗಂಧರ್ವರು ವಿಮಾನ ಸಂಚಾರಿಗಳಾಗಿ ದೇಶ ದೇಶಗಳನ್ನು ವರ್ಣಿಸುವ ವ್ಯಾಜದಿಂದ ತನ್ನ ಕಾಲದವರಲ್ಲಿದ್ದ ವಿಜಾತಿಯ ಸ್ವಭಾವ ಮತ್ತು ಅನುಷ್ಠಾನಾದಿಗಳನ್ನು ಮೂಡಿಸಿರುವನು

## ೯೧. ಕೊನೆಯದಾಗಿ ಸ್ತೋತ್ರ ಗ್ರಂಥಗಳು

ಈ ಸಾಹಿತ್ಯದಲ್ಲಿ ವೇದಾಂತ ದೃಷ್ಟಿಯೇ ಪ್ರಧಾನವಾಗಿದೆ ಈ ಸ್ತೋತ್ರ ಗ್ರಂಥಗಳು ಸಂಸ್ಕೃತ ಸಾಹಿತ್ಯಕ್ಕೆ ಮೀಸಲಾಗಿದೆ ಎನ್ನಬಹುದು

**ಕ್ರಿ. ಪೂ. 1ನೇ ಶತಮಾನ -ಕಾಳಿದಾಸನ ಕೃತಿಗಳು**

1. ಶ್ಯಾಮಲಾದಂಡಕ. 2. ಸರಸ್ವತೀ ಸ್ತೋತ್ರ. 3. ಮಂಗಳಾಷ್ಟಕ. 4. ಕ್ರಿ ಶ 1ನೇ ಶತಮಾನದ ಅಶ್ವಘೋಷನ ಗಂಡೀ ಸ್ತೋತ್ರ. 5. 7ನೇ ಶತಮಾನದ ಬಾಣನ ಚಂಡೀ ಶತಕ. 6. ಮಯೂರನ ಸೂರ್ಯ ಶತಕ 7. ಚಂಡಾಲನೆಂದು ಹೇಳಲ್ಪಡುವ ಮಾತಂಗದಿವಾಕರನ ಭಕ್ತಾಮರ ಸ್ತೋತ್ರ ಇದು ಜೈನ ನಾದ [illegible] ಮೇಲೆ ಬರೆದದ್ದು ಇದನ್ನೇ [illegible]

ದಿವಾಕರನೆಂದು ನಂಬಲಾಗಿದೆ. 8. ಸಿದ್ಧ ಸೇನದಿವಾಕರನ ಕಲ್ಯಾಣ ಮಂದಿರ ಸ್ತೋತ್ರ. 9. ಅಷ್ಟ ಮಹಾ ಶ್ರೀ ಚೈತ್ಯ ಸ್ತೋತ್ರ. 11. ದ್ವಾದಶ ಸಂಚರಿಕಾ ಸ್ತೋತ್ರ. 12, ದೇವ್ಯತರಾಧ ಕ್ಷಮಾಪಣ ಸ್ತೋತ್ರ. 13 ಭವಾನ್ಯ ಕ್ಷೆರ. 14 ಆನಂದಲಹರೀ 15. ಅಂಬಾಷ್ಟಕ. 16. ಪಂಚಸ್ತವೀ 17. ಆನಂದವರ್ಧನನ (ಕ್ರಿ. ಶ 850) ದೇವಿ ಶತಕ. 18. 9ನೇ ಶತಮಾನದ ಕುಲ ಶೇಖರನ ಮುಕುಂದ ಮಾಲಾ. 19. 10ನೇ ಶತಮಾನದ ಉತ್ಪಲ ದೇವನ ಸ್ತೋತ್ರಾವಳೀ. 20. 11ನೇ ಶತಮಾನದ ಬಿಲ್ವ ಮಂಗಳನ ಕೃಷ್ಣಕರ್ಣಾಮೃತ. 21. ಯಮುನಾಚಾರ್ಯರ ಸ್ತೋತ್ರರತ್ನ. 22. 12ನೇ ಶತಮಾನದ ರೂಪಗೋಸ್ವಾಮಿಯ ಪದ್ಯಾವಳಿ. 23. ಪುಷ್ಪಪಾದನ ಮಹಿಮಸ್ತವ. 24. 4ನೇ ಶತಮಾನದ ವೆಂಕಟನಾಥನ 38. ಹಯಗ್ರೀವಾದಿ ಸ್ತೋತ್ರಗಳು.

# IV. ನಾಟಕ ಸಾಹಿತ್ಯ

## ೯೨. ನಾಟಕ ಕಲೆಯ ಮೂಲ

ನಾಟಕ ಸಾಹಿತ್ಯವು ಹಿಂದೂ ಸಂಸ್ಕೃತಿಯ ಸುವರ್ಣ ಯುಗದಿಂದಲೂ ಮತ್ತು ಅದರ ಹಿಂದಿನಿಂದಲೂ ಬೆಳೆದು ಬಂದು. ರಜತ ಯುಗದಲ್ಲಿ ಒಂದು ನಿರ್ದಿಷ್ಟ ರೂಪವನ್ನು ತಾಳಿ ನಂತರ ಕೆಲವು ಕಾಲ ನಾನಾ ಮುಖವಾಗಿ ಹರಿದು ಈಗ ಒಂದು ಹಿತವಾದ ಸಾಹಿತ್ಯವಾಗಿ ನಿಂತಿದೆ. ಇನ್ನೂ ಇದರ ಕಲೆಯು ಆಧುನಿಕ ಸಾಧನಗಳಿಂದ ಮತ್ತು ಅತ್ಯಾಶ್ಚರ್ಯವಾಗಿ ಬೆಳೆಯಲು ಅವಕಾಶವನ್ನು ಹೊಂದಿದೆ.

ಋಗ್ವೇದದಲ್ಲಿ ಅನೇಕ ಸಂವಾದಗಳು ಕಂಡುಬರುತ್ತವೆ. (ಪುಟ 27-28)

a. ಯಮ-ಯಲಾ ಇವರು ಮೊದಲನೇ ಮಾನವರು ಪ್ರಥಮೋಪ್ರಮಾಂಸಃ ಇದರಿಂದಲೇ Adam-eve ಭಾವವು Old Testamentನಲ್ಲಿ ಬೆಳೆದು ಬಂತೆಂದು ಊಹಿಸಬಹುದು. X-10

b. ಪುರೂರವಸ್ -ಊರ್ವಶೀ (X-95)

c. ಭಾರ್ಗವನು ಇಂದ್ರನನ್ನು ಕುರಿತು ಹೇಳಿದ್ದು ಅದಕ್ಕೆ ಅವನ ಉತ್ತರ VIII-100ರಲ್ಲಿ

d. ಅಗಸ್ತ್ಯ -ಲೋಪಾಮುದ್ರಾ -ಅವರ ಮಗ X-28

e. ಇಂದ್ರ -ಅದಿತಿ-ವಾಮದೇವ IV-18

f. ಇಂದ್ರ -ಇಂದ್ರಾಣೀ -ವೃಷಕಪಿ X-86

g. ಸರಮಾ ಇಂದ್ರನ ದೇನುಗಳಿಗಾಗಿ ಅಸುರರೂ. ಪ್ರಾಣಿಗಳೂ ಅವರಲ್ಲಿಗೆ ಹೋಗಿ ವಾಗ್ವಾದ ಮಾಡಿದ್ದು X-108

h. ಅಗ್ನಿಯನ್ನು ಹವ್ಯವಾಹನನಾಗೆಂದು ದೇವತೆಗಳು ಕೇಳಿದ್ದು X-51-3

i. ನದಿಗಳನ್ನು ದಾಟುವುದಕ್ಕಾಗಿ ವಿಶ್ವಾಮಿತ್ರನು ಅವುಗಳನ್ನು ಕೇಳಿದ್ದು VII-33

j. ವಸಿಷ್ಠ -ಅವನ ಮಕ್ಕಳು VII-33

k. ಇಂದ್ರ ವರುಣ ಪರಸ್ಪರ ಮೇಲ್ಮೆಗಾಗಿ

ಕರ್ಮಪ್ರಧಾನವಾದ ಯಜುರ್ವೇದ ಕಾಲದಲ್ಲಿ ಇಂತಹ ಸಂವಾದಗಳಿಗೆ ಅವಶ್ಯಕತೆಯು ಇಲ್ಲದಿದ್ದರ ಕೆಲವು ಇವೆ. ಆದರೆ ಅವು ಅಷ್ಟು ಉತ್ತಮರೂಪದಲ್ಲಿಲ್ಲ.

ಅಥರ್ವವೇದದಲ್ಲಿ (V-2) ಅಥರ್ವನು ದೇವತೆಗಳಿಂದ ಧೇನುವನ್ನು ಪ್ರಾರ್ಥಿಸಿದ್ದು ಇದೆ. ಸಾಮವೇದವೇ ಸಂಗೀತದ ಮೂಲ ಸಾಹಿತ್ಯವೆನ್ನಬಹುದು.

ಋಗ್ವೇದ ಕಾಲದಲ್ಲಿ ಋತ್ವಿಕ್ಕುಗಳು ಅನುಕರಣೆ ಮಾಡಿ ನಾಟಕಕಲೆಯನ್ನು ಚೆನ್ನಾಗಿ ತಿಳಿದಿದ್ದರು ಎಂದು ಕಂಡುಬರುತ್ತದೆ ಎಂದು ಮ್ಯಾಕ್ಸ್ ಮುಲ್ಲರ್ (Maxmuller) ಮತ್ತು ಅವನನ್ನು ಅನುಸರಿಸಿ ಪ್ರೋ. ಲೆವಿ (Prof. Levi) ಅಭಿಪ್ರಾಯಪಟ್ಟಿರುವರು. ಪ್ರಪಂಚದ ಎಲ್ಲಾ ನಾಟಕ ಕಲೆಯಲ್ಲಿ ಒಂದು ಸಾಮರಸ್ಯವಿರುವುದೆನ್ನುವ ಕಾರಣವನ್ನು ಕೊಟ್ಟು ಶ್ರೋಡರ್ (Schroder) ವಿಮರ್ಶಕನು ಈ ಕಲೆಯ ಇಂಡೊಯೂರೋಪಿಯನ್ ಅಂದರೆ ಹಿಂದೂ ಮತ್ತು ಯೂರೋಪ್ ಜನಾಂಗವು ಒಂದಾಗಿದ್ದ ಕಾಲದಿಂದಲೂ ಇತ್ತು ಎಂದಿರುವನು. ಅಲ್ಲದೆ ಇದು ಕ್ರಮೇಣ ಹಿಂದೂ ಆರ್ಯರಲ್ಲಿ ವಿಷ್ಣು -ಕೃಷ್ಣ ಕಲೆಯಾಗಿಯೂ ರುದ್ರ ಶಿವನ ಕಲೆಯಾಗಿಯೂ ಬೆಳೆದು ಬಂತು ಎಂದು ಹೇಳಿರುವನು. ಡಾ. ಹರ್ಟೆಲ್ (Dr. Hertel) ಹೇಳುವಂತೆ ವೇದದ ಸಂಹಿತಾ ಭಾಗವೇ ಒಂದು ಗಾನರೂಪದಲ್ಲಿತ್ತು. ಇದು ಒಂದು ವ್ಯಕ್ತಿಯಿಂದ ಕಲ್ಪಿತವಾದುದ್ದಲ್ಲ. ಹೃದಯದಲ್ಲಿ ಹೊಮ್ಮಿ ಹೊರಗಡೆ ಪ್ರವಹಿಸಿದ ಭಾವನ್ನಾನ್ನತ್ಮವೇ ಕಣ್ಣಮುಂದೆ ಕಾಣುವಂತೆ ನಾಟಕವಾಗಿ ರೂಪಗೊಂಡಿತು. ಹೀಗೆಯೇ ನಾಟಕದ ಮೂಲಸ್ವರೂಪವನ್ನು ಕಂಡು ಹಿಡಿಯಲು ಅನೇಕ ವಿದ್ವಾಂಸರು ಪ್ರಯತ್ನವನ್ನು ಮಾಡಿರುತ್ತಾರೆ. ಅವರಲ್ಲಿ ವಿಂಡಿಷ್ (Windisch) ಒಲ್ಡೆನ್ ಬರ್ಗ್ (Oldenberg) ಪಿಶ್ಚಲ್ (Pischel) ಗೆಲ್ಡ್ನರ್ (Geldner) ಲೇವಿ (Levi) ಶ್ರೋಡರ್ (Schrocder). ಹರ್ಟೆಲ್ (Hertel). ಮ್ಯಾಕ್ಸ್ ಮುಲ್ಲರ್ (Maxmuller) ಇವರು ಮುಖ್ಯರು. ಇವರಲ್ಲಿ ಒಬ್ಬೊಬ್ಬರ ಊಹೆಯು ಒಂದೊಂದು

ರೀತಿಯಲ್ಲಿದೆ. ಇದರಲ್ಲಿ ಮೂರು ಕ್ರಮವು ಸಾಮಾನ್ಯವಾಗಿ ಕಂಡು ಬರುತ್ತದೆ. a. ಯಜ್ಞ ಯಾಗಾದಿಗಳ ಅಂಗವಾಗಿ ಈ ಕಲೆಯು ರೂಪವನ್ನು ತಾಳಿತು. ಹಾಡಲು ಅನುಕರಿಸಲು ಮಂತ್ರಗಳಿರುವುದೇ ಇದಕ್ಕೆ ನಿದರ್ಶನ. ಸೂತ್ರಕಾಲದಲ್ಲಿ ಇದಕ್ಕೆ ಉತ್ತೇಜನವಿತ್ತು. ಇತಿಹಾಸ ಪುರಾಣ ಕಾಲದಲ್ಲಿ ಈ ಕಲೆಯೂ ಇದ್ದರೂ ಅದಕ್ಕೆ ಗೌರವ ಸ್ಥಾನ ಮತ್ತು ಪೂಜ್ಯತೆಯು ಇದ್ದಂತೆ ತೋರಲಿಲ್ಲ.

b. ಯಾವ ಸಂಬಂಧವೂ ಇಲ್ಲದೆ ತಾನಾಗಿ ಸ್ವಾಭಾವಿಕವಾಗಿ ಬೆಳೆದು ಬಂದಿತು. ಗದ್ಯಗಳಾಗಿ ಪದ್ಯಗಳಾಗಿ ಮನಸ್ಸಿಗೆ ಇಂಪನ್ನು ಕೊಡುವ ಮಂತ್ರಗಳಿರುವುದೇ ಇದಕ್ಕೆ ಕಾರಣ.

c. ಬೇರೆ ಬೇರೆ ಜನಾಂಗಗಳೊಡನೆ ಕಲೆತು ಬಾಳಿದ್ದರಿಂದ ಅವರವರ ಕಲೆಗಳಾದ ನಾಟಕವೂ ನಮ್ಮಲ್ಲಿ ತೋರಿತು.

d. ಯಜ್ಞ ಯಾಗಾದಿಗಳ ಅಂಗವಾಗಿ ಈ ಕಲೆಯು ತಲೆ ಎತ್ತಿತು ಎನ್ನುವ ವಾದ-ಋಗ್ವೇದದ a. ಪುರುಷಾರ್ಥಮಂತ್ರ (IX 112) b ವೃಷಾಕಪಿಮಂತ್ರ (X-86) c. ಮುದ್ಗಲಮಂತ್ರ (X-102) d. ಮಂಡೂಕ ಮಂತ್ರ (VII-103e - ದ್ಯೂತ ಮಂತ್ರ (X-34) f. ಇಂದ್ರ ಜನ್ಮ ಮಂತ್ರ (IV 18) g. ಅಗಸ್ತ್ಯ ಲೋಪಾಮುದ್ರೆಯ ಸಂವಾದ (I -179) ಮತ್ತು h. ಇಂದ್ರ -ಮರುನ್ಮಂತ್ರ (1. 170, 171, 165) -ಇತ್ಯಾದಿಗಳಲ್ಲಿ ಪ್ರಹಸನ, ಕಾರುಣ್ಯ, ಉದಾತ್ತ ಭಾವನೆ, ಅವಹೇಳನ ಇವೇ ಮೊದಲಾದ ಮನೋಭಾವಗಳನ್ನು ಸೂಚಿಸಿ ನಾಟಕ ಸಾಹಿತ್ಯಕ್ಕೆ ಮೂಲವನ್ನು ಕಲ್ಪಿಸಿಕೊಟ್ಟಂತಿದೆ. ಭರತನ ನಾಟ್ಯ ಶಾಸ್ತ್ರದಲ್ಲಿ ಹೇಳಿರುವುಂತಾದರೆ ದೇವತೆಗಳೆಲ್ಲರೂ ಕಿವಿ ಮತ್ತು ಕಣ್ಣುಗಳಿಗೆ ಹಿತ ಕೊಡುವ ಒಂದು ವೇದವನ್ನು ಕೊಡಬೇಕೆಂದು ಬ್ರಹ್ಮನನ್ನು ಪ್ರಾರ್ಥಿಸಲಾಗಿ ಅವನು ಅವರ ಪ್ರಾರ್ಥನೆಯನ್ನು ಮನ್ನಿಸಿ ಋಗ್ವೇದದಿಂದ ಮಾತನಾಡುವ ಕಲೆಯನ್ನೂ, ಯಜುರ್ವೇದದಿಂದ ಅವನು ಅವರ ಪ್ರಾರ್ಥನೆಯನ್ನೂ ಮನ್ನಿಸಿ ಋಗ್ವೇದದಿಂದ ಮಾತನಾಡುವ ಕಲೆಯನ್ನೂ, ಯಜುರ್ವೇದದಿಂದ ಅನುಕರಣ ಕಲೆಯನ್ನೂ, ಸಾಮವೇದ ಸಂಗೀತದಿಂದ ಸಂಗೀತ ಕಲೆಯನ್ನೂ, ಅಥರ್ವವೇದದಿಂದ ಅಭಿನಯವನ್ನೂ ಕೊಟ್ಟು ಇವನೆಲ್ಲವನ್ನೂ ಒಟ್ಟುಗೂಡಿಸಿ ಒಂದು ಶಾಸ್ತ್ರವನ್ನೇ ನಿರ್ಮಾಣ ಮಾಡಿದನು. ಇದೇ ನಾಟ್ಯಕಲೆ.

ಬ್ರಾಹ್ಮಣ ಕಾಲದಲ್ಲಿ ಈ ನಾಟಕ ಕಲೆಯೂ ವೃದ್ಧಿ ಹೊಂದಿ ಅದರೊಡನೆ ಅಭಿನಯವು ತನ್ನ ಮತ್ತು ಪರರ ಮನೋರಂಜನೆಗೆಂದು ಎಲ್ಲರ ಮನಸ್ಸಿನಲ್ಲಿಯೂ ಭಾವವು ಮೂಡಿ ಒಂದು ಗಮನಾರ್ಹವಾದ ರೂಪವನ್ನು ತಾಳಿತು ಎಂದು ಹಿಲ್ಲೆ ಬ್ರಾಂಡ್ (Hille Brandt) ಮತ್ತು ಕೊನೌ (K now) ಎನ್ನುವ ವಿಮರ್ಶಕರು ಅಭಿಪ್ರಾಯಪಟ್ಟಿರುವರು. ನರ್ತನ, ಸಂಗೀತ ಮತ್ತು ಗಾನ ಇವು ಕಲೆಗಳು (arts) ಎಂದು ಕಾಶೀತಕೀ ಬ್ರಾಹ್ಮಣದಲ್ಲಿದೆ. ಇವು ಬ್ರಾಹ್ಮಕ್ಷತ್ರಿಯ ವೈಶ್ಯರಿಗೆ ಹೇಯವೆಂದು ಪಾರಸ್ಕರ ಗೃಹ್ಯ ಸೂತ್ರದಲ್ಲಿ ಹೇಳಿದೆ. ಅಂದರೆ ಈ ಭಾವವು ಹೇಗೆ ಪರಿಣಮಿಸಿತು. ಎನ್ನುವುದಕ್ಕೆ ಕಾರಣವೂ ಕಂಡು ಬರುವುದಿಲ್ಲ ಎಂದು

ಈ ವಿಮರ್ಶಕರು ಹೇಳಿರುವರು. ಆದರೆ ಮುಂದೆ ಉಪನಿಷತ್ಕಾಲದಲ್ಲಿ ಮಾನವನ ಜ್ಞಾನ ಶಕ್ತಿಯು ಪಾರಮಾರ್ಥಿಕ ದೃಷ್ಟಿ ಮತ್ತು ಭಾವನೆಯಲ್ಲಿ ಪ್ರವಹಿಸುತ್ತಿರುವುದನ್ನೂ ಈ ನಾಟಕ ಕಲೆಯೂ ಅದಕ್ಕೆ ವಿರುದ್ಧವಾಗಿರುವುವುದನ್ನು ನೋಡಿ ಗೃಹ್ಯ ಸೂತ್ರವು ಹೀಗೆ ಹೇಳಬಹುದು. ಈಗಲೂ ನಾಟಕ, ನೃತ್ಯ ಇತ್ಯಾದಿ ಮನೋರಂಜಕ ವೃತ್ತಿಗಳಲ್ಲಿ ಅನ್ವಯಿಸಿರುವರು ಸಾಮಾನ್ಯವಾಗಿ ಉತ್ತಮ ಪಾರಮಾರ್ಥಿಕ ಧ್ಯೇಯವನ್ನು ಸಾಧಿಸಲಾರರೆಂಬುದೇ ಇದರ ಮರ್ಮ. ಅಲ್ಲದೆ ಬ್ರಾಹ್ಮಣ ಕಾಲದಲ್ಲಿ ಜಾತಿಯು ಸ್ಥೂಲರೂಪವನ್ನು ತಾಳಿತು ಎನ್ನುವುದು. ನಿಶ್ಚಿತವಾಗಿರುವುದರಿಂದ ಮೇಲಿನ ಮೂರು ಜಾತೀಯರು ವೇದಚೋದಿತ ಕರ್ಮಗಳನ್ನು ಪ್ರಧಾನವಾಗಿ ಮಾಡಬೇಕೆಂದೂ. ಅದಕ್ಕೆ ವಿರೋಧವಲ್ಲದ ಪರಿಚರ್ಯಯನ್ನೂ ಅಂದರೆ ಸಮಾಜ ಸೇವೆ ಇತ್ಯಾದಿಗಳನ್ನು ಮಾಡಬೇಕೆಂದೂ. ಆಗಿನ ಕಾಲಕ್ಕೆ ವಿಹಿತವಾದ್ದರಿಂದ ಪಾರಸ್ಕರ ಗೃಹ್ಯ ಸೂತ್ರವು ಹಾಗೆ ಹೇಳಿರಬಹುದು. ಭಗವದ್ಗೀತೆಯಲ್ಲಿ—

ಪರಿಚಾರ್ಯಾತ್ಮಕಂ ಕರ್ಮಶೂದ್ರ ಸ್ಯಾಪಿ ಸ್ವಭಾವಜಂ

ಎಂದು 18ನೇ ಅಧ್ಯಾಯದಲ್ಲಿ ಹೇಳಿರುವುದರಲ್ಲಿ, ಪರಿಚರ್ಯೆಯು ಶೂದ್ರರಿಗೆ ಪ್ರಧಾನ ಧರ್ಮವಾದುದರಿಂದ ಸಂಗೀತ ಮೊದಲಾದ ನಾಟಕ ಕಲೆಗಳು ಅವರ ಪಾಲಿಗೆ ಬಂದಿತು ಎಂದೂ ಮಿಕ್ಕ ಮೇಲಿನ ಮೂರು ಜಾತೀಯರಿಗೆ. ಅವರ ಧರ್ಮಕ್ಕೆ ವಿರುದ್ಧವಲ್ಲದಂತ ಈ ನಾಟಕ ಕಲೆ ಹಿತವಾಗಿತ್ತೆಂದೂ ಹೇಳಬಹುದು. ಹೀಗಿದ್ದರೂ ಯಜ್ಞಯಾಗಾದಿಗಳ ಅಂಗವಾಗಿ ನರ್ತನ ಮೊದಲಾದವುಗಳು ಹೇಯವಾಗಿರಲಿಲ್ಲ. ಅಂದರೆ ಈ ನಾಟಕ ಕಲೆಗೆ ಪೂರ್ಣ ದ್ವೇಷವಿರಲಿಲ್ಲವೆನ್ನಬಹುದು. "ಮಹಾವ್ರತ" ಎನ್ನುವ ಯಾಗದಲ್ಲಿ ಅಗ್ನಿಯ ಸುತ್ತಲೂ ಸುಮಂಗಲಿಯರು ನರ್ತನಮಾಡಬೇಕೆಂದು ನಿಯಮವಿದೆ. ವಿವಾಹ ಮಹೋತ್ಸವವು ಮುಗಿಯುವುದರೊಳಗಾಗಿ ಸುಮಂಗಲಿಯರ ನರ್ತನವು ಈಗಲೂ ಪ್ರಾಚೀನ ಸಂಪ್ರದಾಯಸ್ಥರಲ್ಲಿ ವಾಡಿಕೆ ಇದೆ. ವೀಣಾ ಮತ್ತು ಕೊಳಲು ನಾದಕ್ಕನುಸಾರವಾಗಿ ಸತ್ತವರ ಅವಶಿಷ್ಟ ಭಸ್ಮಸಂಚಯನ ಕರ್ಮಗಳಲ್ಲಿ ಶೋಕಸೂಚಕ ನೃತ್ಯವಿತ್ತು. ಶಿವಪಾರ್ವತಿಯರ ತಾಂಡವಲಾಸ್ಯ. ಶ್ರೀಕೃಷ್ಣನ ಕಾಳಿಂಗ ಮರ್ದನ ನೃತ್ಯ ಇವೇ ಮೊದಲಾದವುಗಳಿಂದ ನಾಟಕ ಕಲೆಯು ಎಷ್ಟು ತಡೆದರೂ ಬೆಳೆದು ಬರಲು ವೇದವು ಸಹಕಾರ ಕೊಟ್ಟಿರುವುದು ಎನ್ನುವುದು ನಿಶ್ಚಯವಾಗುತ್ತದೆ.

(b) ನಾಟಕ ಕಲೆಯು ಸ್ವಾಭಾವಿಕತೆ —ಎನ್ನುವ ವಾದ

ಪ್ರೊ. ಹಿಲ್ಲೆ ಬ್ರಾಂಡ್ (Prof. Hille brandt) ಮತ್ತು ಕೋನೌ (Konow) ಇವರಿಬ್ಬರೂ ನಾಟಕಗಳಿಗೆ ಮೂಲವನ್ನು ಬೇರೆ ರೀತಿಯಲ್ಲಿ ತಿಳಿದಿರುವರು. ನಾಟಕವು ಸಾಮಾಜಿಕ ಜೀವನದಲ್ಲಿ ಸ್ವಾಭಾವಿಕವಾಗಿ ಬೆಳೆದು ಬಂದಿತೆಂದು ಅವರು ಅಭಿಪ್ರಾಯಪಟ್ಟಿರುವರು. ಇದಕ್ಕೆ ಐದು ಕಾರಣಗಳನ್ನು ಕೊಟ್ಟಿರುವರು. 1. ಪ್ರಾಕೃತವು ಬಳಕೆ ಇದ್ದುದು 2. ಗದ್ಯಪದ್ಯಗಳು ಮಿಶ್ರಿತವಾಗಿಯೇ ಇದ್ದುದು. 3. ವಿದೂಷಕನ ಪಾತ್ರವು ಕೇವಲ ಮನೋರಂಜನೆಗಾಗಿ ಕಲಿಸಲ್ಪಟ್ಟಿದ್ದು. 4.

ಅಶೋಕನ ಕಾಲದಲ್ಲಿ ಇಂತಹ ರಂಗಗಳಿಗೆ ಸಮಾಜ ಎಂದು ಹೆಸರಿದ್ದುದು ಮತ್ತು 5. ಮಹಾಭಾಷ್ಯ ಕಾವ್ಯದಲ್ಲಿ ಮಾಯಾ ಮಂತ್ರವಿದ್ಯೆ ಅದನ್ನು ನಾಟಕಗಳಲ್ಲಿ ಸೇರಿಸಿದ್ದುದು –ಈ ಕಾರಣಗಳೆಲ್ಲವೂ ಸ್ಥೂಲವಾಗಿದೆ. ಪಿಶ್ಚೆಲ್ (Pischel) ವಿಮರ್ಶಕನು ಸಾಮಾನ್ಯ ಜನಗಳ ಮನೋರಂಜನೆಗಾಗಿ ಮಕ್ಕಳ ಆಟದ ಬೊಮ್ಮೆ (ಹಿಂದಿಯಲ್ಲಿ ಇದನ್ನು ಕಟ್‌ಪುತ್ಲಿ ಎನ್ನುವರು.) ಛಾಯಾ ನಾಟಕ, ಸುಗ್ಗಿ ಕುಣಿತ ಇವೇ ಮೊದಲಾದವು ಇದ್ದುದರಿಂದಲೇ ಸೂತ್ರಧಾರ, ಸ್ಥಾಪಕ, ಇತ್ಯಾದಿ ಪದಗಳು ಬಳಕೆಗೆ ಬಂದವೆಂದು ಹೇಳಿ, ನಾಟಕಕ್ಕೆ ಸಮಾಜವನ್ನೇ ಮೂಲವನ್ನಾಗಿ ಹೇಳಿರುವನು. ಇವರು ಹೇಳಿರುವ ಕಾರಣಗಳೂ ಸಮರ್ಪಕವಾಗಿಲ್ಲ. ಸಾಮಾಜಿಕ ದೃಷ್ಟಿಯಲ್ಲಿ ಬೆಳೆದು ಬಂತೆನ್ನುವುದರಲ್ಲಿ ದೋಷವೂ, ಸತ್ಯವೂ ಇಲ್ಲ. ಆದರೆ ಅದಕ್ಕೆ ಹೇಳಿರುವ ಎಲ್ಲಾ ಕಾರಣಗಳೂ ಹಿನ್ನೆಲೆಯಲ್ಲಿ ಹಿಂದೂ ಆರ್ಯರಲ್ಲಿ ನೆಲೆಸಿದ್ದ ಪಾರಮಾರ್ಥಿಕ ದೃಷ್ಟಿ ಮತ್ತು ಅದನ್ನೇ ವೃದ್ಧಿ ಮಾಡಬೇಕೆನ್ನುವ ಕುತೂಹಲ ಇವೇ ಮೂಲಕಾರಣಗಳಾಗಿವೆ ಎನ್ನುವುದರಲ್ಲಿ ಪ್ರಬಲ ಪ್ರಮಾಣವು ಕಂಡು ಬರುತ್ತದೆ.

c. ಇತರರ ಸಹವಾಸದಿಂದಲೇ ನಾಟಕಕಲೆ–ಎನ್ನುವ ವಾದ ಮತ್ತೆ ಕೆಲವರು ಗ್ರೀಕರ ಸಹವಾಸದಿಂದ ನಾಟಕ ಕಲೆಯು ಬೆಳೆಯಿತು ಎಂದಿರುವರು. ಅವರಲ್ಲಿ ವೆಬರ್ (Weber) ಪ್ರಧಾನ ವಿಂಡಿಂಷ್ (Windish) ಇದನ್ನು ಪ್ರತಿಭಟಿಸಿರುವನು. ಲೆವಿ (Levi) ಸಮರ್ಥಿಸಿರುವನು. ಕೀತ್ (Keeth) ಇದನ್ನು ಪೂರ್ಣವಾಗಿ ತಳ್ಳಿಹಾಕಲಾಗುವುದಿಲ್ಲವೆಂದಿರುವನು ಇವರೆಲ್ಲರೂ ತಮ್ಮ ಅಭಿಪ್ರಾಯಗಳನ್ನು ಕೊಡುವಾಗ ಅವರವರಿಗೆ ತೋರಿದ ಕಾರಣಗಳನ್ನು ಕೊಟ್ಟಿರುವರು. ಅಲೆಕ್ಸಾಂಡರನಿಗೆ (Alexander) ನಾಟಕವೆಂದರೆ ಬಹಳ ಪ್ರಿಯ. ತನ್ನ ವಿರಾಮಕಾಲದಲ್ಲಿ ನಾಟಕವನ್ನು ನೋಡಿ ಸಂತೋಷಪಡುತ್ತಿದ್ದನು. ಇದಕ್ಕಾಗಿಯೇ ಅವನೊಡನೆ 3000 ಕಲೆಗಾರರು ಬಂದಿದ್ದರು. ಯವನಿಕ ಪದವು ಗ್ರೀಕರ ಸಹವಾಸದಿಂದ ಬಂದಿರುವಂತೆ ಕಾಣುತ್ತದೆ. ಗ್ರೀಕರಾದ ಮೇಲೆ ಪಾರ್ಥಿಯನ್ನರು, ಶಕರು, ಕುಶನ್ನರು, ದಂಡೆತ್ತಿ ಬಂದರು. ಅವರ ಸಹವಾಸದಿಂದಲೂ ಎಷ್ಟೋ ವಿಷಯಗಳು ಸಂಗ್ರಹಿಸಲ್ಪಟ್ಟವು. ಅಲೆಕ್ಸಾಂಡ್ರಿಯ (ಗ್ರೀಕರ ರಾಜ್ಯ) ಮತ್ತು ಉಜ್ಜಯಿನಿಗೂ ಪರಸ್ಪರ ಸಂಪರ್ಕವಿತ್ತು – ಇದೇ ಮೊದಲಾದ ಕಾರಣಗಳಿಂದ ನಾಟಕ ಕಲೆ ಹಿಂದೂ ಸಂಸ್ಕೃತಿಗೆ ಅನ್ಯದಿಂದ ಬಂದಿತು ಎನ್ನುವುದೇ ಇವರೆಲ್ಲರ ವಾದದ ಸಾರ.

## ೮೩. ಈ ಮೂರು ಊಹೆಗಳ ಸಾಮೂಹಿಕ ಸಮೀಕ್ಷೆ

ಈ ಮೂರು ವಿಧ ಭಾವನೆಗಳಲ್ಲಿಯೂ ಒಂದು ಪ್ರಧಾನಾಂಶವನ್ನು ನೋಡಬಹುದು. ನಾಟಕವು ಸಾಮಾಜಿಕ ದೃಷ್ಟಿಯಲ್ಲಿ ಸಾಮಾಜಿಕ ತೃಪ್ತಿಗಾಗಿ ಕಲ್ಪಿಸಲ್ಪಟ್ಟು ಬೆಳೆಯಿತು ಎನ್ನುವುದೇ ಈ ಮೂರು ವಿಧ ಭಾವನೆಗಳಿಗೂ ಮೂಲವೆಂದು ಕಾಣುತ್ತದೆ. ಮ್ಯಾಕ್ಸ್ ಮುಲ್ಲರ್‌ಗೆ ನಾಟಕದ ಮೂಲವು ವೇದದಲ್ಲಿ ಕಂಡಿವೆ. ಮತ್ತೊಬ್ಬರಿಂದ ನಮ್ಮಲ್ಲಿಗೆ ಬಂದಿತು ಎನ್ನುವ ವಾದವೇನೊ ಸರ್ವಥಾ ತ್ಯಾಜ್ಯವೇ ಸರಿ. ಆದರೆ ಶ್ರೋಡರ್ ಹೇಳಿರುವ ಕಾರಣವೇ ಅಂದರೆ ಹಿಂದೂ

–ಐರೋಪ್ಯ ಕಾಲದಿಂದಲೂ ಈ ಕಲೆಯು ಇತ್ತು ಎನ್ನುವ ಅಭಿಪ್ರಾಯವನ್ನೇ ಓಲ್ಡ್ ಬ್ರಾಂಡ್, ಕೋನ್, ವಿಂಡಿಷ್, ಲೆವಿ ಮೊದಲಾದವರು ಬೇರೆ ಬೇರೆಯಾಗಿ ಹೇಳಿ ಮಿಕ್ಕ ಎರಡು ಮತಗಳನ್ನೂ ಪುಷ್ಟೀಕರಿಸಿರುವರು

ವ್ಯಾವಹಾರಿಕ ಮತ್ತು ಪಾರಮಾರ್ಥಿಕವೆನ್ನುವ ಎರಡು ದೃಷ್ಟಿಗಳಲ್ಲಿ ನಾಟಕೋತ್ಪತ್ತಿಗೆ ಯಾವುದು ಮೂಲವೆನ್ನುವುದೇ ಪ್ರಧಾನ. ಪಾಶ್ಚಾತ್ಯರೆಲ್ಲರೂ ಮತ್ತು ಅವರ ಅನುಯಾಯಿಗಳಾದ ನಮ್ಮವರಲ್ಲಿ ಕೆಲವರು ಪ್ರಪಂಚೋತ್ಪತ್ತಿಗೆ ಹೇತುವಾಗಿ ಸ್ವಭಾವ ವಾದವನ್ನೇ ಅನುಮೋದಿಸಿರುವುದರಿಂದ ಆ ದಾರಿಯಲ್ಲೇ ನಾಟಕದ ಮೂಲವಿಮರ್ಶೆಯು ನಡೆದಿದೆ. ಅಂದರೆ ವೇದದಲ್ಲಿ ಇದರ ಮೂಲವಿದ್ದರೂ ಅದಕ್ಕೂ ಹಿನ್ನಲೆಯಲ್ಲಿ ವ್ಯವಹಾರವೇ ಇದಕ್ಕೆ ಕಾರಣವಾಗಿದೆ ಎನ್ನುವುದು ಅವರ ಮತ. ಪಾರಮಾರ್ಥಿಕದಲ್ಲಿ ಜಗತ್ಸೃಷ್ಟಿಯು ಚೇತನೋದ್ಧಾರಕ್ಕಾಗಿ ಎಂದಿರುವುದರಿಂದ ನಾಟಕ ಮೂಲದಲ್ಲಿಯೂ ಈ ಭಾವವನ್ನೇ ತಾಳಿ ಭರತನ ನಾಟ್ಯಶಾಸ್ತ್ರದಲ್ಲಿ ಈ ನಾಟಕಕ್ಕೆ ಬ್ರಹ್ಮನ ಅನುಗ್ರಹವೇ ಕಾರಣವೆಂದು ಹೇಳಿದೆ. ವೇದದಲ್ಲಿ ಹೇಳಿರುವ ಪಾರಮಾರ್ಥಿಕತೆಯನ್ನು ಪುಷ್ಟೀಕರಿಸಲು ಇತಿಹಾಸ ಪುರಾಣಗಳು ಎದ್ದವು. ವೇದ ಸಂರಕ್ಷಣಕ್ಕಾಗಿಯೇ ಸೂತ್ರಗ್ರಂಥಗಳು ಆದವು ಎಂದು ನಿಶ್ಚಿತವಾದರೆ ಆಗ ನಾಟಕಕ್ಕೆ ಪಾರಮಾರ್ಥಿಕ ದೃಷ್ಟಿಯನ್ನೇ ಮೂಲವನ್ನಾಗಿ ಹೇಳಬೇಕಾಗುತ್ತದೆ. ಮುಂದೆ ಬಹು ಸಂಖ್ಯೆಯಲ್ಲಿ ಬಂದ ನಾಟಕ ವಸ್ತುಗಳನ್ನು ನೋಡಿದರೆ ಅವೆಲ್ಲವೂ ರಾಮಾಯಣ, ಮಹಾಭಾರತ, ಭಾಗವತ, ಇತಿಹಾಸಪುರಾಣಗಳನ್ನೇ ಆಶ್ರಯಿಸಿರುವುದು ಸ್ಪಷ್ಟವಾಗಿದೆ. ಮಿಕ್ಕ ದೇಶದ ನಾಟಕ ಕಲೆಗೂ ಈ ದೇಶದ ನಾಟಕ ಕಲೆಗೂ ಇದೇ ಪ್ರಧಾನ ವೈಶಿಷ್ಟ್ಯ.

## ೯೪. ನಾಟಕ ಕಲೆಯ ಏಳಿಗೆ

ಹರ್ಟೆಲ್ ಹೇಳುವಂತೆ ವೇದದ ಸಂಹಿತಾ ಭಾಗವೇ ಒಂದು ಗಾನ ರೂಪ. ಸಾಮವೇದವಂತೂ ಸಂಗೀತವೇ. ಸಂಗೀತ, ನೃತ್ಯ ಮತ್ತು ಗಾನ, ಇವು ಕಲೆಗಳೆಂದೂ ಕಾಶಿಕೀ ಬ್ರಾಹ್ಮಣವು ಹೇಳಿರುತ್ತದೆ. ಪಾಣಿನಿಯು ಶೀಲಾಲಿ ಮತ್ತು ಕೃಶಾಶ್ವರು ಬರೆದಿರುವ ನಟ ಸೂತ್ರವನ್ನು ಹೇಳಿರುವನು. ಶೀಲಾಲಿ ಬ್ರಾಹ್ಮಣವೂ ಒಂದು ಇದೆ. ರಾಮಾಯಣದಲ್ಲಿ ನಟರು ಮತ್ತು ನರ್ತಕರು "ಸಮಾಜ" ದಲ್ಲಿ ಅಂದರೆ ರಂಗದಲ್ಲಿ ಮನೋರಂಜನೆಯನ್ನೂ ಹೊಂದುತ್ತಿದ್ದರು ಎಂದಿದೆ. ಇವರಲ್ಲಿ ವ್ಯಾಮಿಶ್ರರು - ಮಿಶ್ರ ಭಾಷೆಯನ್ನಾಡುವವರು. ವಾಲ್ಮೀಕಿಯು ಲವಕುಶರಿಗೆ ರಾಮಾಯಣವನ್ನು ಹಾಡಲು ಕಲಿಸಿಕೊಟ್ಟರು. ಇವರ ಗಾನ ಮತ್ತು ಅನುಕರಣಪೂರ್ವಕ ಪ್ರತಿಪಾದನದಿಂದ ರಾಮನು ಮನಸ್ಸಿನಲ್ಲಿ ಪರಿಣಾಮ ಉಂಟಾಯಿತೆಂದು ರಾಮಾಯಣದಲ್ಲಿದೆ. ನಟರಿಗೆ ಕುಶೀಲವರೆನ್ನುವ ಹೆಸರಿದೆ. ಕುತ್ಸಿತವಾದ ಶೀಲವುಳ್ಳವರೆಂದು ಕೆಲವರು ಅರ್ಥಮಾಡುವರು ಇದು ವೆಬರ್ (Weber) ತಿಳಿದಿರುವನು. ಶೀಲಾಲಿನ್ ಪದವೂ ಇದೇ ಅರ್ಥವುಳ್ಳದ್ದು. ಕುಶ ಮತ್ತು ಲವರಿಂದ ಈ ನಾಟಕ ಕಲೆಗೆ ಪ್ರಭಾವವು ಕೊಡಲ್ಪಟ್ಟಿದ್ದರಿಂದ. ಹಾಗೆ ಮಾಡುವವರಿಗೆಲ್ಲಾ ಕುಶೀಲವರೆನ್ನುವ ಹೆಸರು ರೂಢವಾದಂತಿದೆ. ಭಾರತದಲ್ಲಿನ "ನಟ" ಎನ್ನುವ ಶಬ್ದವು ಕಂಡುಬರುತ್ತದೆ. ಶಾಂತಿ ಪರ್ವ ಮತ್ತು ಅನುಶಾಸನ ಪರ್ವಗಳಲ್ಲಿ ನಾಟಕ ವಿಷಯವಾದ ಮಾತುಗಳಿವೆ. ಆದರೆ ಅವು ಕೇವಲ ಭಾವದಿರಹಿತವಾದ ಅಂಗ ವಿನ್ಯಾಸದಿಂದ ಅಭಿಪ್ರಾಯವನ್ನು ಸೂಚಿಸುವ ನರ್ತನಗಳು

(Pantomimer) ಎಂದು ನೀಲಕಂಠ ವ್ಯಾಖ್ಯಾತೃವು " ನಟ-ನರ್ತಕ" ಎನ್ನುವುದನ್ನು ವ್ಯಾಖ್ಯಾನ ಮಾಡುವಾಗ ಹೇಳಿರುವನು. ಆದರೆ ಭಾರತದ ವಿಸ್ತಾರವಾದ ಹರಿವಂಶದಲ್ಲಿ ಈ ಕಲೆಯು ರೂಪುಗೊಂಡಿರುವುದು ಚೆನ್ನಾಗಿ ಕಂಡುಬರುತ್ತದೆ. ಇನ್ನೂ ಮುಂದೆ ಕ್ರಿ. ಪೂ. 140 ರ ಪತಂಜಲಿಯ ಮಹಾಭಾಷ್ಯದಲ್ಲಿ ನಾಟಕವಿದ್ದುದಕ್ಕೆ ನಿದರ್ಶನವಿದೆ. ಭೂತಕಾಲದ ವಿಷಯವನ್ನು ವರ್ತಮಾನ ಕಾಲದಲ್ಲಿ ಹೇಳಿರುವುದು ಉದಾಹೃತವಾಗಿದೆ. ಅಂದರೆ ಇಂತಹ ಪ್ರಕರಣಗಳು ನಾಟಕಾಭಿನಯದಲ್ಲಿ ಸಾಧ್ಯ. ಸಾಕ್ಷಾತ್ತಾಗಿ ಕಂಸ ವಧೆ, ವಾಲಿ ವಧೆ, ಮೊದಲಾದ ನಾಟಕಗಳನ್ನೂ ಅಭಿನಯಿಸುವವರು ಗ್ರಂಥಕರು. ಲೆವಿ ಹೇಳುವಂತೆ ಶೌಭಿಕರೆಂದರೆ ಅನುಕರಣವನ್ನು ಕಲ್ಪಿಸಿಕೊಡುವವರು. ಇದರಿಂದ ಪತಂಜಲಿಯ ಕಾಲದಲ್ಲಿ ನಾಟಕ ಕಲೆಯು ರೂಪುಗೊಂಡಿರುವುದು ನಿಶ್ಚಿತವಾಗುತ್ತದೆ. ನಾಟಕ ಕಲೆಯಲ್ಲಿ ಸಂಗೀತ, ಗಾನ, ನೃತ್ಯ, ಅನುಕರಣ, ಪಾತ್ರ ನಿರ್ವಹಣ, ಭಾವಸ್ಫೂರ್ತಿಪ್ರದರ್ಶನ, ರಂಗ ಕಲ್ಪನೆ ಇವೆಲ್ಲವೂ ಸೇರುತ್ತನೆ. ಇಂತಹ ನಾಟಕ ಕಲೆಯು ಪತಂಜಲಿಯ ಕಾಲದಲ್ಲಿ ಇದ್ದಿರಬೇಕು. ರಂಗದಲ್ಲಿ ಹೆಂಗಸರು ಪಾತ್ರವನ್ನು ವಹಿಸುವ ವಾಡಿಕೆ ಇರಲಿಲ್ಲ. ಅವರು ನೃತ್ಯ ಮತ್ತು ಸಂಗೀತದಲ್ಲಿ ಪ್ರವೀಣರಾಗುತ್ತಿದ್ದರು. ಗಂಡನೇ ಹೆಂಗಸರ ಪಾತ್ರವನ್ನೂ ವಹಿಸುತ್ತಿದ್ದನು. ಅವನ ಹೆಸರು ಭೂಕುಂಸ. ನಾಟಕಗಳು ಧಾರ್ಮಿಕ ದೃಷ್ಟಿವುಳ್ಳವರಿಗಾಗಿದ್ದವು. ಪರ್ಯವಸಾನದಲ್ಲಿ ಸುಖ ಶಾಂತಿಯು ಇರಬೇಕು. ಕಂಸ ಮೊದಲಾದವರ ಹನನವಾದರೂ ಅವರು ಧರ್ಮಶತ್ರುಗಳಾದುದರಿಂದ ಮನಸ್ಸಿಗೆ ಹಿತವೆಂದೇ ಭಾವವಿತ್ತು. ಕಂಸವಧ, ಊರುಭಂಗ (ಭಾಸನ ನಾಟಕ) ಇವುಗಳಲ್ಲಿ ಇದನ್ನು ನೋಡಬಹುದು.

ಸೋಮಯಾಗದಲ್ಲಿ ಸೋಮ ವಿಕ್ರಯ ಮಾಡುವ ಶೂದ್ರನನ್ನು ಹೊಡೆಯುವ ವಾಡಿಕೆ ಇತ್ತು. ಇದನ್ನು ನಾಟಕ ಕಲೆಯಲ್ಲಿ ಸೇರಿಸಲು ವಿದೂಷಕನು ಕಲ್ಪಿತನಾದನೆಂದೂ ವಿಮರ್ಶಕರು ಅಭಿಪ್ರಾಯಪಟ್ಟಿರುವರು. ನಾಟ್ಯಶಾಸ್ತ್ರದಲ್ಲಿ ವಿದೂಷಕನ ಸ್ವರೂಪವಿರುವುದಕ್ಕೂ, ನಾಟಕಗಳಲ್ಲಿರುವುದಕ್ಕೂ ವ್ಯತ್ಯಾಸವಿದೆ. ಮುಖ್ಯವಾಗಿ ನಾಟಕವು ಬೆಳೆದಿದ್ದು ವೈಷ್ಣವ ಮತ್ತು ಶೈವ ಸಂಪ್ರದಾಯ ಮತ್ತು ಸಿದ್ಧಾಂತವನ್ನು ಪ್ರಚಾರ ಮಾಡುವುದಕ್ಕಾಗಿಯೂ ಮತ್ತು ಸಾಮಾನ್ಯ ಜನರಿಗೆ ಆಯಾ ಸಿದ್ಧಾಂತದಲ್ಲಿ ಭಕ್ತಿ ಶ್ರದ್ಧೆ ಉಂಟಾಗುವುದಕ್ಕೂ ನೆರವಾಯಿತೆನ್ನಬಹುದು. ಬೌದ್ಧ ಸಂಪ್ರದಾಯದಲ್ಲಿಯೂ, ಜೈನ ಸಂಪ್ರದಾಯದಲ್ಲಿಯೂ, ಇದೇ ಭಾವವು ಬೆಳೆದುಬಂದಂತಿದೆ. ಅಜಂತಾ ಗುಹಾವಶೇಷದಲ್ಲಿ ಇದನ್ನು ಕಾಣಬಹುದು. ಲಲಿತಾವಿಸ್ತಾರ, ಸದ್ಧರ್ಮ ಪುಂಡರೀಕ ಇತ್ಯಾದಿ ಗ್ರಂಥಗಳಲ್ಲಿ ಈ ನಾಟಕಗಳು ಜನಗಳ ಮತಬೋಧಕ ಸಾಧನಗಳೆಂದು ಸ್ಪಷ್ಟವಾಗಿ ಹೇಳಿದೆ. ಕ್ರಿ. ಪೂ. 1ನೇ ಶತಮಾನದ ಸಾಂಚಿ ಅವಶೇಷದಿಂದ ಆ ಕಾಲದಲ್ಲಿ "ಕಥಕ" ರೆನ್ನುವವರು ಇದ್ದರೆಂದು ಕಂಡು ಬರುತ್ತದೆ. ಇತಿಹಾಸಗಳನ್ನೂ ಇಂಪಾಗಿ ಹೃದಯಂಗಮವಾಗಿ ಹೇಳುವ ಮೂಲಕಥಕರು. ಈಗಿರುವ ಹರಿಕಥಾದಾಸರಂತೆ ಇವರ ಅನುಕರಣದೊಡನೆ ಕಥೆಯನ್ನು ಪ್ರತಿಪಾದನೆ ಮಾಡುತ್ತಿದ್ದರು. ಕ್ರಿ. ಶ. 7ನೇ ಶತಮಾನದ ಅಂತ್ಯ ಮಧ್ಯ ಕಾಲದಲ್ಲಿ ಬರೆಯಲ್ಪಟ್ಟ ಕಾದಂಬರಿಯಲ್ಲಿ ರಾಣಿಯು ಭಾರತದ ಪಠನವನ್ನು ಕೇಳಲು ಶಿವಾಲಯಕ್ಕೆ ಧಾವಿಸಿದ್ದು ವರ್ಣಿತವಾಗಿದೆ. ಅದೇ ಶತಮಾನದ ಅಂತ್ಯಭಾಗದಲ್ಲಿ (ಕ್ರಿ. ಶ. 700) ಕಾಂಬೋಡಿಯಾ ದೇಶದ ದೊರೆ ವಂಶಕ್ಕೆ ಸೇರಿದ ಸೋಮಶರ್ಮನೆನ್ನುವ ಬ್ರಾಹ್ಮಣನು ಒಂದು ದೇವಾಲಯಕ್ಕೆ ಪಠನಕ್ಕಾಗಿ ಭಾರತವನ್ನು ದಾನ ಮಾಡಿದ್ದು ತಿಳಿದಿದೆ. ಕ್ರಿ. ಶ. 11ನೇ ಶತಮಾನದಲ್ಲಿ ಕ್ಷೇಮೇಂದ್ರನು

ತನ್ನ ಕಾಲದವರನ್ನು ಕುರಿತು, ಅವರ ಪಠನವನ್ನೂ ಮಾತ್ರ ಕೇಳಿದರೇ ಹೊರತು ಅಲ್ಲಿ ಹೇಳಿರುವಂತೆ ನಡೆಯುವುದಿಲ್ಲ ಎಂದಿರುವನು. ಓದುವವರಿಗೆ ಪಾಠಕರೆಂತಲೂ ಅರ್ಥ ಪ್ರತಿಪಾದನೆ ಮಾಡುವವರಿಗೆ ದ್ವಾರಕವೆಂದೂ ಹೆಸರು.

ಈಗ ನಮಗೆ ಲಭ್ಯವಾಗಿರುವ ಗ್ರಂಥಗಳನ್ನು ವಿಮರ್ಶಿಸಿ, ಅಶ್ವಘೋಷನೇ ಮೊದಲನೇ ನಾಟಕಕರ್ತೃವೆಂದೂ, ಅವನಾದ ಮೇಲೆ ಭಾಸ, ಭಾಸನಾದ ಮೇಲೆ ಕಾಳಿದಾಸ ಎಂದು ಹೇಳಿರುತ್ತಿರುವವರು. ಈಗಾಗಲೇ ಹೇಳಿರುವಂತೆ ಕಾಳಿದಾಸನು ಅಶ್ವಘೋಷನಿಗಿಂತಲೂ ಹಿಂದಿನವನೆಂತಲೂ, ಆ ಕಾಳಿದಾಸನಿಗೂ, ಹಿಂದೆ ಭಾಸನು ಇದ್ದನೆಂದೂ ತಿಳಿಯಬೇಕು. ಉಜ್ಜಯನಿಯಲ್ಲಿ ಆಳುತ್ತಿದ್ದ ಕ್ಷತ್ರಪರು ಅವರಲ್ಲಿಯೂ ಕಾನಿಷ್ಕನು ಸಂಸ್ಕೃತಕ್ಕೆ ಉತ್ತೇಜನಕೊಟ್ಟು ಕವಿಗಳನ್ನು ಸಮ್ಮಾನಿಸುತ್ತಿದ್ದನೆಂದೂ ತಿಳಿದುಬಂದಿದ್ದರೂ ಅಶ್ವಘೋಷನದಲ್ಲದೆ ಮತ್ತಾವ ಕವಿಯ ಗ್ರಂಥವೂ ನಮಗೆ ಲಭ್ಯವಾಗಿಲ್ಲ. ಇದರಿಂದ ಕಾನಿಷ್ಕನು ಪರದೇಶದವನಾದುದರಿಂದ ಚಾತುರ್ವರ್ಣ್ಯಕ್ಕೆ ಸೇರದೇ ಸಮತ್ವ ದೃಷ್ಟಿಯುಳ್ಳ ಬೌದ್ಧ ಸಂಪ್ರದಾಯವನ್ನು ಗೌರವಿಸಲು ಅವನು, ಬೌದ್ಧನಾದ ಅಶ್ವಘೋಷನಿಗೆ ಉತ್ತೇಜನ ಕೊಟ್ಟು ಜಾತಿ ಭಾವನೆಯನ್ನು ತೊಡೆದು ಹಾಕಲು ಸಂಸ್ಕೃತವೇ ನೆರವಾಗಲಿ ಎನ್ನುವ ಉದ್ದೇಶವನ್ನು ತೋರಿದಂತಿದೆ. ಅಶ್ವಘೋಷನ ವಜ್ರ ಸೂಚಿ ಎನ್ನುವ ಬೌದ್ಧ ಸಂಪ್ರದಾಯ ಗ್ರಂಥದಲ್ಲಿ ಜಾತಿಪದ್ಧತಿಯನ್ನು ಖಂಡಿಸಿರುವುದನ್ನು ನಾವು ಗಮನಿಸಬಹುದು. ಈ ಕಾನಿಷ್ಕನಿಗೆ ಹಿಂದೆ ಕ್ರಿ. ಪೂ. 57ರಲ್ಲಿ ಶಕಪುರುಷ ವಿಕ್ರಮಾದಿತ್ಯನಿದ್ದನೆಂದೂ ನಿಶ್ಚಿತವಾಗಿದೆ. ಅವನ ಕಾಲದಲ್ಲೇ ನಿಷ್ಪಕ್ಷಪಾತ ಉತ್ತೇಜನವು ಪಂಡಿತರಿಗೆ ಇತ್ತು ಎನ್ನುವುದಕ್ಕೆ ಅವನು ಶಕ ಪುರುಷನಾಗಿರುವುದೇ ನಿದರ್ಶನ. ಅವನಿಗೂ ಹಿಂದೆ ಪುಷ್ಯಮಿತ್ರನು ತನ್ನ ದೊರೆಯನ್ನು ಕೊಂದು ತಾನು ಚಕ್ರವರ್ತಿಯಾಗಿ ಬ್ರಾಹ್ಮಣಕ್ಕೆ ಪೂರ್ಣ ಬೆಂಬಲ ಕೊಟ್ಟನೆನ್ನುವುದಕ್ಕೆ ಪತಂಜಲಿ ಋಷಿಯ ಮಹಾ ಭಾಷ್ಯದಲ್ಲಿ "ಪುಷ್ಯ ಮಿತ್ರಂ ಯಜಾಮಃ" ಮೊದಲಾದ ವಾಕ್ಯಗಳಿರುವುದೇ ಪ್ರಮಾಣವಾಗಿದೆ. ಇವರ ಕಾಲ ಕ್ರಿ. ಪೂ. 2ನೇ ಶತಮಾನದ ಮಧ್ಯಭಾಗ. ಆ ಕಾಲದಲ್ಲೇ ಅಂದರೆ ಬ್ರಾಹ್ಮಣಕ್ಕೆ ಪೂರ್ಣ ಬೆಂಬಲವಿದ್ದ ಕಾಲದಲ್ಲೇ ಭಾಸನು ತನ್ನ ನಾಟಕಗಳನ್ನು ಬರೆದಿರಬೇಕು. ಶಾಸ್ತ್ರೀಯ ಕರ್ಮಗಳಾದ ಯಜ್ಞ ಮತ್ತು ದಾನ ಇತ್ಯಾದಿಗಳು ಭಾಸನಿಗೆ ಪ್ರಿಯವಾಗಿದ್ದುದು ಅವನ ನಾಟಕಗಳಲ್ಲಿ ಚೆನ್ನಾಗಿ ಕಾಣುತ್ತದೆ. ಅಂದರೆ ಪುಷ್ಯಮಿತ್ರ ಮತ್ತು ಶಕ್ರಪುರುಷ ವಿಕ್ರಮಾದಿತ್ಯರ ಕಾಲದಲ್ಲಿ ಹಿಂದೂ ಸಂಪ್ರದಾಯಕ್ಕೆ ಉಪಯುಕ್ತವಾದ ನಾಟಕಗಳೂ ಎದ್ದವು ಎನ್ನಬಹುದು. ಗಿರ್ನಾರ್ ಶಿಲಾಶಾಸನದಲ್ಲಿ ರುದ್ರಧಾಮನು ಸಂಸ್ಕೃತಕ್ಕೆ ಪ್ರಾಶಸ್ತ್ಯ ಕೊಟ್ಟಿರುವುದು ತಿಳಿದುಬರುತ್ತದೆ. ಇದರ ಕಾಲ ಕ್ರಿ. ಶ. 150.

ಈ ಮೇಲೆ ಹೇಳಿದ ಕಾರಣಗಳಿಂದ ಸಂಸ್ಕೃತಕ್ಕೆ ಉತ್ತೇಜನ ಕೊಟ್ಟು ಆಯಾ ಸಂಪ್ರದಾಯಗಳಿಗೆ ನೆರವಾಗಲು ಆಳರಸರು ಮುಂದಾಳಾಗಿದ್ದುದು ಸಿದ್ಧವಾಗುತ್ತದೆ. ಆದ್ದರಿಂದ ನಾಟಕವು ಪ್ರಾಕೃತದ ತಳಹದಿಯಲ್ಲಿ ಹುಟ್ಟಿ ಸಂಸ್ಕೃತಕ್ಕೆ ಇಳಿಯಿತು ಎನ್ನುವುದು ತಪ್ಪಾಗುವುದು. ಭಾಸನ ನಾಟಕಗಳಲ್ಲಿರುವ ಪ್ರಾಕೃತವು ನಿರ್ದಿಷ್ಟವಾದ ರೂಪವನ್ನು ತಾಳಿಲ್ಲ. ಹಾಗೆಯೇ ಕಾಳಿದಾಸ ಮತ್ತು ಅಶ್ವಘೋಷನಲ್ಲಿದೆ. ಮುಂದೆ ಸಂಸ್ಕೃತದೊಡನೆ ಪ್ರಾಕೃತವು ಬೆಳೆದು ಶೌರಸೇನೀ ಮಾಗಧೀ, ಅರ್ಧ ಮಾಗಧೀ, ಮಹಾರಾಷ್ಟ್ರ ಎನ್ನುವ ನಿರ್ದಿಷ್ಟ ಆಕಾರವನ್ನು ಹೊಂದಿ ಸಂಸ್ಕೃತ ನಾಟಕಗಳಲ್ಲಿ ಪ್ರಯೋಗಿಸುವಂತಾಯಿತು.

## ೪೫. (45) ಭಾಸ (ಕ್ರಿ. ಪೂ. 2ನೇ ಶತಮಾನ)

ಟಿ. ಗಣಪತಿಶಾಸ್ತ್ರಿಯು ತನಗೆ ಲಭಿಸಿದ ತಾಳಪತ್ರಗಳಲ್ಲಿ ಭಾಸನ ನಾಟಕಗಳೆಂದು ಹೇಳಲಾಗುವ 13 ನಾಟಕಗಳನ್ನು ಕ್ರಿ. ಶ. 1912ರಲ್ಲಿ ಮುದ್ರಿಸುವವರಿಗೂ ಇವನ ವಿಷಯವು ಯಾರಿಗೂ ತಿಳಿದಿರಲಿಲ್ಲ. ಆದರೆ ಕಾಳಿದಾಸನು ತನ್ನ ಮಾಳವಿಕಾಗ್ನಿಮಿತ್ರ ನಾಟಕದಲ್ಲಿ ತನ್ನ ಹಿಂದಿದ್ದ ಕವಿಗಳನ್ನು ಹೇಳುವಾಗ ಇವನನ್ನು ಹೇಳಿರುವನು. ಬಾಣನು (ಕ್ರಿ. ಶ. 7ನೇ ಶತಮಾನ) ತನ್ನ ಕಾದಂಬರಿಯಲ್ಲಿ ಭಾಸನು ಅವನ ನಾಟಕಗಳಿಂದ ಪ್ರಸಿದ್ಧನಾದನೆಂದಿರುವನು. ಕ್ರಿ. ಶ. 8ನೇ ಶತಮಾನದ ವಾಕ್ಪತಿಯು ಭಾಸನ ವಿಷಯದಲ್ಲಿ ತನ್ನ ಸಂತೋಷವನ್ನು ತೋರಿಸಿರುವನು. 9ನೇ ಶತಮಾನದ ರಾಜಶೇಖರನು ತನ್ನ ಕಾವ್ಯಮೀಮಾಂಸದಲ್ಲಿ ಇವನನ್ನು ಉತ್ತಮ ಕವಿಗಳ ಗುಂಪಿಗೆ ಸೇರಿಸಿರುವನು. ಇವುಗಳಿಂದ ಭಾಸನು ಒಬ್ಬ ಪ್ರಸಿದ್ಧ ಕವಿ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಅವನದೇ ಎಂದು ಹೇಳಲಾದ 13 ನಾಟಕಗಳ ವಿಷಯದಲ್ಲಿ ನಿಷ್ಕರ್ಷೆಯಾಗಿ ಯಾವುದನ್ನೂ ಹೇಳಲಾಗುವುದಿಲ್ಲವೆಂದು ಕೆಲವರು ಅಭಿಪ್ರಾಯಪಟ್ಟಿರುತ್ತಾರೆ. ಇತ್ತೀಚೆಗೆ ಯಾಜ್ಞಫಲ ಎನ್ನುವ 14ನೇ ನಾಟಕವೂ ಇವನದೆಂದು ಹೇಳಲಾಗಿದೆ. ಈ 14ನೇ ನಾಟಕಗಳಲ್ಲಿ ಇರುವ ಪ್ರಾಕೃತವು ಕಾಳಿದಾಸನ ಪ್ರಾಕೃತಕ್ಕಿಂತಲೂ ಹಿಂದಿನದೆಂದು ಹೇಳಬಹುದು. ಭಾಮಹನು (ಕ್ರಿ. ಶ. 6 ಮತ್ತು 7ನೇ ಶತಮಾನ) ಇವನ ಪ್ರತಿಜ್ಞಾಯ ಗ್ರಂಥ ರಾಯಣ ನಾಟಕದ ಕಥೆಯನ್ನು ದೂಷಿಸಿರುವನು. 8ನೇ ಶತಮಾನದವನಾದ ವಾಮನನು ಸ್ವಪ್ನವಾಸವದತ್ತ ಮತ್ತು ಚಾರುದತ್ತ ನಾಟಕಗಳಿಂದ ಶ್ಲೋಕಗಳನ್ನು ತೆಗೆದುಕೊಂಡಿರುವನು. ಅಭಿನವಗುಪ್ತನು (11ನೇ ಶತಮಾನ) ಈ ಎರಡು ನಾಟಕಗಳನ್ನು ಎರಡಾವರ್ತಿ ನಮೂದಿಸಿರುವನು. 7ನೇ ಶತಮಾನದ ದಕ್ಷಿಣ ದೇಶದ ಕವಿ ಮಹೇಂದ್ರ ವಿಕ್ರಮ ವರ್ಮನು ತನ್ನ ಮತ್ತವಿಲಾಸವೆನ್ನುವ ಗ್ರಂಥದಲ್ಲಿ ಭಾಸನ ನಾಟಕವೆಂದು ಹೇಳಲಾಗುವ ನಾಟಕದ ಅನುಕರಣ ಮಾಡಿರುವುದರಿಂದಲೂ, ಮತ್ತು ಇವನ ನಾಟಕದ ಒಂದು ಅಂಕವು ದಕ್ಷಿಣದ ದೇಶದ ನಾಟಕರಂಗಗಳಲ್ಲಿ ಆ ಕಾಲದಲ್ಲಿ ಆಡಲ್ಪಡುತ್ತಿದ್ದುದರಿಂದಲೂ ಇವನು ದಕ್ಷಿಣ ದೇಶದವನೆಂದು ಹೇಳಬಹುದು. ಕಾಳಿದಾಸನು ಇವನನ್ನು ಹೇಳಿರುವುದರಿಂದ ಕ್ರಿ. ಪೂ. 1ನೇ ಶತಮಾನಕ್ಕೆ ಹಿಂದಿನವನು. ಅಶ್ವಘೋಷನ ಬುದ್ಧ ಚರಿತೆಯಲ್ಲಿ ಇವನ ಒಂದು ಶ್ಲೋಕವು ಇರುವುದರಿಂದ ಈ ಶ್ಲೋಕವನ್ನು ಅಶ್ವಘೋಷನೇ ಭಾಸನಿಂದ ತೆಗೆದುಕೊಂಡಿರಬೇಕು ಎಂದು ಊಹಿಸಬಹುದು. ಪಾಶ್ಚಾತ್ಯರು. ಕಾಳಿದಾಸನು ಕ್ರಿ. ಶ. 4ನೇ ಶತಮಾನದವನೆಂದು ನಿರ್ಧರಿಸಿಕೊಂಡು ಅವನ ಹಿಂದಿನವನೆಂದು ನಿಶ್ಚಿತವಾದ ಭಾಸನೇ ತನ್ನ ಯೌಗಂಧ ರಾಯಣದಲ್ಲಿ ಅಶ್ವಘೋಷನ ಶ್ಲೋಕವನ್ನು ತೆಗೆದುಕೊಂಡಿರಬೇಕೆಂದು ಹೇಳಿರುವರು. ಇದು ಸರಿ ಎಂದು ಕಾಣುವುದಿಲ್ಲ. ಶೈಲಿ ಮತ್ತು ಪ್ರತಿಪಾದನಾ ಕ್ರಮ ಮೊದಲಾದವುಗಳನ್ನು ಗಮನಿಸಿ ನೋಡಿದರೆ ಅಶ್ವಘೋಷನಿಗಿಂತಲೂ ಮತ್ತು ಬ್ರಾಹ್ಮಣ್ಯದಲ್ಲಿ ಶ್ರದ್ಧೆಯು ಕಾಣುವುದರಿಂದ ಮಹಾಭಾಷ್ಯ ಕರ್ತಾಪತಂಜಲಿಯ ಕಾಲವಾದ ಕ್ರಿ. ಪೂ. 2ನೇ ಶತಮಾನವೇ ಇವನದೆಂದು ಹೇಳಬಹುದು.

| **ಇವನ ನಾಟಕಗಳು** | | ಕಥಾವಸ್ತುವನ್ನು ತೆಗೆದದ್ದು |
|---|---|---|
| 1. ಮಧ್ಯಮ ವ್ಯಾಯೋಗ | ಏಕಾಂಕ ನಾಟಕಗಳು | ಮಹಾಭಾರತದಿಂದ |
| 2. ದೂತ ಘಟೋತ್ಕಚ | | |
| 3. ಕರ್ಣಭಂಗ | | |
| 4. ಊರುಭಂಗ | | |
| 5. ಪಂಚರಾತ್ರ | – ಮೂರು ಅಂಕಗಳು | |
| 6. ದೂತವಾಕ್ಯ | – ಒಂದು ಅಂಕ | |
| 7. ಬಾಲಚರಿತ | – 5 ಅಂಕಗಳು | – ಹರಿವಂಶ, ವಿಷ್ಣುಪುರಾಣ ಮತ್ತು ಭಾಗವತದಿಂದ ಕಥೆಯು ತೆಗೆಯಲ್ಪಟ್ಟರೂ ಸ್ವಲ್ಪ ವ್ಯತ್ಯಾಸ ಮಾಡಲ್ಪಡುತ್ತದೆ |
| 8. ಪ್ರತಿಮಾ ನಾಟಕ – 7 ಅಂಕಗಳು (ದಶರಥನ ಮರಣ) | | ರಾಮಾಯಣದಿಂದ |
| 9. ಅಭಿಷೇಕ ನಾಟಕ – 6 ಅಂಕಗಳು (ರಾಮ ಪಟ್ಟಾಭಿಷೇಕ) | | |
| 10. ಅವಿಮಾರಕ – 6 ಅಂಕಗಳು | | ಕಥಾ ಸರಿತ್ಸಾಗರದ ಮೂಲದಿಂದ |
| 11. ಪ್ರತಿಜ್ಞಾ – ಯೌಗಂಧರಾಯಣ – 4 ಅಂಕಗಳು | | ಗುಣಾಢ್ಯನ ಬೃಹತ್ಕಥೆಯ ಮೂಲದಿಂದ |
| 12. ಸ್ವಪ್ನವಾಸವದತ್ತ – 6 ಅಂಕಗಳು | | |
| 13. ಚಾರುದತ್ತ – 4 ಅಂಕಗಳು | | |

## ಭಾಸನ ಕಲೆ ಮತ್ತು ಅಲಂಕಾರ ದೃಷ್ಟಿ (Arts & techenique)

ಭಾಸನು ರಾಮಾಯಣ, ಭಾರತ, ಭಾಗವತ, ಕಥಾ ಸರಿತ್ಸಾಗರ ಮತ್ತು ಬೃಹತ್ಕಥಾಗ್ರಂಥಗಳಿಂದ ವಸ್ತುವನ್ನು ತೆಗೆದುಕೊಂಡು ತನ್ನ ಮನೋಧರ್ಮಕ್ಕನುಸಾರವಾಗಿ ಪಾತ್ರಗಳನ್ನು ಕಲ್ಪಿಸಿ ಮಾತನಾಡುವಂತೆ ಮಾಡಿರುವುದರಲ್ಲಿ ಅವನ ವ್ಯಕ್ತಿತ್ವವು ಸ್ಪಷ್ಟವಾಗಿ ಕಾಣುತ್ತದೆ. ರಾಮಾಯಣದ ಕಥೆಗಳನ್ನು ತೆಗೆದು ಬರೆದಿರುವ ನಾಟಕಗಳಲ್ಲಿ (ಪ್ರತಿಮಾ ನಾಟಕ ಮತ್ತು ಅಭಿಷೇಕ ನಾಟಕ) ಪಾತ್ರಗಳು ಅಷ್ಟು ಸ್ವಾರಸ್ಯವಾಗಿ ವರ್ಣಿತವಾಗಿಲ್ಲ. ಕವಿತಾ ಶಕ್ತಿಯೂ ಅಷ್ಟು ಉತ್ತಮವಾಗಿಲ್ಲ. ಭಾರತದಿಂದ ತೆಗೆದ ಕಥೆಗಳಲ್ಲಿ ಕವಿತಾ ಚಾತುರ್ಯವು ಹೆಚ್ಚಾಗಿದೆ. ಮಧ್ಯಮ ವ್ಯಾಯೋಗದಲ್ಲಿ ಪತಿಪ್ರೇಮ ಮತ್ತು ಮಾತೃಭಕ್ತಿಯೂ, ಕರ್ಣಭಾರದಲ್ಲಿ ಕರ್ಣನ ಶೌರ್ಯ, ಅಹಂಕಾರ ಮತ್ತು ಔದಾರ್ಯವೂ, ದೂತಘಟೋದ್ಘಜದಲ್ಲಿ ಧೃತರಾಷ್ಟ್ರನ ಸಂದೇಹ ಅವನ ಮುನ್ನೆಚ್ಚರಿಕೆಯೂ, ದೂತ ವಾಕ್ಯದಲ್ಲಿ ದುರ್ಯೋಧನ ಮತ್ತು ಕೃಷ್ಣನ ಸ್ವಭಾವ ವೈಚಿತ್ರ್ಯ, ದುರ್ಯೋಧನನ ಡಂಭ, ಅಸೂಯೆ, ಕೃಷ್ಣನ ಗಾಂಭೀರ್ಯ ಮತ್ತು ಔನ್ನತ್ಯವೂ, ಊರುಭಂಗದಲ್ಲಿ ದುರ್ಯೋಧನನ ಸ್ವಭಾವ ಚಿತ್ರ –ಇವೆಲ್ಲಾ ಚೆನ್ನಾಗಿದೆ. ಬಾಲಚರಿತದಲ್ಲಿ ಇವನ ಪ್ರತಿಭೆಯು ಚೆನ್ನಾಗಿ ಕಾಣುತ್ತದೆ. ರಸಗಳ ಮೇಳನವನ್ನು ಇಲ್ಲಿ ನೋಡಬಹುದು. ಅವಿಮಾರಕದಲ್ಲಿ ಶೃಂಗಾರದ ರೂಪವು ಉತ್ತಮವಿಲ್ಲದಿದ್ದರೂ ಶೀಘ್ರ ಪ್ರಿಯಾಕಾರಿತ್ವವು ಕಂಡುಬರುತ್ತದೆ. ಇದಕ್ಕಿಂತಲೂ ಪ್ರತಿಜ್ಞಾ ಯೌಗಂಧರಾಯಣದಲ್ಲಿ ಇವನ ಪ್ರತಿಭೆಯು ಹೆಚ್ಚಾಗಿದೆ. ಸ್ವಪ್ನವಾಸವದತ್ತದಲ್ಲಿ ಪ್ರೇಮದ ಸೊಬಗು ಮತ್ತು ಜಾಸ್ತಿಯಾಗಿದೆ. ಚಾರುದತ್ತದಲ್ಲಿ ಇವನ ಪಕ್ವಬುದ್ಧಿಯು ತೋರುತ್ತದೆ. ಆದರೆ ಪೂರ್ಣವಾಗಿಲ್ಲ. ಅಲಂಕಾರ ಶಾಸ್ತ್ರ ನಿಯಮ ಪಾಲನೆಯಲ್ಲಿ ಅಷ್ಟು ಋಜುತ್ವವಿಲ್ಲ. ಭರತನ ನಾಟ್ಯಶಾಸ್ತ್ರ ದನಿಯ ಮಗಳು ಇವನಿಗೆ ತಿಳಿದಂತಿಲ್ಲ. ರಂಗದ ಮೇಲೆ ಮರಣ ತೋರಿಸುವುದು ಶವವು ಕಾಣುವಂತೆ ಮಾಡುವುದು–ನಾಟಕ ನಿಯಮಗಳಿಗೆ ಭಂಗತಂದಂತಿದೆ.

ಇವನ ನಾಟಕಗಳಲ್ಲಿ ಜಟಿಲವಾದ ಪ್ರಶ್ನೆಗಳೇ ಏಳುವುದಿಲ್ಲ. ಸ್ವಾಭಾವಿಕ ಮಾನವ ಜೀವನದ ಚಿತ್ರ ಒಂದು ಕಡೆ, ಮತ್ತೊಂದು ಕಡೆ ಮಾಯಾ, ಮಂತ್ರಪವಾಡ ಇತ್ಯಾದಿಗಳು ಮಿಳಿತವಾಗಿವೆ. ಸ್ವಾಭಾವಿಕತೆ ಮತ್ತು ಅತಿಶಯ ಇವೆರಡೂ ಇವನ ಹೃದಯದಲ್ಲಿ ಅವಕಾಶ ಹೊಂದಿರುವಂತಿದೆ. ಕಾಳಿದಾಸನು ಶಿವಭಕ್ತನಾದರೆ ಇವನು ವಿಷ್ಣು ಭಕ್ತ. ಭಕ್ತಿಯು ಹುಟ್ಟುವ ಪ್ರಕರಣಗಳಲ್ಲಿ ನೈಜಿಕ ಮನೋಧರ್ಮವನ್ನು ತೋರಿಸಿರುವನು. ಭಾಷೆಯು ಲಲಿತವಾಗಿ ಮಾತನಾಡುವ ಭಾಷೆಯಂತಿದೆ. ಓದಿ ಸಂತೋಷಪಡುವ ನಾಟಕಗಳಿವು. ಕಾವ್ಯಗಳಂತೆ ಓದಿ ಶ್ರಮಪಟ್ಟು ಅರ್ಥಮಾಡಿಕೊಂಡು ಜ್ಞಾನ ಸಂಪಾದಿಸುವ ಗ್ರಂಥಗಳಿಲ್ಲ.

ಶಾಸ್ತ್ರೀಯ ಕರ್ಮಗಳಾದ ಯಜ್ಞ ಮತ್ತು ದಾನ ಇವನಿಗೆ ಬಹಳ ಪ್ರಿಯವಾಗಿದೆ.

ಶಿಕ್ಷಾಕ್ಷಯಂಗಚ್ಛತಿ ಕಾಲಪರ್ಯಯಾತ್
ಸುಬದ್ಧಮೂಲಾನಿ ಪತಂತಿ ಪಾದಪಾಃ

ಜಲಂ ಜಲಸ್ಥಾನಗತಂ ಚಶುಷ್ಯತಿ
ಹುತಂ ಚ ದತ್ತಂ ಚ ತಥೈವ ತಿಷ್ಠತಿ

ಧರ್ಮಸಂಕಟವನ್ನು ಚೆನ್ನಾಗಿ ವರ್ಣಿಸುವನು –ಅಭಿಷೇಕ ನಾಟಕದಲ್ಲಿ

ವಿಜ್ಞಾನಿಯ ದೇವ್ಯಾ ಶ್ಯೈಚಂಚ ಶ್ರುತ್ವಾಬಾರ್ಯಸ್ಯ ಶಾಸನಂ
ಧರ್ಮಸ್ನೇಹಾಂತರೇ ನ್ಯಸ್ತಾ ಬುದ್ಧಿ ರ್ದೋಲಾಯತೇಯನಃ

ಭಕ್ತಿ ಮತ್ತು ವಾತ್ಸಲ್ಯವನ್ನು ಏಕಕಾಲದಲ್ಲಿ ವರ್ಣಿಸಿರುವುದು ಸುಂದರವಾಗಿದೆ. ಪ್ರತಿಮಾ ನಾಟಕದಲ್ಲಿ

ಸಮಂಬಾಷ್ಪೇಣ ಪತತಾತಸ್ಯೋಪಂ ಮಮಾಪಧ್ಯಃ
ಪಿತುರ್ಮೇಕ್ಲೇದಿತಂ ಪಾದೌ ಮಮಾಪಿಕ್ಲೇದಿತಂ ಶಿರಃ

ಅವಹೇಳನವನ್ನೂ ಚೆನ್ನಾಗಿ ವರ್ಣಿಸಿರುವನು –ಅಭಿಷೇಕ ನಾಟಕದಲ್ಲಿ ರಾವಣನು ರಾಮನ ವಿಷಯದಲ್ಲಿ

ಕಥಂ ಲಂಬಸತಃ ಸಿಂಹೋಮೃಗೇಣವಿನಿಪತ್ಯತೇ
ಗಜೋವಾಸುಮಹಾನ್ ಮತ್ತಃ ಸೃಗಾಲೇನ ನಿಹನ್ಯತೇ

ತಮಸ್ಸನ್ನು ಯಥಾರ್ಥವಾಗಿ ವರ್ಣಿಸಿರುವುದರಲ್ಲಿ ಒಂದು ನೀತಿ ಇದೆ

ಅಭಿಷೇಕ ನಾಟಕದಲ್ಲಿ

ಸುಲಭಶರಣ ಮಾಶ್ರಯೋ ಭಯಾನಾಂ
ವನಗಹನಂ ತಿಮಿರಂ ಚ ತುಲ್ಯಮೇವ
ಉಭಯಮಪಿ ರಕ್ಷ್ಯತೇಂಧಕಾರೇ
ಜನಯತಿ ಯಶ್ಚ ಭಯಾನಿ ಯಶ್ಚಭೀತಃ

ಇವನಿಗೆ ಅನುಪ್ರಾಸ ಮತ್ತು ಯಮಕವೆಂದರೆ ಪ್ರಿಯ. ಇದು ಭಾಷಾಪುಷ್ಟಿಯನ್ನೂ ಭಾವಪುಷ್ಟಿಯನ್ನೂ ತೋರಿಸುತ್ತದೆ. ಪೂಜ್ಯರು ಹೀನಕೃತ್ಯ ಮಾಡಿದರೆ ಅವರನ್ನು ನಿರ್ಭತ್ಸವ ಮಾಡುವ ಕ್ರಮವು ಗಂಭೀರವಾಗಿದೆ. ಪ್ರತಿಮಾ ನಾಟಕದಲ್ಲಿ

ವಯಮಯಶಸಾ ಚೀರೇಣಾರ್ಯೋನ್ನೃಪೋ ಗೃಹಮುತ್ಸುನಾ
ಪ್ರತತರುದಿತ್ಯೈಃ ಕೃಷ್ಣಾಯೋಧ್ಯಾ ಮೃಗ್ಯೈ ಸ್ಪುಹಲಕ್ಷಣಃ
ವಯಿತತನಯಾಃ ಶೋಕೇನಾಂಬಾಸ್ಸುಷಾಧ್ವಪರಿಶುದ್ಧ್ಯೈಃ
ಧಿಗಿತಿ ವಚಸಾ ಚೋಗ್ರೇಣಾ ತ್ಯಾತ್ತ್ವಯಾ ನನ ಯೋಜಿತಾಃ

ಪ್ರತಿಮಾ ನಾಟಕದಲ್ಲಿ ಭರತನ ಭಕ್ತಿಯನ್ನು ನೋಡಿದರೆ ಮನಸ್ಸಿನಲ್ಲಿ ಪಾರಮಾರ್ಥಿಕತೆಯು ಮೂಡುತ್ತದೆ.

ತ್ರತ್ರ.ಯಾಸ್ಯಾಮಿಯತ್ರಾಸೌ ವರ್ತತೇ ಲಕ್ಷ್ಮಣಪ್ರಿಯಃ
ನಾಯೋಧ್ಯಾ ತಂ ವಿನಾ ಯೋಧ್ಯಾ ಸಾಯೋಧ್ಯ ಯತ್ರ ರಾಘವಃ

ಹೀಗೆಯೇ ವಿರಾಟನು ಪಂಚರಾತ್ರದಲ್ಲಿ ಶೌರವನ್ನು ವರ್ಣಿಸುವುದರಲ್ಲಿ ದುಃಖಮಿಶ್ರಿತ ಅವಹೇಳನವನ್ನು ಧೃತರಾಷ್ಟ್ರನು ದೂತಘಟೋತ್ಕಜದಲ್ಲಿ ಹೇಳುವಾಗ ತನ್ನದೇ ಆದ ದಾರಿಯನ್ನು ತೋರಿಸಿರುವನು. ಯತ್ನ ಮಾಡಿದರೆ ಫಲವು ಸಿಗುವುದೆಂದು ಇವನ ಮನೋಧರ್ಮ. ಅಂದರೆ ಯತ್ನ ಮಾಡಲು ಮನಸ್ಸು ಬರಬೇಕಾದರೆ ಅದಕ್ಕೆ ವಿಧಿಯು ಸಹಕಾರ ಕೊಟ್ಟೇ ಕೊಡುವುದು. ಧರ್ಮ ಮಾರ್ಗದಲ್ಲಿ ವಿಧಿಯು ಯಾಪತ್ತಿಗೂ ಅಡ್ಡಲಾಗಿ ಬಾರದು. ಮತ್ತು ಪ್ರಥಮಪ್ರಯತ್ನದಲ್ಲಿ ಎಲ್ಲರಿಗೂ ಸ್ವಾತಂತ್ರ್ಯವಿದೆ ಎನ್ನುವ ವೇದಾಂತದ ತಿರುಳನ್ನು ಇವನು ಚೆನ್ನಾಗಿ ಅರಿತಿರುವನು. ಪ್ರತಿಜ್ಞಾಯೌಗಂಧರಾಯಣದಲ್ಲಿ–

ಕಾಷ್ಠಾದಗ್ನಿ ರ್ಜಾಯತೇ ಮಥ್ಯಮಾನಾತ್
ಭೂಮಿಸ್ತೋಯಂ ಖನ್ಯಮಾನಾದದಾತಿ
ಸ್ತೋತ್ಸಾಹನಂ ನಾಸ್ತ್ಯಸಾಧ್ಯಂ ನರಾಣಾಂ
ಮಾರ್ಗಾರಂಭಾಃ ಸರ್ವಯತ್ನಾಃ ಫಲಂತಿ

ಇಲ್ಲಿ ಮಾರ್ಗಾರಂಭಾಃ ಎನ್ನುವ ಪದವೇ ಸ್ವಾರಸ್ಯವಾಗಿದೆ. ಪ್ರಥಮ ಪ್ರಯತ್ನಕ್ಕೆ ಯಾವ ಆತಂಕವೂ ಇಲ್ಲವೆನ್ನುವ ಅರ್ಥವನ್ನು ಮಿಕ್ಕೆಡೆ ಸೇರಿಸಿಕೊಳ್ಳಬೇಕು. ಮಾನವ ಗುಣಗಳಲ್ಲಿ ಮೂಲಭೂತ ದೋಷವೆಂದರೆ ಕೃತಘ್ನತೆ ಇದು. ಹೋದರೆ ಯಾವವನು ದೇವನಾಗುವನು. ಸ್ವಪ್ನವಾಸವದತ್ತದಲ್ಲಿ

ಗುಣಾನಾಂ ವಾ ವಿಶಾಲಾನಾಂ ಸತ್ಕಾರಾಣಾಂ ಚನಿತ್ಯಶಃ
ಕರ್ತಾರ ಸ್ಸುಲಭಾ ಲೋಕೇ ವಿಜ್ಞಾತಾರಶ್ಚದುರ್ಲಭಾಃ

ಅವಿಮಾರಕದಲ್ಲಿ ರಾಜನ ಕಷ್ಟಗಳು ಎಷ್ಟಿವೆ ಎನ್ನುವುದನ್ನು ಎತ್ತಿ ತೋರಿಸಿರುವನು. ಹಾಗೆಯೇ ಮಂತ್ರಿ ಪದವಿಯು ಯಾರಿಗೂ ಅಪೇಕ್ಷಣೀಯವಲ್ಲವೆನ್ನುವ ವ್ಯಾಜದಿಂದ ಸೇವಾವ್ಯಕ್ತಿಯು ವ್ಯಕ್ತಿತ್ವಕ್ಕೆ ಎಷ್ಟು ಕುಂದಕ ತರುವುದೆನ್ನುವುದನ್ನೂ ಚೆನ್ನಾಗಿ ವರ್ಣಿಸಿರುವನು.

ಧರ್ಮಃ ಪ್ರಾಗೇವ ಚಿಂತ್ಯಃ ಸಚಿವ ಮತಿಗತಿಃ ಪ್ರೇಕ್ಷಿತ ವ್ಯಾಸ ಬುದ್ಧ್ಯಾ
ಪ್ರಚ್ಛಾದ್ಯೌರಾಗ ದೋಷಾ ಮೃದುಪರುಷಗಣಾ ಕಾಲಯೋಗೇನ ಕಾರ್ಯಾ
ಜ್ಞೇಯಂ ಲೋಕಾನುವೃತ್ತಂ ಪರಿಚರನಯನೈಃ ಮಂಡನಂ ಪ್ರೇಕ್ಷಿತವ್ಯಂ
ರಕ್ಷ್ಯೋಯತ್ನಾತ್ ಇಹಾತ್ಮಾ ರಣಶಿರಸಿ ಪುನಸ್ಸೋಽಪಿನಾವೇಕ್ಷಿತವ್ಯಂ

ಪ್ರಸಿದ್ಧಾ ಕಾರ್ಯಾಣಾಂ ಪ್ರವದತಿ ಜನಃ ಪಾರ್ಥಿವ ಬಲಂ
ವಿಪತ್ತಾ ವಿಸ್ಪಷ್ಟಂ ಸಚಿವ ಮತಿ ದೋಷಂ ಜನಯತಿ
ಅಮಾತ್ಯಾ ಇತ್ಯುಕ್ತಾಃ ಶ್ರುತಿ ಸುಖ ಮುದಾರಂ ನೃಪತಿ ಭಿಃ
ಸುಸೂಕ್ಷ್ಮ ದಂಡ್ಯಂತೇ ಮತಿಬಲವಿದ ಗ್ಧಾಃ ಕುಪುರುಷಾಃ

ಹೀಗೆಯೇ ಮಗಳ ಮದುವೆ ವಿಚಾರದಲ್ಲಿ ತಾಯಿಯ ಚಿಂತೆ ಪ್ರತಿಜ್ಞಾಯೌಗಂಧ ರಾಯಣದಲ್ಲಿ ಮತ್ತು ಪಂಚರಾತ್ರದಲ್ಲಿ. ಆಚಾರ್ಯನ ಹೊಣೆ. ಊರು ಭಂಗದಲ್ಲಿ ಇವೇ ಮೊದಲಾದ ಮಾನವ ಹೃದಯವನ್ನು ಬಿಚ್ಚುವ ಭಾವಗಳನ್ನು ಸ್ವಾಭಾವಿಕವಾಗಿ ವರ್ಣಿಸಿರುವನು. ನೀತಿ ಬೋಧಕವೂ. ವಾಕ್ಯಕ್ಕೆ ಸೌಂದರ್ಯ ಕೊಡುವಂತಹವೂ ಆದ –ಖಲು. ಮಾ. ಹೋತು ಖಲು. ಕಿನ್ನು ಖಲು. ಬಾಢಂ ಇತ್ಯಾದಿ ಪದಗಳು ಸಾರ್ಥಕವಾಗಿ ಪ್ರಯೋಗಿಸಲ್ಪಟ್ಟಿವೆ

ಇವನ ಭಾಷಾ ಶೈಲಿಯ ವೈಖರಿ. ಮಾಧುರ್ಯ ಮತ್ತು ಪರಸ್ಪರ ಮೇಲಿನ ಇವೆಲ್ಲವೂ ವ್ಯಾಕರಣಬದ್ಧವಾಗಿವೆ ಆದರೆ ಶ್ಲೋಕಗಳಲ್ಲಿ ವೃತ್ತವನ್ನು ಕೆಡಿಸದಿರುವುದಕ್ಕಾಗಿ ಸ್ವಲ್ಪ ವ್ಯತ್ಯಾಸ ಮಾಡಿರುವನು ಪ್ರಾಕೃತವು ಶೂರಸೇನಿಯಂತಿದ್ದು ಎರಡು ಕಡೆ ಮಾಗಧಿ. ಒಂದು ಕಡೆ ಮಾಗಧಿಯಂತೆ ತೋರುತ್ತದೆ. ಆದರೆ ಪ್ರಾಕೃತವು ನಿರ್ದಿಷ್ಟ ರೂಪವನ್ನು ತಾಳದೆ ಪ್ರಾಚೀನತೆಯನ್ನೂ ಸ್ಥಿರಪಡಿಸುತ್ತದೆ

ಕಾಳಿದಾಸನಿಗೆ ಹಿಂದೆ ಭಾಸ–ಸೌಮಿಲ್ಲ–ಕವಿಪುತ್ರರೆಂದು ಕಾಳಿದಾಸನು ಹೇಳಿರುವುದರಲ್ಲಿ ಮಾತ್ರ ಭಾಸನು ಈಗ ನಮಗೆ ಸಿಕ್ಕಿರುವನು. ಸಾಮಿಲ್ಲ ಕವಿ ಪುತ್ರರ ವಿಷಯದಲ್ಲಿ ನಮಗೆ ಏನೂ ಪ್ರಕಾಶವಿಲ್ಲ. ರಾಜಶೇಖರನು ರಾಮಿಲ್ಲನೆನ್ನುವ ಕವಿಯನ್ನು ಹೇಳಿರುವನಲ್ಲದೆ ಸಾಮಿಲ್ಲನನ್ನೂ ಹೇಳಿ ಅವನು ಶೂದ್ರಕ ಕಥಾವನ್ನು ಬರೆದನೆಂದು ಹೇಳಿರುವನು. ರಾಮಿಲ್ಲ–ಸಾಮಿಲ್ಲರು ಬರೆದುರುವ ಶ್ಲೋಕವೆಂದು ಹೇಳಲಾಗುವ ಒಂದು ಪದ್ಯವು ಶೃಂಗಧರ ಪದ್ಧತಿ ಎನ್ನುವ ಗ್ರಂಥದಲ್ಲಿಯೂ ಕವಿ ಪುತ್ರನ ಒಂದು ಶ್ಲೋಕವು ಸುಭಾಷಿತಾವಳಿಯಲ್ಲಿಯೂ ಲಭ್ಯವಾಗಿವೆ. ಕಾಳಿದಾಸನ ಗಮನವನ್ನೂ ಸೆಳೆಯುವ ಕವಿಗಳಾದ ಇವರ ಗ್ರಂಥ ಮತ್ತು ಚರಿತ್ರೆಯು ನಷ್ಟವಾಗಿರುವುದು ಒಂದು ಶೋಚನೀಯ ವಿಷಯವೇ

## ೪೬. (40) ಮೃಚ್ಛಕಟಿಕ (ಶೂದ್ರಕ) ಕ್ರಿ. ಪೂ. 1ನೇ ಶತಮಾನ

ಭಾಸನ ನಾಟಕಗಳು ದೊರೆತ ಮೇಲೆ ಇದು ಚಾರುದತ್ತ, ನಾಟಕಕ್ಕೂ ಮೃಚ್ಛಕಟಿಕಕ್ಕೂ ಇರುವ ನಿಕಟ ಸಂಬಂಧವನ್ನು ನೋಡಿದ ಮೇಲೆ, ಮೃಚ್ಛಕಟಿಕ ಗ್ರಂಥದ ವಿಷಯದಲ್ಲಿ, ಅದರ ಕರ್ತೃವಿನ ವಿಷಯದಲ್ಲೂ ಭಾವನೆಯು ವ್ಯತ್ಯಾಸಹೊಂದಿದೆ. ಕಾಳಿದಾಸನು ಮೃಚ್ಛಕಟಿಕವನ್ನು ನಮಗೆ ತಿಳಿಸದೇ ಇರುವುದರಿಂದ ಅವನಾದ ಮೇಲೆ ಅದು ಬರೆಯಲ್ಪಟ್ಟಿರಬೇಕೆನ್ನುವ ಭಾವನೆ ಇತ್ತು. ಚಾರುದತ್ತ ನಾಟಕ ಸಿಕ್ಕಿದ ಮೇಲೆ ಅದರ ಹಿನ್ನಲೆಯಲ್ಲಿ ಬರೆಯಲ್ಪಟ್ಟ ಮೃಚ್ಛಕಟಿಕಕ್ಕೆ ಬೇರೆ ಕೀರ್ತಿಯು ಬರಲು ಅವಕಾಶವಿಲ್ಲವೆಂದೇ ಅವನು ಸುಮ್ಮನಿದ್ದಿರಬಹುದು. ವಾಮನನು ಶೂದ್ರಕವನ್ನು ಹೇಳಿರುವನು. ಮೃಚ್ಛಕಟಿಕದ ಶ್ಲೋಕಗಳನ್ನು ದಂಡಿಯು ತೆಗೆದುಕೊಂಡಿರುವನು. ಮೃಚ್ಛಕಟಿಕದಲ್ಲೂ ಕವಿಯು ಶೂದ್ರಕನೆಂದು ಹೇಳಲ್ಪಟ್ಟಿದೆ. ಅವನ ವಿಷಯದಲ್ಲಿ ಒಂದು ಕಥೆ ಇದೆ. ಅವನು ಸಕಲ ಶಾಸ್ತ್ರ ಪಾರಂಗತನಾಗಿ ವೇದ, ಕಲೆ, ವ್ಯಾಕರಣ, ಹಸ್ತ್ಯಾಯುರ್ವೇದ ಮೊದಲಾದವುಗಳಲ್ಲಿ ಪೂರ್ಣ ಪಾಂಡಿತ್ಯವನ್ನು ಸಂಪಾದಿಸಿದ್ದನು. ತನ್ನ ಉತ್ತರ ವಯಸ್ಸಿನಲ್ಲಿ ಅಶ್ವಮೇಧಯಾಗವನ್ನು ಮಾಡಿ, ಮಗನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಿ ತನ್ನ ಆಯಸ್ಸು 100ವರ್ಷ 10 ದಿನಗಳು ಆದಮೇಲೆ ಅಗ್ನಿಪ್ರವೇಶಮಾಡಿ ಪ್ರಾಣಬಿಟ್ಟನು ಎಂದು ಹೇಳಲಾಗಿದೆ. ಕಲ್ಹಣನು ರಾಜತರಂಗಿಣಿಯಲ್ಲಿ ಇವನನ್ನು ವಿಕ್ರಮಾದಿತ್ಯನೊಡನೆ ಹೇಳಿರುವನು. ವೇತಾಳ ಪಂಚವಿಂಶತಿಯು ಇವನು 100 ವರ್ಷ ಬಾಳಿದನೆಂದು ಹೇಳಿದೆ. ಇವನ ರಾಜಧಾನಿ ವರ್ಧಮಾನ ಅಥವಾ ಶೋಭಾವತೀ ಕಾದಂಬರಿಯಲ್ಲಿ ಇವನ ರಾಜಧಾನಿ ವಿದಿಶ. ಹರ್ಷಚರಿತೆಯಲ್ಲಿ ಇವನು ಹೇಗೆ ತನ್ನ ಶತ್ರುವಾದ ಚಂದ್ರಕೇತುವನ್ನು ಗೆದ್ದನೆಂದು ಹೇಳಿದೆ. ದಶಕುಮಾರ ಚರಿತೆಯಲ್ಲಿ ಇವನು ಶಾತವಾಹನ ಅಥವಾ ಶಾಲಿವಾಹನನ ಮಂತ್ರಿಯಾಗಿ ಅರ್ಧರಾಜ್ಯವನ್ನು ಹೊಂದಿ ಬಾಳಿನೆಂದು ಹೇಳಲಾಗಿದೆ.

ಇದೆಲ್ಲವನ್ನೂ ಗಮನಿಸಿದರೆ ಶೂದ್ರಕನು ಯಾರೆಂದು ಹೇಳಲು ಸಾಧ್ಯವಿಲ್ಲವಾಗಿದೆ. ಕೋನೌ, ವಿಂಡಿಷ್, ಲೆವಿ–ಇವರು ಬೇರೆ ಬೇರೆ ಅಭಿಪ್ರಾಯಪಟ್ಟಿರುವರು. ಕೀತಿನ ಪ್ರಕಾರ ಇವನು ಒಬ್ಬ ಕಲ್ಪಿತ ವ್ಯಕ್ತಿ. ನೂರು ವರ್ಷ ಬಾಳಿ ತನ್ನ ಸಾವಿನ ದಿನವನ್ನು ತಿಳಿದು ಅಗ್ನಿಯಲ್ಲಿ ಪ್ರಾಣಬಿಟ್ಟನೆನ್ನುವುದು ಅಸಂಭವವೆಂದು ಹೇಳಲಾಗಿದೆ. ಆದರೆ ಯೋಗಶಕ್ತಿಯಿಂದ ಇದು ಸಾಧ್ಯವೆಂದು ಪಾಶ್ಚಾತ್ಯರಿಗೆ ತಿಳಿಯದೇ ಇರುವುದು ಸಹಜ. ಹೇಗಾದರೂ ಮೃಚ್ಛಕಟಿಕವು ಕಾಳಿದಾಸನ ಹಿಂವಿದ್ದುದೆಂದು ಹೇಳಬಹುದು. " ಉತ್ತಂಡ ರಂಗನಾಥ ಕವಿ" ಎನ್ನುವನು ಮೃಚ್ಛಕಟಿಕವನ್ನು ಬರೆದನೆಂದು ಈಗ ನಂಬಿಕೆ ಇದೆ.

ಇದು 10 ಅಂಗವುಳ್ಳ ನಾಟಕ. ವಸಂತಸೇನೆ ಎನ್ನುವ ಗಣಿಕೆಯು ಚಾರುದತ್ತನೆನ್ನುವ ಬ್ರಾಹ್ಮಣದಲ್ಲಿ ಅನುರಕ್ತಳಾದಳು. ಇವಳನ್ನು ದೊರೆಯಾದ ಪಾಲಕನ ಭಾವನಾದ ಸಂಸ್ಥಾನಕನ ಹೊಂದಲು ಪ್ರಯತ್ನಪಡುವನು. ಚಾರುದತ್ತನ ಮೇಲೆ ದೂರು ಬರುವುದು. ಮರಣದಂಡನೆಗೆ ಅವನು ಗುರಿಯಾಗುವನು. ಕೊನೆಗೆ ಸತ್ಯವು ಹೊರಬಿದ್ದು ಇವನು ರಕ್ಷಿಸಲ್ಪಡುವನು ಮತ್ತು ವಸಂತಸೇನೆಯನ್ನು ಮದುವೆಯಾಗುವನು. ಈ ಕಥೆಯೊಡನೆ ಒಂದು ರಾಜಕೀಯವೂ ಸೇರಿಸಲ್ಪಟ್ಟಿದೆ.

ಆರ್ಯಕವೆನ್ನುವ ಗೊಲ್ಲನು ರಾಜನಾಗುವನೆಂಬ ಸುದ್ದಿಯು ಎಲ್ಲೆಲ್ಲೂ ಹರಡಿದೆ. ದೊರೆಪಾಲಕನಿಗೆ ತಿಳಿದು ಆ ಆರ್ಯಕನನ್ನು ಸೆರೆಹಿಡಿಯುವನು. ಅವನು ಸೆರೆಯಿಂದ ತಪ್ಪಿಸಿಕೊಂಡು ಓಡಿಹೋಗುವನು. ಇವನು ತಪ್ಪಿಸಿಕೊಳ್ಳಲು ಚಾರುದತ್ತನೇ ಕಾರಣನೆನ್ನುವ ದೂರಿನ ಮೇಲೆಯೂ ಅವನಿಗೆ ಮರಣದಂಡನೆ ವಿಧಿಸಲ್ಪಟ್ಟಿತು. ಸಂಸ್ಥಾನಕನ ಸೇವಕನ ಮಾತಿನ ಆಧಾರದ ಮೇಲೆ ತೀರ್ಪು ಕೊಡಲಾಗುವುದು. ಬೌದ್ಧ ಸನ್ಯಾಸಿಯೊಡನೆ ವಸಂತಸೇನೆಯು ಬಂದಮೇಲೆ ಚಾರುದತ್ತನ ಬಿಡುಗಡೆಯಾಯಿತು. ಅಷ್ಟರಲ್ಲಿ ಆರ್ಯಕನು ದೊರೆಯಾದನೆಂಬ ಸುದ್ದಿ ತಿಳಿಯಿತು. ಹೊಸ ದೊರೆಯು ಚಾರುದತ್ತನಿಗೆ ಒಂದು ಜಹಗೀರಿಯನ್ನು ಕೊಟ್ಟು ಸಮ್ಮಾನಿಸುವನು. ವಸಂತಸೇನೆಯನ್ನು ಅವಳ ವೃತ್ತಿಯಿಂದ ಪಾರುಮಾಡಿ ಚಾರುದತ್ತನೊಡನೆ ಸೇರಿಸುವನು.

ಕಥಾಭಾಗವೆಲ್ಲವೂ ಶಕಟದ ಇತಿಹಾಸವನ್ನು ಸುತ್ತಿ ಬಂದಿರುವುದರಿಂದ ಇದಕ್ಕೆ ಮೃಚ್ಛಕಟಿಕವೆಂದು ಹೆಸರು ಕೊಟ್ಟಿರುವಂತಿದೆ. ಚಾರುದತ್ತನ ಮಗನಿಗೆ ಅವನು ಅಪೇಕ್ಷಿಸಿದ ಮಣ್ಣಿನ ಗಾಡಿಗೆ ಬದಲಾಗಿ ಚಿನ್ನದ ಗಾಡಿಯನ್ನು ತೆಗೆದುಕೊಳ್ಳಲು ತನ್ನ ಮುತ್ತಿನ ಹಾರವನ್ನು ವಸಂತಸೇನೆಯು ಕೊಡುವಳು. ಇದು 6ನೇ ಅಂಕದಲ್ಲಿ ನಡೆಯುವ ಪ್ರಸಂಗ. ಅಲ್ಲಿಯವರೆಗೂ ಚಾರುದತ್ತ ಮತ್ತು ವಸಂತ ಸೇನೆಯು ಪರಸ್ಪರಸ್ನೇಹ ಬೆಳೆದು ಅದರ ಅಂಕುರವಾಗಿ ಈ ಮುತ್ತಿನಹಾರವಿರುವುದು. ಕೊನೆಗೆ ಮುತ್ತಿನ ಹಾರವು ವಿದೂಷಕನ ಕೈಯಿಂದ ಬಿದ್ದು ಇವನು ಚಾರುದತ್ತನ ಸ್ನೇಹಿತನಾದುದರಿಂದ ಚಾರುದತ್ತನೇ ವಸಂತಸೇನೆಯನ್ನು ಕೊಂದು ಆ ಮುತ್ತಿನ ಹಾರವನ್ನು ಇವನಲ್ಲಿ ಕೊಟ್ಟಿರಬೇಕೆಂಬ ಊಹೆಯಿಂದ ಮರಣದಂಡನೆಗೆ ಗುರಿಯಾಗುವನು. ಇಲ್ಲದೆ ಅಜ್ಞಾನದಿಂದ ಸಂಸ್ಥಾನಕನ ಗಾಡಿಯಲ್ಲಿ ಆರ್ಯಕನು ತನ್ನ ತಲೆಯನ್ನು ತಪ್ಪಿಸಿಕೊಂಡಿದ್ದು. ಚಾರುದತ್ತನ ಮಗನು ಮಣ್ಣಿನ ಗಾಡಿಯನ್ನು ಅಪೇಕ್ಷಿಸಿದ್ದರಿಂದ ಇವೆಲ್ಲವೂ ಆಗಿದ್ದು ಈ ಕಥೆಗೆ ಬೆಳಕನ್ನು ಕೊಟ್ಟಿದೆ. ಇದರಲ್ಲಿ ಒಟ್ಟು 27 ಪಾತ್ರಗಳಿವೆ. ಪ್ರತಿ ಒಂದು ಪಾತ್ರವೂ ಚೆನ್ನಾಗಿ ಚಿತ್ರಿಸಲ್ಪಟ್ಟಿದೆ. ಶೃಂಗಾರ, ಹಾಸ್ಯ, ಕರುಣ, ಬೀಭತ್ಸ, ರೌದ್ರ, ವೀರ್ಯ ಮೊದಲಾದ ರಸಗಳಿಗೆಲ್ಲಾ ಸ್ಥಾನವು ಕೊಡಲ್ಪಟ್ಟಿದೆ ಚಾರುದತ್ತನೇ ನಾಯಕ. ಅವನ ಗುಣಗಳೆಲ್ಲವೂ ಈ ಶ್ಲೋಕದಲ್ಲಿ ವರ್ಣಿತವಾಗಿವೆ.

ದೀನಾನಾಂಕಲ್ಪವೃಕ್ಷಃ ಸ್ವಗುಣಫಲನತ ಸ್ಸಜ್ಜನಾನಾಂ ಕುಟುಂಬೀ
ಆದರ್ಶಃ ಶಿಕ್ಷಿತಾನಾಂ ಸುಚರಿತ ನಿಕಶಃ ಶೀಲವೇಲಾ ಸಮುದ್ರಃ
ಸತ್ಕರ್ತಾನಾವ ಮಂತಾ ಪುರುಷಗುಣನಿಧಿಃ ರ್ದಕ್ಷಿಣೋದಾರ ಸತ್ತ್ವೋ
ಧ್ಯೇಕ ಶ್ಲಾಘ್ಯಃ ಸ್ವಜೀವತ್ಯಧಿಕ ಗುಣತಯಾ ಚೋಚ್ಛ್ವಸಂತೀತಿ ಚಾನ್ಯೇ

ದಾರಿದ್ರ್ಯವು ಮಾನವನನ್ನು ಮಾಡಬಲ್ಲದು. ಪ್ರೀತಿಯ ಮಹತ್ವ, ವಿಧಿವಿಲಾಸ ಇವೇ ಮೊದಲಾದವು ಚಿತ್ರಿತವಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ, ಸಂಸ್ಥಾನಿಕ ಮತ್ತು ಮದನಿಕಾ ಮೊದಲಾದ ವ್ಯಕ್ತಿ ಸೃಷ್ಟಿಯಲ್ಲಿ ಕವಿಯ ವಿಶಾಲ ದೃಷ್ಟಿಯೂ, ಸ್ವತಂತ್ರ ಭಾವನೆಯೂ ಕಂಡುಬರುತ್ತದೆ ಕಾಳಿದಾಸನ ಶಕುಂತಲೆಯೂ

ಭವಭೂತಿ ವ್ಯಕ್ತಿಗಳೂ ಪೂರ್ಣವಾಗಿ ಹಿಂದುಗಳಾದರೆ ಸಂಸ್ಥಾನಕ, ಮದನಿಕೆ ಇವರು ಪ್ರಪಂಚ ವ್ಯಕ್ತಿಗಳು.

## ೯೭. ಕಾಳಿದಾಸ -ಕ್ರಿ. ಪೂ. ೧ ನೇ ಶತಮಾನ

ಫರ್‌ಗೂಸನ್, ಮ್ಯಾಕ್ಸ್ ಮುಲ್ಲರ್, ಡಾ. ಹೊರ್ನಲ್, ಪ್ರೊ. ಪಥಕ್, ಮನಮೋಹನ್ ಚಕ್ರವರ್ತಿ (Fergurson, Maxmuller, Dr. Hornel, Prof. Pathak, Manmohan chakravarthi) ಮೊದಲಾದವರು ಇವನ ಕಾಲವನ್ನು ನಾನಾರೀತಿಯಲ್ಲಿ ತಿಳಿದಿರುವರು. ಇವರೆಲ್ಲರನ್ನೂ ಖಂಡಿಸಿ ಕೀತ್ ತನ್ನ ನಿರ್ಣಯವನ್ನು ಕೊಟ್ಟಿರುವನು ಹಿಂದೆ ಕೊಟ್ಟಿರುವಂತೆ ಇವನ ಅಭಿಪ್ರಾಯವೂ ಸರಿಯಾಗಿಲ್ಲ. ಕಾಳಿದಾಸನು ಕ್ರಿ. ಪೂ. ಒಂದನೇ ಶತಮಾನದವನೆಂದು ಪೂರ್ಣವಾಗಿ ನಂಬಬಹುದು. ಇವನ ಮೂರು ನಾಟಕಗಳು 1) ಮಾಳವಿಕಾಗ್ನಿಮಿತ್ರ. 2) ವಿಕ್ರಮೋರ್ವಶೀಯ 3) ಶಾಕುಂತಳ

### 1. ಮಾಳವಿಕಾಗ್ನಿಮಿತ್ರ

• ಇದು 6 ಅಂಕಗಳ ನಾಟಕ. ಕಾಳಿದಾಸನು ತನ್ನ ಪ್ರಾಯದಲ್ಲಿ ಬರೆದಿದ್ದು. ಇದು ಶೃಂಗಾರ ಪ್ರಧಾನವಾದ ನಾಟಕ ಮಾಳವಿಕೆಯು ವಿದರ್ಭ ದೇಶದ ರಾಜಕುಮಾರಿ ಅವಳು ಅಗ್ನಿಮಿತ್ರನನ್ನು ಮದುವೆಯಾಗಬೇಕಾಗಿತ್ತು. ಅವಳ ಸಹೋದರ ಮಾಧವಸೇನನು ಅವನ ಚಿಕ್ಕಪ್ಪನ ಮಗ ಯಜ್ಞಸೇನನಿಂದ ಸೆರೆಹಿಡಿಯಲ್ಪಟ್ಟಿದ್ದನು. ಮಾಳವಿಕೆ ತಪ್ಪಿಸಿಕೊಂಡು ಅಗ್ನಿಮಿತ್ರನ ಆಶ್ರಯಕ್ಕೆ ಬಂದಳು ರಾಣಿಯಾದ ಧಾರಿಣಿಗೆ ದಾದಿಯಾದಳು ಇವಳು ಮಾಳವಿಕೆಯ ಅಂಗಸೌಂದರ್ಯಾದಿಗಳನ್ನು ನೋಡಿ ನಾಟ್ಯವನ್ನು ಕಲಿಸಿಕೊಡಲು ಏರ್ಪಾಡು ಮಾಡುವಳು ಇವಳ ಚಿತ್ರವನ್ನು ನೋಡಿ ಅಗ್ನಿಮಿತ್ರನು ಅವಳಲ್ಲಿ ಅನುರಕ್ತನಾಗುವನು. ಇವಳನ್ನು ನೋಡಬೇಕೆಂದು ಹಂಬಲಿಸುವನು ಗೌತಮನೆನ್ನುವ ವಿದೂಷಕನು ಇಬ್ಬರು ನಾಟ್ಯಾಚಾರ್ಯರಿಗೆ ಜಗಳವನ್ನು ತಂದು ನಾಟ್ಯವನ್ನು ಅಗ್ನಿಮಿತ್ರನ ಅಧ್ಯಕ್ಷತೆಯಲ್ಲಿ ನಡೆಯುವಂತೆ ಏರ್ಪಾಡುಮಾಡುವನು ಅದರಿಂದ ಅಗ್ನಿಮಿತ್ರನು ಇವಳಲ್ಲಿ ಇನ್ನೂ ಅಧಿಕವಾಗಿ ಅನುರಕ್ತನಾಗುವನು. ಧಾರಿಣಿಯ ಆಜ್ಞೆಯಂತೆ ಮಾಳವಿಕೆ ಅಶೋಕ ವೃಕ್ಷವು ಚಿಗುರುವುದಕ್ಕಾಗಿ ಸಂಪ್ರದಾಯ ಪ್ರಕಾರ ತನ್ನ ಪಾದಸ್ಪರ್ಶಮಾಡುವುದಕ್ಕೆ ಉಪವನಕ್ಕೆ ಹೋಗುವಳು. ಅಗ್ನಿಮಿತ್ರ ಮತ್ತು ವಿದೂಷಕ ಇಬ್ಬರೂ ವೃಕ್ಷದ ಹಿಂದಿನಿಂದ ನೋಡಿ ಆನಂದಿಸುತ್ತಿರುವರು ಅಗ್ನಿಮಿತ್ರನ ಮತ್ತೊಬ್ಬ ಪತ್ನಿಯಾದ ಇರಾವತಿಯು ಅಸೂಯೆಯಿಂದ ಅದನ್ನೇ ನೋಡುತ್ತಿದ್ದು, ಮಾಳವಿಕೆಯು ರಾಜನಲ್ಲಿ ಅನುರಕ್ತಳಾಗಿರುವುದನ್ನು ಕಂಡು ಇಬ್ಬರೂ ಸೇರದಂತೆ ಮಾಡಿ, ಪಟ್ಟದ ರಾಣಿಗೆ ಹೇಳಿ ಅವಳನ್ನು ಬಂಧನದಲ್ಲಿಡಿಸುವಳು ರಾಣಿಯ ಹಸ್ತಮುದ್ರಿಕೆಯು ಹಾವಿನ ಕಡಿತವನ್ನು ನಾಶಮಾಡಿತ್ತೆನ್ನುವ ವಿಷಯವನ್ನು ತಿಳಿದಿದ್ದ ವಿದೂಷಕನು ಹಾವಿನ ಕಡಿತಕ್ಕೆ ತುತ್ತಾದವನೆಂದು ನಟಿಸಿ ಮಣಿಯನ್ನು ಹೊಂದಿ ಮಾಳವಿಕೆಯನ್ನು ಬಿಡಿಸುವನು. ಹೀಗಿರುವಲ್ಲಿ ವಿದರ್ಭ ದೇಶದ ರಾಜನು ಸೋಲಿಸಲ್ಪಟ್ಟ ವಿಷಯವು ಹರಡಿ ಅಲ್ಲಿನ ಇಬ್ಬರು ಖೈದಿಗಳು ಬಂದು. ಮಾಳವಿಕೆಯನ್ನು ಅವಳ ಸಂಗಾತಿ ಕೌಶಿಕೆಯನ್ನೂ ಗುರುತಿಸಲು ವಿಷಯವೆಲ್ಲಾ

ಬಹಿರಂಗವಾಯಿತು. ಧಾರಣಿಯು ತನ್ನ ಮಗ ವಸುಮಿತ್ರನು ಜಯಶೀಲನಾದ ಸಂದರ್ಭದಲ್ಲಿ ತಾನೇ ಒಪ್ಪಿ ಮಾಳವಿಕೆಯನ್ನು ಅಗ್ನಿಮಿತ್ರನಿಗೆ ವಿವಾಹ ಮಾಡಿಸುವಳು.

## 2. ವಿಕ್ರಮೋರ್ವಶೀಯ

ಊರ್ವಶಿಯು ಒಂದು ಕಾಲದಲ್ಲಿ ಭೂಲೋಕಕ್ಕೆ ಬಂದಾಗ ಒಬ್ಬ ರಾಕ್ಷಸನು ಅವಳನ್ನು ಅಪಹರಿಸುವನು. ಪುರೂರವಸ್ಸನು ಅವಳನ್ನೂ ಬಿಡಿಸುವನು. ಇಬ್ಬರಿಗೂ ಪ್ರೇಮವು ಹುಟ್ಟಿತು ಗಂಧರ್ವರಾಜನಿಗೆ ಇವಳು ಒಪ್ಪಿಸಲ್ಪಟ್ಟರೂ ತನ್ನ ಬೇಟೆಯ ಮೂಲಕ ವಿದೂಷಕನ ದ್ವಾರ ರಾಜನ ಪ್ರೇಮವನ್ನು ಅರಿತು ಆಕಾಶದಿಂದ ಒಂದು ಪತ್ರವನ್ನು ಹಾಕುವಳು. ಇಂದ್ರನ ಆಜ್ಞೆಯಂತೆ ಭರತನಾಟ್ಯದಲ್ಲಿ ಪಾತ್ರವಹಿಸಲು ದೇವಲೋಕಕ್ಕೆ ಹೋಗುವಳು. ತನ್ನ ನಾಟ್ಯವನ್ನು ಚೆನ್ನಾಗಿ ಆಳಲಿಲ್ಲ. ಇಂದ್ರನು ಇವಳಿಗೆ ಭೂಲೋಕಕ್ಕೆ ಹೋಗಿ ರಾಜನೊಡನೆ ಬಾಳುವಂತೆಯೂ ತನ್ನ ಮಗನನ್ನು ನೋಡಿದೊಡನೆಯೇ ಬರಬೇಕೆಂದು ಹೇಳಿದನು. ಇಷ್ಟರಲ್ಲಿ ಇವಳ ಕಾಗದವನ್ನು ರಾಜನು ಓದಿ ಸಂತೋಷಪಟ್ಟು ವಿದೂಷಕನಿಗೆ ಕೊಡುವನು. ಕ್ರಮೇಣ ಅದು ರಾಣಿಯ ಹಸ್ತವನ್ನು ತಲುಪಿ ಅವಳ ಕೋಪಕ್ಕೆ ಕಾರಣವಾಯಿತು. ರಾಜನು ಅವಳನ್ನು ಎಷ್ಟು ಸಮಾಧಾನ ಮಾಡಿದರೂ ಆಗಲಿಲ್ಲ. ಆದರೆ ಒಂದು ದಿನ ಚಂದ್ರ ಮತ್ತು ರೋಹಿಣಿಯ ಪ್ರೇಮಸೂಚಕ ಹಬ್ಬದಲ್ಲಿ ತನ್ನ ರಾಣಿಗೆ ಬಹಳ ಗೌರವವನ್ನು ರಾಜನು ತೋರಿಸಿದ್ದನ್ನು ಅದೃಶ್ಯಳಾಗಿ ಊರ್ವಶಿಯು ನೋಡಿ ಕುಪಿತಳಾಗುವಳು. ಆದರೆ ಅವಳ ಬೇಟೆಯು ಅದು ಕೇವಲ ಅನುಕರಣವೆಂದು ಸಮಾಧಾನ ಮಾಡುವಳು. ದೈವವಶಾತ್ ರಾಣಿಯು ಇವರಿಬ್ಬರ ಪ್ರೇಮಮೇಳನಕ್ಕೆ ಒಪ್ಪುವಳು. ಇಬ್ಬರೂ ಸೌಖ್ಯವಾಗಿ ಬಹಳ ಕಾಲವಿರುವರು.

ಒಂದು ಕಾಲದಲ್ಲಿ ಪ್ರೇಮ ಕಲಹದಿಂದ ಕುಪಿತಳಾಗಿ ಕುಮಾರ ವನವನ್ನು ಪ್ರವೇಶಿಸಿ ಶಾಪಕ್ಕೆ ಗುರಿಯಾಗಿ ಲತೆಯಾಗುವಳು. ರಾಜನು ಪ್ರಲಾಪಿಸಿ, ಆಕಾಶದಿಂದ ಬಿದ್ದ ಒಂದು ಮಾಯಾ ಮಣಿಯಿಂದ ಲತೆಯಾಗಿರುವ ಇವಳನ್ನು ಪೂರ್ವರೂಪಕ್ಕೆ ತರುವನು. ಇವರಿಬ್ಬರೂ ರಾಜಧಾನಿಗೆ ಬರುವರು. ಯಥಾಪ್ರಕಾರ ಚಂದ್ರ ರೋಹಿಣಿಯಾರ ಹಬ್ಬ ಬಂದಿತು. ದೈವವಶಾತ್ ಮಾಯಾ ಮಣಿಯನ್ನು ಒಂದು ಹದ್ದು ಅಪಹರಿಸಿತು. ಅದನ್ನು ಒಂದು ಬಾಣವು ಕೊಂದಿತು. ಆ ಬಾಣವು ಊರ್ವಶಿಯ ಮಗನಿಂದ ಬಿಡಲ್ಪಟ್ಟದ್ದಾಗಿದ್ದಿತು. ಇದು ತಿಳಿದ ಮೇಲೆ ಉರ್ವಶಿಯು ದೇವಲೋಕಕ್ಕೆ ಹೋಗಬೇಕಾಗಿ ಬಂದಿತು. ಅಷ್ಟರಲ್ಲಿ ದೇವಾಸುರರ ಯುದ್ಧವು ಪ್ರಾರಂಭವಾಗಿ ಪುರೂರವಸ್ಸನು ಇಂದ್ರನಿಗೆ ಸಹಾಯ ಮಾಡುವ ಪ್ರಸಂಗವು ಬಂದು ಇವನೊಡನೆ ಮತ್ತೆ ಊರ್ವಶಿಯು ಸೇರುವ ಆಕಾಂಕ್ಷೆಯೊಡನೆ ನಾಟಕವು ಮುಗಿದಿದೆ.

## ಅಭಿಜ್ಞಾನ ಶಾಕುಂತಲಂ

ಶಾಕುಂತಲೆ ಮೇನಕೆಯಲ್ಲಿ ವಿಶ್ವಾಮಿತ್ರನಿಂದ ಹುಟ್ಟಿದವಳು. ಕಣ್ವ ಋಷಿಯ ಸಾಕುಮಗಳು. ದುಷ್ಯಂತನು ಬೇಟೆಗಾಗಿ ಕಾಡಿಗೆ ಬಂದು ವಿಶ್ರಾಂತಿಗೊಂಡನು. ಅವಳ ಸಖಿಯಿಂದ ಅವಳ

ಜನ್ಮವೃತ್ತಾಂತವನ್ನು ತಿಳಿದು ಅವಳನ್ನು ಮದುವೆಯಾಗಲು ಇಚ್ಛಿಸಿ ಸಖಿಯರ ಸಹಾಯದಿಂದ ಗಾಂಧರ್ವ ವಿವಾಹವನ್ನು ಮಾಡಿಕೊಂಡನು. 7 ದಿನಗಳಾದ ಮೇಲೆ ಅವಳನ್ನು ಬಿಟ್ಟು ಅವಳಲ್ಲಿ ತನ್ನ ಮುದ್ರಿಕೆಯನ್ನು ಕೊಟ್ಟು ಹೋಗುವನು. ಅವನ ಧ್ಯಾನದಲ್ಲೇ ಇದ್ದ ಅವಳು ದೂರ್ವಾಸ ಮುನಿಯು ಬಂದಿದ್ದನ್ನು ಕಾಣದೆ ಅವರನ್ನು ಸತ್ಕರಿಸದೇ ಇದ್ದುದಕ್ಕಾಗಿ "ನಿನ್ನ ಗಂಡನು ನಿನ್ನನ್ನು ಮರೆಯಲಿ" ಎನ್ನುವ ಶಾಪಕ್ಕೆ ತುತ್ತಾಗುವಳು. ಕಾಲಕಳೆಯಿತು. ಎಲ್ಲಿಗೋ ಹೋಗಿದ್ದ ಕಣ್ವರು ಹಿಂತಿರುಗಿದರು. ವಿಷಯವೆಲ್ಲವನ್ನೂ ತಿಳಿದು ಅವಳನ್ನು ಗಂಡನ ಮನೆಗೆ ಕಳುಹಿಸಿಕೊಟ್ಟರು. ದಾರಿಯಲ್ಲಿ ದೈವಲೀಲೆಯಿಂದ ರಾಜನು ಕೊಟ್ಟಿದ್ದ ಉಂಗುರವು ನದಿಯಲ್ಲಿ ಕಳಚಿ ಬಿದ್ದಿತು. ಅದರ ಫಲವಾಗಿ ರಾಜನು, ಇವಳು ರಾಜಾಸ್ಥಾನಕ್ಕೆ ಬಂದ ಮೇಲೆ ಅವಳನ್ನು ಗುರ್ತಿಸಲಾರದವನಾದನು. ಋಷಿಯ ಶಿಷ್ಯರು ಇವಳನ್ನು ಗರ್ಭವತಿಯಾದುದರಿಂದ ಹೆರಿಗೆಯವರಿಗೂ ತನ್ನಲ್ಲಿರಲೆಂದು ರಾಜಾನುಮತಿಯನ್ನೂ ಪಡೆದರೂ ಮೇನಕೆಯೂ ತನ್ನ ಮಗಳ ಕಷ್ಟವನ್ನು ನೋಡಲಾರದೆ ತಾನೇ ಅವಳನ್ನು ಕರೆದೊಯ್ಯುವಳು.

ಸ್ವಲ್ಪ ಕಾಲವಾದ ಮೇಲೆ ಒಬ್ಬ ಬೇಡನಿಂದ ಒಂದು ಮೀನಿನ ಹೊಟ್ಟೆಯಲ್ಲಿ ಈ ರಾಜನ ಉಂಗುರವು ಸಿಗುವುದು. ಅದು ರಾಜನಲ್ಲಿಗೆ ಬಂದು ಅವನಿಗೆ ಶಕುಂತಲೆಯ ಸ್ಮೃತಿಯು ಬಂದು ಅವಳಿಗಾಗಿ ಪರಿತಪಿಸುವನು. ಅಷ್ಟರಲ್ಲಿ ದೇವೇಂದ್ರನಿಂದ ರಾಕ್ಷಸರೊಡನೆ ಯುದ್ಧ ಮಾಡಲು ಆಹ್ವಾನವು ಬಂದು ಅಲ್ಲಿಗೆ ಹೋಗುವನು. ಯುದ್ಧವೆಲ್ಲವೂ ಮುಗಿದ ಮೇಲೆ ಹಿಂತಿರುಗುವಾಗ ಮಾರೀಚ ಋಷಿಯ ಆಶ್ರಮದಲ್ಲಿ ಒಬ್ಬ ಬಾಲಕನು ಸಿಂಹದ ಮರಿಯೊಡನೆ ಆಡುತ್ತಿದ್ದುದನ್ನು ಕಂಡು ಪುತ್ರವಾತ್ಸಲ್ಯದಿಂದ ಅವನ್ನು ಅಪ್ಪಿಕೊಳ್ಳಲು ಪ್ರಯತ್ನಿಸುವಾಗ ಅಲ್ಲಿಗೆ ಶಕುಂತಲೆಯು ಬರುವಳು. ಆಗ ಈ ಬಾಲಕನು ತನ್ನ ಮಗನೆಂದು ತಿಳಿದ ಮೇಲೆ ಶಕುಂತಲೆಯ ಕ್ಷಮೆಯನ್ನು ಬೇಡುವನು. ವಿರಸವಾಗಿದ್ದು ಸರಸವಾಯಿತು. ಇಲ್ಲಿಗೆ 7 ಅಂಕಗಳು ಮುಗಿದು ಕಥೆಯೂ ಮುಗಿದಿದೆ.

**ನಾಟಕಗಳ ವಿಮರ್ಶೆ**

ಮಾಳವಿಕಾಗ್ನಿಮಿತ್ರದಲ್ಲಿ ಪಾತ್ರಗಳ ಸ್ವರೂಪವೂ ಚೆನ್ನಾಗಿದೆ. ಅಗ್ನಿಮಿತ್ರನು ಒಬ್ಬ ಕಾಮಪೀಡಿತ ದೊರೆ. ಆದರೂ ರಾಜ್ಯಭಾರವನ್ನು ಮರೆತವನಲ್ಲ. ಧೀರೋದಾತ್ತ ಗುಣವುಳ್ಳವನು. ಪಟ್ಟಮಹಿಷಿ ಬಹಳ ಗೌರವಸ್ಥಳು. ಅಸೂಯಾನಿಷ್ಠಳಾದರೂ ರಾಜನ ಎರಡನೇ ಹೆಂಡತಿಯಾದ ಇರಾವತಿಯನ್ನು ಶಿಕ್ಷಿಸುವವಳಲ್ಲ. ಇವರಿಬ್ಬರಲ್ಲಿ ಧಾರಣಿ ಗಂಭೀರ ವ್ಯಕ್ತಿ. ಇವಳು ಸಂಸ್ಕೃತಜ್ಞಳು. ಸಂಸ್ಕೃತದಲ್ಲೇ ಮಾತನಾಡಿರುವಳು. ಇವಳಿಗೆ ನಾಟ್ಯವೆಂದರೆ ಪ್ರಿಯ. ಸರ್ಪವಿಷಕ್ಕೆ ಔಷಧಿಯನ್ನು ತಿಳಿದವಳು. ಗಂಡನ ವಿಷಯದಲ್ಲಿ ಗೌರವವಿದ್ದರೂ ಅವನ ತಪ್ಪುಗಳನ್ನು ತಿದ್ದಲು ಪ್ರಯತ್ನಿಸುವಳು. ಅವನ ಮನಸ್ಸನ್ನು ನೋಯಿಸುವ ಮಾತನ್ನು ಇವಳು ಆಡುವುದಿಲ್ಲ. ಇವಳಲ್ಲಿ ವಿಶಾಲಬುದ್ಧಿ ಮತ್ತು ತ್ಯಾಗಶೀಲತೆ ಚೆನ್ನಾಗಿ ಕಾಣುತ್ತದೆ. ಸವತಿಯರ ಮಾತಿಗೂ ಗೌರವ ಕೊಡುವಳು. ತನ್ನ ಪತಿಯ ಸ್ನೇಹಿತನಾದುದರಿಂದ ವಿದೂಷಕನನ್ನು ಕಂಡರೆ ಇಷ್ಟ. ವಯಸ್ಸಾದವಳು ಮಗನು ಜಯಶೀಲನಾದನೆಂದು ತಿಳಿದ ಮೇಲೆ ತನ್ನ ಗಂಡನು ಮಾಳವಿಕೆಯನ್ನು ಮದುವೆಯಾಗಲು ಸಮ್ಮತಿಸುವಳು ಇಲ್ಲಿ

ವಿದೂಷಕನು ಕೇವಲ ಪ್ರಹಸನ ವ್ಯಕ್ತಿಯಲ್ಲ. ಸ್ನೇಹಪರ. ರಾಜ ರಾಣಿಯರಲ್ಲಿ ಭಕ್ತಿ ಉಳ್ಳವನು. ದೊರೆಗೆ ಪ್ರಿಯವಾದುದೆಲ್ಲಾ ಇವನಿಗೂ ಪ್ರಿಯ. ಇಷ್ಟಾದರೂ ರಾಣಿಯು ಇವನನ್ನು ಪ್ರೀತಿಯಿಂದ ಕಾಣುವಂತೆ ವರ್ತಿಸುವನು.

ವಿಕ್ರಮೋರ್ದಿಶೀಯದಲ್ಲಿ ಭಾವನೆಯು ಮಾಳವಿಕಾಗ್ನಿಗಿಂತಲೂ ಉತ್ತಮವಾಗಿದೆ. ಋಗ್ವೇದದಲ್ಲಿ ಸಾಮಾನ್ಯವಾಗಿ ಸೂಚಿಸಲ್ಪಟ್ಟ ಶತಪಥ ಬ್ರಾಹ್ಮಣದಲ್ಲಿ ಪೂರ್ಣವಾಗಿರುವ ಕಥೆಯನ್ನು ತೆಗೆದು ಉತ್ತಮ ಆಗಾರ. ಸನ್ನಿವೇಶಗಳನ್ನೂ ಕೊಟ್ಟು ಭಾರತೀಯರ ಹೃದಯಕ್ಕೆ ಇಂಪನ್ನುಂಟುಮಾಡುವ ರೀತಿಯಲ್ಲಿ ಕಥೆಯನ್ನು ವ್ಯತ್ಯಾಸ್ತ ಮಾಡಿ ಕವಿಯು ವ್ಯಕ್ತಿಗಳನ್ನು ಕಲ್ಪಿಸಿರುವನು. ಊರ್ವಶಿಯು ಕಾಮಪೀಡಿತೆ. ತನ್ನ ನೃತ್ಯವನ್ನು ಮರೆಯುವಳಿವಳು. ದೇವತಾಸ್ತ್ರೀಯರ ಸ್ವಭಾವವು ಇವಳಲ್ಲಿ ಚೆನ್ನಾಗಿ ವರ್ಣಿತವಾಗಿದೆ. ವಿದೂಷಕನೂ ಅಷ್ಟೆ. ಜಾಣನಲ್ಲ. ಪ್ರಹಸನ ವ್ಯಕ್ತಿ. ಪೂರುರವಸ್ಸನು ಧೀರೋದಾತ್ತನೇನೋ ಹೌದು. ಆದರೆ ಅವನು ಅಷ್ಟು ಮೋಹಪೀಡಿತನಾಗಕೂಡದು ಎನಿಸುತ್ತದೆ. ಮಿಕ್ಕ ಪಾತ್ರಗಳು ಅಷ್ಟರಲ್ಲಿಯೇ ಇವೆ.

ಅಭಿಜ್ಞಾನ ಶಾಕುಂತಲದಲ್ಲಿ ಕವಿಯ ಪೂರ್ಣಶಕ್ತಿಯು ಕಂಡು ಬರುತ್ತದೆ. ಇಲ್ಲಿ ಕೆಳಗಿನ ಭಾವಗಳಿಲ್ಲ. ಮಹಾಭಾರತದಲ್ಲಿ ದುಷ್ಯಂತನು ದುಷ್ಟ. ಶಕುಂತಲೆಯು ಕೋಪಿ. ಇವರಿಬ್ಬರೂ ಇಲ್ಲಿ ಉತ್ತಮ ರೀತಿಯಲ್ಲಿ ವರ್ಣಿಸಲ್ಪಟ್ಟಿರುವರು. ಧೀರೋದಾತ್ತ ದೊರೆ ಶಾಪದಿಂದ ಹೆಂಡತಿಯನ್ನೂ ಮರೆತಿದ್ದನು. ವಿಮುಕ್ತನಾದ ಮೇಲೆ ಪರಿತಪಿಸುವನು. ಅವಳಿಗಾಗಿ ಹಂಬಲಿಸುವನು. ಕ್ಷಮೆ ಬೇಡುವನು. ಅವಳನ್ನೂ ಮಗನನ್ನೂ ಸ್ವೀಕರಿಸುವನು. ಕವಿಯು ಶಕುಂತಲೆಯ ಮೇಲೆ ಕೊಟ್ಟಿರುವ ಚಿತ್ರವು ಅತಿ ಸುಂದರವಾಗಿದೆ. ನಮ್ರತೆ. ಲಜ್ಜೆ. ಗಾಂಭೀರ್ಯ. ಪತಿಭಕ್ತಿ. ಶಾಂತ ಸ್ವಭಾವ –ಇವೆಲ್ಲವೂ ಅವಳಲ್ಲಿ ಮೂರ್ತಿಗೊಂಡಿದೆ. ಇವಳಿಂದಲೇ ಈ ನಾಟಕಕ್ಕೆ ಹೆಸರು ಸಾರ್ಥಕವಾಗಿದೆ. ಇವಳಿಗೆ ತಕ್ಕಂತೆ ಸಾಕು ತಂದೆ ಇರುವನು. ಶಿಷ್ಯರು ಅವನಲ್ಲಿ ಬಹಳ ಗೌರವನಿಟ್ಟಿರುವರು. ಇವನು ದುರ್ವಾಸನಂತೆ ಮುಂಗೋಪಿಯಲ್ಲ.

## ಭಾಷೆ, ಶೈಲಿ

ಇವನ ಶೈಲಿ ವೈದರ್ಭಿ. ಭಾಸನಂತೆ ಮತ್ತು ಕಾಲವು ಕಡೆ ಅವನಿಗಿಂತಲೂ ಸುಂದರವಾದ ಪದವಾಕ್ಯಗಳಿವೆ. ಗಾಂಭೀರ್ಯದಲ್ಲಿ ಭಾಸನನ್ನೂ. ಶೂದ್ರಕನನ್ನೂ ಮೀರಿಸಿರುವನು. ಅಶ್ವಘೋಷನು ಇವನನ್ನು ಚೆನ್ನಾಗಿ ಅನುಕರಿಸಿರುವನು. ಭವಭೂತಿಯು ತನ್ನ ನಾಟಕದಲ್ಲಿ ಪಾತ್ರಕ್ಕೆ ಅನುಗುಣವಾದ ಮಾತುಗಳನ್ನೇ ಕೊಟ್ಟಿಲ್ಲ. ಕಾಳಿದಾಸನು ಹಾಗಲ್ಲ. ಗ್ರಾಮ್ಯ ಭಾಷೆಯನ್ನು ಗ್ರಾಮ್ಯ ಪಾತ್ರಗಳಿಗೂ ಉತ್ತಮ ಪಾತ್ರಗಳಿಗೆ ಉತ್ತಮ ಭಾಷೆಯನ್ನೂ ಕೊಟ್ಟು ಸುಂದರ ನಾಟಕಗಳನ್ನು ಬರೆದಿರುವನು. ಇದು ಅಭಿಜ್ಞಾನ ಶಾಕುಂತಲದಲ್ಲಿ ಚೆನ್ನಾಗಿ ಕಾಣುತ್ತದೆ.

ಭಾವಕ್ಕೆ ಅನುಗುಣವಾದ ಭಾಷೆ – ಉದಾ –ಜಿಂಕೆ ವರ್ಣನೆ

ಗ್ರೀವಾಭಂಗಾಭಿರಾಮಂ ಮುಹುರ ನು ಪತತಿಸ್ಯಂದನೇ ಬದ್ಧ ದೃಷ್ಟಿಃ
ಪಶ್ಚಾರ್ದೇನಪ್ರವಿಷ್ಟಃ ಶಿರಪತನ ಭಯಾಥ್ಭೂಯಸಾ ಪೂರ್ವಕಾಯಂ
ದರ್ಭೈರ ರ್ಧಾವಲೀಢೈಃ ಶ್ರಮ ವಿವೃತ ಮುಖ ಭ್ರಂ ಶಿತೈಃ ಕೀರ್ಣವರ್ತ್ಮಾ
ಪಶ್ಯೋದಗ್ರ ಪ್ಲುತ ತ್ವಾದ್ವಿಯತಿ ಬಹುತರಂ ಸ್ತೋಕ ಮುರ್ವ್ಯಾಂ ಪ್ರಯಾತಿ

ವಿಧಿ ಸ್ವರೂಪವನ್ನು ಚೆನ್ನಾಗಿ ತಿಳಿದಿರುವನು. ಅದರಲ್ಲಿ ನಂಬಿಕೆಯೂ ಇದೆ.

ಶಾಂತ ಮಿದಮಾಶ್ರಮಪದಂಸ್ಫುರತಿ ಚಬಾಹುಃ ಕುತಃ ಫಲಮಿಹಾಸ್ಯ
ಅಥವಾ ಭವಿತವ್ಯಾನಾಂ ದ್ವಾರಾಣಿ ಭವಂತಿ ಸರ್ವತ್ರ

ಅದೇ ವಿಧಿಯು ಮನಸ್ಸಿನಲ್ಲಿ ತೋರ್ಪಡಿಸಿಕೊಂಡು ತನ್ನ ಪ್ರಾಬಲ್ಯವನ್ನೂ ಬೀರುತ್ತದೆ ಎನ್ನುವ ವೇದಾಂತ ಸಾರವನ್ನು ತಿಳಿದಿರುವನು. ಹಾಗೆಯೇ ಸನ್ಮಾರ್ಗದಲ್ಲಿರುವವರಿಗೆ ತಮ್ಮ ಭವ್ಯವವು ತಮಗೇ ಗೋಚರವಾಗುವುದೆಂದು ಇವನ ನಂಬಿಕೆ ಇದೆ.

ಅಸಂಶಯಂಕ್ಷತ್ರ ಪರಿಗ್ರಹಕ್ಷಮಾ
ಯದಾರ್ಯ ಮಸ್ಯಾಮಭೀಲಾಷಿ ಮೇಮನಃ
ಸತಾಂಹಿ ಸಂದೇಶ ಪದೇಷುವಸ್ತುಷು
ಪ್ರಮಾಣಮಂತಃ ಕರಣ ಪ್ರವೃತ್ತಯಃ

ಇವರಿಂದ ಯಾರಿಗೆ ತನ್ನ ಮುಂದಿನ ಸ್ಥಿತಿಯು ಮನಸ್ಸಿನಲ್ಲಿ ಸ್ಫುರಣವಾಗುತ್ತದೆಯೋ ಅವರೇ ಸತ್ಪುರುಷರೆನ್ನುವ ಲಕ್ಷಣವೂ ಹೇಳಿದಂತಾಯಿತು. ಹೀಗೆ ಹೇಳಿದ ದುಷ್ಯಂತನು ಉತ್ತಮ ಪುರುಷನೆಂದು ಸ್ವತಃ ಹೇಳಿದಂತಾಯಿತು. ಧೀರೋದಾತ್ತನಾದ ಇವನನ್ನು ವರ್ಣಿಸಿರುವುದೂ ಚೆನ್ನಾಗಿದೆ.

ಇತಃ ಪ್ರತ್ಯಾದೇ ಶಾತ್ ಸ್ವಜನ ಮನುಗಂತುಂ ವ್ಯವಸಿತಾ
ಮುಹುಃ ತಿಷ್ಠೇತ್ಯುಚ್ಚೈ ರ್ವದತಿ ಗುರುಶಿಷ್ಯೇ ಗುರು ಸಮೂ
ಪುನರ್ದೃಷ್ಟ್ವಂ ಬಾಷ್ಪ ಪ್ರಸರಕಲುಷಮರ್ಪಿಸವತೀ
ಮಮಿಕ್ರೂರೇ ಯತ್ತತ್ ಸವಿಷಮಿವ ಶಲ್ಯಂ ದಹಂತಿಯಾಂ

ಈ ಶ್ಲೋಕದಲ್ಲಿ ಅವನ ಮನಸ್ಸಿನ ಆಂದೋಳನವೆಲ್ಲವೂ ಯಥಾವತ್ತಾಗಿ ವರ್ಣಿತವಾಗಿದೆ. ವಿರಹವನ್ನೂ ಇವನಂತೆ ವರ್ಣಿಸಿರವವರು ಇಲ್ಲವೆನ್ನಬಹುದು. ವಿಪ್ರಲಂಭಿ ಶೃಂಗಾರದ ಸವಿಯನ್ನು ಈ ಶ್ಲೋಕದಲ್ಲಿ ಕಾಣಬಹುದು.

ಪ್ರಜಾಗರಾತ್ ಖಿಲೀ ಭೂತಸ್ತಸ್ಯಾಃ ಪ್ರಶ್ನೇ ಸಮಾರ್ಗಮಃ
ಭಾಷ್ಪಸ್ತುವ ದ ದಾತ್ಯೇನಾಂದ್ರಷ್ಟುಂ ಚಿತ್ರಗತಾಮತಿ

ಇದೇ ಸನ್ನಿವೇಶವನ್ನೂ ವಿಕ್ರಮೋರ್ವಶೀಯದಲ್ಲಿ ವರ್ಣಿಸಿರುವುದೂ ಇಷ್ಟು ಗಂಭೀರವಾಗಿಲ್ಲ.

ತ್ವಯನಿಬದ್ಧರತೇಃ ಪ್ರಿಯವಾದಿನಃ
ಪ್ರಣಯಭಂಗಪರಾಂಮುಖಚೇತಸಃ
ಕಮಪರಾಧಲವಂ ಮಮಪಶ್ಯಸಿ
ತ್ಯಜಸಿ ಮಾನಿನಿದಾಸಜನಂ ಯತಃ

ಉತ್ತಮ ಕಲ್ಪನೆಯು ಇದರಲ್ಲಿ ಚೆನ್ನಾಗಿದೆ. ತನ್ನ ಪ್ರೇಯಸಿಯ ಅಂಗಸ್ಪರ್ಶವು ಎಷ್ಟು ಹಿತವಾಗಿದೆ ಎನ್ನುವುದನ್ನು ವರ್ಣಿಸಿರುವುದು ಎಳಸಾಗಿಯೇ ಇದೆ.

ಇದಂತ್ವಯಾ ರಥಕ್ಷೋಭಾತ್ ಅಂಗೇನಾಂಗಂ ನಿಪೀಡಿತಂ
ಏಕಂಕೃತಿ ಶರೀರೇಸ್ಮಿನ್ ಶೇಷಮಂಗಂ ಭುವೋಭರಃ

"ಉಪಮಾ ಕಾಳಿದಾಸಸ್ಯ" ಎನ್ನುವುದಕ್ಕೆ ಎಲ್ಲೆಲ್ಲೂ ಉದಾಹರಣೆಗಳಿವೆ. ಸಾದೃಶ್ಯ ಕೊಟ್ಟಿರುವುದರಲ್ಲಿ ಇವನ ಭಾವಪುಷ್ಟಿ, ವ್ಯವಹಾರ ಜ್ಞಾನ, ಶಾಸ್ತ್ರಜ್ಞಾನ, ಪ್ರಕೃತಿಯು ಮಾನವನನ್ನು ಪ್ರತಿಬಿಂಬಿಸುವ ದೃಷ್ಟಿ ಇವೆಲ್ಲವೂ ಇವೆ. ಉದಾಹರಣೆಗೆ ವಿಕ್ರಮೋರ್ವಶೀಯದಲ್ಲಿ

ಆವಿರ್ಭೂತೇ ಶಶಿನಿ ತಮಸಾರಿಚ್ಯ ಮಾನೇವರಾತ್ರಿಃ
ನೈಶಸ್ಯಾರ್ಚಿರ್ಹುತ ಭುಜ ಇವಾಚ್ಛಿನ್ನ ಭೂಯಿಷ್ಠ ಧೂಮಾ
ನೋಹೇನಾಂತರ್ವರತನುತಾಯಂ ಲಕ್ಷ್ಯತೇ ಮುಚ್ಯ ಮಾನಾ
ಗಂಗಾರೋಧಃ ಪತನ ಕಲುಷಾ ಗಚ್ಛ ತೀವ ಪ್ರಸಾದಂ

ಮಾಳವಿಕಾಗ್ನಿ ಮಿತ್ರದಲ್ಲಿ ಧಾರಿಣಿಯನ್ನೂ ವರ್ಣಿಸಿರುವುದು ಅತಿ ಗಂಭೀರವಾಗಿದೆ.

ಪ್ರತಿಪಕ್ಷೇಣಾಪಿ ಸತಿಂ ಸೇವಂತೇ ಭರ್ತೃ ವತ್ಸಲಾಃ ಸಾಧ್ವ್ಯಃ
ಅನ್ಯಸಂತಾಮಪಿಜಲಂ ಸಮುದ್ರಗಾಃ ಪ್ರಾಪಯಂತ್ಯುದಧಿಂ

ಒಟ್ಟಿನಲ್ಲಿ ಈ ೩ ನಾಟಕಗಳು ಕಾಳಿದಾಸನ ವ್ಯಕ್ತಿತ್ವದಲ್ಲಿ ಮೂರು ಪರ್ವವನ್ನು ಚೆನ್ನಾಗಿ ತೋರಿಸುತ್ತದೆ.

## ೯೮. ಅಶ್ವಘೋಷ - ಕ್ರಿ. ಶ. ೧ನೇ ಶತಮಾನ

ಮೂರು ನಾಟಕಗಳು ಇವನ ಹೆಸರಿನಲ್ಲಿವೆ.

1. ಶಾರದ್ವತಿ ಪುತ್ರಾಪ್ರಕರಣ ಪ್ರೋ. ಲುಡರ್ಸ್ (Prof. Luders)ಎನ್ನುವನು ತುರ್ಫಾನ್ (Turfuan)ಎನ್ನುವ ಸ್ಥಳದಲ್ಲಿ ಪತ್ತೆ ಹಚ್ಚಿದ ಗ್ರಂಥವಿದು. ಇವರೊಡನೆ ಮಿಕ್ಕ ಎರಡು ಸಿಕ್ಕಿದರೂ ಇದು ಅಶ್ವಘೋಷನದೇ ಎನ್ನುವುದಕ್ಕೆ ಆಧಾರವಿದೆ. ನಾಟಕದ ಕೊನೆಯಲ್ಲಿ ಇದರ ಹೆಸರು ಶಾರಿಪುತ್ರ ಪ್ರಕರಣವೆಂದೂ. ಅಶ್ವಘೋಷನು ಬರೆದನೆಂದೂ. ಅವನು ಸುವರ್ಣಾಕ್ಷಿಯ ಮಗನೆಂದೂ ಬರೆದಿದೆ. ಇದು ೯ ಅಂಕವುಳ್ಳ ನಾಟಕ ಇದರಲ್ಲಿ ಬುದ್ಧ ಚರಿತೆಯ ಒಂದು ಪದ್ಯವಿದೆ. ಎರಡಾವರ್ತಿ ಸೂತ್ರಾಲಂಕಾರವು ನಮೂದಿಸಲ್ಪಟ್ಟಿದೆ. ಇದರ ಕಥೆಯು ಹೀಗಿದೆ. ಶಾಲಿಪುತ್ರ ಒಬ್ಬ 'ಬ್ರಾಹ್ಮಣ. ಅಶ್ವಜಿತ್ ಎನ್ನುವನೊಡನೆ ಇವನ ಸಹವಾಸವಿರುವಾಗ ಬುದ್ಧನ ವಿಷಯವೆಲ್ಲವೂ ಇವನಿಗೆ ತಿಳಿಯಿತು. ತನ್ನ ಸ್ನೇಹಿತನಾದ ವಿದೂಷಕನೆ ಗುರುವಾಗಿರಲು ಬುದ್ಧನ ಯೋಗ್ಯತೆ ವಿಷಯದಲ್ಲಿ ಚರ್ಚಿಸುವನು. ವಿದೂಷಕನು "ಬ್ರಾಹ್ಮಣರು ಕ್ಷತ್ರಿಯರಿಂದ ಉಪದೇಶವನ್ನು ತೆಗೆದುಕೊಳ್ಳಬಾರದು. "ಎನ್ನುವನು. ಶಾಲಿಪುತ್ರನು ಔಷಧಿಯನ್ನು ಯಾರು ಕೊಟ್ಟರೇನು? ರೋಗವಾಸಿಯಾಗುವುದು ಮುಖ್ಯ ಎಂದು ಹೇಳಿ ಇವನ ಮಾತಿಗೆ ಮನ್ನಣೆ ಕೊಡದೆ ಮೌದ್ಗಲಾಯನ ಎನ್ನುವನೊಡನೆ ಬುದ್ಧನಲ್ಲಿಗೆ ಹೋಗುವನು. ಬುದ್ಧನು ಇವರಿಬ್ಬರನ್ನೂ ಸ್ವಾಗತಿಸಿ ಇಬ್ಬರೂ ಪ್ರಸಿದ್ಧರಾಗುವರೆಂದು ಭವಿಷ್ಯವನ್ನು ನುಡಿಯುವನು. ಆತ್ಮವಿಷಯವಾಗಿ ಸಂವಾದ ವಿವಾದವು ಅವನೊಡನೆ ನಡೆದ ಮೇಲೆ (Polemic) ಬುದ್ಧನು ಅವರಿಬ್ಬರನ್ನು ಹೊಗಳುವನು. ಮಂಗಳ ಹೀಗೆ ಮುಗಿದಿದೆ.

2. ಎರಡನೆಯ ನಾಟಕದಲ್ಲಿ ಬುದ್ಧಿ. ಕೀರ್ತಿ. ಧೃತಿ ಮೊದಲಾದ ಆತ್ಮಾ ಗುಣಗಳಿಗೆ ಪಾತ್ರ ಕೊಟ್ಟು. ಒಂದು ಪಾರಮಾರ್ಥಿಕ ನಾಟಕವನ್ನು ಆಡಿಸುವನು. ಇಂತಹ ನಾಟಕವನ್ನು 11ಮತ್ತು 12ನೇ ಶತಮಾನದಲ್ಲಿ ಕೃಷ್ಣ ಮಿತ್ರನು ಪ್ರಬೋಧ. ಚಂದ್ರೋದಯವೆನ್ನುವ ಹೆಸರಿನಿಂದ ಅದ್ವೈತ ಸಿದ್ಧಾಂತ ಸೂಚಕವಾಗಿಯೂ.13 ಮತ್ತು 14ನೇ ಶತಮಾನದಲ್ಲಿ ವೆಂಕಟನಾಥನು ಸಂಕಲ್ಪ ಸೂರ್ಯೋದಯವೆನ್ನುವ ಹೆಸರಿನಿಂದ ವಿಶಿಷ್ಟಾ ದ್ವೈತ ಸೂಚಕವಾಗಿಯೂ ಬರೆದಿರುವರು. ಈ ಎರಡು ನಾಟಕಗಳಲ್ಲಿ ಪ್ರಾಕೃತ ಮತ್ತು ಸಂಸ್ಕೃತ ಇವೆರಡೂ ಮಿಕ್ಕ ನಾಟಕಗಳಲ್ಲಿ ಇರುವಂತೆ ಬಳಸಲ್ಪಟ್ಟಿವೆ. ಅಶ್ವಘೋಷನ ನಾಟಕದಲ್ಲಿ ಎಲ್ಲಾ ಪಾತ್ರಗಳೂ ಸಾಮಾನ್ಯವಾಗಿ ಸಂಸ್ಕೃತದಲ್ಲೇ ವ್ಯವಹರಿಸಿದೆ.

3. ಮೂರನೇ ನಾಟಕವು ಚಾರುದತ್ತನ ಕಥೆಯನ್ನು ಅನುಸರಿಸಿರುವಂತಿದೆ. ಮಗಧವತೀ ಎನ್ನುವ ವೇಶ್ಯೆ. ಸೋಮದತ್ತನೆಂಬ ನಾಯಕ. ಕೋಮುದ ಗಂಧನೆಂಬ ವಿದೂಷಕ. ಈ ಪಾತ್ರಗಳೊಡನೆ ಒಬ್ಬ ದುಷ್ಟ ಧನಂಜಯನೆಂಬ ರಾಜಕುಮಾರ. ಇವರನ್ನು ಕೂಡಿಸಿ ಧಾರ್ಮಿಕ ಜೀವನವನ್ನು ಪ್ರತಿಬಿಂಬಿಸಲು ಕವಿಯು ಆಡಿಸಿರುವನು. ಕಥೆಯು ಮೃಚ್ಛಕಟಿಕಕ್ಕೆ

ಹತ್ತಿರವಿದೆ. ಅದನ್ನು ನೋಡಿಯೇ ಈ ನಾಟಕವನ್ನು ಅಶ್ವಘೋಷನು ಬರೆದಿರಬಹುದೆಂದು ತೋರುತ್ತದೆ. ಮೃಚ್ಛಕಟಿಕವು ಅಶ್ವಘೋಷನಿಗಿಂತಲೂ ಹಿಂದಿನದು ಎನುವುದಕ್ಕೆ ಇದನ್ನು ಆಧಾರವಾಗಿ ತೆಗೆದುಕೊಳ್ಳಬಹುದು.

## ಭಾಷೆ ಮತ್ತು ಶೈಲಿ

ಭಾಷಾ ವಿಷಯದಲ್ಲಿ ಕೆಲವು ಕಡೆ ಸಂಸ್ಕೃತಕ್ಕೆ ಪ್ರಾಕೃತ ಸಂಪರ್ಕವು ತಾಗಿದಂತಿದೆ. ಹಾಗಾದರೂ ಸಂಸ್ಕೃತವು ಚೆನ್ನಾಗಿದೆ. ವೃತ್ತ ಮತ್ತು ಭಂಗಿ ಚೆನ್ನಾಗಿದೆ. ಪ್ರಾಕೃತವು ಪಾಳಿಯಂತಿದೆ. ಇದರಿಂದ ಬೌದ್ಧಗ್ರಂಥಗಳ ಅಧ್ಯಯನವು ಅಧಿಕವಾದಂತಿದೆ. ಒಟ್ಟಿನಲ್ಲಿ ಸಂಸ್ಕೃತಕ್ಕೆ ಅಧೀನವಾಗಿ ಪ್ರಾಕೃತವು ಬೆಳೆಯುವ ಸ್ಥಿತಿಯಲ್ಲಿದೆ.

## ಅಧಿಕ ವಿವರ

ಇವನ ವಿಷಯದಲ್ಲಿ ವಿವರವನ್ನು ಈಗಾಗಲೇ ಕೊಟ್ಟಾಗಿದೆ. (47-2) ಇವನ ಸೂತ್ರಾಲಂಕಾರವು ಟಿಬೆಟ್ ದೇಶದ ಭಾಷಾಂತರದಿಂದ ಹೆಸರುಗಳಿಸಿದೆ. ಮಹಾಯಾನ ಶ್ರದ್ಧೋತ್ಪಾದ ಎನ್ನುವ ಗ್ರಂಥವು ಇವನದೇ ಎನ್ನುವುದನ್ನು ನಂಬುವುದಾದರೆ ಇವನು ಮಹಾಯಾನ ಪಂಥದ ವಿಜ್ಞಾನವಾದಿಗಳಲ್ಲಿ ಪ್ರಸಿದ್ಧನಾದವನು.

## ೯೯. ಕ್ರಿ. ಶ. ೨ನೇ ಶತಮಾನದಿಂದ –ಕ್ರಿ. ಶ. ೬ನೇ ಶತಮಾನ ಪೂರ್ತಿ

ಈ 5 ಶತಮಾನಗಳನ್ನು ಕಾವ್ಯದೃಷ್ಟಿಯಿಂದ ಸ್ವಾಪಕಾಲವೆನ್ನಬಹುದು. ಕ್ರಿ. ಶ. 430ರಲ್ಲಿದ್ದ ಭರ್ತೃಮೆಂಠಿನ ಹಯಗ್ರೀವ ವಧ ಕ್ರಿ. ಶ. 550ರ ಭಾರವಿಯ ಕಿರಾತಾರ್ಜುನೀಯ. ಇವೆರಡನ್ನೂ ಬಿಟ್ಟರೆ ಗಣನಾರ್ಹ. ಕಾವ್ಯಸೃಷ್ಟಿಯು ಈ ಕಾಲದಲ್ಲಿ ಆಗಲಿಲ್ಲವೆಂದೇ ಹೇಳಬಹುದು. ಈ ಕಾಲದವನೆಂದು ಹೆಳಲಾದ ಚಂದ್ರ ಕವಿಯ ಕವಿತೆಯ ನಾಲ್ಕೂ ಶ್ಲೋಕಗಳು ಸುಭಾಷಿತಾವಳಿಯಲ್ಲಿದೆ. ಅಲಂಕಾರಶಾಸ್ತ್ರಜ್ಞರು ಇವುಗಳನ್ನು ಮೆಚ್ಚಿರುವಂತಿದೆ. ದಶರೂಪಕದ ವ್ಯಾಖ್ಯಾನದಲ್ಲಿ ಇವನ ಒಂದು ಶ್ಲೋಕವು ಅನೇಕ ಭಾವಮೇಳನಕ್ಕೆ ಉದಾಹರಣೆಯಾಗಿ ಹೇಳಲ್ಪಟ್ಟಿದೆ. ಆದರೆ ಯಾವ ಉತ್ತಮ ಗ್ರಂಥವು ಈ ಕಾಲದಲ್ಲಿ ನಿರ್ಮಿಸಲ್ಪಟ್ಟಿದ್ದಕ್ಕೆ ಪ್ರಮಾಣವು ಸಿಕ್ಕಿಲ್ಲ. ಆರನೇ ಶತಮಾನದ ಕೊನೆ ಮತ್ತು 7ನೇ ಶತಮಾನದ ಪ್ರಾರಂಭದಲ್ಲಿ ಅಲಂಕಾರ ಶಾಸ್ತ್ರಕ್ಕೆ ಪ್ರಥಮಾಚಾರ್ಯನೆಂದು ಪ್ರಸಿದ್ಧನಾದ ಭಾಮಹನ ಸಿದ್ಧಾಂತವನ್ನು ನೋಡಿದರೆ ಸಂಸ್ಕೃತ ಗ್ರಂಥ ನಿರ್ಮಾಣಕ್ಕೆ ಅಲ್ಲಿಯವರೆಗೂ ಉತ್ತೇಜನವಿರಲಿಲ್ಲವೆಂದು ಊಹಿಸಬಹುದು. ಕಾವ್ಯಗಳಲ್ಲಿ ಅಲಂಕಾರಗಳು ಮತ್ತು ರಸ ಇವು ನೈಜಿಕ ಸ್ಥಿತಿಯಲ್ಲಿಲ್ಲದೆ ಕಲ್ಪಿತವಾಗಿರುವುದನ್ನು ಕಂಡೇ ಅವನು ತನ್ನ ಕಾವ್ಯಾಲಂಕಾರ ಶಾಸ್ತ್ರದ ಮೂರು, ನಾಲ್ಕು ಮತ್ತು 6ನೇ ಅಧ್ಯಾಯಗಳಲ್ಲಿ ಗುಣ, ದೋಷ, ಮತ್ತು ಶಬ್ದ ಶುದ್ಧಿ ಇವುಗಳನ್ನು ಪ್ರಸ್ತಾಪಿಸಿರಬಹುದು. ಇವನ ಹಿಂದೆಯೇ ಮೇಧಾವಿಯು 7 ಉಪಮಾದೋಷಗಳನ್ನು ತೋರಿಸಿಕೊಟ್ಟಿದ್ದನು. ಭಾಸ, ಕಾಳಿದಾಸ ಮತ್ತು ಅಶ್ವಘೋಷ ಇವರಲ್ಲಿ ಈ ದೋಷಗಳು ಇಲ್ಲದಿರುವಾಗ, ಈ ದೋಷದಿಂದ ಕೂಡಿರುವ ಕಾವ್ಯನಾಟಕಗಳು ರಚಿಸಲ್ಪಟ್ಟಿರಬೇಕು. ಅವು

ನಮಗೆ ಲಭ್ಯವಾಗಿಲ್ಲ. ಭಾಸ ಮತ್ತು ರಸವಿರಹಿತವಾದ ಶುಷ್ಕ ಪಾಂಡಿತ್ಯದಿಂದ ಕಾವ್ಯೋತ್ಪತ್ತಿಗೆ ವಿಘಾಥತ ಬಂದಿರುವುದನ್ನು ಕಂಡು ಭಾಮಹನು ತನ್ನ ವಕ್ರೋಕ್ತಿವಾದವನ್ನು ತಂದಿರಬಹುದು. ಇಂತಹ ಸ್ಥಿತಿಯನ್ನೇ ನೋಡಿ ಬಾಣನಾದ ಮೇಲೆ ಬಂದ ಭವಭೂತಿಯು ತನ್ನ ಮಾಲತಿ ಮಾಧವ ನಾಟಕದಲ್ಲಿ

ಯೇನಾಮಕೇಚಿದಿಹನಃ ಪ್ರಥಯಂತ್ಯವಜ್ಞಾಂ
ಜಾನಂತಿತೇ ಕಮಪಿತ್ತಾನ್‌ಪ್ರತಿನ್ಯೆಷ್ ಯತ್ನಃ
ಉತ್ಪತ್ಸ್ಯತೇಸ್ತಿ ಮಮ ಕೋಪಿ ಸಮಾನ ಧರ್ಮಾ
ಕಾಲೋಹ್ಯಯಃ ನಿರವಧಿರ್ವಿಪುಲಾ ಚಪೃಥ್ವೀ

ಎಂದು ಹೇಳಿರಬಹುದು.

ಈ ವಿಷಮ ಮತ್ತು ಸಂದಿಗ್ಧ ಕಾಲದಲ್ಲಿ ಗುಪ್ತರ ಪ್ರಾಬಲ್ಯವಿದ್ದು ಅವರು ಸಂಸ್ಕೃತಕ್ಕೆ ಬಹಳ ಉತ್ತೇಜನಕೊಟ್ಟರೆಂದು ಹೇಳಲಾಗಿದೆ. ಮ್ಯಾಕ್ಸ್‌ಮುಲ್ಲರಿಗೆ ಇದು ಕಾವ್ಯೋತ್ಪತ್ತಿಗೆ ಸುವರ್ಣಯುಗವಾಗಿ ಕಂಡಿದೆ. ಎರಡನೇ ಚಂದ್ರಗುಪ್ತಮತ್ತು ಅವನ ತಂದೆ ಸಮುದ್ರ ಗುಪ್ತ ಇವರಿಬ್ಬರೂ ಸಂಸ್ಕೃತ ಪ್ರೇಮಿಗಳು. ಸಮುದ್ರಗುಪ್ತನ ಮಂತ್ರಿ ಮತ್ತು ಸೈನ್ಯಾಧಿಪತಿ ಹರಿಸೇನನೂ ಕವಿ. ವತ್ಸಭಟ್ಟಿಯೂ ಈ ಕಾಲದವನು. ಅವರ ಕೆಲವು ಶ್ಲೋಕಗಳಿಂದ ನಾಮ ಪ್ರಾಶಸ್ತ್ಯ ಕೊಡುವುದು ಸಮಂಜಸವಾಗಿ ಕಂಡು ಬರುವುದಿಲ್ಲ. ಈ. ಕಾಲದಲ್ಲಿ ಸಂಸ್ಕೃತ ಅಭ್ಯಾಸಕ್ಕೆ ಉತ್ತೇಜನವಿದ್ದಿರಬಹುದು. ಅದನ್ನು ತಳ್ಳಿಹಾರುವಂತಿಲ್ಲ. ಆದರೆ ಕಾವ್ಯ ಮತ್ತು ನಾಟಕ ರಚನೆಯಲ್ಲಿ ಈ ಕಾಲವು ಗಣ್ಯವಾಗಿಲ್ಲವೆಂದೇ ಹೇಳಬೇಕಾಗುತ್ತದೆ. ಈ ಸಂಸ್ಕೃತಾಭ್ಯಾಸ ಶತಮಾನಗಳ ಕೊನೆಯಲ್ಲಿ ಬಾಣನು ಬಂದು ಪ್ರಪ್ರಥಮವಾಗಿ ಗದ್ಯ ಕಾವ್ಯವನ್ನು ಕೊಟ್ಟಿರುವುದನ್ನು, ಅವನ ಚಿಕ್ಕ ವಯಸ್ಸಿನ ಅವ್ಯವಸ್ಥಿತ ಜೀವನದಲ್ಲಿಯೂ ಅವನಿಗೆ ಸಂಸ್ಕೃತಾಭ್ಯಾಸಕ್ಕೆ ಅವಕಾಶವಿದ್ದುದನ್ನು ಗಮನಿಸಿದರೆ. ಈ 5 ಶತಮಾನಗಳೂ ಸಂಸ್ಕೃತಾಧ್ಯಯನ ಕಾಲವೆಂದು ಹೇಳಬಹುದು. ಬಾಣನ ಪ್ರಾಯಕ್ಕೆ ಹರ್ಷನು ರಾಜನಾಗಿ ಸಂಸ್ಕೃತಕ್ಕೆ ಉತ್ತೇಜನವನ್ನು ಕೊಡುವುದಲ್ಲದೇ ತಾನೂ ಕವಿಯಾಗಿ ನಾಟಕಗಳನ್ನು ಬರೆದನು.

## ೧೦೦. (೪೭) ಹರ್ಷವರ್ಧನ (ಕ್ರಿ.ಶ. 606-647)

ಇವನು ಸ್ಥಾನೇಶ್ವರ ಮತ್ತು ಕನ್ಯಾಕುಬ್ಜದ ದೊರೆ. ಇವನ ಮತ್ತು ಇವನ ವಂಶದ ವಿಷಯವಾಗಿಯೇ ಬಾಣನು ಹರ್ಷಚರಿತೆಯನ್ನು ಬರೆದನು. ಚೀಣಾ ಯಾತ್ರಿಕ ಹೂಯನ್‌ತ್ಸಾಂಗ್ ಇವನ ರಾಜ್ಯಭಾರವನ್ನು ಚೆನ್ನಾಗಿ ವರ್ಣಿಸಿರುವನು. ಇವನು ಒಬ್ಬ ಕವಿಯಾಗಿದ್ದು ನಿಜ. ಇದಕ್ಕೆ ಅನೇಕ ನಿದರ್ಶನಗಳಿವೆ. ಆದರೂ ಅನೇಕರು ಇವನದೆಂದು ಹೇಳಲಾದ ಮೂರು ನಾಟಕಗಳನ್ನು ಬಾಣನು ಬರೆದುಕೊಟ್ಟು ಹಣಗಳಿಸಿದನೆಂದು ಹೇಳಿರುವುದು ಸರಿಯಾಗಿರುವಂತೆ ತೋರುವುದಿಲ್ಲ. ಈ ನಾಟಕಗಳಲ್ಲಿರುವ ಶೈಲಿಗೂ ಬಾಣನ ಶೈಲಿಗೂ ಬಹಳ ಅಂತರವಿದೆ. ಒಬ್ಬ ದೊರೆ ಬರೆದ ರತ್ನಾವಳಿ ನಾಟಕವು ರಂಗದಲ್ಲಿ ಆಡಲ್ಪಡುತ್ತಿತ್ತೆಂದು ದಾಮೋದರ ಗುಪ್ತನ (ಕ್ರಿ. ಶ.

779-713) ಕುಟ್ಟನೀ ಮಾಣಾ ಎನ್ನುವ ಗ್ರಂಥದಲ್ಲಿದೆ. ಇದರಲ್ಲಿರುವ ಕೆಲವು ಶ್ಲೋಕಗಳು. ನಾಗಾನಂದ ಮತ್ತು ಪ್ರಿಯದರ್ಶಿಕದ ಕೆಲವು ಶ್ಲೋಕಗಳು ಅಲ್ಲಲ್ಲೆ ತೆಗೆದುಕೊಳ್ಳಲಾಗಿದೆ. ಆದ್ದರಿಂದ ಹರ್ಷನೇ ಈ ಮೂರು ನಾಟಕಗಳ ಕವಿಯಾಗಿದ್ದಿರಬೇಕು. ಯಾವನೋ ಒಬ್ಬ ಅನಾಮಧೇಯ ಕವಿಯು ಹಣಕ್ಕಾಗಿ ಈ ನಾಟಕಗಳನ್ನೂ ಹರ್ಷನಿಗೆ ಬರೆದು ಕೊಟ್ಟಿರಬೇಕೆಂದು ಕೆಲವರು ಅಭಿಪ್ರಾಯಪಟ್ಟಿರುವುದು ಸರಿಯಲ್ಲ. ಇಂತಹ ಮೂರು ನಾಟಕಗಳನ್ನು ಬರೆದು ಕೊಡಲು ಸಮರ್ಥನಾದವನು ತನ್ನ ಕೀರ್ತಿಗಾಗಿ ಒಂದನ್ನಾದರೂ ತನ್ನ ಹೆಸರಿನಲ್ಲಿ ಕೊಡದೇ ಇರುತ್ತಿರಲಿಲ್ಲ. ಧನದಾಶೆ ಇರುವವನಿಗೆ ಕೀರ್ತಿಯ ಆಶೆಯೂ ಇದ್ದೇ ಇರಬೇಕು. ಇದು ಮಾನವನ ಸ್ವಭಾವ. ಆದ್ದರಿಂದ ಹರ್ಷನೇ ಈ ಮೂರು ನಾಟಕಗಳಿಗೂ ಕವಿಯು ಎಂದು ನಿಶ್ಚಯವಾಗಿ ಹೇಳಬಹುದು. ಇವನ ಕಾಲ ಕ್ರಿ. ಶ. 605-647 ಎಂದು ನಿಶ್ಚಿತವಾಗಿದೆ.

ರತ್ನಾವಳಿ – ಇದು 4 ಅಂಕಗಳ ನಾಟಕ. ಭಾಸನ ಸ್ವಪ್ನವಾಸವದತ್ತನ ಪೂರ್ಣಾನುಕರಣವು ಇಲ್ಲಿ ಕಾಣುತ್ತದೆ. ವತ್ಸರಾಜ ಉದಯನನೇ ನಾಯಕ. ಇವನ ಮಂತ್ರಿ ಯೌಗಂಧರಾಯಣನು ತನ್ನ ದೊರೆ ವಿಶಾಲ ಭೂಪತಿಯಾಗಬೇಕೆಂಬ ರಾಜ ಭಕ್ತಿಯಿಂದ ಸಿಂಹಳದ ವಿಕ್ರಮ ರಾಜಕುಮಾರಿ ರತ್ನಾವಳಿಯನ್ನು ತನ್ನ ದೊರೆಗೆ ಮದುವೆ ಯಾಚಿಸಲು ಪ್ರಯತ್ನಪಡುವನು. ರಾಣಿ ವಾಸವದತ್ತೆಗೆ ಇದನ್ನು ತಿಳಿಸದೆ ದೊರೆಯ ಕಂಚುಕಿ ಬಾಭ್ರವ್ಯನ ಮೂಲಕ ಸಿಂಹಳ ದೊರೆಗೆ ವಾಸವದತ್ತಳು ಸತ್ತಳೆಂದೂ ಹೇಳಿ ಕಳುಹಿಸುವನು. ಅವನು ತನ್ನ ಮಗಳನ್ನು ಉದಯನನಿಗೆ ಕೊಡಲು ಒಪ್ಪಿ ಬಾಭ್ರವ್ಯ ಮತ್ತು ತನ್ನ ಮಂತ್ರಿ ವಸುಭೂತಿ ಇವರೊಡನೆ ರತ್ನಾವಳಿಯನ್ನು ಕಳುಹಿಸುವನು. ಸಮುದ್ರದಲ್ಲಿ ಹಡಗು ಮುಳುಗಿ ಒಬ್ಬ ವರ್ತಕನಿಂದ ರತ್ನಾವಳಿಯು ರಕ್ಷಿಸಲ್ಪಟ್ಟು ವಾಸವದತ್ತೆಗೆ ಬೇಟೆಯಾಗಿ ಸಾಗರಿಕಾ ಎನ್ನುವ ಹೆಸರಿನಿಂದ ಆರಿಸಲ್ಪಡುವಳು. ಇವಳ ಸೌಂದರ್ಯವನ್ನು ಕಂಡು ತನ್ನ ಗಂಡನು ಇವಳನ್ನು ಅಪೇಕ್ಷಿಸದಿರಲೆಂದು ಅವಳನ್ನು ಅವನಿಗೆ ತೋರಿಸದೆ ಇರುವಳು. ಆದರೆ ವಸಂತ ಋತುವಿಲ ಕಾಮದಹನ ಹಬ್ಬದಲ್ಲಿ ಇವಳನ್ನು ರಾಜನು ನೋಡದಿರಲೆಂದು ಹಿಂದಕ್ಕೆ ಕಳುಹಿಸಲ್ಪಟ್ಟರೂ ರಾಜನನ್ನು ಹೇಗೋ ನೋಡಿ ಪ್ರೀತಿಪರವಶಳಾಗಿರುವಳು. ಅವನ ಚಿತ್ರವನ್ನು ಬರೆದು ತನ್ನ ಸಖಿ ಸುಸಂಗತಾ ಎನ್ನುವಳಿಗೆ ತೋರಿಸುವಳು. ಆ ಚಿತ್ರದ ಪಕ್ಕದಲ್ಲಿ ಇವಳ ಚಿತ್ರವನ್ನು ಇವಳ ಸಖಿಯು ಬರೆಯುವಳು. ಅಷ್ಟರಲ್ಲಿ ಒಂದು ಕೋತಿಯು ತಪ್ಪಿಸಿಕೊಂಡು ಇವಳ ಗಿಣಿಯನ್ನು ಪಂಜರದಿಂದ ಓಡಿಹೋಗುವಂತೆ ತೊಂದರೆ ಮಾಡಿತು. ಈ ಗಿಣಿಯು ಸಾಗರಿಕೆ ಮತ್ತು ಸುಸಂಗತೆಯರ ಸಂವಾದವನ್ನು ಅನುಕರಿಸಿದ್ದನ್ನು ರಾಜಾ ಮತ್ತು ವಿದೂಷಕನನ್ನು ಬಂಧನದಲ್ಲಿಡಿಸುವಳು. ವಿದೂಷಕನು ಬಂಧನದಿಂದ ಬಿಡಿಸಲ್ಪಟ್ಟು ಕ್ಷಮಿಸಲ್ಪಡುವನು. ಅಷ್ಟರಲ್ಲಿ ರುಮಣ್ವಾನನು ಕೋಸಲ ದೇಶವನ್ನು ಗೆದ್ದನೆನ್ನುವ ಸುದ್ದಿಯು ಹರಡುವುದು. ಒಬ್ಬ ಮಂತ್ರಗಾರನು ಬರುವನು. ತನ್ನ ಕೌಶಲ್ಯವನ್ನು ದೊರೆಗೆ ತೋರಿಸುವನು. ಬಾಭ್ರವ್ಯಗೂ ವಸುಭೂತಿಯೂ ಬರುವರು. ತಾವು ತಪ್ಪಿಸಿಕೊಂಡ ಕ್ರಮವನ್ನೂ ಹೇಳುವಷ್ಟರಲ್ಲಿರಾಣಿವಾಸಕ್ಕೆ ಬೆಂಕಿಬಿದ್ದಂತೆ ಮಂತ್ರವಾದಿ ಮಾಡುವನು. ರಾಜನು ಸಾಗರಿಕೆಯನ್ನು ರಕ್ಷಿಸುವನು. ವಸುಭೂತಿಯು ರತ್ನಾವಳಿಯನ್ನು ಗುರುತಿಸುವನು. ಯತಾಗಂಧ ರಾಯಣನು ಬರುವನು. ರಾಣಿಯು ಮದುವೆಗೆ ಅನುಮತಿಕೊಡುವಳು. ಕಥೆಯು ಸಂತೋಷದಲ್ಲಿ ಮುಗಿದಿದೆ.

ಪ್ರಿಯದರ್ಶಿಕಾ –ಪ್ರದ್ಯೋತ ನೂ ದೃಢವರ್ಮನೂ ಷಡ್ಡರು. ಪ್ರದ್ಯೋತನ ಮಗಳು ವಾಸವದತ್ತೆ. ವತ್ಸರಾಜನ ಪಟ್ಟಮಹಿಷಿ. ದೃಢವರ್ಮನ ಮಗಳು ಪ್ರಿಯದರ್ಶಿಕಾ ಕಳಿಂಗ ದೇಶದ ರಾಜನು ಇವಳನ್ನು ಮದುವೆಯಾಗಲು ಅವಳ ತಂದೆಯನ್ನು ಕೇಳುವನು. ಆದರೆ ಅವಳು ವತ್ಸರಾಜನಿಗೆ ನಿಶ್ಚಿತಳಾಗಿರುವಳು. ಆ ಕೋಪದಿಂದ ಕಳಿಂಗ ದೊರೆಯು ಧೃಡವರ್ಮನನ್ನು ಯುದ್ಧದಲ್ಲಿ ಸೋಲಿಸಿ ಓಡಿಸುವನು. ದೃಢವರ್ಮನ ಕಂಚುಕಿಯು ಪ್ರಿಯದರ್ಶಿಕೆಯನ್ನು ತನ್ನ ದೊರೆಯ ಸ್ನೇಹಿತನಾದ ವಿಂಧ್ಯಕೇತುವಿನ ಆಶ್ರಯದಲ್ಲಿ ಬಿಟ್ಟಿರುವನು. ವಿಂಧ್ಯಕೇತುವು ವತ್ಸರಾಜನಲ್ಲಿ ಅಪರಾಧ ಮಾಡಿದ್ದರಿಂದ. ವತ್ಸರಾಜನ ಸೈನ್ಯಾಧಿಪತಿ ವಿಜಯಸೇನನು ಅವನನ್ನು ಕೊಂದು ಲೂಟಿಯಲ್ಲಿ ಪ್ರಿಯದರ್ಶಿಕೆಯನ್ನೂ ಕರೆತರುವನು. ದೊರೆಯು ಇವಳನ್ನು ತನ್ನ ರಾಣಿಯ ಚೇಟಿಯನ್ನಾಗಿ ಮಾಡುವನು. ಈಗ ಇವಳ ಹೆಸರು ಅರಣ್ಯಕಾ. ಇದು ಒಂದನೇ ಅಂಕ.

೨ನೇ ಅಂಕದಲ್ಲಿ ವತ್ಸರಾಜನು ಅರಣ್ಯಕೆಯಲ್ಲಿ ಅನುರಕ್ತನಾಗುವನು. ಅವಳೂ ಇವನಲ್ಲಿ ಅನುರಕ್ತಳಾಗುವಳು. ಒಂದು ದಿನ ವನದಲ್ಲಿ ಒಂದು ದುಂಬಿಯ ಕಾಟಕ್ಕೆ ಸಿಕ್ಕಿ ರಾಜನಿಂದ ರಕ್ಷಿಸಲ್ಪಡುವಳು. ಪ್ರೇಮ ಬೆಳೆಯಿತು. ಅವಳ ಸಖಿಯು ಬಂದು ಅವಳನ್ನು ಕರೆದೊಯ್ಯುವಳು.

೩ನೇ ಅಂಕದಲ್ಲಿ ಅವಲ ಸಖಿ ಸಾಂಕೃತ್ಯಾಯನಿಯು ವತ್ಸರಾಜ ಮತ್ತು ವಾಸವದತ್ತಳ ಮದುವೆಯ ವಿಷಯದ ಮೇಲೆ ಒಂದು ನಾಟಕವನ್ನು ಬರೆದು ರಾಣಿಯ ಎದುರಿನಲ್ಲಿ ಆಡಿಸಲು ಏರ್ಪಾಡು ಮಾಡುವಳು. ಅದರಲ್ಲಿ ಪ್ರಿಯದರ್ಶಿಕೆಯು ವಾಸವದತ್ತಳ ಪಾತ್ರವನ್ನು ವಹಿಸುವಳು. ವತ್ಸರಾಜನ ಪಾತ್ರವನ್ನು ಅವಳ ಸಖಿ ಮನೋರಮೆ ಮಾಡಬೇಕಾಗಿತ್ತು. ಆದರೆ ರಾಜನೇ ಮಾಡುವನು. ಇದನ್ನು ನೋಡಿ ವಾಸವದತ್ತಳಿಗೆ ಕೋಪಬಂತು. ಸಾಂಕೃತ್ಯಾಯನಿಯು ಇದು ಬರೀ ನಾಟಕವೆಂದು ಸಮಾಧಾನ ಹೇಳಿದರೂ ಅವಳ ಕೋಪವು ಇಳಿಯಲಿಲ್ಲ. ವಿದೂಷಕನನ್ನು ಎಬ್ಬಿಸುವಳು. ಅವನು ಅರ್ಧ ನಿದ್ರೆಯಲ್ಲಿ ಸ್ವಪ್ನದಲ್ಲಿರುವಂತೆ ಎಲ್ಲಾ ಗುಟ್ಟನ್ನು ಬಹಿರಂಗಬಡಿಸುವನು.

4ನೇ ಅಂಕದಲ್ಲಿ – ಅರಣ್ಯಕೆಯು ಬಂಧನದಲ್ಲಿಡಲ್ಪಡುವಳು. ರಾಜನ ಶೋಕ. ಅಷ್ಟರಲ್ಲಿ ರಾಣಿಯ ಚಿಕ್ಕಮ್ಮನ ಗಂಡ ದೃಢವರ್ಮನು ಸೆರೆಯಲ್ಲಿರುವನೆಂದೂ. ವತ್ಸರಾಜನ ಸಹಾಯವನು ಅಪೇಕ್ಷಿಸುವನೆಂದೂ ಸುದ್ದಿಬರುವುದು. ಇದು ಕಾರ್‍ಯಗತವಾಗುವುದರೊಳಗೆ ಕಳಿಂಗ ದೊರೆಯು ಸೋಲಿಸಲ್ಪಟ್ಟು ದೃಢವರ್ಮನು ಮತ್ತೆ ದೊರೆಯಾದನೆಂಬ ಶುಭವಾರ್ತೆಯನ್ನು ವಿಜಯಸೇನನು ತರುವನು. ಆದರೆ ತನ್ನ ಮಗಳಿಗಾಗಿ ಕೊರಗುತ್ತಿರುವನೆಂಬ ವಾರ್ತೆಯನ್ನು ತಿಳಿಸುವನು. ಅರಣ್ಯಕೆಯು ನಿರಾಶೆಯಿಂದ ವಿಷಕುಡಿದಳೆಂಬ ವಾರ್ತೆಯನ್ನು ಮನೋರಮೆಯು ತರುವಳು. ವತ್ಸರಾಜನು ವಿಷವನ್ನು ಪರಿಹರಿಸಲು ಸಮರ್ಥನಾದುದರಿಂದ ಅವನಲ್ಲಿಗೆ ತರಲ್ಪಡುವಳು. ಗುಣವಾಗುವುದು. ತನ್ನ ದೊರೆಯ ಬಿಡುಗಡೆ ವಿಷಯದಲ್ಲಿ ಧನ್ಯವಾದನ್ನು ಅರ್ಪಿಸಲು ಬಂದಿದ್ದ ದೃಢವರ್ಮನ ಕಂಚುಕಿಯು ಅರಣ್ಯಕೆಯೇ ತನ್ನ ರಾಜಕುಮಾರಿ ಎಂದು ತಿಳಿಸುವಳು. ವಾಸವದತ್ತೆಗೆ ಸಂತೋಷವಾಗಿ ತನ್ನ ತಂಗಿಯನ್ನು ಗಂಡನಿಗೆ ಒಪ್ಪಿಸುವಳು. ಮದುವೆಯಾಗುವುದು.

ನಾಗಾನಂದ –ಇದರ ಕಥೆಯು ಬೃಹತ್ಕಥಾ ಮತ್ತು ವೇತಾಳ ಪಂಚವಿಂಶತಿಯಲ್ಲಿದೆ.

1ನೇ ಅಂಕ –ವಿದ್ಯಾಧರ ದೊರೆಯು ರಾಜ್ಯವನ್ನು ಬಿಟ್ಟು ಮಗನಾದ ಜೀಮೂತವಾಹನನಿಗೆ ಒಪ್ಪಿಸಿ ತಪಸ್ಸಿಗೆ ಹೋಗುವನು. ಜೀಮೂತವಾಹನನೂ ಸಿದ್ಧರ ದೊರೆಯಾದ ಮಿತ್ರಾವಸೂವು ಸ್ನೇಹಿತರಾದರು. ಮಿತ್ರಾವಸುವಿಗೆ ಮಲಯವತೀಗೆ ಎನ್ನುವ ತಂಗಿ ಇರುವಳು. ಇವಳಿಗೆ ಸ್ವಪ್ನದಲ್ಲಿ ಪಾರ್ವತಿಯು ಗಂಡನನ್ನು ತೋರಿಸುವಳು. ಅದನ್ನು ಅವಲು ತನ್ನ ಸಖಿಗೆ ಉದ್ಯಾನವನದಲ್ಲಿ ತಿಳಿಸುವಳು. ಅದನ್ನು ಒಂದು ಲತೆಯ ಹಿಂದಿದ್ದ ಜೀಮೂತವಾಹನನು ಕೇಳುವನು. ಪರಸ್ಪರ ಪ್ರೇಮಪ್ರದರ್ಶನವಾಗುವುದು. ಅಷ್ಟರಲ್ಲಿ ಒಬ್ಬ ಸನ್ಯಾಸಿಯು ಬಂದು ಅವಳನ್ನು ಕರೆದೊಯ್ಯುವನು.

2ನೇ ಅಂಕ –ಪರಸ್ಪರ ಪ್ರೇಮ. ಮಿತ್ರಾವಸುವು ತನ್ನ ತಂಗಿಯನ್ನು ಜೀಮೂತವಾಹನಿಗೆ ಕೊಡುವುದಕ್ಕಾಗಿ ತಿಳಿಸುವನು. ಆದರೆ ಅವನಿಗೆ ಇವಳೇ ತನ್ನ ಪ್ರಿಯೆ ಎಂದು ತಿಳಿಯದೇ ಮದುವೆಯನ್ನು ನಿರಾಕರಿಸುವನು. ಇದನ್ನು ತಿಳಿದು ಮಲಯಮತಿಯು ನೇಣುಹಾಕಿಕೊಳ್ಳಲು ಪ್ರಯತ್ನಪಡುವಳು. ಅವಳನ್ನು ರಕ್ಷಿಸಲು ಸಖಿಯ ಒತ್ತಾಯದಿಂದ ಜೀಮೂತವಾಹನನೇ ಹೋಗಿ ನೋಡಿ ತನ್ನ ಸ್ನೇಹಿತನ ತಂಗಿಯೇ ತನ್ನ ಪ್ರಿಯೆ ಎಂದು ತಿಳಿದು ಸಂತೋಷದಿಂದ ಮದುವೆಯಾದನು.

3ನೇ ಅಂಕ – ಜೀಮೂತವಾಹನನಿಗೆ ರಾಜ್ಯ ಹೋದ ಸಮಾಚಾರ ತಿಳಿಯಿತು. ಅದಕ್ಕೆ ಅವನು ಸಂತೋಷಪಟ್ಟನು.

### 4ನೇ ಮತ್ತು 5ನೇ ಅಂಕಗಳು

ಒಂದು ದಿನ ತನ್ನ ಸ್ನೇಹಿತರೊಡನೆ ಜೀಮೂತವಾಹನನು ತಿರುಗಾಡಲು ಹೊರಟುದಾರಿಯಲ್ಲಿ ಸರ್ಪಗಳ ಮೂಳೆರಾಶಿಯನ್ನು ಕಂಡು ಅದರ ತತ್ತ್ವವನ್ನು ತಿಳಿಯುವನು. ಗರುಡನಿಗೆ ದಿನಕ್ಕೆ ಒಬ್ಬನಂತೆ ನಾಗರು ಆಹುತಿಯಾಗುತ್ತಿದ್ದರು. ಅಂದು ಶಂಖ ಚೂಡನೆನ್ನುವವನ ಸರದಿ. ಅವನ ತಾಯಿಯು ಶೋಕಿಸುತ್ತಿರುವಳು. ಜೀಮೂತವಾಹನನು ಅವಳ ಮಗನಿಗಾಗಿ ತಾನು ಸಾಯುವೆನೆಂದು ಹೇಳಿದರೂ ಅವಳು ಸಮ್ಮತಿಸಲಿಲ್ಲ. ಆದರೆ ತಾಯಿಮಗ ಇಬ್ಬರೂ ದೇವಾಲಯದಲ್ಲಿ ಪ್ರಾರ್ಥಿಸುತ್ತಿರುವಾಗ ಜೀಮೂತವಾಹನನು ತಾನಾಗಿಯೇ ಗರುಡನಿಗೆ ತುತ್ತಾದನು. ಶಂಖಚೂಡನಿಗೆ ಇದು ತಿಳಿದು ಗರುಡನಿಗೆ ಅವನು ಮಾಡಿದ ತಪ್ಪನ್ನು ತಿಳಿಸುವನು. ಪಾರ್ವತಿಯು ಬಂದು ಜೀಮೂತವಾಹನ ಮತ್ತು ಎಲ್ಲಾ ಸರ್ಪಗಳನ್ನೂ ಬದುಕಿಸುವನು. ಗರುಡನು ಇನ್ನು ಮೇಲೆ ಸರ್ಪಗಳನ್ನು ಕೊಲ್ಲುವುದಿಲ್ಲವೆಂದು ಹೇಳಿರುವಲ್ಲಿಗೆ ಕಥೆಯು ಮುಗಿದಿದೆ.

### ಇವನ ಕಲೆ ಮತ್ತು ಶೈಲಿ.

ಕಾಳಿದಾಸನೊಡನೆ ಇವನನ್ನು ಹೋಲಿಸಲಾಗುವುದಿಲ್ಲ. ಇವನು ತನ್ನ ನಾಟಕಗಳಲ್ಲಿ ಕಲ್ಪಿಸಿರುವ ಸನ್ನಿವೇಶಗಳು ಕಾಳಿದಾಸನ ಮಾಳವಿಕಾಗ್ನಿಮಿತ್ರನನ್ನು ಜ್ಞಾಪಕಕ್ಕೆ ತರುತ್ತದೆ. ಕಾಳಿದಾಸನನ್ನು ಅನುಕರಿಸಿದರೂ ಕೀಳುದರ್ಜೆಯ ಕವಿಯಲ್ಲ. ಈ ನಾಟಕಗಳಲ್ಲಿ ಶೃಂಗಾರವೇ ಮುಖ್ಯರಸ. ಮೊದಲಿನ ಎರಡು ನಾಟಕಗಳಲ್ಲಿ ನಾಯಕನು ಧೀರಲಲಿತನು. ಭಾಸನ ನಾಟಕದ ಪಾತ್ರಗಳಲ್ಲಿ

ಕಾಣುವ ಗಾಂಭೀರ್ಯವು ಇವನ ಪಾತ್ರಗಳಿಗಿಲ್ಲ. ಭಾಸನ ವಾಸವದತ್ತೆಗೂ ಇವನ ವಾಸವದತ್ತೆಗೂ ಬಹಳ ಅಂತರ ಕಂಡುಬರುತ್ತದೆ. ಗಂಭೀರ್ಯದಲ್ಲಿ, ತ್ಯಾಗಬುದ್ಧಿಯಲ್ಲಿ, ಪತಿಭಕ್ತಿಯಲ್ಲಿ ಭಾಸನ ವಾಸವದತ್ತೆಯೇ ಉತ್ತಮ. ಮಿಕ್ಕ ಪಾತ್ರಗಳು ಅಷ್ಟು ಉತ್ತಮವಾಗಿಲ್ಲ. ಆಶ್ಚರ್ಯ ಸನ್ನಿವೇಶವೆಂದರೆ ಇವನಿಗೆ ಪ್ರಿಯವಾದಂತಿದೆ. ಮಾಯಾವಿಯ ತಂತ್ರಗಳು ಚೆನ್ನಾಗಿವೆ. ನಾಗಾನಂದದಲ್ಲಿ ಶಂಖ ಚೂಡನ ಪಾತ್ರವು ಗಂಭೀರವಾಗಿದೆ. ಸಾಯಂಕಾಲ, ಮಧ್ಯಾಹ್ನ, ಉಪವನ, ಆಶ್ರಮ, ತೋಟ, ಮದುವೆ, ಸ್ನಾನ, ಪರ್ವತ, ಅರಮನೆ –ಈ ವರ್ಣನೆಗಳು ಕಾವ್ಯಲಕ್ಷಣಕ್ಕೆ ಸರಿಹೋಗಿವೆ.

ಭಾಷೆಯಲ್ಲಿ ಲಾಲಿತ್ಯವಿದೆ. ಶಾಸ್ತ್ರಕ್ಕೆ ಬದ್ಧನಾದಂತಿದೆ. ಅಲಂಕಾರಗಳೂ ಭಾವವು ಪುಷ್ಟವಾಗಿಲ್ಲದಿದ್ದರೂ ಚೆನ್ನಾಗಿವೆ. ಯುದ್ಧದ ವರ್ಣನೆಯಲ್ಲಿ ಶಬ್ದಾಲಂಕಾರ ಮತ್ತು ಕಲ್ಪನೆಯು ಚೆನ್ನಾಗಿದೆ.

ಅಸ್ತವ್ಯಸ್ತ ಶಿರಸ್ತ ಶಸ್ತ್ರಕಶನ್ಯೈಃ ಕೃತ್ತೋತ್ತಮಾಂಗೇ ಮುಹುಃ
ವ್ಯೂಢಾಸೃಕ್‌ಸಂತಿ ಸ್ವನತ್ ಪ್ರಹರಣ್ಯೈಃ ಘರ್ಮೋಧ್ವ ಮದ್ವಹ್ನನಿ
ಆಹೊಯಾಜಿ ಮುಖೇ ಸಕೋಸಲಪತಿ ರ್ಭಗ್ನೇ ಪ್ರಧಾನೇಬಲೇ
ಏಕೇನೈವ ರುಮಣ್ವತಾ ಶರಶತೈಃ ಮತ್ತದ್ವಿಪಸ್ಥೋಹತಃ

ಕೆಲವು ಕಡೆ ರಸಕ್ಕೆ ಅನುಗುಣವಾದ ಶಬ್ದಪ್ರಯೋಗವಿದೆ. ಧೀರಲಲಿತ ನಾಯಕನು ಕೆಲವು ಕಡೆ ಚೆನ್ನಾಗಿ ವರ್ಣಿತನಾಗಿರುವನು. ಜೀಮೂತವಾಹನನು ತನ್ನ ರಾಜ್ಯವನ್ನು ಕಳೆದು ಕೊಂಡಾಗ ಯುದ್ಧಕ್ಕೆ ಹೊರಡದಿರಲು ಕಾರಣವನ್ನು ಅವನ ಗುಣಗಾಂಭೀರ್ಯವನ್ನಾಗಿ ವರ್ಣಿಸಿರುವುದು ಚೆನ್ನಾಗಿದೆ.

ಸ್ವಶರೀರ ಮಪಿ ಪರಾರ್ಥೇಯಃಖಲು ದದ್ಯಾಮಯಾಚಿತಃ ಕೃಪಯಾ
ರಾಜ್ಯಸ್ಯ ಕೃತೇಸಕಥಂ ಪ್ರಾಣಿವಧ ಕ್ರೌರ್ಯಮನು ಮನ್ಯೇ
ನೂತನ ವಿವಾಹಿತೆಯ ಲಜ್ಜೆಯನ್ನು ಚೆನ್ನಾಗಿ ವರ್ಣಿಸಿರುವನು.
ದೃಷ್ಟಾದೃಷ್ಟಿಮಧೋ ದಧಾತಿ ಕುರುತೇ ನಾಲಾಪಮಾಭಾಷಿತಾ
ಶಯ್ಯಾಯಾಂಪರಿವೃತ್ಯತಿಷ್ಠತಿ ಬಲಾದಾಲಿಂಗಿತಾ ವೇಪತೇ
ನಿರ್ಯಾತೀಷು ಸಖೀಷು ವಾಸಾಭವನಾತ್ ನಿರ್ಗಂತು ಮೇವೇಹತೇ
ಜಾತಾವಾಮತಯ್ಯೆವ ಮೇದ್ಯ ಸುತರಾಂ ಪ್ರೀತ್ಯೈ ನವೋಢಾಪ್ರಿಯಾ

ಇವನು ಪ್ರಾಕೃತ ವ್ಯಾಕರಣಕ್ಕೆ ಅನುಗುಣವಾಗಿ ಸೌರಸೇನೀ, ಮಹಾರಾಷ್ಟ್ರೀಯನ್ನೂ ಬಲವಂತವಾಗಿ ಉಪಯೋಗಿಸಿರುವಂತಿದೆ. ವೃತ್ತಗಳಲ್ಲಿ ಇವನಿಗೆ ಶಾರ್ದೂಲ ವಿಕ್ರೀಡಿತ ಮತ್ತು ಸ್ರಗ್ಧರಾ–ಇವೆರಡೇ ಪ್ರಿಯವಾದಂತಿದೆ

## ೧೧೧. (48) ಮಹೇಂದ್ರ ವಿಕ್ರಮವರ್ಮ (ಕ್ರಿ.ಶ.7ನೇ ಶತಮಾನ)

ಇವನು ಹರ್ಷನ ಸಮಕಾಲಿಕನಾದ ಕಾಂಚೀ ದೇಶದ ದೊರೆ. ಇವನ ನಾಟಕವು. ಒಂದು ಪ್ರಹಸನ (Comedy) ಕಥೆಯು ಒಬ್ಬ ಕಪಾಲಿ ಮತ್ತು ಅವನ ಹೆಂಡತಿ ಸೋಮಳಿಂದ ಪ್ರಾರಂಭವಾಗಿ. ಒಬ್ಬ ಬೌದ್ಧ ಸನ್ಯಾಸಿ. ಒಬ್ಬ ಪಾಶುಪತ ಮತ್ತು ಒಬ್ಬ ಹುಚ್ಚ ಇವರಿಂದ ಬೆಳೆದಿದೆ. ಕಪಾಲಿಯು ತನ್ನ ಹೆಂಡತಿಯೊಡನೆ ಮದ್ಯವನ್ನುಕುಡಿಯುತ್ತಾ ಬರುವನು. ತನ್ನ ಸಿದ್ಧಾಂತವನ್ನು ಹೊಗಳುವನು. ಕೊನೆಗೆ ಭಿಕ್ಷೆ ತೆಗೆದುಕೊಳ್ಳುವಾಗ ತನ್ನ ಕಪಾಲವು ಇಲ್ಲದಿರುವುದನ್ನು ಕಂಡು ಅದನ್ನು ಬೌದ್ಧ ಸನ್ಯಾಸಿಯು ಕಳವು ಮಾಡಿರಬಹುದೆಂದು ಅವನೊಡನೆ ಜಗಳ ತೆಗೆಯುವನು. ಪಾಶುಪತನು ಮಧ್ಯಸ್ತಿಕೆಗೆ ಬರುವನು. ಜಗಳವು ಇತ್ಯರ್ಥವಾಗುವುದಿಲ್ಲ. ಕೊನೆಗೆ ಒಬ್ಬ ಹುಚ್ಚನು. ನಾಯಿಯು ಕಳವು ಮಾಡಿದ್ದ ಕಪಾಲವನ್ನು ತಂದುಕೊಡುವನು. ಕಪಾಲಿಯು ತನ್ನ ತಪ್ಪಿಗೆ ಕ್ಷಮಾಪಣೆಯನ್ನು ಕೇಳುವನು. ಇಲ್ಲಿಗೆ • ಕಥೆಯು ಮುಗಿದಿದೆ.

ಕಥೆ ಚಿಕ್ಕದು. ನಗುವನ್ನು ಎಬ್ಬಿಸುವ ಪ್ರಸಂಗಗಳಿವೆ. ಕವಿಚಾತುರ್ಯವು ಚೆನ್ನಾಗಿದೆ. ಭಾಸನ ಶೈಲಿಯನ್ನು ಅನುಕರಿಸಿದ್ದರೂ ಕವಿ ತನ್ನ ವೈಶಿಷ್ಟ್ಯವನ್ನು ತೋರಿಸಿರುವನು. ಬೌದ್ಧ, ಪಾಶುಪತ ಮತ್ತು ಕಪಾಲ ಸಿದ್ಧಾಂತ ಪರಿಚಯವು ಚೆನ್ನಾಗಿದೆ. ಕಪಾಲಿ ಮತ್ತು ಪಾಶುಪತನು ಮಾತ್ರ ಸಂಸ್ಕೃತವನ್ನು ಆಡುವರು. ಮಿಕ್ಕವರೆಲ್ಲರೂ ಪ್ರಾಕೃತವನ್ನೂ ಆಡುವರು. ಈ ಚಿಕ್ಕ ನಾಟಕದಲ್ಲಿ 9 ವೃತ್ತಗಳಿವೆ. ಓದಿ ಸಂತೋಷ ಪಡೋಣವೆ ಎನ್ನುವ ಗ್ರಂಥ. ಉದಾಹರಣೆಗೆ –ಕಪಾಲಿಯ ಸುರಾಪಾನ ಮಹಿಮೆ ಶ್ಲೋಕ

ಪೇಯಾಸುರೂ ಪ್ರಿಯತಮಾ ಮುಖಮೀಕ್ಷಿತವ್ಯ
ಗ್ರಾಹ್ಯಾಂ ಸ್ವಭಾವ ಲಲಿತೋ ವಿಕೃತಿಶ್ಚ ಮೇಷಃ
ಯೇನೇದ ಮೀದೃಶ ಮದೃಶ್ಯತ ಮೋಕ್ಷವರ್ತ್ಮ
ದೀರ್ಘಾಯುರಸ್ತು ಸ ಭಗವಾನ್ ಸಪಿನಾಕ ಪಾಣಿಃ

ಅರ್ಹತರ ಮತದೂಷಣ

ಕಾರ್ಯಸ್ಯ ನಿಸ್ಸಂಶಯ ಮಾತ್ಮ ಹೇತೋಃ
ಸರೂಪತಾಂಹೇತು ಭೀರಭ್ಯು ಪೇತ್ಯ
ದುಃಖ ಸ್ವಕಾರ್ಯಂ ಸುಖಮಾಮುಗಂತಃ
ಸ್ವೇನೈವ ವಾಕ್ಯೇನ ಹತಾವರ್ಹಾಕಾಃ
ಬೌದ್ಧ ಸನ್ಯಾಸಿಯ ವಿಪರೀತನ್ಯಾಯ
ದೃಷ್ಟಾನಿ ವಸ್ತೂನಿ ಮಹಾ ಸಮುದ್ರೇ
ಮಹೀಧರಾದೀನಿ ಮಹಾಂತಿ ಮೋಹಾತ್
ಅಪಹನ್ನು ವಾನಸ್ಯ ಸುತಃ ಕಥಂತ್ವಂ
ಅಲ್ಪಂ ನ ಸಿಧ್ಯೇತು ಮಲಂಕಪಾಲಂ

## ೧೦೨. (49) ಭಟ್ಟನಾರಾಯಣ (ಕ್ರಿ. ಶ. ೭ನೇ ಶತಮಾನ)

ವಾಮನ ಮತ್ತು ಆನಂಧವರ್ಧನನು ಇವನ ನಾಟಕದಿಂದ ಪದ್ಯಗಳನ್ನು ಉದಹರಿಸಿರುವರು. ಆದ್ದರಿಂದ ಇವನು ೮ನೇ ಶತಮಾನಕ್ಕೆ ಹಿಂದಿನವನೆಂದು ನಿಶ್ಚಿತವಾಗುತ್ತದೆ. ತಂಜಾವೂರಿನಲ್ಲಿ ಲಬ್ಧವಾಗಿರುವ ಒಂದು. ಸಂಪ್ರದಾಯ ಗ್ರಂಥವನ್ನು ನೋಡಿದರೆ ಇವನು ಕನ್ಯಾಕುಬ್ಜದ ಒಬ್ಬ ಬ್ರಾಹ್ಮಣನೆಂದೂ. ಬಂಗಾಳ ದೇಶದ ಆದಿಶೂರನು ಇವನನ್ನು ಕರೆಯಿಸಿಕೊಂಡನೆಂದು ತಿಳಿದು ಬರುತ್ತದೆ. ಬಾಣನಿಗೆ ಇವನು ತಿಳಿದಂತಿಲ್ಲ. ಆದ್ದರಿಂದ ಇವನ ಕಾಲವನ್ನು ಸುಮಾರು ಕ್ರಿ. ಶ. 671ಎಂದು ಹೇಳಬಹುದು.

ಇವನ ನಾಟಕ ವೇಣಿಸಂಹಾರ. ಇದರ ಕಥೆಯು ಭಾರತದ್ದು. ದ್ರೌಪದಿಯ ಮಾನಭಂಗವಾದಾಗ ಪರಿಗ್ರಹಿಸಿದ ಪ್ರತಿಜ್ಞೆಯು ಕೌರವ ಪಾಂಡವರ ಯುದ್ಧದ ಕೊನೆಯಲ್ಲಿ ಹೇಗೆ ದ್ರೌಪದಿಯ ವೇಣಿಸಂಹಾರದಲ್ಲಿ ಕೊನೆಗೊಂಡಿತು ಎನ್ನುವುದನ್ನು ಕವಿಯ 6 ಅಂಕಗಳಲ್ಲಿ ಬೆಳೆಸಿರುವನು. ಈ ನಾಟಕವು ಕೀತ್ ವಿಮರ್ಶಕನಿಗೆ ಹಿಡಿಸಿದಂತಿಲ್ಲ. ಅವನು ಹೇಳುವುದಿದು. "ಕೆಲವೆಡೆ ಕಥಾನಿರೂಪಣದಿಂದ ನಾಟಕದಲ್ಲಿ ಅಭಿರುಚಿಯೇ ಹೋಗುವಂತಿದೆ. ವಿಶಾಲವಾದ ಕಥೆಯನ್ನು ತೆಗೆದುಕೊಂಡಿದ್ದೆ ತಪ್ಪು. ನಾಟಕ ಲಕ್ಷಣಗಳಿಗೆ ನಿದರ್ಶನ ಕೊಡುವ ಕುತೂಹಲವು ಹೆಚ್ಚಾಗಿ ರಸಾಭಸಮ ಬಂದಂತಿದೆ. ಭಾಷೆಯು ಬಿಗಿಯಿಲ್ಲ. "ಈ ಮಾತುಗಳು ಪಾಶ್ಚಾತ್ಯದ ದೃಷ್ಟಿಕೋನದಿಂದ ಸರಿಯಾಗಿರಬಹುದು. ಆದರೆ ಮೂರನೆ ಅಂಕದಲ್ಲಿ ಕರ್ಣ ಅಶ್ವತ್ಥಾಮರಿಗೆ ನಡೆದಿರುವ ವಿವಾದದಲ್ಲಿ ವೀರ್ಯ ಮತ್ತು ಅವಹೇಳನವು ಹೇಗೆ ಸ್ವಾಭಾವಿಕವಾಗಿ ಕಂಡು ಬರುತ್ತದೆ ಎನ್ನುವುದನ್ನು ಅಭಿನಯ ಮಾಡುವಾಗಲೇ ತಿಳಿಯುವುದು. ದುರ್ಯೋಧನನ ಚಿತ್ರವಂತೂ ರಮಣೀಯವಾಗಿದೆ. ರಾಜ ಗಾಂಭೀರ್ಯ ಮತ್ತು ಅಭಿಪ್ರಾಯ ಹಾಗೂ ಅಂತರಾರ್ಥಪೂರಿತ ಮಾತುಗಳು ಎಲ್ಲರ ಮನಸ್ಸನ್ನೂ ಸೆಳೆಯುವಂತಿದೆ. ವಿಶಾಖದತ್ತನಿಗೆ (52ನೇ ಕವಿ) ಇರುವ ತೇಜಸ್ಸು ಇವನಿಗಿಲ್ಲವೆನ್ನುವುದು ಅಷ್ಟು ಸರಿಯಾಗಿಲ್ಲ. ವಿಶಾಖದತ್ತನ ಪಾತ್ರ ಕಲ್ಪನೆಯೇನೋ ಉತ್ತಮವಾಗಿದೆ. ಆದರೆ ಭಟ್ಟ ನಾರಾಯಣನು ಕೀಳುಮಟ್ಟದವನಲ್ಲ. ಶಬ್ದಾಲಂಕಾರಕ್ಕೆ ಹೊಂದಿಕೊಳ್ಳುವ ವರ್ಣಾಲಂಕಾರವು ಇವನಲ್ಲಿದೆ. ಉದಾ.

ಅನ್ಯೋನ್ಯಸ್ಫಾಲಭಿನ್ನ ದ್ವಿಪರುದಿರವಸಾಮಾಂಸಮಸ್ತಿಷ್ಕ ಪಂಕೇ
ಮಗ್ನಾನಾಂ ಸ್ಯಂದನಾನಾ ಮುಪರಿಕೃತ ಪದವ್ಯಾಸವಿಕ್ರಾಂತ ಪಟ್ಟೌ
ಸ್ಫೀತಾ ಸೃತ್ಪಾನಗೋಷ್ಠೀರಸದಶಿವಶಿವಾತೂರ್ಯ ನೃತ್ಯತ್ಕಬಂಧೇ
ಸಂಗ್ರಾಮೈಕಾರ್ಣ ವಾಂತಃಪಯಸಿ ವಿಚರಿತುಂ ಪಂಡಿತಾಃ ಪಾಂಡುಪುತ್ರ

ದುರ್ಯೋಧನನ ಪ್ರಭುತ್ವ ದರ್ಪದ ಮಾತನ್ನು ಅವನ ಅಂತಿಮ ಕಾಲದಲ್ಲಿಯೂ ನೋಡಿದರೆ ಅವನನ್ನು ಶ್ಲಾಘಿಸೋಣವೆನ್ನುತ್ತದೆ.

ಕೃಷ್ಣಾ ಕೇಶೇಷು ಭಾರ್ಯಾತವ ಕವಚಪಶೋ; ತಸ್ಯರಾಜ್ಞಃ ತಯೋರ್ವಾ
ಪ್ರತ್ಯಕ್ಷಂ ಭೂಪತೀನಾಂ ಮಮ ಭುವನ ಪತೀರಾಜ್ಞಯಾದ್ಯೂತದಾಸಿ
ತಸ್ಮಿನ್ ವೈರಾನುಬಂಧೇ ವದ ಕಿಮಪಕೃತಂ ತೈರ್ಹತಾಯೋನರೇಂದ್ರಾಃ
ಬಾಹ್ವೋ ರ್ವೀರ್ಯಾ ತೀಭಾರದ್ರವಿಣಗುರುಮಧಂ ಮಾಮ ಜತ್ತ್ವೈ ದದರ್ಪಃ

ಭೀಮನು ಕೀತನಿಗೆ ಗ್ರಾಮ್ಯವಾಗಿ ಕಂಡಿರುವನು. ನಮ್ಮ ಧರ್ಮನಿಷ್ಠೆಯು ಪಾಶ್ಚಾತ್ಯನಿಗೆ ಗೋಚರವಾಗದಿರುವುದರಿಂದ ಹಾಗೆ ಕಂಡಿರುವುದು ಸಹಜವಾಗಿದೆ. ಭೀಮನ ಮಾತನ್ನು ಗಮನಿಸಿದರೆ ಎಷ್ಟು ತಪ್ಪು ಮಾಡಿದರೂ, ಪೂಜ್ಯರು ಪೂಜ್ಯರೇ ಎನ್ನುವ ಭಾವದೊಡನೆ ತನ್ನ ಪ್ರತಿಜ್ಞಾ ಪುರಾಣವನ್ನು ಮಾತ್ರ ಹೇಳಿಕೊಂಡಿರುವನು. ಧೃತರಾಷ್ಟ್ರನಿಗೆ ನಮಸ್ಕರಿಸುವಾಗ ಹೇಳಿದ ಮಾತಿದುಃ

ನಿಹತಾಶೇಷಕೌರವ್ಯಃ ಕ್ಷಿಬೋದುಶ್ಶಾಸನಾಪೂಜಾ
ಬಾಂಕ್ತಾ ದುರ್ಯೋಧನಸ್ಯೂರ್ಯೋಃ ಭೀಮೋಹಂ ಶಿರಸಾನತಃ

ಈ ನಾಟಕವು ಕೀತನಿಗೆ ಹಿಡಿಸದಿದ್ದರೂ ನಮ್ಮ ಅಲಂಕಾರಿಕರಿಗೆ ಚೆನ್ನಾಗಿ ಹಿಡಿಸುವುದರಿಂದಲೇ ಈ ವೇಣಿಸಂಹಾರ ನಾಟಕದಿಂದ ವಿಪುಲ ನಿದರ್ಶನಗಳನ್ನು ಅವರು ತೆಗೆದುಕೊಂಡಿರುವರು.

## ೧೦೩. (50) ಭವಭೂತಿ (ಕ್ರಿ. ಶ. ೭ನೇ ಶತಮಾನ)

ಇವನು ಕೃಷ್ಣಯಜುಶ್ಶಖೆಗೆ ಸೇರಿದ ಬ್ರಾಹ್ಮಣ ಮಹಾಕವಿ ಎಂದು ಹೆಸರುಳ್ಳ ವಾಜಪೇಯ ಯಾಗವನ್ನು ಮಾಡಿದ ಪ್ರಸಿದ್ಧವಾದ ವಂಶದಲ್ಲಿ 5ನೇ ತಲೆಭಟ್ಟ ಗೋಪಾಲನ ಮೊಮ್ಮಗ ನೀಲಕಂಠ ಮತ್ತು ಜಾತ ಕರ್ಣೀಯರ ಮಗ. ಶ್ರೀಕಂಠ ನೀಲಕಂಠನೆಂದು ಇವನ ಹೆಸರು. ವ್ಯಾಕರಣ, ತರ್ಕ ಮತ್ತು ಅಲಂಕಾರ ಗ್ರಂಥಗಳಲ್ಲಿ ಪ್ರವೀಣನಾದ.ಇವನೇ ಕುಮಾರಿಲ ಭಟ್ಟವ್ಯಾಖ್ಯಾನಕ್ಕೆ ಟೀಕೆ ಬರೆದ ಉಂವೇಕಾಚಾರ್ಯ ಮತ್ತು ಕುಮಾರಿಲನ ಶಿಷ್ಯ ಎಂದು ಮಾಲತೀ ಮಾಧವದ ಒಂದು ಹಸ್ತಪ್ರತಿಯಲ್ಲಿ ಬರೆದಿರುವುದು ವಿಶ್ವಾಸಾರ್ಹವಲ್ಲ. ಇವನೇ ತನ್ನ ಗುರುವು ಜ್ಞಾನನಿಧಿ. ತನಗೆ ವೇದ ಉಪನಿಷತ್ತು, ಸಾಂಖ್ಯ ಮತ್ತು ಯೋಗ ಇವೆಲ್ಲವೂ ಚೆನ್ನಾಗಿ ಅಧ್ಯಯನವಾಗಿತ್ತು ಎಂದು ಹೇಳಿರುವನು. ಇದನ್ನೇ ನಂಬಬೇಕು.

ಉಜ್ಜಯಿನಿಯ ದೊರೆ ಮಹಾಕಾಲನೆಂಬುವನ ಆಸ್ಥಾನದಲ್ಲಿದ್ದು ಅವನ ತೃಪ್ತಿಗಾಗಿ ಮೂರು ನಾಟಕಗಳನ್ನು ಬರೆದನೆಂದು ಹೇಳಲಾಗಿದೆ. ಇವನು ತನ್ನ ಸ್ವಂತ ಊರಾದ ವಿದರ್ಭ ದೇಶದ ಪದ್ಮಪುರವನ್ನು ಬಿಟ್ಟು ಉಜ್ಜಯಿನಿಗೆ ಬಂದು ನೆಲಸಿದನು. ಕನ್ಯಾಕುಬ್ಜನ ಯಶೋವರ್ಮನ ಆಶ್ರಯದಲ್ಲಿದ್ದನೆಂದು ಕಲ್ಹಣನು ತನ್ನ ರಾಜತರಂಗಿಣಿಯಲ್ಲಿ ಬರೆದಿರುವುದು ಆಶ್ಚರ್ಯವಾಗಿದೆ. ವಾಕ್ಪತಿಯ ಗೌಡವಾಹ ಎನ್ನುವ ಗ್ರಂಥದಲ್ಲಿ ಭವಭೂತಿಯ ಕವಿತಾ ಬಾಹುಳ್ಯಕ್ಕೆ ಪ್ರಶಂಸೆ ಸಿಕ್ಕಿದೆ. ಆದ್ದರಿಂದ ಇವನದು ಕ್ರಿ. ಶ. 700 ಬಾಣನಿಗೆ ಇದು ಗೊತ್ತಿಲ್ಲ. ವಾಮನನು ಇವನನ್ನು ಉದಹರಿಸಿರುವನು. ಇವನು ನಟರೊಡನೆ ಸ್ನೇಹ ಬೆಳೆಸಿದ್ದನ್ನು ತಾನೇ ಹೇಳಿರುವನು.

## ಮಾಲತೀ ಮಾಧವ

ಭೂರಿವಸು, ಪದ್ಮಾವತೀ ರಾಜ್ಯದ ಮಂತ್ರಿ. ವಿದರ್ಭ ದೇಶದ ಮಂತ್ರಿ. ದೇವರಾತ ಇವರಿಬ್ಬರೂ ಸ್ನೇಹಿತರು. ಭೂರಿವಸುವಿಗೆ ಮಾಲತೀ ಎನ್ನುವ ಮಗಳು. ದೇವರಾತನ ಮಗ ಮಾಧವ. ಇಬ್ಬರು ಸ್ನೇಹಿತರೂ ತಮ್ಮ ಪ್ರಾಯದಲ್ಲಿ ಪರಸ್ಪರ ಒಪ್ಪಿಕೊಂಡಂತೆ ಮಾಧವನಿಗೆ ಮಾಲತಿಯನ್ನು ಮದುವೆ ಮಾಡಿಸಬೇಕೆಂದು ತನ್ನ ಸ್ನೇಹಿತೆಯಾದ ಸನ್ಯಾಸಿನೀಕಾಮಾಂದಕಿಯನ್ನು ಭೂರಿವಸು ಕೇಳಿಕೊಳ್ಳುವನು. ಅಷ್ಟರಲ್ಲಿ ಅವನ ದೊರೆ ತನ್ನ ನರ್ಮಸುಹೃತ್ತಾದ ನಂದನನಿಗೆ ಇವಳನ್ನು ಮದುವೆ ಮಾಡಿಸಲು ಏರ್ಪಾಟುಮಾಡುವನು. ಕಾಮಾಂದಕಿಯು ಮಾಲತೀ ಮಾಧವರನ್ನು ಒಟ್ಟುಗೂಡಿಸಿ ಇದಕ್ಕೆ ಭಂಗ ತರುವುದಕ್ಕೆ ಪ್ರಯತ್ನಿಸುವಳು. ಇವರಿಬ್ಬರ ಪ್ರೇಮವೇನೋ ಬೆಳೆಯಿತು. ಇಬ್ಬರೂ ಒಂದು ಶಿವಾಲಯದಲ್ಲಿ ಸೇರುವರು. ಆಗರೆ ಮಾಲತಿಯ ಸ್ನೇಹಿತೆ ಮಾದಯಾತಿಕೆಯು ತಪ್ಪಿಸಿಕೊಂಡು ಬಂದ ಹುಲಿಯ ಬಾಯಿಗೆ ತುತ್ತಾಗುವ ಪ್ರಸಂಗ ಒದಗುವುದು. ಅವಳನ್ನು ಪಾರುಮಾಡಲು ಮಾಧವನ ಸ್ನೇಹಿತ ಮಕರಂದನು ತನಗೆ ಘಾಯಗಳಾದರೂ ಪ್ರಯತ್ನ ಪಟ್ಟು ಜಯಶೀಲನಾಗುವನು. ಮದಯಂತಿಗೆ ಮತ್ತು ಮಕರಂದನಿಗೆ ಪರಸ್ಪರ ಪ್ರೇಮ ಬೆಳೆಯುತ್ತದೆ.

ಇತ್ತ ದೊರೆಯ ಒತ್ತಾಯದಂತೆ ಮಾಲತೀನಂದನರಿಗೆ ಮದುವೆ ನಡೆಯಲು ನಿಶ್ಚಿತವಾಯಿತು. ಆದರೆ ಮಕರಂದನ ತಂತ್ರದಿಂದ ಅವನು ಮಾಲತೀ ಸ್ಥಾನದಲ್ಲಿ ತಾನಿದ್ದು ಮಾಲತಿಯು ಮಾಧವನೊಡನೆ ಓಡಿಹೋಗುವಂತೆ ಆಗುವುದು. ನಂದನಿಗೆ ಮದುವೆಯಾಗಿ ಗುಪ್ತವೇಷಧಾರಿ ಮಕರಂದನು ಒಯ್ಯಲ್ಪಡುವನು. ಇದು ಮದಯಂತಿಗೆ ತಿಳಿಯದು. ಅವಳು ನಂದನ ತಂಗಿ. ತನ್ನ ಸ್ನೇಹಿತೆಯು ಈ ರೀತಿಯಲ್ಲಿ ತನ್ನ ಪ್ರಿಯನಿಗೆ ಮೋಸಮಾಡಿ ತನ್ನ ಅಣ್ಣನನ್ನು ಮದುವೆಯಾದಳೆಂದು ಕುಪಿತಳಾಗಿ ಅವಳನ್ನು ದೂಷಿಸಲು ಹೋದಾಗ ತನ್ನ ಪ್ರಿಯನನ್ನು ನೋಡಿ ಅವನೊಡನೆ ಓಡಿಹೋಗುವಳು. ಅವರನ್ನು ಸೈನಿಕರು ಹಿಂಬಾಲಿಸುವರು. ಮಾಧವನು ಅವರನ್ನು ಎದುರಿಸಿ ಚದುರಿಸುವನು. ಈ ಧೈರ್ಯ ಸಾಹಸವನ್ನು ಮೆಚ್ಚಿ ಮಾಧವ ಮಾಲತಿಯರನ್ನು ದೊರೆ ಕ್ಷಮಿಸುವನು. ಆದರೆ ಇಲ್ಲಿ ಒಂದು ಪ್ರಸಂಗವು ನಡೆಯುವುದು.

ಹಿಂದೆ ಒಂದು ದಿನ ಮಾಲತಿಯು ಒಬ್ಬ ಕಪಾಲಿಯ ಕೈಗೆ ಸಿಕ್ಕಿ ಚಾಮುಂಡಿಗೆ ಬಲಿಯಾಗುವ ಪ್ರಸಂಗ ಒದಗಿತ್ತು. ಮಾಧವನು ಅಘೋರ ಘಂಟನೆನ್ನುವ ಆ ಕಪಾಲಿಯನ್ನು ಕೊಂದು ಅವಳನ್ನು ರಕ್ಷಿಸಿದ್ದನು. ಆಗ ಆ ಕಪಾಲಿಯ ಶಿಷ್ಯ ಕಪಾಲ ಕುಂಡಲನು ತನ್ನ ಗುರುವನ್ನು ಕೊಂದದ್ದಕ್ಕಾಗಿ ಸೇಡು ತೀರಿಸಿಕೊಳ್ಳುವುದಾಗಿ ಹೇಳಿದನು. ಮಾಧವನು ಸೈನಿಕರೊಡನೆ ಯುದ್ಧ ಮಾಡುತ್ತಿದ್ದಾಗ ಕಪಾಲ ಕುಂಡಲನು ಮಾಲತಿಯನ್ನು ಅಪಹರಿಸುವನು. ಮಾಧವನಿಗೆ ದಿಕ್ಕು ತೋಚದೇ ಹುಡುಕುವನು. ದೈವವಶಾತ್ ಕಾಮಾಂಧಕಿಯ ಶಿಷ್ಯೆ ಸೌದಾಮಿನಿಗೆ ಮಾಲತಿಯ ಸಮಾಚಾರ ತಿಳಿದ ರಾಜನು ಮಾಲತೀ ಮಾಧವ ವಿವಾಹಕ್ಕೆ ಸಮ್ಮತಿಕೊಡುವನು. ಇದು 10 ಅಂಕವುಳ್ಳ ನಾಟಕ.

ಮಹಾವೀರ ಚರಿತಂ–ಇದು ರಾಮಾಯಣದ ಪೂರ್ವಭಾಗ. ಪ್ರಧಾನ ಕಥೆಯಲ್ಲಿ ಮಾಡಿ ವ್ಯತ್ಯಾಸ ಬಾರದಿದ್ದರೂ ಸನ್ನಿವೇಶಗಳಲ್ಲಿ ಬಹಳ ಪರಿವರ್ತನೆ ಮಾಡಿ ನಾಟಕವನ್ನು ಸ್ವಾಭಾವಿಕವಾಗಿ ಮಾಡಲು ಕವಿ ಪ್ರಯತ್ನಪಟ್ಟಿರುವನು ಇದು 7 ಅಂಕವುಳ್ಳ ನಾಟಕ

ಉತ್ತರ ರಾಮಚರಿತೆ - ಇದು ರಾಮಾಯಣದ ಉತ್ತರ ಕಾಂಡ. ಇಲ್ಲಿ ಕಥಾಭಾಗವು ಬಹಳವಾಗಿ ಪರಿವರ್ತಿತವಾಗಿದೆ ಇದು 7 ಅಂಕಗಳುಳ್ಳ ನಾಟಕ

ಮಹಾವೀರ ಚರಿತ್ರೆಯ 5ನೇ ಅಂಕದ 46ನೇ ಶ್ಲೋಕದವರಿಗೆ ಮಾತ್ರ ಕವಿ ಬರೆದನೆಂದೂ ಆದಾದಮೇಲೆ ಸುಬ್ರಹ್ಮಣ್ಯ ಕವಿಯು ಮುಗಿಸಿದ್ದನೆಂದೂ ಹೇಳಲಾಗಿದೆ. ಇದು ಕೊನೆಯ ನಾಟಕವಲ್ಲದಿರುವುದರಿಂದ ಈ ವಿಷಯ ನಂಬಲರ್ಹವಾದುದಲ್ಲ

## ಕವಿತಾ ಚಾತುರ್ಯ ಮತ್ತು ಶೈಲಿ

ಮಾಲತೀ ಮಾಧವ ನಾಟಕವು ಒಂದು ಪ್ರಕರಣಗ್ರಂಥ ಇದರಲ್ಲಿ ಕವಿಯು ಮೃಚ್ಛಕಟಿಕವನ್ನು ಅನುಕರಿಸಲು ಪ್ರಯತ್ನಿಸಿರುವನೆಂದು ಕೆಲವರು ಅಭಿಪ್ರಾಯಪಟ್ಟಿರುವರು ಈ ನಾಟಕದಲ್ಲಿ ವಿದೂಷಕನಿಲ್ಲ ಹಾಸ್ಯವು ಇವನಿಗೆ ರುಚಿಸದು ಭೀಕರ ಮತ್ತು ಗಾಂಭೀರ ಸನ್ನಿವೇಶಗಳನ್ನು ಚತುರನಾಗಿ ವರ್ಣಿಸಿರುವನು ಕಥಾಸರಿತ್ಸಾಗರದಿಂದ ಕಥೆಯನ್ನು ತೆಗೆದುಕೊಂಡು ಜೋಡಿಸಿ ಹೇಳಿರುವುದು ಚೆನ್ನಾಗಿದೆ ಮದಯಂತಿಕೆಯು ನಂದನನ ತಂಗಿಯಾಗಿರುವುದು ಕಥೆಗೆ ಒಂದು ಬಿಗಿ ಬಂದಿದೆ ಆಸೆಯು ಒಂದು ತೊಂದರೆಪಡಿಸುವುದಕ್ಕಿಂತಲೂ ತಪ್ಪಿಸಿಕೊಂಡ ಹುಲಿಯು ಬರುವುದು ಸ್ವಾಭಾವಿಕವಾಗಿದೆ 9ನೇ ಅಂಕವು ಕಾಳಿದಾಸನ ವಿಕ್ರಮೋರ್ವಶೀಯವಾದ 4ನೇ ಅಂಕಕ್ಕೆ ಹೊಂದಿಕೊಳ್ಳುವಂತಿದೆ ಇಲ್ಲೇ ಮೇಘದೂತನ ಸಂದೇಶವು ಜ್ಞಾಪಕಬರುವಂತಿದೆ ಮಾಧವನು ಮೇಘವನ್ನು ಮಾಲತಿಯಲ್ಲಿಗೆ ಕಳುಹಿಸಿರುವುದು ಕಾಳಿದಾಸನ ಅನುಕರಣ ನಾಯಕನು ಉತ್ತಮನಾಗಿ ವರ್ಣಿತನಾಗಿಲ್ಲ ಪಾತ್ರಗಳು ಆಕರ್ಷಿಸುವಂತಿಲ್ಲ

ಮಹಾವೀರ ಚರಿತೆಯಲ್ಲಿ ಕವಿಯ ಶಬ್ದ ಮತ್ತು ವಾಕ್ಯಗಳ ಚಾತುರ್ಯವು ಕಾಣುತ್ತದೆ ವಾಲ್ಮೀಕಿಗೆ ರಾಮ ಸೀತೆಯರು ದೈವವಾಗಿರುವುದು ಕವಿಗೆ ಹಾಗಿರುವಂತೆ ತೋರಿಲ್ಲ ಪೂರ್ಣ ರಾಮಾಯಣವನ್ನೂ 7 ಅಂಕಗಳಲ್ಲಿ ಅಡಗಿಸಲು ಕಷ್ಟಪಟ್ಟಿರುವನು ಕೆಲವು ಕಥಾ ಭಾಗವು ಇಬ್ಬರ ಸಂವಾದದಲ್ಲಿ ಬರುತ್ತದೆ. ಓದಿದರೆ ಕವಿಯು ಪ್ರಧಾನವಾಗಿ ಮನಸ್ಸಿಗೆ ಬರುವನ್ನೇ ವಿನಾ ಪಾತ್ರಗಳಲ್ಲ ಉತ್ತರ ರಾಮಚರಿತೆಯೂ ಹೀಗೆಯೇ ಇದೆ ಆದರೆ ಇದರಲ್ಲಿ ಅತಿಶಯವಿದೆ ರಾಮಸೀತೆಯರ ದೈವೀಪ್ರೇಮವು ಅನ್ಯಾದೃಶವಾಗಿ ವರ್ಣಿತವಾಗಿದೆ. ಸುಂದರಕಾಂಡದ ಶೃಂಗಾರರಸವು ಇಲ್ಲಿ ಮೂರ್ತಿಮತ್ತಾಗಿ ಚಿತ್ರಿತವಾಗಿದೆ.

ಈ ಮೂರು ನಾಟಕಗಳಲ್ಲಿಯೂ ಚಿತ್ರಣವು ಅಷ್ಟು ಉತ್ತಮವಿಲ್ಲದಿದ್ದರೂ ಶಬ್ದ ಮತ್ತು ಅರ್ಥಚಾತುರ್ಯ, ಭಾವ ಗಾಂಭೀರ್ಯ ಮತ್ತು ಕಲ್ಪನಾ ಶಕ್ತಿಯು ಉತ್ತಮವಾಗಿದೆ

ಪ್ರೇಮದ ಸ್ವರೂಪ –ಮಾಲತೀಮಾಧವರಲ್ಲಿ

ಮ್ಲಾನಸ್ಯ ಜೀವ ಕುಸುಮಸ್ಯ ವಿಕಾಸನಾನಿ
ಸಂತರ್ಪಣಾನಿ ಸಕಲೇಂದ್ರಿಯ ಮೋಹನಾನಿ
ಆನಂದನಾನಿ ಹೃದಯೈಕರಸಾಯನಾನಿ
ದಿಷ್ಟ್ಯಾಮಯಾ ಪ್ಯಧಿಗತಾನಿ ವಚೋ ಮೃತಾನಿ

ಬುದ್ಧ ರಕ್ಷಿತೆಯು ಮದನಂತಿಕೆ ಮತ್ತು ಮಕರಂದನನು ಪ್ರೇಮದಿಂದ ಪಲಾಯನ ಮಾಡಲು ಸಹಾಯಮಾಡಿದ ವೇಳೆಯಲ್ಲಿ ಹೇಳಿದ ಮಾತು ಚೆನ್ನಾಗಿದೆ.

ಪ್ರೇಯಾನ್ ಮನೋರಥ ಸಹಸ್ರ ವೃತಸ್ಸ ಏಷಃ
ಸುಪ್ತ ಪ್ರಮತ್ತ ಜನ ಮೇತದಮಾತ್ಯ ವೇಶ್ಮ
ಪ್ರೌಢಂತಮಃ ಕುರು ಕೃತಜ್ಞ ತನ್ಯೈವ ಭದ್ರಂ
ಉತ್ಕ್ಷಿಪ್ತ –ಮೂಕ ಮಣಿನೂಪುರಮೇಹಿಯಾಮಃ

ಕಾಮಂದಕಿಯು ಮಾಲತೀ ಮಾಧವರಿಗೆ ಹೇಳಿರುವ ಮಾತು ಚೆನ್ನಾಗಿದೆ.

ಪ್ರೇಯೋ ಮಿತ್ರಂ ಬಂಧುತಾ ವಾಸ ಮಗ್ರಾ
ಸರ್ವೇ ಕಾಮಾಃ ಶೇವಧಿ ರ್ಜೀವಿತಂ ವಾ
ಸ್ತ್ರೀಣಾಂ ಭರ್ತಾ ಧರ್ಮದಾರಾಶ್ಚ ಪುಂಸಾಂ
ಇತ್ಯ ನ್ಯೋನ್ಯಂ ವತ್ಸಯೋರ್ಜ್ಞಾತಮಸ್ತು

ಉತ್ತರರಾಮ ಚರಿತೆಯಲ್ಲಿ ರಾಮನ ಪ್ರೇಮ ವರ್ಣನೆಯು ಇನ್ನೂ ಚೆನ್ನಾಗಿದೆ

ಇಯಂಗೇಹೇ ಲಕ್ಷ್ಮೀಃ ಇಯಮ ಮೃತ ವರ್ತಿರ್ನಯನಯೋಃ
ಅಸೌ ಅಸ್ಯಾಸ್ಸ್ಪರ್ಶೋವಪುಷಿ ಬಹುಲಶ್ಚಂದ ನರಸಃ
ಅಯಂಕಠೇ ಬಾಹುಃ ಶಿಶಿರ ಮಸೃಣೋ ಮೌಕ್ತಿ ಕಸರಃ
ಕಿಮಸ್ಯಾ ನ ಪ್ರೇಯೋಯದಿ ಪರಮ ಸಹ್ಯಸ್ತು ವಿರಹಃ

ಲವ ಮತ್ತು ಚಂದ್ರಕೇತು ಇಬ್ಬರೂ ಸೇರಿದಾಗ ಅವರ ಮನಸ್ಸಿನಲ್ಲಿ ಬೆಳೆದ ಪರಸ್ಪರ ಸ್ನೇಹವನ್ನೂ ವರ್ಣಿಸಿರುವುದು ಸೀತೆಯಲ್ಲಿ ರಾಮನು ತೋರಿದ ಕಾಠಿಣ್ಯವನ್ನು ವಾಸಂತಿಯು ಮಾಡಿಸಿರುವುದೂ ಸುಂದರವಾಗಿದೆ ಇವನ ವೇದಾಂತವೂ ಚೆನ್ನಾಗಿದೆ

ಪರಿಚ್ಛೇದ ವ್ಯಕ್ತಿರ್ಭವತ್ಸಿನಪುರಸ್ತ್ಯೇಽಪಿ ವಿಷಯೇ
ಭವತ್ಯಭ್ಯಸ್ತೇಽಪಿ ಸ್ಮರಣ ಮತ ಥಾ ಭಾವವಿರಸಂ
ವಸಂತಾಪ ಚ್ಛೇದೋ ಹಿಮಸರಸಿ ವಾ ಚಂದ್ರ ಮಸಿದಾ
ಮನೋ ನಿಷ್ಠಾ ಶೂನ್ಯಂ ಭ್ರಮತಿ ಚ ಕಿಮ ಪ್ಯಾಲಿಬಿತಿ ಚ

ಶೈಲಿಗೆ ದೃಷ್ಟಿ ಕೊಟ್ಟಂತೆ ಕಂಡರೂ ಭಾವಕ್ಕೆ ಸ್ಥಾನ ಕೊಡದೆ ಇಲ್ಲ. ಸಮಸ್ತ ನದಿಗಳಿವೆ. ಉತ್ತರರಾಮ ಚರಿತೆಯಲ್ಲಿ ಅಷ್ಟಿಲ್ಲ. ಭಾಷೆಯನ್ನು ಸೃಷ್ಟಿಸಿರುವಂತಿದೆ. ಅಪರಿಚಿತ ಪದಗಳು ಹೇರಳವಾಗಿವೆ. ಕಾಳಿದಾಸನ ಮಾಧುರ್ಯವು ಇವನಲ್ಲಿಲ್ಲ. ವೀರ್ಯ ರಸವು ಇಲ್ಲಿ ಚೆನ್ನಾಗಿದೆ.

ದೋರ್ದಂಡಾಂಕಿತ ಚಂದ್ರಶೇಖರಧನುರ್ದಂಡಾವ ಭಂಗೋದ್ಯತಃ
ಟಂಕಾರ ಧ್ವನಿರಾರ್ಯ ಬಾಲಚರಿತ ಪ್ರಸ್ತಾವನಾ ಡಿಂಡಿಮಃ
ದ್ರಾಕ್ ಪರ್ಯಸ್ತ ಕಪಾಟ ಸಂಪುಟ ಮಿಲತ್ ಬ್ರಹ್ಮಾಂಡ ಭಾಂಡೋದರಃ
ಭ್ರಾಮ್ಯತ್ ಪಿಂಡಿತ ಚಂಡಿಮಾ ಕಥಮಹೋ ನಾದ್ಯಾಪಿ ವಿಶ್ರಾಮ್ಯತಿ

ಇಲ್ಲಿ ಶಬ್ದಾಲಂಕಾರವು ಅರ್ಥಾಲಂಕಾರವನ್ನು ಸ್ವಾಭಾವಿಕವಾಗಿಸುವಂತೆ ಹೇಳಿದ್ದರೂ ಕೀತ್ ವಿಮರ್ಶಕನು ಈ ಶ್ಲೋಕವು ಕವಿಗೆ ಕೀರ್ತಿ ತರುವುದಿಲ್ಲವೆಂದಿರುವನು. ಇವನಿಗೆ ತನ್ನ ಕವಿತೆಯಲ್ಲಿ ಪೂರ್ಣನಂಬಿಕೆ ಇರುವಂತಿದೆ. ಇದಕ್ಕೆ ಮಾಲತಿ ಮಾಧವದಲ್ಲಿ ಕಾಣುವ ಈ ಶ್ಲೋಕವೇ ಸುದರ್ಶನ.

ಯೇನಾಮ ಕೇಚಿದಿಹನಃಪ್ರಥಯಂ ತ್ಯವಜ್ಞಾಂ
ಜಾನಂತಿ ತೇ ಕಿಮಪಿ ತಾನ್ ಪ್ರತಿ ನೈಷ ಯತ್ನಃ
ಉತ್ಪತ್ಸ್ಯತೇಽಸ್ತಿ ಮಮಕೋಽಪಿ ಸಮಾನಧರ್ಮಾ
ಕಾಲೋಹ್ಯಯಂ ನಿರವಧಿರ್ವಿಪುಲಾ ಚಪೃಥ್ವೀ

## ೧೦೪. ಕ್ರಿ. ಶ. ೧ನೇ ಶತಮಾನದ ವೈಶಿಷ್ಟ್ಯ

ಈ ಶತಮಾನವು ಮೊದಲಿನಿಂದ ಕೊನೆಯವರಿಗೂ ಸರಸ್ವತಿ ವಿಹಾರ ಕಾಲದಂತಿದೆ. ಪ್ರಾರಂಭದಲ್ಲೇ ಕನ್ಯಾಕುಬ್ಜದ ದೊರೆ ಹರ್ಷವರ್ಧನನು ಮೂರು ನಾಟಕಗಳನ್ನು ಕೊಟ್ಟನು. ಅವನು ಆಸ್ಥಾನ ಪಂಡಿತ ಬಾಣ ಒಂದು ಆಖ್ಯಾಯಿಕಾ ಮತ್ತು ಒಂದು ಕಥಾವನ್ನು ಕೊಟ್ಟನು. ದಕ್ಷಿಣದಲ್ಲಿ ಕಾಂಚೀಪುರದಲ್ಲಿ ದಂಡಿಯು ಒಂದು ಗದ್ಯ ಕಾವ್ಯ ಮತ್ತು ಒಂದು ಅಲಂಕಾರ ಗ್ರಂಥವನ್ನೂ, ಬಂಗಾಳದಲ್ಲಿ ಭಟ್ಟನಾರಾಯಣನು ಒಂದು ನಾಟಕವನ್ನೂ, ಮಧ್ಯಪ್ರದೇಶದಲ್ಲಿ ಭಾಮಹನು ಅಲಂಕಾರ ಗ್ರಂಥವನ್ನೂ, ಉಜ್ಜಯಿನಿಯಲ್ಲಿ ಭವಭೂತಿಯು ಮೂರು ನಾಟಕಗಳನ್ನೂ ಕಾಂಚಿ ದೇಶದ ದೊರೆ ಮಹೇಂದ್ರವರ್ಮನು ಒಂದು ಪ್ರಹಸನವನ್ನೂ, ಗುರ್ಜರ ದೇಶದಲ್ಲಿ ಮಾಘ ಒಂದು ಮಹಾಕಾವ್ಯವನ್ನೂ ಕೊಟ್ಟು ಸಂಸ್ಕೃತ ಸಾಹಿತ್ಯಕ್ಕೆ ಅಪಾರ ಸೇವೆಯನ್ನು ಸಲ್ಲಿಸಿರುವುದು. ಈ ಪ್ರಸಿದ್ಧ ವ್ಯಕ್ತಿಗಳಾದ ಮೇಲೆ 5ನೇ ಶತಮಾನದಲ್ಲಿ ಬಂದ ಕವಿಗಳು

ಮತ್ತು ಅವರ ಗ್ರಂಥಗಳು ನಾಮಶೇಷಗಳಾಗಿವೆ. ಕಲ್ಹಣನು ಹೇಳಿರುವಂತೆ ಈ ಕಾಲದಲ್ಲಿ ಕನ್ನಾಕುಬ್ಜದ ಯೋವರ್ಮನು ಕವಿಗಳಿಗೆ ಆಶ್ರಯ ಕೊಟ್ಟಿದ್ದರೂ ಗಣ್ಯಕವಿಗಳು ಬರಲಿಲ್ಲವೆಂದೇ ಹೇಳಬೇಕು. 10ನೇ ಶತಮಾನದ ಧನಿಕ (974-992) ದಶರೂಪಕ ವ್ಯಾಖ್ಯಾನದಲ್ಲಿ ಅನೇಕ ನಾಟಕಗಳ ಮತ್ತು ಕವಿಗಳ ಹೆಸರುಗಳನ್ನು ಕೊಟ್ಟಿದ್ದರೂ, ಅಲ್ಲಿ ನಮ್ಮೂದಿಸಲ್ಪಟ್ಟಿರುವ ಕೆಲವು ಶ್ಲೋಕಗಳನ್ನು ಬಿಟ್ಟು ಮಿಕ್ಕ ಯಾವ ವಿವರವೂ ಇಲ್ಲ. 1. ಅನಂಗ ಹರ್ಷರಾಜನ ತಾಪಸವತ್ಸರಾಜ ಚರಿತ 2. ಮಾಯುರಾಜನ ಉದಾತ್ತ ರಾಘವ. 3. ವಾಮನ ಭಟ್ಟ ಬಾಣನ ಪಾರ್ವತೀ ಪರಿಣಯ 4. ಯಶೋವರ್ಮನ ಚಲಿತ ರಾಮ ಮತ್ತು 5. ಪಾಂಡವಾನಂದ-ಇವೆಲ್ಲವೂ ನಾಮಶೇಷಗಳಾಗಿವೆ. ಮುಂದೆ 9 ನೇಶತಮಾನದಲ್ಲಿ ಮುರಾರಿಯು ಒಂದು ಕವಿ ಕೀರ್ತಿಯನ್ನು ಮತ್ತೆ ಬೆಳಗಿದನು.

## ೧೦೫ (೫೧) ಮುರಾರಿ (೯ನೇ ಶತಮಾನದ ಪೂರ್ವಭಾಗ)

ಇವನ ನಾಟಕಗಳಿಂದ ಅಲಂಕಾರ ಗ್ರಂಥಗಳಲ್ಲಿ ಉದಾಹೃತ ಶ್ಲೋಕಗಳನ್ನು ನೋಡಿದರೆ ಇವನು ಅನೇಕ ನಾಟಕಗಳನ್ನೂ ಬರೆದಿರುವಂತಿದೆ. ಆದರೆ ನಮಗೆ ಲಭ್ಯವಾಗಿರುವುದು. "ಅನರ್ಘರಾಘವ" ಒಂದು ಮಾತ್ರ. ಕವಿಯೇ ಬರೆದಿರುವಂತೆ ಈ ನಾಟಕದಲ್ಲಿರುವ ರಾಮನ ಚರಿತ್ರೆಯು ಎಲ್ಲರಿಗೂ ತಿಳಿದು. ಅನೇಕರಿಂದ ವರ್ಣಿತವಾಗಿದ್ದರೂ ತಾನು ಅದನ್ನು ಒಂದು ವಿಶೇಷ ರೂಪದಲ್ಲಿ ಜನಗಳ ಮುಂದೆ. ಭಯ. ಭೀತಿ. ಪೀಡೆ. ಹಿಂಸೆ ಇತ್ಯಾದಿಗಳಿಂದ ನೊಂದು ಸೋತು ವಿಶ್ರಾಂತಿಯನ್ನಪೇಕ್ಷಿಸುವ ಮನಸ್ಸಿಗೆ ಆಪ್ಯಾಯಮಾನವಾಗಿ ಮೊದಲಿನಿಂದ ಕೊನೆಯವರಿಗೂ ಉನ್ನತ ಮಟ್ಟದಲ್ಲಿ ಧೈರ್ಯ ಸಾಹಸ - ಮತ್ತು ಆಶ್ಚರ್ಯರಿಂದ ಮನಸ್ಸು ಸಂತೋಷಪಡುವಂತೆ ಬರೆದಿರುವುದಾಗಿ ಹೇಳಿರುವನು. ಇವನಾದ ಮೇಲೆ ಬಂದ ಕವಿಗಳು ಇವನನ್ನು ಹೊಗಳಿ ಇವನ ನಾಟಕದ ಗಾಂಭೀರ್ಯವನ್ನು ಮೆಚ್ಚಿರುವರು. ಪಂಡಿತೋತ್ತಮರಿಗೆ ಪ್ರಿಯವಾದ ಗ್ರಂಥಗಳು ಕೆಲವು. ಪಾಮರರಿಗೆ ಹಿಡಿಸುವ ಗ್ರಂಥಗಳು ಕೆಲವು. ಮುರಾರಿ ನಾಟಕವು ಪಂಡಿತ ಪಾಮರರಿಗೆ ಸಮನಾಗಿ ಪ್ರಿಯವಾಗಿರುವುದರಿಂದ "ಮುರಾರೇ ತೃತೀಯಃ ಪಂಥಾ" ಎನ್ನುವ ನಾಣ್ಣುಡಿ ಪ್ರಚಾರದಲ್ಲಿದೆ. ಕೀತ್ ವಿಮರ್ಶಕನು ಇವನ ನಾಟಕದಲ್ಲಿ ಯಾವ ಐತಿಹ್ಯ ಮತ್ತು ಗಾಂಭೀರ್ಯವನ್ನು ನೋಡಲು ಸಮರ್ಥವಾಗಿಲ್ಲ. 12ನೇ ಶತಮಾನದವನಾದ ಪ್ರಸಿದ್ಧ ಜಯದೇವನು (ಇವನು ಗೀತಗೋವಿಂದ ಜಯದೇವನಲ್ಲ) ತನ್ನ ಪ್ರಸಿದ್ಧ ತಾರ್ಕಿಕನಾಗಿ ನಾಟಕವನ್ನು ಬರೆಯಲು ಮುರಾರಿಯನ್ನು ಆದರ್ಶವಾಗಿ ತೆಗೆದುಕೊಂಡಿರುವನು. ಉತ್ತಮ ತಾರ್ಕಿಕರಿಗೆ ಉತ್ತಮ ಕಾವ್ಯನಾಟಕಗಳನ್ನು ಕೊಡಲು ಸಾಮರ್ಥವಿಲ್ಲ. ದಂಡಿ ಸಾಹಿತಿಯೂ ಹೌದು. ಅಲಂಕಾರಿಕನೂ ಹೌದು ಆದರೆ ಅವನ ಕಾವ್ಯದಲ್ಲಿ ರೀತಿಗೆ ಪ್ರಾಶಸ್ತ್ಯವಿದೆಯೇ ವಿನಾ ರಸಕ್ಕಲ್ಲ. ರಾಜಶೇಖರನು ಉತ್ತಮ ಅಲಂಕಾರಿಕ. ಆದರೆ ನಾಟಕ ಪ್ರಪಂಚದಲ್ಲಿ ಪ್ರಸಿದ್ಧನಲ್ಲ. ಮಹಿಮ ಭಟ್ಟನು ಕೇವಲ ತಾರ್ಕಿಕ ಅವನ ತಾರ್ಕಿಕ ಪ್ರಪಂಚದಲ್ಲಿ ಅಲಂಕಾರಶಾಸ್ತ್ರವು ಭಿನ್ನ ಭಿನ್ನವಾಗಿ ರಸಹೀನವಾಗಿ ಜಾತಿ ಭ್ರಷ್ಟವಾದಂತಿದೆ. ಮುರಾರಿಯು ಹಾಗಲ್ಲ. ಪೂರ್ಣತರ್ಕ ಪಾಂಡಿತ್ಯವನ್ನು ರಸಾನುಭವದಲ್ಲಿ ಸೇರಿಸಿಕೊಂಡು ಉತ್ತಮ ನಾಟಕವನ್ನು ಕೊಟ್ಟಿರುವನು. ತಾರ್ಕಿಕರದು ಒಂದು ಮಾರ್ಗ. ಅಲಂಕಾರಿಕರದು ಮತ್ತೊಂದು ಮಾರ್ಗ. ಮುರಾರಿಯದು ಮೂರನೇಯದು. ಇವನು ತನ್ನ ಅನರ್ಘ ರಾಘವದ 5ನೇ ಅಂಕದ 'ವಿಷ್ಕಂಭದಲ್ಲಿ ವೈಶೇಷಿಕ ಸೂತ್ರಕ್ಕೆ ಇರುವ ರಾವಣ ಭಾಷ್ಯವನ್ನು ತಿಳಿಸಿರುವನು

ಇವನು ಮುದ್ಗಲ ಗೋತ್ರದ ಶ್ರೀವರ್ಧಮಾನರ ಮತ್ತು ತಂತುಮತಿಯ ಕಾಶ್ಮೀರದ ರತ್ನಾಕರನು (ಕ್ರಿ. ಶ. 850 ) ತನ್ನ ಹರ ವಿಜಯದಲ್ಲಿ ಇವನನ್ನು ನಾಟಕ ಕರ್ತಾ ಎಂದು ಹೇಳಿರುವನು. ಆದ್ದರಿಂದ ಇವನು ಕ್ರಿ. ಶ. 6ನೇ ಶತಮಾನದ ಪೂರ್ವ ಭಾಗದವನಾಗಿರಬೇಕು. ಕುಪ್ಪಸ್ವಾಮಿ ಶಾಸ್ತ್ರಿಯು ತನ್ನ "A Primer of Indian Logic" ಎನ್ನುವ ಗ್ರಂಥದ XXVI ಪುಟದಲಿ There is evidence to show that this drama (Anargha Raghavan) must be earlier than the (latter part of the 9th century A.D) ಎಂದಿರುವನು. ಇವನು ತನ್ನನ್ನು ತಾನು ಮಹಾಕವಿ. ಬಾಲವಾಲ್ಮೀಕಿ ಎಂದು ಹೊಗಳಿಕೊಂಡಿರುವನು. ಅನೇಕ ಆಲಂಕಾರಿಕರು ಇವನನ್ನು ಭವಭೂತಿಗಿಂತಲೂ ಉತ್ತಮನೆಂದು ಮುಕ್ತಕಂಠದಿಂದ ಹೊಗಳಿರುವರು. ರಾಮಾಯಣದ ಪೂರ್ವ ಭಾಗ ಅಂದರೆ ರಾಮ ಜನನದಿಂದ ಪಟ್ಟಾಭಿಷೇಕದವರೆಗಿನ ಇರುವ ಕಥೆಯೇ ಈ ನಾಟಕಕ್ಕೆ ವಸ್ತು. ಕಥೆಯನ್ನು ಅಲ್ಲಲ್ಲಿ ತನಗೆ ತೋರಿದಂತೆ ಸಭಿಕರಿಗೆ ಪ್ರಿಯವಾಗುವುದಕ್ಕಾಗಿ ಸಾಮಾನ್ಯ ಬುದ್ಧಿಗೂ ಸಮಂಜಸವಾಗಿ ಕಂಡುಬರುವಂತೆ, ವ್ಯತ್ಯಾಸ ಮಾಡಿ ಒಟ್ಟು 7 ಅಂಕಗಳಲ್ಲಿ ತನಗೆ ಕವಿತಾ ಚಾತುರ್ಯವನ್ನು ಚೆನ್ನಾಗಿ ತೋರಿಸಿರುವನು. ಇವನಲ್ಲಿ ಭಾಷಾ ಶಕ್ತಿ, ಶಬ್ದಾಲಂಕಾರ, ಅರ್ಥಾಲಂಕಾರ, ವ್ಯಾಕರಣ ಅಸಾಧಾರಣ ಪದಗಳು ಇವೆಲ್ಲವನ್ನೂ ವಿಪುಲವಾಗಿ ನೋಡಬಹುದು.

**ವರ್ಣನಾ ಚಾತುರ್ಯಕ್ಕೆ:**

ದೃಶ್ಯಂತೇ ಮಧು ಮತ್ತ ಕೋಕಿಲ ವಧೂ, ನಿರ್ಧೂತ ಚೂತಾಂಕುರ
ಪ್ರಾಗ್ಭಾರ ಪ್ರಸರತ್ ಪರಾಂಗರ ಸಿಕತಾ ದುರ್ಗಾಸ್ತ್ರಲೇಭೂಮಯಃ
ಯಾಃಕೃಚ್ಛ್ರಾತ್ ಅತಿಲಂಘ್ಯ ಲುಬ್ಧಕ ಭಯಾತ್ತೈ ದೇವ ರೇಣೂತ್ಕರೈಃ
ಧಾರಾವಾಹಿ ಭಿರಸ್ತಿ ಉತ್ತಪದವೀ ನಿಶ್ಶಂಕಮೇಣೇಕುಲಂ

**ಸೌಂದರ್ಯ ವರ್ಣನೆಗೆ:**

ಅನೇನ ರಂಭೋರು ಭವನ್ಮುಖೇನ
ತುಷಾರಭಾನೋ: ಸ್ತುಲಯಾಧೃತಸ್ಯ
ಊನಸ್ಯ ನೂನಂ ಪ್ರತಿಪೂರಣಾಯ
ತಾರಾ ಸ್ಫುರಂತಿ ಪ್ರತಿಯಾನ ಖಂಡಾಃ

ಹೀಗೆ ಅನೇಕ ಶ್ಲೋಕಗಳನ್ನು ಉಧಾಹರಿಸಬಹುದು. ಕವಿ ತನ್ನ ಕವಿತಾ ಶಕ್ತಿಗೆ ತಾನೇ ಹೆಮ್ಮೆಗೊಂಡಿರುವನು.

ದೇವೀಂವಾಚಮುಪಾಸತೇ ಚ ಬಹವೋಸಾರಂತು ಸಾರಸ್ವತಂ
ಜಾನೀತೇ ನಿತರಾಮಾಸೌ ಗುರುಕುಲಕ್ಲಿಷ್ಟೋ ಮುರಾರಿಃ ಕವಿಃ
ಅಬ್ಧಿರ್ಲಂಘಿತ ಏವವಾನರಭಟೈಃ ನತ್ವಸ್ಯಗಂಭೀರತಾಂ
ಆಪಾತಾಲ ನಿಮಗ್ನ ಪೀವರತನುಃ ಜಾನಾತಿ ಮಂಥಾ ಚಲಃ

## 106 (೫೨) ವಿಶಾಖದತ್ತ (ಕ್ರಿ.ಶ. ೯ನೇ ಶತಮಾನದ ಉತ್ತರ ಭಾಗ)

ಇವನ ಮತ್ತೊಂದು ಹೆಸರು ವಿಶಾಖ ದೇವ. ಮಹಾರಾಜ ಭಾಸ್ಕರದತ್ತನ ಮಗ. ವಿತ್ತೇಶ ವರದತ್ತನ ಮೊಮ್ಮಗ. ಇವನ ತಂದೆ ತಾತಂದಿರು ಯಾರೆಂದು ಗುರ್ತಿಸಲು ಸಾಧ್ಯವಾಗಿಲ್ಲ. ಇವನ ನಾಟಕದಲ್ಲಿ ದಂತಿವರ್ಮ, ರಂತಿವರ್ಮ ಮತ್ತು ಅವಂತಿವರ್ಮ ಎನ್ನುವ ಹೆಸರುಗಳು ಸಿಕ್ಕಿವೆ. ಅವಂತಿವರ್ಮನೇ ಹರ್ಷನ ಅಳಿಯನಾಗಿ ಮುರಾರಿ ದೇಶದ ದೊರೆ ಎಂದೂ ಊಹಿಸಹುದು. ಕೊನೌ. ಇವನು ಚಂದ್ರಗುಪ್ತವೆಂದು ಹೇಳಿ ಕಾಳಿದಾಸನ ಕಾಲದವನೆಂದಿರುವುದು ಸರಿಯಲ್ಲ. ಜಾಕೋಬಿ ಇವನ ನಾಟಕದಲ್ಲಿ ಕಾಣಿಸಿರುವ ಗ್ರಹಣ ವಿಚಾರವಾಗಿ ಪ್ರಸ್ತಾಪ ಮಾಡಿ ಇದು ಕ್ರಿ. ಶ. 866– ಡಿಸೆಂಬರ್ 7ನೇ ತಾರೀಖಿನಲ್ಲಿ ನಡೆದಿದ್ದು ಎಂದಿರುವನು. ರತ್ನಾಕರನ ಅನುಕರಣವು ಇವನಲ್ಲಿ ಚೆನ್ನಾಗಿ ಕಾಣುತ್ತದೆ. ಆದ್ದರಿಂದ ಇವನು ಕ್ರಿ. ಶ. 9ನೇ ಶತಮಾನದ ಉತ್ತರಭಾಗದಲ್ಲಿದ್ದವನೆಂದು ಹೇಳಬಹುದು.

ಇವನ ನಾಟಕ ಮುದ್ರಾರಾಕ್ಷಸ. ನಂದನ ಮಂತ್ರಿ ರಾಕ್ಷಸ. ಚಾಣಕ್ಯ ಚಂದ್ರಗುಪ್ತವನ್ನು ದೊರೆಯನ್ನಾಗಿ ಮಾಡಿ ನಂದರ ಮೇಲೆ ತನ್ನ ಕೋಪವನ್ನು ತೀರಿಸಿಕೊಳ್ಳಲು ಪರ್ವತೀಶನ ಸಹಾಯದಿಂದ ಜಯಶೀಲನಾದನು. ರಾಕ್ಷಸನು ರಾಜ್ಯ ಬಿಟ್ಟು ಓಡಿದನು. ಸರ್ವಾರ್ಥ ಸಿದ್ಧಿ ರಾಜನು ವಾನಪ್ರಸ್ಥಾಶ್ರಮಕ್ಕೆ ತೆರಳಿದನು. ರಾಕ್ಷಸನು ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಲು ಹವಣಿಸುವನು. ವಿಷಕನ್ಯೆಯನ್ನು ಪ್ರಯೋಗಿಸುವನು. ಚಾಣಕ್ಯನ ತಂತ್ರದಿಂದ ಅವಳಿಗೆ ಪರ್ವತೇಶನು ಮತ್ತಾಗುವನು. ಇದರಿಂದ ತತ್ಕಾಲಕ್ಕೆ ಅವನ ಮಗ ಮಲಯಕೇತು ರಾಕ್ಷಸನ ಪಕ್ಷವನ್ನು ಸೇರುವಂತಾಯಿತು. ಕುಲೂತ, ಮಲಯ, ಕಾಶ್ಮೀರ, ಸಿಂಧ್ಯ ಮತ್ತು ಪರ್ಷಿಯಾ ರಾಜಕುಮಾರರು ಇವನ ಕಡೆಯವರಾಗುವರು. ಇದರ ಹಿನ್ನಲೆಯಲ್ಲಿ ಮುಂದೆ 7 ಅಂಕಗಳಲ್ಲಿ ಕಥೆಯು ಸಾಗಿದೆ. ರಾಜತಂತ್ರ ನೈಪುಣ್ಯವನ್ನು ಇಲ್ಲಿ ಚೆನ್ನಾಗಿ ನೋಡಬಹುದು.

1ನೇ ಅಂಕ– ಚಾಣಕ್ಯ ತಂತ್ರ, ರಾಕ್ಷಸನು ಚಂದ್ರಗುಪ್ತನ ಮಂತ್ರಿಯಾಗಿ ತಾನು ತೆರಳಬೇಕೆನ್ನುವ ಆಕಾಂಕ್ಷೆ, ಚಂದನ ದಾಸನಲ್ಲಿ ರಾಕ್ಷಸ ಸಂಸಾರ ರಕ್ಷಣೆ. ಶಕಟದಾಸನೆನ್ನುವ ಲೇಖಕ (Scribe) ಶತ್ರುವಾಗಿರುವನು. ಜೈನ ಸನ್ಯಾಸಿ ಜೀವ ಸಿದ್ಧಿ ... ಶತ್ರು ... ಗೂಢಚಾರ್ಯ ಅವನ ಕೈಯಲ್ಲಿ ರಾಕ್ಷಸನ ಮುದ್ರೆ ಸಿಗುವುದು. ಅದರಿಂದ ಶಕಟದಾಸನಿಂದ ಬರೆಯಿಸಿ ಮುದ್ರೆ ಹತ್ತಿಸಿ ಆ ನೆಪದಿಂದ ಅವನನ್ನು ಬಂಧಿಸುವನು. ಸಿದ್ಧಾರ್ಥಕನು ಇವನನ್ನು ರಕ್ಷಿಸುವನು. ಚಂದನದಾಸನು ಬಂಧಿತನಾಗುವನು. ಭಾಗು ರಾಯಣ ಮೊದಲಾದವರು ಸಭೆಯಿಂದ ಪಲಾಯನ ಮಾಡುವ ಸುದ್ದಿ ಮುಟ್ಟುವುದು.

2ನೇ ಅಂಕ –ರಾಕ್ಷಸನ ಪ್ರತಿಕ್ರಿಯೆ. ವಿರಾಧಕ್ರಮ ಮಲಯ ಕೇತುವಿನ ಚಿಕ್ಕಪ್ಪ. ಅವನಿಂದ ಚಂದ್ರಗುಪ್ತನನ್ನು ಕೊಲ್ಲಲು ಮಾಡಿದ ಪ್ರಯತ್ನವೆಲ್ಲವೂ ವಿಫಲವಾಯಿತೆಂದು ತಿಳಿಯುವುದು. ಜೀವ ಸಿದ್ಧಿಯು ಪಲಾಯನ. ಶಕಟದಾಸನು ಮರಣದಂಡನೆಗೆ ಗುರಿಯಾಗುವನು. ಸಿದ್ಧಾರ್ಥನು ಅವನ್ನು ರಕ್ಷಿಸಿ ಮುದ್ರೆಯನ್ನು ರಾಕ್ಷಸನಿಗೆ ಕೊಟ್ಟು ಅವನ ವಿಶ್ವಾಸವನ್ನುಸಂಪಾದಿಸುವನು. ಆಭರಣಗಳನ್ನು ಅವನಿಗೆ ಮಾರಿದ್ದು. ದೊರೆ. ಚಾಣಕ್ಯರಿಗೆ ದ್ವೇಷ ಬಂತೆಂದು ವಿರಾಧಕನು ತಿಳಿಸಿದ್ದು.

3ನೇ ಅಂಕ – ಚಾಣಕ್ಯನ ರಾಜತಂತ್ರ – ತನಗೂ ದೊರೆಗೂ ಜಗಳವೆಂದು ಪ್ರಚಾರ.

4ನೇ ಅಂಕ – ಬಾಗುರಾಯಣ ಮೊದಲಾದವರು ರಾಕ್ಷಸರ ಪಕ್ಷವನ್ನು ಸೇರಿದ್ದು ಇದರಿಂದ ಮಲಯಕೇತುವಿಗೂ ರಾಕ್ಷಸನಿಗೂ ವೈಷಮ್ಯ.

5ನೇ ಅಂಕ –ಮಲಯಕೇತುವಿಗೂ ರಾಕ್ಷಸನಿಗೂ ವೈರ ಬೆಳೆದದ್ದು ಮಲಯಕೇತು ಸಾಮಂತರಾಜರನ್ನು ಸೋಲಿಸಿದ್ದು

6ನೇ ಅಂಕ –ರಾಕ್ಷಸನ ವಿಲಾಪ. ಚಂದನ ದಾಸನ ಮರಣ ಶಾಸನ. ತನ್ನನ್ನಾದರೂ ಕೊಟ್ಟು ತನ್ನ ಮಿತ್ರನನ್ನು ರಕ್ಷಿಸಬೇಕೆನ್ನುವ ಆಕಾಂಕ್ಷೆ ರಾಕ್ಷಸನಿಗೆ.

7ನೇ ಅಂಕ – ರಾಕ್ಷಸನು ತಾನು ಮಂತ್ರಿಯಾಗಲು ಒಪ್ಪಿದ್ದು. ಮಲಯ ಕೇತುವನ್ನು ರಕ್ಷಿಸಿ ಅವನಿಗೆ ಅವನ ರಾಜ್ಯವನ್ನು ಕೊಡಿಸಿದ್ದು. ಚಂದನದಾಸನ ರಕ್ಷಣೆ –ಶುಭವಾಗಿ ಮುಗಿದಿದೆ.

ಪಾತ್ರಗಳೆಲ್ಲವೂ ಚೆನ್ನಾಗಿ ಚಿತ್ರಿತವಾಗಿದೆ. ಮಾತೂ ಗಂಭೀರವಾಗಿದೆ. ಭವ ತಿಯಲ್ಲಿರುವಂತೆ ಸಮಸ್ತ ಪದಗಳಿಲ್ಲ. ಅತ್ಯುತ್ತಮ ರಾಜತಂತ್ರವಿದೆ.

## ೧೦೮. (೫೩) ರಾಜಶೇಖರ (೯ನೇ ಶತಮಾನದ ಕೊನೆ, ೧೦ನೇ ಶತಮಾನದ ಮೊದಲು ಭಾಗದವನು)

ಇವನು ಒಬ್ಬ ಮಹಾರಾಷ್ಟ್ರ ಕ್ಷತ್ರಿಯ ವಂಶದವನು. ರಾಮನಿಂದ ತನ್ನ ವಂಶ ಬಂತೆಂದು ತಿಳಿದಿದ್ದನು. ದುರ್ದಕ ಮತ್ತು ಲೀಲಾವತಿಯ ಮಗ. ಅಕಾಲ ಜಲದನ ಮೊಮ್ಮಗ. ಇವನ ವಂಶದಲ್ಲೇ ಸುರಾನಂದ, ತರು ಮತ್ತು ಕವಿರಾಜ ಮೊದಲಾದವರು ಇದ್ದರಂತೆ. ಇವನ ಹೆಂಡತಿ ಅವಂತೀ ಸುಂದರಿ–ಇವನು ಶೈವ ಸಂಪ್ರದಾಯಸ್ಥನು. ಇವನು 8 ನಾಟಕಗಳನ್ನು ಬರೆದಿರುವನು.

1. ತನ್ನ ಹೆಂಡತಿಯ ಪ್ರೇರಣೆಯಿಂದ –ಕರ್ಪೂರ ಮಂಜರಿ

2. ಇವನ ಶಿಷ್ಯ ಕಣ್ಣುಕಟ್ಟಿದ ದೂರ

3. ಕಲಚುರಿ ದೂರಗಾಗಿ—ವಿದ್ಧಶಾಲಭಂಜಿಕಾ

4. ಮಹೇಂದ್ರ ಪಾಲನ ಮಗನಿಗಾಗಿ ಪೂರ್ಣವಾಗಿಲ್ಲದ ಬಾಲಭಾರತ (ಇದೇ ಕೊನೆಯ ನಾಟಕ)

ಮಿಕ್ಕ ನಾಲ್ಕು ನಾಟಕಗಳು ಅಷ್ಟು ಪ್ರಸಿದ್ಧನಲ್ಲ. ಇವನು ತನ್ನ ಕವಿತಾ ಶಕ್ತಿಯು ಭರ್ತೃಮೆಂಥನ ಹಯಗ್ರೀವವಧ, ಭವಭೂತಿಯ ನಾಟಕಗಳು ಮತ್ತು ವಾಲ್ಮೀಕಿ ರಾಮಾಯಣ ಇವುಗಳಿಂದ ಬೆಳೆಯಿತೆಂದು ಹೇಳಿಕೊಂಡಿರುವನು.

ಬಾಲರಾಮಾಯಣ—ಇದು ಸೀತಾ ಕಲ್ಯಾಣದಿಂದ ಪಟ್ಟಾಭಿಷೇಕದವರೆಗೂ ಇರುವ 10 ಅಂಕಗಳ ನಾಟಕ. ಅನರ್ಘ ರಾಘವದಂತೆ ಕಥೆಯನ್ನು ಅಲ್ಲಲ್ಲಿ ಸ್ವಲ್ಪ ವ್ಯತ್ಯಾಸ ಮಾಡಿರುವನು. ಕವಿತಾ ಚಾತುರ್ಯವು ಚೆನ್ನಾಗಿದೆ. 741 ಶ್ಲೋಕಗಳಿವೆ. ಅವುಗಳಲ್ಲಿ ಶಾರ್ದೂಲ ವಿಕ್ರೀಡಿತ 203, ಸ್ರಗ್ಧರಾ 89. ಈ ನಾಟಕದಲ್ಲಿ ರಾವಣನು ತನ್ನ ಕಾಮದಿಂದ ಹೇಗೆ ನಾಶವಾದನೆಂಬುದನ್ನು ನೀತಿಯಾಗಿ ತೋರಿಸಿರುವನು.

ಬಾಲಭಾರತ—ದ್ರೌಪದೀ ಸ್ವಯಂವರದಿಂದ ದ್ಯೂತ, ಅವಳ ವಸ್ತ್ರಾಪಹರಣ, ಅಲ್ಲಿಯವರೆಗೆ ಮಾತ್ರವಿದೆ.

ಕರ್ಪೂರ ಮಂಜರಿಯು (ಪ್ರಾಕೃತ) ಒಂದು ಸಟ್ಟಕ. ಕಥೆಯು ಹಳೆಯದು. ನಾಲ್ಕು ಅಂಗಳಿವೆ. ಚಂದನ ಪಾನನ್ನುವ ದೂರ. ಇವನು ತನ್ನ ರಾಣಿಯ ಚಿಕ್ಕಮ್ಮನ ಮಗಳಾದ ಕರ್ಪೂರ ಮಂಜರಿಯಲ್ಲಿ ಪ್ರೇಮಗೊಂಡು ಮೋಸದಿಂದ ಮದುವೆಯಾದನು. ರಾಣಿ ಮತ್ತು ರಾಜನೆದುರಿಗೆ ಒಬ್ಬ ಮಂತ್ರ ಸಾಧಿಯು ತನ್ನ ಆತ್ಮಕಥೆಯನ್ನು ಹೇಳಿಕೊಳ್ಳುವಂತೆ ಮಾಡುವನು. ರಾಣಿಯು ಮರುಕಗೊಂಡು ಅವಳನ್ನು ತನ್ನ ಚೇಟಿಯಾಗಿ ಪರಿಗ್ರಹಿಸುವಳು. ಅವಳಲ್ಲಿ ರಾಜನು ಅನುರಕ್ತನಾಗುವನು. ಇದು [illegible]ವಳು. ಆದರೆ ದೊರೆಯು ಅವಳ ಬಂಧನ ಗೃಹಕ್ಕೆ ಸುರಂಗಮಾಡಿಸಿ ಅವಳೊಡನೆ ವಿಹರಿಸುತ್ತಿರುವನು. ಇದೂ ಬಹಿರಂಗವಾಯಿತು. ಸುರಂಗಮಾರ್ಗವು ಮುಚ್ಚಲ್ಪಡುವುದು. ಮತ್ತೆ ರಾಜನು ಯಾರೂ ಗುರ್ತಿಸಲಾಗದ ಮತ್ತೊಂದು ಸುರಂಗ ಮಾರ್ಗವನ್ನು ಮಾಡಿಸುವನು ಮತ್ತು ಮಂತ್ರಿಗಾರನ ಸಹಾಯದಿಂದಲಾಟ ದೇಶದ ಕುವರಿಯನ್ನು ದೊರೆಯು ಮದುವೆಯಾದರೆ ರಾಜನು ಮಹಾರಾಜನಾಗುವನೆಂದು ರಾಣಿಗೆ ನಂಬಿಕೆಯನ್ನು ಹುಟ್ಟಿಸುವನು. ಮದುವೆಯ ಏರ್ಪಾಡು ನಡೆದು ಮದುವೆಯಾದ ಮೇಲೆ ರಾಣಿಗೆ ಎಲ್ಲಾ ವಿಷಯವೂ ತಿಳಿಯುವುದು. ವಿದ್ಧಶಾಲಭಂಜಿಕೆಯೂ ಇದೇ ರೀತಿಯ ಕಥೆಯಿಂದ ಕೂಡಿದೆ. ಇದು ನಾಟಕ. ಪಾತ್ರಗಳ ಹೆಸರುಗಳು ಮಾತ್ರ ಬೇರೆ. ವಿದೂಷಕನ ಪಾತ್ರ ಜಾಸ್ತಿಯಾಗಿದೆ. ಅಲ್ಲಲ್ಲಿ ಕಥೆಯು ಸ್ವಲ್ಪ ವ್ಯತ್ಯಾಸ ಮಾಡಲ್ಪಟ್ಟಿದೆ.

ಮಿಕ್ಕ ನಾಲ್ಕೂ ನಾಟಿಕೆಗಳು ನಾಮಶೇಷಗಳು. ಒಟ್ಟಿನಲ್ಲಿ ನೋಡುವುದಾದರೆ ಪಾತ್ರ ಕಲ್ಪನೆಯಲ್ಲಿ ಇವನು ಚತುರನಲ್ಲ. ಅಲಂಕಾರಶಾಸ್ತ್ರದಲ್ಲಿ ಇಳಿದ ಇವನ ಮನಸ್ಸು ಕವಿತೆಯಲ್ಲಿ ಹೆಸರುಗಳಿಸಿಲ್ಲ. ಆದರೂ ಲಲಿತವಾಗಿ ಬರೆದಿರುವನು. ಸಾಮಾನ್ಯ ಬುದ್ಧಿಗೆ ಹಿಡಿಸುವ ಕ್ರಮವು ಇವನಲ್ಲಿದೆ. ರೀತಿಯಲ್ಲಿ (style) ಇವನು ಶ್ರೇಷ್ಠನಲ್ಲ. ಆಗಿನ ಕಾಲದ ಅನುಷ್ಠಾನ ಮತ್ತು ಪದ್ಧತಿಯನ್ನು ಇವನು ವರ್ಣಿಸಿರುವುದು ಕವಿತಾ ದೃಷ್ಟಿಯಿಂದ ಉತ್ತಮವಿಲ್ಲದಿದ್ದರೂ ಚಾರಿತ್ರಿಕವಾಗಿ ಪ್ರಯೋಜನವಾಗಿದೆ. ವೃತ್ತಗಳನ್ನು ಕೆಡಿಸಿಲ್ಲ. ಶಬ್ದಾಲಂಕಾರವೂ ಚೆನ್ನಾಗಿದೆ. ಇವನ ಮಿಕ್ಕ ನಾಟಕಗಳಿಗಿಂತಲೂ ಕರ್ಪೂರ ಮಂಜರಿಯೇ ಉತ್ತಮ. ಇವನ ಪರವಾದ ಒಂದು ಶ್ಲೋಕದಲ್ಲಿ ಭೀಮಾಟನೆನ್ನುವ ಹೆಸರಿನಲ್ಲಿ ಸ್ವಪ್ನದ ಶಾಸನ ಎನ್ನುವ ನಾಟಕವಿದೆ. ಈ ಗ್ರಂಥವು ಈಗಿಲ್ಲ. ಇದೇ ಕಾಲದ ಮತ್ತೊಬ್ಬ ಕವಿ ಕ್ಷೇಮೀಶ್ವರ. ಇವನ ನಾಟಕ ಚಂಡ ಕೌಶಿಕ. ಇದು ಮಹೀಪಾಲನಾಗಿ ಬರೆದಿದ್ದು. ಇವನದೇ ಮತ್ತೊಂದು ನಾಟಕ ನೈಷಧಾನಂದ. ಇದರಲ್ಲಿ 7 ಅಂಕಗಳಿವೆ. ಇದು ನಳ ಚರಿತ್ರೆ. ಕ್ಷೇಮೀಶ್ವರನು ಸಾಮಾನ್ಯ ಕವಿ. ಆಲಂಕಾರಿಕರು ಇವನನ್ನು ಉಪೇಕ್ಷಿಸಿರುವರು

## ೧೦೮. ನಾಟಕ ಕಲೆಯ ಅವನತಿ

ರಾಜಶೇಖರನೇ ನಾಟಕ ಕಲೆಗೆ ಕೊನೆಯವನೆನ್ನಬಹುದು. ಇವನಾದ ಮೇಲೆ ಅನೇಕ ನಾಟಕಗಳು ಬರೆಯಲ್ಪಟ್ಟರೂ ಅವು ಸಾಮಾನ್ಯವಾಗಿವೆ. ಓದಿ ಬಿಸುಡುವ ನಾಟಕಗಳು. ಈ ಅವನತಿಗೆ ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದವು

1. ಭಾಸ ಮತ್ತು ಕಾಳಿದಾಸನ ಕಾಲದ ಸಭಿಕರು ಸಂಸ್ಕೃತಜ್ಞರು. ಸಂಸ್ಕೃತವು ಸಾಮಾನ್ಯಮಾನವನೂ ತಿಳಿಯುವ ಭಾಷೆಯಾಗಿತ್ತು. ರಾಜಶೇಖರನ ಕಾಲಕ್ಕೆ ಸಂಸ್ಕೃತವು ಪಾಂಡಿತ್ಯ ಭಾಷೆಯಾಗಿ ನಾಡು ಭಾಷೆಯಿಂದ ಬಹಳ ದೂರವಾಗಿ ಸಂಸ್ಕೃತ ನಾಟಕಗಳು ಕಾರ್ಯರೂಪದಲ್ಲಿ ಕೇವಲ ಶ್ರವ್ಯ ಕಾವ್ಯದಂತೆಯೇ ಆಯಿತು. ಜನಗಳು ಸಾಮಾಜಿಕ ಮತ್ತು ರಾಜಕೀಯ ದೃಷ್ಟಿಯಿಂದ ಸಂಸ್ಕೃತಕ್ಕೆ ಅಷ್ಟು ಗಮನವನ್ನೂ ಕೊಡುವಂತಾಗಲಿಲ್ಲ.

2. ಮುಸಲ್ಮಾನರ ರಾಜ್ಯಭಾರ ಮತ್ತು ಅವರ ರೀತಿನೀತಿಗಳು ನಾಟಕ ಕಲೆಗೆ ಬಹಳ ಅವಕಾಶಕೊಡುವಂತಿರಲಿಲ್ಲ. ಪ್ರಾಕೃತಕ್ಕೆ ನಿರ್ದಿಷ್ಟ ರೂಪವು ಹೋಗಿ. ಉರ್ದುವಿನೊಡನೆ ಕಲೆತು ಹಿಂದೂಸ್ತಾನೀ ಭಾಷೆಯು ಉದ್ಭವಿಸುವ ಪ್ರಸಂಗವೊದಗಿತು.

3. ಸಂಸ್ಕೃತ ಪ್ರೇಮಿಗಳು ನಾಟಕ ಬರೆಯಲು ಸಾಹಸ ಪಡದೇ ವಿಮರ್ಶನೆ, ಚಾತುರ್ಯ ಶ್ಲೋಕಗಳು, ಚಾಟುಶ್ಲೋಕಗಳು, ಅಲಂಕಾರ ವಿಮರ್ಶೆ ಇವುಗಳಲ್ಲಿ ಮಾತ್ರ ನಿರತರಾಗುವಂತಾಯಿತು.

## ೧೦೯. ಪ್ರತೀತ ನಾಟಕಗಳು

ಈ ಕಾಲದಲ್ಲಿಯೇ ನೈತಿಕ, ಕಾಲ್ಪನಿಕ ನಾಟಕಗಳು ಬರೆಯಲು ಪ್ರಾರಂಭಿಸಲ್ಪಟ್ಟವು. ಕ್ರಿ.ಶ. 1ನೇ ಶತಮಾನದಲ್ಲಿ ಅಶ್ವಘೋಷನು ಇಂತಹ ಒಂದು ನಾಟಕವನ್ನೂ ಬರೆದಿದ್ದನು. ಇದನ್ನು ಬೌದ್ಧ ಸಂಪ್ರದಾಯಸ್ಥರಿಗಾಗಿ ಬರೆದಿದ್ದನು. ಕ್ರಿ. ಶ. 10ನೇ ಶತಮಾನವಾದ ಮೇಲೆ ಬರೆಯಲ್ಪಟ್ಟ ಇಂತಹ ನಾಟಕಗಳು ಏಳು ಇವೆ. (Allegozical dramas)

a. ಕೃಷ್ಣ ಮಿಶ್ರದ ಪ್ರಭೋಧ ಚಂದ್ರೋದಯ –ಇದು ಆರು ಅಂಕಗಳುಳ್ಳ ಕಥೆ. ಕೀರ್ತಿವರ್ಮನೆಂಬ ದೊರೆಯ ಎದುರಿಗೆ ಗೋಪಾಲನಿಗಾಗಿ ಬರೆದದ್ದು. ಇದರ ಕಾಲ ಕ್ರಿ. ಶ. 1042. ವೈಷ್ಣವ ಸಂಪ್ರದಾಯದ ಅದ್ವೈತ ಮತ ಪ್ರತಿಪಾದಕ ಗ್ರಂಥವಿದು. ಬ್ರಹ್ಮವಸ್ತುವು ಸತ್ಯ. ಅದು ಮಾಯೆಯೊಡನೆ ಸೇರಿಜೀವವಾಗಿ ಆಗುವುದು ಆ ಜೀವನಿಂದ ವಿವೇಕ ಮತ್ತು ಮೋಹವು ಹುಟ್ಟಿ ಅಣ್ಣ ತಮ್ಮಂದಿರ ಜಗಳದಲ್ಲಿ ಕೊನೆಗೆ ವಿವೇಕದ ಪಕ್ಷಕ್ಕೆ ಜಯವು ದೊರಕಿ ವಿಷ್ಣುಭಕ್ತಿಯು ಸಂತೋಷಪಡುವಂತಾಯಿತು.

b. ವೆಂಕಟನಾಥನ ಸಂಕಲ್ಪ ಸೂರ್ಯೋದಯ –ಇದು 14ನೇ ಶತಮಾನದಲ್ಲಿ ಬರೆಯಲ್ಪಟ್ಟದ್ದು. ಕೃಷ್ಣಮಿಶ್ರನ ಗ್ರಂಥಕ್ಕೆ ಪ್ರತಿ ಕಕ್ಷಿಯಾಗಿ ಶ್ರೀವೈಷ್ಣವ ಅಂದರೆ ವಿಶಿಷ್ಟಾದ್ವೈತ ಸಿದ್ಧಾಂತದ ಆಧಾರದ ಮೇಲೆ 10 ಅಂಕಗಳಲ್ಲಿ ಬರೆಯಲ್ಪಟ್ಟ ಪ್ರತೀಕ ನಾಟಕ. ಇದರಲ್ಲಿ ಇವರ ಪರಸ್ಪರ ಜಗಳದಲ್ಲಿ ವಿವೇಕನಿಗೆ ಕೊನೆಯಲ್ಲಿ ಜಯ ದೊರಕಿ ಪರಮಾತ್ಮನಿಗೆ ಸಂಕಲ್ಪವು ಊರ್ಜಿತವಾಗುವುದು. ಇಲ್ಲಿ ಹೇಳಿರುವುದು ಸಾಲಂಬನ ಯೋಗವೆಂದೂ, ಸತ್ವ, ರಜಸ್ಸು ತಮಸ್ಸು ಸ್ವಭಾವಗಳಿಗೆ ಅಂಟಿರುವ ಗುಣಗಳೇ ಇಲ್ಲಿ ಪಾತ್ರವಹಿಸಿರುವುವು ಎಂದು ಕವಿಯೇ ಹೇಳಿರುವನು. ಉದಾ. ಯದಿಹವಿವೇಕೇನ ಪ್ರಥಮ ಮಧ್ಯಾತ್ಮ ವಿದ್ಯಾಮ ಶಿಕ್ಷಿಪುರುಷಃ ಸಪರಿಕರೇಮೋಕ್ಷೋಪಾಯೆ ಸಮ್ಮುಖೀಕೃತಃ. ವಿಮುಖೀಕೃತಾಶ್ಚ ಕಾಮಕ್ರೋಧಾದಯಃ ವಿಮೃಷ್ಟಂಚಕಿಮಪಿಸುಯ ಮಸ್ಥಾನಂ. ಆವಧಾರಿತಂ ಚ ಧಾರಣಾಯಾಃ ಶುಭಮಾಲಂಬನಂ. ಆರೀಪ್ಸಿತಶ್ಚ ಶಮದಮವೈರಾಗ್ಯಾದಿ ಪರಿಕರ್ಮಿತಃ ಸಾಲಂಬನೋ ಮಹಾಯೋಗಃ ಇತ್ಯಾದಿ

c. ೧೫ ಅಥವಾ 16ನೇ ಶತಮಾನದವ–ಚೈತನ್ಯ ಚಂದ್ರೋದಯ. ಬರೆದವನು ಕವಿ ಕರ್ಣಪೂರ

d. ೭ನೇ ಶತಮಾನದಲ್ಲಿ –ವಿದ್ಯಾಪರಿಣಯ

e. ೧೮ನೇ ಶತಮಾನದಲ್ಲಿ –ಜೀವಾನಂದ

ಇವುಗಳಲ್ಲದೆ ಮಹಾರಾಜ ಪರಾಜಯವೆನ್ನುವ ಜೈನ ಗ್ರಂಥವೂ (5 ಅಂಕಗಳು) ಮತ್ತು ಜೀವಮಂಡನನ ಕುಮಾರಪಾಲ ಪ್ರಬಂಧವೂ (ಕ್ರಿ. ಪೂ. 1159) ಈ ಕಾಲಕ್ಕೆ ಸೇರಿವೆ. ಇನ್ನೂ ಅನೇಕ ಚಿಕ್ಕ ಚಿಕ್ಕ ನಾಟಕಗಳು ಬರೆಯಲ್ಪಟ್ಟವು.

## ೧೦೦. ನಾಟಕ ಪ್ರಭೇಧ ಮತ್ತು ಲಕ್ಷಣ

1. ನಾಟಿಕಾ
   a. ಬಿಲ್ಹಣನ ಕರ್ಣ ಸುಂದರೀ
   b. ಮದನಬಾಲಸರಸ್ವತಿಯ ವಿಜಯಶ್ರೀ ಅಥವಾ ಪಾರಿಜಾತ ಮಂಜರಿ
   c. ಮಧುರಾದಾಸನ ವೃಷಭಾನುಜ
   d. ನರಸಿಂಹನ –ಶಿವನಾರಾಯಣ ಭಂಜಮಹೋದಯ
2. ಸಟ್ಟಕ
   a. ಘನಶ್ಯಾಮನ ಆನಂದ ಸುಂದರಿ
   b. ವಿಶ್ವೇಶ್ವರನ ಶೃಂಗಾರ ಮಂಜರಿ
3. ಪ್ರಕರಣ
   a. ಉತ್ತುಂಡಿಯ ಮಲ್ಲಿಕಾಮರುತ (17ನೇ ಶತಮಾನ)
   b. ಹೇಮಚಂದ್ರನ –ಕೌಮುದೀ ಮಿತ್ರಾನಂದ (1173-1176) ಜೈನ
   c. ರಾಮಕವಿ ಭದ್ರಮುನಿಯ (1169) ಪ್ರಬುದ್ಧ ರೌಹಿಣೇಯ
   d. ಯಶಶ್ಚಂದ್ರನ ಮುದ್ರಿತ ಕುಮುದಚಂದ್ರ (1124)
4. ಪ್ರಹಸನ
   a. ಲಟಕ ಮೇಲಕ (12ನೇ ಶತಮಾನ)

b. ವಿಜಯನಗರದ ದೊರೆ ನರಸಿಂಹನ ಧೂರ್ತಸಮಾಗಮ (1487-1507)

c. ಜಗದೀಶ್ವರನ ಹಾಸ್ಯಾರ್ಣವ

d. ಗೋಪೀನಾಥ ಚಕ್ರವರ್ತಿಯ ಕೌತುಕಸರ್ವಸ್ವ

e. ಸಾಮರಾಜ ದೀಕ್ಷಿತನ ಧೂರ್ತ ನಾಟಕ

f. ಲಕ್ಷ್ಮಣ ಚಾಣಕ್ಯದೇವನ ಕೌತುಕ ರತ್ನಾಕರ

5. ಭಾಣ

a. ವಾಮನ ಭಟ್ಟಬಾಣನ (1500) ಶೃಂಗಾರಭೂಷಣ

b. ರಾಮಭದ್ರದೀಕ್ಷಿತನ ಅಯ್ಯಾಬಾಣ ಅಥವಾ ಶೃಂಗಾರ ತಿಲಕ

c. ವರದಾಚಾರ್ಯನ ಅಮ್ಮಾ ಬಾಣ ಅಥವಾ ವಸಂತ ತಿಲಕ

d. ಶಂಕರನ ಶಾರದ ತಿಲಕ

e. ನಲ್ಲಾಕವಿಯ (1700) ಶೃಂಗಾರ ಸರ್ವಸ್ವ

f. ಕೇರಳದ ಪ್ರಮುಖ ರಾಜನ ರಸಸದನ

ಇವುಗಳಲ್ಲದೆ ಇನ್ನೂ 27-28 ಸಾಮಾನ್ಯ ನಾಟಕಗಳೂ ಬರೆಯಲ್ಪಟ್ಟವು. ಅವುಗಳ ಹಸರುಗಳನ್ನು ಹೇಳುವುದರಿಂದ ಅಧಿಕ ಪ್ರಯೋಜನವಾಗಲಾರದೆಂದು ಇಲ್ಲಿ ಬಿಡಲಾಗಿದೆ. ಈ ಕಾಲದಲ್ಲಿ ಮತ್ತೊಂದು ವೈಶಿಷ್ಟ್ಯವೆಂದರೆ ರಾಮಾಯಣ, ಮಹಾಭಾರತ ಮತ್ತು ಭಾಗವತದ ಆಧಾರದ ಮೇಲೆ ನಾಟಕ ಬರೆಯುವ ಕುತೂಹಲವು ತಪ್ಪಲಿಲ್ಲ. ಅವುಗಳಲ್ಲಿ ರಾಮಾಯಣದ ಆಧಾರದ ಮೇಲೆ ಬರೆದ ನಾಟಕಗಳೇ ಜಾಸ್ತಿಯಾಗಿವೆ. ಬಟ್ಟು ಕ್ರಿ.ಶ. 1200ರಿಂದ 1912ವರೆಗೆ ಅಂತಹ 22 ನಾಟಕಗಳನ್ನು ನಾವು ನೋಡಬಹುದು. ಅಂತೂ ನಾಟಕಗಳೇನೋ ಬಹಳವಾಗಿ ಬರೆಯಲ್ಪಟ್ಟವು. ಆದರೆ ಅವೆಲ್ಲವೂ ಸಾಮಾನ್ಯವಾಗಿ ಕತೆ ಪುಸ್ತಕಗಳಂತೆ ಓದುವ ನಾಟಕಗಳು. ರಂಗದ ಮೇಲೆ ಆಡುವ ಉದ್ದೇಶದಿಂದ ಬರೆದಂತೆ ಕಾಣುವುದಿಲ್ಲ. ಅಲಂಕಾರ ಶಾಸ್ತ್ರಗಳಲ್ಲಿ ಕೊಟ್ಟಿರುವ ನಾಟಕ ಲಕ್ಷಣಗಳನ್ನು ಅನುಸರಿಸಿ ಆಕಾರವನ್ನು ಹೊಂದಿವೆಯೇ ವಿನಾ ರಸವತ್ತಾಗಿ ಆಡಿ ಅನುಭವಿಸಲು ಯೋಗ್ಯವಾದ ನಾಟಕಗಳಲ್ಲ. ಭಾಮಹನೇ ಮೊದಲಾದ ಅಲಂಕಾರಕರು

ದೃಶ್ಯ ಮತ್ತು ಶ್ರವ್ಯ ಕಾವ್ಯಗಳ ಲಕ್ಷಣಗಳನ್ನು ತ್ಯಾಜ್ಯಾಗಳಾದ ದೋಷಗಳನ್ನೂ ಗ್ರಾಹ್ಯಗುಣಗಳನ್ನೂ ನಿರ್ಧಾರ ಮಾಡಿದರು. ಆದರೆ ಕೇವಲ ನಾಟಕಗಳಿಗೆ ಮಾತ್ರ ಅನ್ವಯಿಸುವ ನಿಯಮಾದಿಗಳನ್ನು

1. ಭರತನ ನಾಟ್ಯಶಾಸ್ತ್ರ (ಕ್ರಿ. ಶ. 1ನೇ ಶತಮಾನ)

2. ಧನಂಜಯನ ದಶರೂಪಕ (ಕ್ರಿ. ಶ. 974-995)

3. ಇದರ ವ್ಯಾಖ್ಯಾನ -ಧನಿಕನ 'ಅವಲೋಕ '(ಕ್ರಿ. ಶ. 974-995)

4. ವಿದ್ಯಾಧರನ ಏಕಾವಳೀ, (ಕ್ರಿ. ಶ 1280-1314)

5. ವಿಶ್ವನಾಥನ ಸಾಹಿತ್ಯ ದರ್ಪಣ (ಕ್ರಿ. ಶ. 14ನೇ ಶತಮಾನ)

6. ಶಿಂಗಭೂಪಾಲನ ರಸಾರ್ಣವ (ಕ್ರಿ ಶ 14ನೇ ಶತಮಾನ)

7. ವಿದ್ಯಾನಾಥನ ಪ್ರತಾಪ ರುದ್ರೀಯ (ಕ್ರಿ. ಶ 14ನೇಯ ಶತಮಾನ)

8. ರೂಪಗೋಸ್ವಾಮಿಯ ನಾಟಕ ಚಂದ್ರಿಕಾ (16ನೇ ಶತಮಾನ) Aj":j"Å

9. ಸಮುದ್ರಮಿಶ್ರನ ನಾಟ್ಯ ಪ್ರದೀಪ (ಕ್ರಿ. ಶ. 1613) ಎನ್ನುವ ಈ 9 ಅಲಂಕಾರ ಗ್ರಂಥಗಳು ಕೊಟ್ಟಿವೆ

ನಾವು ಯಾವ ಗ್ರಂಥಗಳನ್ನು ಸಾಮಾನ್ಯವಾಗಿ 'ನಾಟಕ' ಎಂದು ವ್ಯವಹರಿಸುವೆವೋ. ಅವುಗಳಿಗೆ ಶಾಸ್ತ್ರೀಯವಾದ ಹೆಸರು ' ರೂಪಕ' ಕೆಳಗಿನ ಮಟ್ಟದ ರೂಪಕಗಳಿಗೆ 'ಉಪರೂಪಕ' ಎನ್ನುವ ಹೆಸರಿದೆ. ರೂಪಕಗಳು 10 ವಿಧ. ಲಕ್ಷಣಗಳೊಡನೆ ಅವುಗಳನ್ನು ಹೀಗೆ ತಿಳಿಯಬಹುದು.

1. ನಾಟಕ -ಕಥಾವಸ್ತುವು ಇತಿಹಾಸ ಪುರಾಣಗಳಿಂದ ತೆಗೆಯಲ್ಪಟ್ಟಿರಬೇಕು. ನಾಯಕನು ದೊರೆ. ರಾಜರ್ಷಿ ಅಥವಾ ದೇವತೆಯಾಗಿರಬೇಕು. ಶೈಲಿ ಸುಲಭವಾಗಿ ಸುಗಮವಾಗಿ. ಸುರಸವಾಗಿರಬೇಕು. 4,5, ಮುಖ್ಯಪಾತ್ರಗಳಿರಬೇಕು. 5,10, ಅಂಕಗಳಿರಬೇಕು.

2. ಪ್ರಕರಣ-ಕ್ರಮವೆಲ್ಲಾ ನಾಟಕದಲ್ಲಿರುವಂತೆ ಇರಬೇಕು. ನಾಯಕನು ಬ್ರಾಹ್ಮಣನೋ. ಮಂತ್ರಿಯೋ ವರ್ತಕನೋ ಆಗಿರಬೇಕು. ದುರ್ದಶೆಗೆ ಸಿಕ್ಕಿ ಆಸ್ತಿ. ಪ್ರೇಮಕರ್ತವ್ಯತೆಯಲ್ಲಿ ತೊಂದರೆಯನ್ನನುಭವಿಸಿ. ಕೊನೆಗೆ ಎಲ್ಲವೂ ಸರಿಹೋಗಬೇಕು ನಾಯಕಿಯು ಸದ್ವಂಶದವಳಾಗಿರಬೇಕು. ಉದಾ. ಮಾಲತೀ ಮಾಧವ; ಇಲ್ಲದಿದ್ದರೂ ಬಾಧಕವಿಲ್ಲ ಮೃಚ್ಛಕಟಿಕದಲ್ಲಿರುವಂತೆ

3. ಸಮವಕಾರ – ದೇವತೆಗಳ ಅಥವಾ ರಾಕ್ಷಸರ –ಮುಖ್ಯಪಾತ್ರವಿರಬೇಕು.

12ರವರಿಗೂ ನಾಯಕರಿರಬಹುದು. ಅಮೃತ ಮಂಥನದಲ್ಲಿರುವಂತೆ.

4. ಈಹಾಮೃಗ –ಸುಂದರ ಸ್ತ್ರೀಯು ಕೈವಶವಾಗಲು ಬಹಳ ಪ್ರಯಾಸದಿಂದ ಅವಳನ್ನು ಹೊಂದಲು ಅನೇಕ ನಾಯಕರಿರಬೇಕು.

5. ಡಿಮ– ಪುರಾಣ ಕಥೆಯ ವ್ಯಕ್ತಿಗಳು ನಾಯಕರಾಗಬೇಕು. ಅನೇಕ ನಾಯಕರಿರಬೇಕು.

6. ವ್ಯಾಯೋಗ –ಪುರಾಣ ಕಥೆ ಮತ್ತು ವ್ಯಕ್ತಿ. ದೇವತೆಯೋ ರಾಜರ್ಷಿಯೂ ನಾಯಕ. ಸ್ತ್ರೀ ಪ್ರಯುಕ್ತ ಯುದ್ಧ – ಇತ್ಯಾದಿಗಳಿರಬೇಕು.

7. ಅಂಕ –ಇದು ಏಕಾಂಕ. ಮನವೇ ನಾಯಕ. ಸ್ತ್ರೀ ದುಃಖವೇ ಯುದ್ಧ ಮೊದಲಾದವುಗಳಿಗೆ ಕಾರಣವಾಗಿರಬೇಕು

8. ಪ್ರಹಸನ –ವಿಚಿತ್ರರೂಪ ಮತ್ತು ಭಾಷೆ ಇರಬೇಕು. ನಗೆ ಎಬ್ಬಿಸುವ ಮಾತುಗಳು ಮತ್ತು ಪ್ರಕರಣಗಳು ಇರಬೇಕು. ಇದೂ ಏಕಾಂಕ.

9. ವೀಥೀ – ಭಾಣದಂತೆ ಏಕಾಂಕ

ಈ ಹತ್ತು ವಿಧ ರೂಪಗಳ ಲಕ್ಷಣಾದಿಗಳ ವಿಸ್ತಾರವನ್ನು ಭರತನ ನಾಟ್ಯಶಾಸ್ತ್ರದಲ್ಲೂ ಧನಂಜಯನ ದಶರೂಪಕದಲ್ಲೂ ನೋಡಬಹುದು. ಭರತನು ಹೇಳಿರುವಂತೆ ಉಪ ರೂಪಕಗಳು 14 ವಿಧ ರೂಪಕಗಳು ಈ ರಸಾಶ್ರಯ ಅಥವಾ ವಾಕ್ಯಾರ್ಥಾಭಿನಯ. ಮುಕ್ತವುಗಳು ಭಾವಾಶ್ರಯ ಅಥವಾ ಪದಾರ್ಥಾಭಿನಯ.

## ೧೧೧. ನಾಯಕ–ನಾಯಕೀ ಲಕ್ಷಣ

ಈ ಹತ್ತು ವಿಧ ರೂಪಕಗಳಲ್ಲಿ ಕವಿಯ ಸೃಷ್ಟಿಯು ನಾಯಕ ನಾಯಿಕೆ ಚಿತ್ರಣದಲ್ಲಿರಬೇಕು ನಾಯಕನು ಉತ್ತಮ ಗುಣಶಾಲಿಯಾಗಿರಬೇಕು. ಸಾತ್ವಿಕತೆ. ಶೋಭಾ. ವಿಲಾಸ. ಮಾಧುರ್ಯ ಗಾಂಭೀರ್ಯ. ಧೈರ್ಯ. ತೇಜಸ್ಸು. ಔದಾರ್ಯ –ಇವೇ ಮೊದಲಾದ ಗುಣಗಳಿಂದ ಕೂಡಿದವರಾಗಿರಬೇಕು ನಾಯಕರಲ್ಲಿ 3 ವಿಧ

a. ಧೀರೋದಾತ್ತ b. ಧೀರಲಲಿತ ಮತ್ತು c. ಧೀರಶಾಂತ

ಧೀರನೆಂದರೆ ಗೌರವಸ್ಥನಾಗಿ (Noble) ಧೃತಿಯಿಂದ ಕೂಡಿದವನಾಗಿರಬೇಕು (self controlled); ಸುಖಪ್ರಿಯನಾಗಿರುವ ಲಲಿತ (Light Hearted and graf) ಉನ್ನತ ಭಾವವುಳ್ಳವನು ಉದಾತ್ತ (Exalted). ಪ್ರತಿ ನಾಯಕನು ಧೀರೋದ್ಧತ ಅಂದರೆ ಧೀರನಾದರೂ ಅಹಂಕಾರಿಯಾಗಿರಬೇಕು.

ನಾಯಿಕಿಯರಲ್ಲಿ ಮೂರು ವಿಧ

1. ಅನುಭವವಿಲ್ಲದವಳು ಮುಗ್ಧೆ 2. ಸ್ವಲ್ಪ ಇನುಭವ ವಿರುವವಳ ಮಧ್ಯೆ; ಪೂರ್ಣಾನುಭವವಿದ್ದು ಧೈರ್ಯಶಾಲಿಯಾಗಿರುವಳು ಪ್ರಗಲ್ಭೆ –ಈ ಮೂರು ವಿಭಾಗಕ್ಕೆ ಒಳಪಡದೇ ಮಿಶ್ರಸ್ವಭಾವವುಳ್ಳವಳು ರಸಿಕಳು. ಸಾಧಾರಣೇ –ಮೃಚ್ಛಕಟಿಕದಲ್ಲಿ ವಸಂತ ಸೇನೆಯಂತೆ.

ಇಂತಹ ನಾಯಕಿಗೂ ನಾಯಕನಿಗೂ 8 ವಿಧ ಸಂಬಂಧವಿರುತ್ತದೆ. 1. ಸ್ವಾಧೀನ ಪತಿಕತ್ವ 2. ದಾಸವ ಸಜ್ಜಕತ್ವ 3. ವಿರಹೋತ್ಕಂಠಿಕತ್ವ 4. ಖಂಡಿ ತತ್ವ 5. ಕಲಹಾಂತರಿತತ್ವ 7. ವಿಪ್ರಲಬ್ಧತ್ವ 7. ಪ್ರೋಷಿತ ಪ್ರಿಯತ್ವ ಮತ್ತು 8. ಅಭಿಸಾರಿಕಾತ್ವ (ಇವಳೇ ನಾಯಕನನ್ನು ಹುಡುಕಿ ಅವನನ್ನು ವಶಪಡಿಸಿಕೊಳ್ಳುವಳು)

ನಾಯಕನಿಗಿಂತಲೂ ನಾಯಕಿಗೆ ವಿಶೇಷ ಸೌಂದರ್ಯಾದಿಗಳು. ಕಿಲ ಕಿಂಚಿತತ್ವ (ಅಂದರೆ ಅಲಂಕೃಗಳಾಗಿರುವಿಕೆ). ಮೊಟ್ಟಾಯಿತತ್ವ (ಅಂದರೆ ಅಳು ಮಿಶ್ರ ಪ್ರೇಮ ಪ್ರಕಾಶ) ಕುಟ್ಟುಮಿತತ್ವ (ಪ್ರಣಯ ಕಲಹ ಮತ್ತು ಕೋಪ ಲಲಿತತ್ವ (ಸುಂದರ ಹಾವಭಾವ) ಇವೆಲ್ಲವೂ ಇರಬೇಕು. ಮಿಕ್ಕ ಪಾತ್ರಗಳು ಪ್ರಕರಣಕ್ಕೆ ಉದ್ದೇಶಕ್ಕೆ ತಕ್ಕಂತೆ ಹೊಂದಿಕೊಳ್ಳುವಂತಿರಬೇಕು. ಪ್ರಧಾನ ಮತ್ತು ಅಂಗರಸಗಳು ಉತ್ಪನ್ನವಾಗುವಂತೆ ಭಾಷೆ. ಉಡುಪು. ಧ್ವನಿ ಇವುಗಳೊಡನೆ ವಿಭಾವ. ಅನುಭಾವ. ಆಲಂಬನ. ಸಾತ್ವಿಕ ಭಾವ. ವ್ಯಭಿಚಾರಿ ಭಾವ ಇತ್ಯಾದಿಗಳಿಂದ ಪುಷ್ಟಿ ಹೊಂದುವಂತಿರಬೇಕು ಇವುಗಳ ಲಕ್ಷಣಗಳನ್ನು ಭರತನಾಟ್ಯ ಶಾಸ್ತ್ರ ಧನಂಜಯನ ದಶರೂಪಕ ಮತ್ತು ಭಾನುದತ್ತನ ರಸ ತರಂಗಿಣೀ ಇವುಗಳಲ್ಲಿ ಕಾಣಬಹುದು

## V. ಅಲಂಕಾರ ಸಾಹಿತ್ಯ

## 11. 2. ಪೀಠಿಕೆ

ಮಾನವನಿಗೆ ಸ್ವಾಭಾವಿಕತೆಯನ್ನು ಪುಷ್ಟೀಕರಿಸಿ ಅತಿಶಯವನ್ನುಂಟು ಮಾಡುವ ಆಭರಣಾದಿಗಳಂತೆ ಕಾವ್ಯಗಳಿಗೆ ಆಭರಣಾದಿಗಳು ಯಾವುವು ಎಂದು ವಿಮರ್ಶಿಸಿ ನಿಷ್ಕರಿಸುವ ಶಾಸ್ತ್ರವೇ ಅಲಂಕಾರ ಶಾಸ್ತ್ರವೆಂದು ಸಾಮಾನ್ಯವಾಗಿ ಹೇಳಬಹುದು. ಇದರ ಲಕ್ಷಣವನ್ನು ಮುಂದೆ 14ನೇ ಶತಮಾನದಲ್ಲಿ ವಿಶ್ವನಾಥನು ತನ್ನ ಸಾಹಿತ್ಯ ದರ್ಪಣದಲ್ಲಿ ಕೊಟ್ಟಿರುವನು.

1. ಕಾವ್ಯಲಕ್ಷಣವಾವುದು? ಇದರ ಆತ್ಮವಾವುದು, ರಸ ಸ್ವರೂಪವೇನು, ರೀತಿ, ಧ್ವನಿ, ವಕ್ರೋಕ್ತಿ, ಅಲಂಕಾರವೇನು? 2. ನಾಯಕ –ನಾಯಕೀ ಲಕ್ಷಣವಾವುದು ? 3. ರಸದ ಸ್ವರೂಪವೇನು ? 4. ಗುಣದೋಷಗಳಾವುವು? 5. ನಾಟ್ಯ ಶಾಸ್ತ್ರದ ಲಕ್ಷಣಾದಿಗಳಾವುವು ? 6. ಶಬ್ದವ್ಯಾಪಾರದಲ್ಲಿ ಎಷ್ಟು ಪ್ರಭೇದವಿದೆ? ಅಭಿದಾ ಲಕ್ಷಣಾ, ವ್ಯಂಜನಾ ಎಂದರೇನು? 7. ಕೊನೆಯದಾಗಿ ಅಲಂಕಾರವೆಂದರೇನು ? ಎನ್ನುವ ವಿಭಾಗದಲ್ಲಿ ಈ ಏಳನ್ನು ವಿವರಿಸುವ ಶಾಸ್ತ್ರವೇ ಅಲಂಕಾರ ಶಾಸ್ತ್ರ. ಇವನ ಸಾಹಿತ್ಯ ದರ್ಪಣವು ಅವನ ಹಿಂದಿದ್ದ ಎಲ್ಲಾ ಅಲಂಕಾರ ಗ್ರಂಥಗಳ ಸಾರಸಂಗ್ರಹವಾಗಿದೆ. ಸರಿಯಾದ ಅಲಂಕಾರ ಶಾಸ್ತ್ರವನ್ನು ಮೊಟ್ಟಮೊದಲು ಕೊಟ್ಟವನು ಕ್ರಿ.ಶ. ಆರನೇ ಶತಮಾನದ ಕೊನೆಯ ಭಾಗದಲ್ಲಿದ್ದ ಬಾಮಹನೆಂದು. ಈಗ ಎಲ್ಲಾ ವಿಮರ್ಶಕರಿಂದಲೂ ನಿಶ್ಚಿತವಾಗಿದೆ. ಇವನ ಹಿಂದ ದೃಶ್ಯ ಕಾವ್ಯದ ಪ್ರಧಾನ ದೃಷ್ಟಿಯಿಂದ ಇದರ ಸಾರವು ರಸವೆಂದೂ ಈ ರಸಾಸ್ವಾದದಿಂದ ಉತ್ಪನ್ನವಾಗುವ ಸ್ಥಾಯಿಭಾವಗಳು ಎಂಟು ಎಂದೂ ನಿಶ್ಚಿತವಾಗಿತ್ತು. ಈ ರಸಮತಕ್ಕೆ ಮೂಲ ಪುರುಷನೆಂದರೆ ಭರತ. ಇವನ ಗ್ರಂಥವೇ "ನಾಟ್ಯಶಾಸ್ತ್ರ " ಇವನ ಹಿಂದೆಯೂ ಈ ಅಲಂಕಾರಶಾಸ್ತ್ರದ ಮೂಲವನ್ನು ವೇದ ಕಾಲದಿಂದಲೂ ನೋಡಬಹುದು.

1. ಏಕಶ್ಶಬ್ದಃ ಸಮ್ಯಗ್ಜ್ಞಾತಃ ಸುಪ್ರಯುಕ್ತಃ
ಸ್ವರ್ಗೇ ಲೋಕೇ ಕಾಮಧುಕ್ ಭವತಿ

2. ದ್ವಾಸುಪರ್ಣಾ ಸಯುಜಾಸಖಾಯಾ ಸಮಾನಂ
ವೃಕ್ಷಂ ಪರಿಷ ಸ್ವಜಾತೇ
ತಯೋತೀತಃ ಪಿಪ್ಪಲಂ ಸ್ವಾದ್ವತ್ತಿಃ ಅವಶ್ನನ್ ಅನ್ಯೋ
ಅಭಿ ಚಾಕಶೀತಿ

3. ಚತ್ವಾರಿ ಶೃಂಗಾಃತ್ರಯೋ ಅಸ್ಯಪಾದಃ ದ್ವೇಶೀರ್ಷ ಸಪ್ತಹಸ್ತಾತೋಽಸ್ಯ ತ್ರಿಧಾ ಬದ್ಧೋ ಋಷಭೋ ರೋರವೀತಿ ಮಹೋದೇವೋ ಮರ್ತ್ಯಾಗಾಂ ಅವಿದೇಶ

4. ರಸೋವೈಸಃ ರಸಂಹ್ಯೇ ವಾಯಂ ಲಬ್ಧ್ವಾ ಆನಂದೀ ಭವತಿ

5. ಆನಂದೋ ಬ್ರಹ್ಮೇತಿ ವ್ಯಜಾನಾತ್

ಇತ್ಯಾದಿ ವೇದ ಮಂತ್ರಗಳಲ್ಲಿ ಕಾಣುವಂತೆ ವೇದ ಕಾಲದ ಆರ್ಯರಲ್ಲಿಯೂ ಕಾವ್ಯಾಲಂಕಾರ ಬುದ್ಧಿಯು ವಿಶೇಷವಾಗಿ ಬೆಳೆದಿತ್ತೆಂಬುದು ಸ್ಪಷ್ಟವಾಗುತ್ತದೆ. ಶಬ್ದಾಲಂಕಾರಗಳಿಂದ ಅನುಪ್ರಾಸ ಮತ್ತು ಯಮಕಕ್ಕೂ, ಅರ್ಥಾಲಂಕಾರಗಳಲ್ಲಿ ಉಪಮೇ, ರೂಪಕ ಮತ್ತು ದೀಪಕ –ಇವುಗಳಿಗೂ ಹೇರಳವಾಗಿ ವೇದದಲ್ಲಿ ನಿದರ್ಶನಗಳನ್ನು ನೋಡಬಹುದು. ಯಾಸ್ಕನು ಉಪಮಾ ಸ್ವರೂಪವನ್ನು-

ಜ್ಯಾಯಸಾವಾಗುಣೇನ ಪ್ರಖ್ಯಾತ ತಮೇನವಾ. ಕನೀಯಾಂಸಂವಾ
ಪ್ರಖ್ಯಾತಂವಾ ಉಪಮೀಯತೇ ಅಥಾಪಿಕನೀಯಸಾಜ್ಯಯಾಂಸಂ

ಎನ್ನುವ ವಾಕ್ಯದಿಂದ ವಿಮರ್ಶಿಸಿರುವನು. ಪಾಣಿನಿಯೂ ಕೂಡ

1. ಉಪಮಾನಾನಾಂ ಹ ಸಾಮಾನ್ಯ ವಚನೈಃ (IV, 1.55)

2. ಅತ ಏವ ಚೋಪಮಾ ಸೂರ್ಯ ಕಾವಿವತ್ (I,4,1)

3. ಉಪಮಿತಂ ವ್ಯಾಘ್ರಾದಿಭಿಃ (II, 1-56)

ಈ ಸೂತ್ರಗಳಲ್ಲಿ ಉಪಮಾಲಂಕಾರದ ಪರಿಚಯವನ್ನೂ ತೋರಿಸಿಕೊಟ್ಟಿರವನ್ನು ಪುರಾಣಕಾಲವನ್ನು ವಿಮರ್ಶಿಸಿದರೆ, ರಾಮಾಯಣ ಮತ್ತು ಮಹಾಭಾರತಗಳನ್ನೂ ನೋಡಿದರೆ, ನಮಗೆ ಮುಂದೆ ಬಂದ ಮಹಾಕವಿಗಳಿಗೆ ಇವು ಆದರ್ಶವಾಗಿರುವಂತೆ ಕಂಡು ಬರುತ್ತದೆ. ಅಗ್ನಿಪುರಾಣದಲ್ಲಂತೂ, ಅಲಂಕಾರ, ದೋಷ ಮತ್ತು ಗುಣಗಳ ವಿಮರ್ಶೆಯೇ ಇದೆ. ಭಾಮಹ ಮತ್ತು ಅವನಾದ ಮೇಲೆ ಬಂದ ಅಲಂಕಾರಿಕರ ಶಾಸ್ತ್ರಗಳಲ್ಲಿ ಹೇಳಿರುವ ಅನೇಕ ಲಕ್ಷಣಗಳು ರಾಮಾಯಣದಲ್ಲಿರುವುದರಿಂದಲೇ ಅದನ್ನು ಎಲ್ಲರೂ ಆದಿಕಾವ್ಯವನ್ನಾಗಿ ಪರಿಗಣಿಸಿರುವರು. ಭರತನ ನಾಟ್ಯಶಾಸ್ತ್ರದಿಂದ ಹಿಡಿದು 17ನೇ ಶತಮಾನದ ಜಗನ್ನಾಥನ ಪರ್ಯಂತವೂ ಒಟ್ಟು ಪ್ರಧಾನವಾಗಿ 20 ಅಲಂಕಾರಿಕರನ್ನು ನಾವು ಗಣನೆ ಮಾಡಬಹುದು. ಇವರನ್ನೂ ಮೂರು ಪರ್ವದಲ್ಲಿ ವಿಮರ್ಶಿಸಬಹುದು. 1. ಧ್ವನಿವಾದಕ್ಕೆ ಮೂಲಪುರುಷವಾದ ಆನಂದವರ್ಧನನ ಹಿಂದಿದ್ದ ಅಲಂಕಾರಿಕರು ಮತ್ತು ಅವರು ಅಲಂಕಾರ ಶಾಸ್ತ್ರವನ್ನು ಬೆಳೆಸಿದ ಕ್ರಮ. 2. ಧ್ವನಿವಾದವನ್ನು ಖಂಡಿಸಿ, ದಂಡಿಸಬಂದವರೆಲ್ಲರನ್ನೂ ಕ್ರೋಢೀಕರಿಸಿ, ಸಮನ್ವಯ ಮಾಡಿಕೊಟ್ಟಿರವ ರುಮ್ಯಕನ ಪರ್ಯಂತಕಾಲ ಮತ್ತು 3. ಶಾಖೋಪಶಾಖೆಯಾಗಿ ಈ ಅಲಂಕಾರ ಶಾಸ್ತ್ರವು ಬೆಳೆದು ಜಗನ್ನಾಥನಲ್ಲಿ ಪರ್ಯಾಪ್ತಿಯನ್ನು ಹೊಂದಿದ ಕ್ರಮ.

## ೧೦೩. ಮೂರು ಪರ್ವಗಳು

Iನೆಯ ಪರ್ವ –ಪ್ರಾರಂಭದಿಂದ –ಕ್ರಿ. ಶ. 9ನೇ ಶತಮಾನದ ಉತ್ತರ ಭಾಗ

1. ಭರತನ ನಾಟ್ಯ ಶಾಸ್ತ್ರ

2. ಮೇಧಾವಿಯ ಉಪಮಾದೋಷಗಳು

3. ಧರ್ಮಕೀರ್ತಿಯ "ಅಲಂಕಾರ"

4. ಭಾಮಹನ "ಕಾವ್ಯಾಲಂಕಾರ"

5. ದಂಡಿಯ ಕಾವ್ಯಾದರ್ಶ

6. ವಾಮನನ ಕಾವ್ಯಾಲಂಕಾರ ಸೂತ್ರವೃತ್ತಿ

7. ಉದ್ಭಟನ ಕಾವ್ಯಾಲಂಕಾರ ಸಂಗ್ರಹ

8. ಲೋಲ್ಲಟನ ನಾಟ್ಯ ಶಾಸ್ತ್ರ ವ್ಯಾಖ್ಯಾನ

9. ಶಂಕುಕನ ನಾಟ್ಯ ಶಾಸ್ತ್ರ ವ್ಯಾಖ್ಯಾನ

10. ರುದ್ರಟನ ಕಾವ್ಯಾಲಂಕಾರ

II ನೇ ಪರ್ವ -9ನೇ ಶತಮಾನದ ಉತ್ತರ ಭಾಗದಿಂದ 11ನೇ ಶತಮಾನದ ಮಧ್ಯಭಾಗ

1 ಆನಂದ ವರ್ಧನನ ಧ್ವನ್ಯಾಲೋಕ

2 ಭಟ್ಟನಾಯಕನ ಕಾವ್ಯಮಿಮಾಂಸಾ

3 ರಾಜಶೇಖರನ ಕಾವ್ಯಮೀಮಾಂಸಾ

4. ಧನಂಜಯ ಮತ್ತು ಧನಿಕ -ಇವರ ದಶರೂಪಕ

5 ಅಭಿನವ ಗುಪ್ತನ ಲೋಚನ

6 ಭೋಜನ ಶೃಂಗಾರ ಪ್ರಕಾಶ

7 ಕ್ಷೇಮೇಂದ್ರನ ಔಚಿತ್ಯ ವಿಚಾರ ಚರ್ಚಾ

8 ಕುಂತಕನ ವಕ್ರೋಕ್ತಿ ಜೀವಿತ

9 ಮಹಿಮಭಟ್ಟನ ವ್ಯಕ್ತಿ ವಿವೇಕ

10. ಮಮ್ಮಟನ ಕಾವ್ಯಪ್ರಕಾಶ

ಸ್ವಾಭಾವಿಕವಾಗಿ ಹುಟ್ಟಿರತ್ಯಾತ್ಮಕ ಸ್ಥಾಯಿಭಾವದಲ್ಲಿ ಪರ್ಯವಸಾನ ಹೊಂದುವಂತೆ ಮಾಡಿರುವ ಕಾಳಿದಾಸನು-

ಸರಸಿಜಮನುವಿದ್ಧಂ ಶೈವ ಲೇನಾಪಿ ರಮ್ಯಂ
ಕಿರಣಮಪಿ ಹಿಮಾಂಶೋ ರ್ಲಕ್ಷ್ಮ ಲಕ್ಷ್ಮೀಂ ತನೋತಿ
ಇಯಮಧಿಕಮನೋಜ್ಞಾ ವಲ್ಕಲೇ ನಾಪಿ ತನ್ವೀ
ಕಿಮಿವಹಿ ಮಧುರಾಣಾಂ ಮಂಡನಂ ನಾಕೃತೀನಾಂ

ಇತ್ಯಾದಿ ಶ್ಲೋಕಗಳಲ್ಲಿ ತಿಳಿಸಿರುವಂತೆ ಕಾವ್ಯದ ಗುಣದೋಷಗಳಿಗೆ ಅಷ್ಟಾಗಿ ಗಮನ ಕೊಡದಿದ್ದರೂ, ಇವ ಅಪ್ರತಿಯ ಪ್ರತಿಭೆಯಿಂದ ನೈಜಿಕವಾಗಿ ಅತ್ಯುತ್ತಮ ಕಾವ್ಯಗಳನ್ನು ಕೊಡುವಂತಾಯಿತು. ಅಂದರೆ ಭರತನು ಕಾಳಿದಾಸನಿಗೆ ಹಿಂದಿದ್ದವನೆಂದು ಸಿದ್ಧನಾದರೆ ಅವನ ಶಾಸ್ತ್ರವು ಅವನಾದ ಮೇಲೆ ಬರೆಯಲ್ಪಟ್ಟಿರಬೇಕೆಂದು ಊಹಿಸಬಹುದು. ಮೂರನೇ ಭಾಗದಲ್ಲಿ ನಿಶ್ಚಯಿಸಲ್ಪಟ್ಟಿರುವಂತೆ ಕಾಳಿದಾಸನ ಕಾಲವು ಕ್ರಿ. ಪೂ. ಒಂದನೇ ಶತಮಾನವಾದರೆ, ಭರತನು ಅವನ ಹಿಂದಿನವನಾಗಿರಬೇಕು. ಅವನ ಶಾಸ್ತ್ರ ಕ್ರಿ. ಶ. 1.ನೇ ಶತಮಾನವಾಗಿರಬೇಕು. ಈ ಊಹೆಯೂ ಸಮಂಜಸವಾಗಿ ಕಾಣುತ್ತದೆ. ಭರತನಾದ ಮೇಲೆಯೂ ನಾಟ್ಯಶಾಸ್ತ್ರ ಮುಂದಾಳುಗಳು ಅನೇಕರಿದ್ದರು. ಭಾಮಹನು ತನ್ನ ವಕ್ರೋಕ್ತಿವಾದವನ್ನು ತಂದಮೇಲೆಯೂ, ಆನಂದವರ್ಧನನು ಧ್ವನಿವಾದವನ್ನು ಸಮರ್ಥಿಸಿದ ಮೇಲೆಯೂ ನಾಟ್ಯ ಶಾಸ್ತ್ರಾನುಯಾಯಿಗಳು ಇದ್ದೇ ಇದ್ದರು. 1. ದತ್ತಿಲಾಚಾರ್ಯ 2. ರಾಹುಲ 3. ಭಟ್ಟಯಂತ್ರ 4. ಕೀರ್ತಿ ಧರಾಚಾರ್ಯ – ಮೊದಲಾದವರು ತಾಳ, ನೃತ್ಯ, ಇತ್ಯಾದಿ ಕ್ರಮವನ್ನು ಪರಿಷ್ಕರಿಸಿದರು. 5. ನಾನ್ಯದೇವನು ಭಾರತೀಯ ಸೂತ್ರಕ್ಕೆ ವ್ಯಾಖ್ಯಾನ ಬರೆದನು. ಇವನ ವಿಷಯದಲ್ಲಿ ವಿಮರ್ಶೆಯು ನಡೆದಿದೆ ಅಭಿನವ ಗುಪ್ತನಾದ ಮೇಲೆ 1097ರಲ್ಲಿ ಮಿಥಿಲ ದೇಶದ ದೊರೆ ನಾನ್ಯದೇವನೇ ಇವನೆಂದು ಕೆಲವರು ಹೇಳಿರುವರು. ಆದರೆ ಅಭಿನವಗುಪ್ತನು ಇವನನ್ನು ಹೇಳಿರುವುದರಿಂದಲೂ, ಅಭಿನವಗುಪ್ತನ ವೇದಾಂತ ಗ್ರಂಥವಾದ ಪ್ರತ್ಯಭಿಜ್ಞಾ ವಿವೃತಿಯು ಕ್ರಿ. ಶ. 1014ರಲ್ಲಿ ಬರೆಯಲ್ಪಟ್ಟಿತೆಂದೂ ನಿಶ್ಚಿತವಾಗಿರುವುದರಿಂದಲೂ ಇದಕ್ಕೆ ಹಿಂದೆಯೇ ಅಭಿನವಗುಪ್ತನು ಅಲಂಕಾರ ಗ್ರಂಥಗಳನ್ನು ಬರೆದಿರುವುದರಿಂದಲೂ, ನಾನ್ಯ ದೇವನು 10ನೇ ಶತಮಾನದ ಕೊನೆಯ ಭಾಗದಲ್ಲಿದ್ದಿರಬೇಕು ಇವನಿಗೂ ಬಹಳ ಹಿಂದೆ ಹರ್ಷವರ್ಧನನು (7ನೇ ಶತಮಾನ) ನಾಟ್ಯಶಾಸ್ತ್ರಕ್ಕೆ ವಾರ್ತಿಕವನ್ನು ಕೊಟ್ಟಿರುವನು. 9ನೇ ಶತಮಾನದ ಲೋಲ್ಲಟ ಮತ್ತು ಶಂಕುಕನು ಇವರಿಬ್ಬರೂ ನಾಟ್ಯ ಶಾಸ್ತ್ರಕ್ಕೆ ವ್ಯಾಖ್ಯಾನವನ್ನು ಕೊಟ್ಟರು. ಅದೇ ಕಾಲದ ಭಟ್ಟಲೋಲ್ಲಟನು ಭಾಮಹಪೂಜಕನಾದರೂ ರಸವಾದಿಯಾಗಿದ್ದನು. 10ನೇ ಶತಮಾನದಲ್ಲಿ ಧನಂಜಯನು ತನ್ನ ದಶರೂಪಕದಲ್ಲಿ ಶೃಂಗಾರರಸವನ್ನು ಬಿಟ್ಟು ಮಿಕ್ಕ ಎಲ್ಲಾ ರಸಗಳ ವಿಷಯದಲ್ಲಿಯೂ ನಾಟ್ಯಶಾಸ್ತ್ರವನ್ನೇ ಅನುಸರಿಸುವರು 11ನೇ ಶತಮಾನದಲ್ಲಿ ಭೋಜನು ತನ್ನ ಶೃಂಗಾರಪ್ರಕಾಶದಲ್ಲಿ ಶೃಂಗಾರಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟನು. 12ಮತ್ತು

13ನೇ ಶತಮಾನದ ಶಾರದಾತನಯನು ಭೋಜನನ್ನು ಸಮರ್ಥಿಸಿದನು. 14ಮತ್ತು 15ನೇ ಶತಮಾನದಲ್ಲಿ ಭಾನುದತ್ತನು ತನ್ನ ರಸತರಂಗಿಣಿಯಲ್ಲಿ ರಸಕ್ಕೆ ಗೌರವಕೊಟ್ಟಿರುವನು.

ಇವೆಲ್ಲವನ್ನೂ ನೋಡಿದರೆ ಶ್ರವ್ಯ ಮತ್ತು ದೃಶ್ಯವೆನ್ನುವ ಪ್ರಭೇದಕ್ಕೆ ಒಳಗಾದ ಕಾವ್ಯಗಳಲ್ಲಿ ದೃಶ್ಯಕಾವ್ಯ ದೃಷ್ಟಿಯಿಂದಲೇ ರಸಕ್ಕೆ ಪ್ರಾಧಾನ್ಯತೆ ಮೊದಲಿನಿಂದಲೂ ಇರುವಂತಿದೆ. ಆಧುನಿಕ ಪಾಶ್ಚಾತ್ಯ ಸಾಹಿತ್ಯದಲ್ಲಿ ಶ್ರವ್ಯ ಕಾವ್ಯ ಮತ್ತು ದೃಶ್ಯ ಕಾವ್ಯಗಳ ಶಾಸ್ತ್ರವನ್ನು ಬೇರೆ ಬೇರೆಯಾಗಿ ವಿಮರ್ಶಿಸುತ್ತಿರುವರು. ಶ್ರವ್ಯಕಾವ್ಯ ಶಾಸ್ತ್ರವನ್ನು Poetics ಎಂತಲೂ, ದೃಶ್ಯಕಾವ್ಯ ಶಾಸ್ತ್ರವನ್ನು Dramaturgy ಎಂತಲೂ, ಕರೆದಿರುವರು. ಇಷ್ಟಾದರೂ ಎರಡಕ್ಕೂ ಸಮವಾದ ಕೆಲವು ಅಂಶಗಳಿರುವುವು. ಒಂದನ್ನು ಬಿಟ್ಟು ಮತ್ತೊಂದು ಸ್ವತಂತ್ರವಾಗಿ ನಿಲ್ಲಲಾರದು. ಈ ಕಾರಣದಿಂದಲೇ ಭಾಮಹನು ಎರಡು ಶಾಸ್ತ್ರಕ್ಕೂ ಅನ್ವಯವಾಗುವಂತೆ ಅಲಂಕಾರಶಾಸ್ತ್ರವನ್ನು ಕೊಟ್ಟನು.

6. ಮೇಧಾವಿ - ಇವನ ಗ್ರಂಥವು ನಮಗೆ ಲಭ್ಯವಾಗಿಲ್ಲ. ಆದರೆ ಭಾಮಹನ ಕಾವ್ಯಾಲಂಕಾರದ I, 40ರಲ್ಲಿ

"ತ ಏತೇ ಉಪಮಾದೋಷಾಃ ಸಪ್ತ ಮೇಧಾವಿನೋದಿತಾಃ"

ಎಂದಿರುವನು. ಇವನಲ್ಲದೆ ನಮಿಸಾಧುವು ಇವನನ್ನು ಹೇಳುವಾಗ ಹೀಗೆ ಹೇಳಿರುವನು.0

ಅತ್ರ ಚ ಸವರೂಪೋಪಾದಾನೇ ಸತ್ಯಪೀ ಚತ್ವಾರ ಇತಿ ಗ್ರಹಣಾದ್ಯಂ
ಮೇಧಾವಿ ಪ್ರಭೃತಿ ಭಿರುಕ್ತಂಯಥಾ ಲಿಂಗ ವಚನ ಭೇದೌ. ಹೀನತಾ
ಧಿಕ್ಯಂ. ಸಂಭವೋ ವಿಪರ್ಯಯೋ ಸಾದೃಶ್ಯಮತಿ ಸಪ್ತೋಪಮಾ
ದೋಷಾಂ. ತದೇತನ್ನಿರಸ್ತಂ

ರಾಜಶೇಖರನು ಹೇಳಿರುವ ಮೇಧಾವಿ ರುದ್ರನೇ ಇವನಾಗಿರಬಹುದು. ಹಾಗಾದರೆ ಇವನೇ ಹುಟ್ಟು ಕುರುಡನಾಗಿ ಕಾಳಿದಾಸತ್ರಯೀ ಅಲ್ಲಿ ಇವನೂ ಒಬ್ಬನಾಗಿರಬಹುದು. ಇವನ ಕಾಲ ಕಾಳಿದಾಸನಿಗೂ ಭಾಮಹನಿಗೂ ಮಧ್ಯವರ್ತಿಯಾಗಿರಬೇಕು. 3.ಧರ್ಮಕೀರ್ತಿ-ಇವನು ಬೌದ್ಧ. ಕ್ರಿ. ಶ. 6ನೇ ಶತಮಾನದ ಕೊನೆಯಲ್ಲಿದ್ದನು. "ಅಲಂಕಾರೋ ನಾಮ ಧರ್ಮಕೀರ್ತಿ ಕೃತೋ ಗ್ರಂಥವಿಶೇಷಃ" ಎನ್ನುವ ಶಿವರಾಮನ ವಾಕ್ಯದಿಂದ " ಅಲಂಕಾರ ಟ"ಎನ್ನುವುದೇ ಇವನ ಗ್ರಂಥವಾಗಿರಬೇಕು. ಇವನ ವಿಷಯದಲ್ಲಿ ಒಂದು ಕಥೆ ಇದೆ. ಬಾಣನ ಮಾತಿನಂತೆ ಭಟ್ಟನಾರಾಯಣನು ಒಬ್ಬ ಬೌದ್ಧನಿಂದ ಆಮತ ಪ್ರಕ್ರಿಯೆಗಳನ್ನೂ ಕಲಿತು ಅನಂತರ ಧರ್ಮಕೀರ್ತಿಯನ್ನು ಸೋಲಿಸಿದನೆಂದೂ, ಅನಂತರ ಅವರಿಬ್ಬರೂ ಸ್ನೇಹಿತರಾಗಿ ' ರೂಪಾವತಾರ' ಎನ್ನುವ ಒಂದು ವ್ಯಾಕರಣ ಗ್ರಂಥವನ್ನೂ ಬರೆದನೆಂದೂ ಹೇಳಲಾಗಿದೆ. ಇತ್ಸಿಂಗನು ಧರ್ಮಕೀರ್ತಿಯನ್ನು ತನ್ನ ಕಾಲದವನೆಂದು ಹೇಳಿರುವನೆಂದೂ ಹೇಳಲಾಗಿದೆ. ಆದರೆ ಇದು ಸರಿಯಾದ ಇತ್ಸಿಂಗನ ಗ್ರಂಥ

ಪರಿವರ್ತನವಲ್ಲವೆನ್ನುತ್ತಾರೆ. ಇವನು ದಿಙ್ನಾಗನ ಪ್ರಮಾಣಸಮುಚ್ಚಯಕ್ಕೆ ವ್ಯಾಖ್ಯಾನವನ್ನು ಬರೆದಿರುವನು. ಅಲಂಕಾರ ಶಾಸ್ತ್ರಗಳಲ್ಲಿ ಇವನ ವಾಕ್ಯಗಳು ಉದಾಹೃತವಾಗಿವೆ.

4. ಭಾಮಹ -ಇವನು ಬೌದ್ಧ ರಾಕ್ಷಿಲಗೋಮಿನ್ ಎನ್ನುವವನ ಮಗ. ಚಾಂದ್ರ ವ್ಯಾಕರಣದ ರೀತಿಯಲ್ಲಿ 'ಗೋಮಿನ್' ಎಂದರೆ ಪೂಜ್ಯ. ಬೌದ್ಧನಾದರೂ ಬೌದ್ಧರ ದುಶ್ಚರ್ಯೆಯನ್ನು ದೂಷಿಸಿರುವನು. ಹಿಂದೂದೇವತೆಗಳೂ ಮತ್ತು ವೇದ ಎಂದರೆ ಇವನಿಗೆ ಬಹಳ ಗೌರವ. ಇವನ ಉತ್ತರ ವಯಸ್ಸಿನಲ್ಲಿ ದಂಡಿಗೆ ಚಿಕ್ಕ ವಯಸ್ಸು. ಇವನ ಕಾಲ ಕ್ರಿ. ಶ. ೬ನೇ ಶತಮಾನದ ಕೊನೆ ಮತ್ತು ೭ನೇ ಶತಮಾನದ ಮೊದಲನೇ ಭಾಗ.

ಇವನೇ ಪ್ರಪ್ರಥಮವಾಗಿ ದೃಶ್ಯ ಮತ್ತು ಶ್ರವ್ಯ ಕಾವ್ಯಗಳೆರಡರ ದೃಷ್ಟಿಯಿಂದ ಕಾವ್ಯಾತ್ಮ ಯಾವುದಿರಬೇಕೆನ್ನುವ ಸಮಸ್ಯೆಯನ್ನು ಮುಂದಿಟ್ಟಿರುವನು. ಮೊದಲು ಇವನು ತನ್ನ ಕಾವ್ಯಾಲಂಕಾರದಲ್ಲಿ ಸತ್ಪುರುಷರ ದೃಷ್ಟಿಯಿಂದ ಸತ್ಕವಿಯ ಮನೋಧರ್ಮವು ಹೇಗಿರಬೇಕೆಂದು ವರ್ಣಿಸಿರುವನು.

VI-64- ಅವಲೋಕ್ಯ ಮತಾನಿ ಸತ್ಕವೀನಾಂ
ಅವಗಮ್ಯ ಸ್ವಧಿಯಾ ಚಕಾವ್ಯಲಕ್ಷ್ಮ
ಸುಜನಾಮಗಮಾಯ ಭಾಮಹೇನ
ಗ್ರಂಥಿತಂ ರಕ್ರಿಲ್ಗೋಮಿಸೂನು ವೇದಂ

ಪುರುಷಾರ್ಥಕ್ಕಾಗಿ ದೋಷರಹಿತ ಕಾವ್ಯ ಕಲ್ಪನೆಯಾಗಬೇಕು. ಆನಂದವು ಬರಬೇಕು. ಧಾರ್ಮಿಕವಾಗಿರಬೇಕು.

II, 1-59 ಏತದ್ಗ್ರಾಹ್ಯಂ ಸುರಭಿಕುಸುಮಂಗ್ರಾಮ್ಯಮೇತನ್ನಿ ಧೇಯಂ

ಧತ್ತೇತೋಭಾಂವಿರಚಿತಮಿದಂ ಸ್ಥಾನಮಸ್ಯೈ ತದಸ್ಯ
ಮೂಲಾಕಾರೋ ವಯತಿಯಥಾ ಸಾಧುವಿಜ್ಞಯಮಾಲಾಂ
ಯೋಜ್ಯಂ ಕಾವ್ಯೇಷ್ವ ನಹಿತಧಿಯಾ ತದ್ವವೇವಾಭಿದಾನಂ

ಇವನಿಗೆ ವೈಯಾಕರಣ್ಣ ಸ್ಫೋಟವೆಂದರೆ ದ್ವೇಷ. ಇವನ ಕಾವ್ಯಾಲಂಕಾರವು ಆರು ಅಧ್ಯಾಯವುಳ್ಳದ್ದು

1. ಕಾವ್ಯಶರೀರ 2. ಅಲಂಕಾರ 3. ಗುಣ. 4. ದೋಷ 5. ನ್ಯಾಯ ಮತ್ತು 6. ಶಬ್ದ ಶುದ್ಧಿ-ಇವೇ ಈ ಆರು ಅಧ್ಯಾಯಗಳಲ್ಲಿವಿಮರ್ಶಿಸಲ್ಪಟ್ಟಿರುವ ವಿಷಯಗಳು. ಪಾಣಿನಿಯಲ್ಲಿ ಬಹಳ ಗೌರವವಿದ್ದರೂ. ಆ ಶಾಸ್ತ್ರದಲ್ಲಿ ಬೆಳೆದುಬಂದ ವೇದಾಂತ ದೃಷ್ಟಿಯಾದ ಸ್ಫೋಟವಾದವನ್ನು

ಶಪಥೈರಪಿಚಾದೇಯಂ ವಚೋನ ಸ್ಫೋಟವಾದಿನಾಂ
ನಭಃಕುಸುಮಮಸ್ತೀತಿ ಶ್ರದ್ದಧ್ಯಾತ್ ಕಸ್ಸಚೇತನಃ

ಎಂದು ದೂಷಿಸಿರುವನು. ಇವನ ರೀತಿಯಲ್ಲಿ ಕಾವ್ಯದಲ್ಲಿ ಅಲಂಕಾರವೆಂದರೆ ವಕ್ರೋಕ್ತಿ-

I.36- ವಕ್ರಾಭಿಧೇಯಾ ಶಬ್ದೋಕ್ತಿ ರಿಷ್ಟಾ ವಾಚಾಮಲಂಕೃತಿ

II-85-ಸೈಷಾ ಸರ್ವೈವ ವಕ್ರೋಕ್ತಿ ಶರನಯಾರ್ಥೋವಿಭಾವ್ಯತೇ

ಯತ್ನೋಸ್ಯಾಂ ಕವಿನಾಕಾರ್ಯಃ ಕೋಲಂಕಾರೋನಯಾವಿನಾ

V-66-ವಾಚೌಂ ವಕ್ರಾರ್ಥ ಶಬ್ದೋಕ್ತಿರಲಂಕಾರಾಯಾಕಲ್ಪತೇ

ಇವನ ಮತವನ್ನು ವಿವರಿಸುತ್ತಾ ಅಭಿನವಗುಪ್ತನು

ಶಬ್ದಸ್ಯಹಿವಕ್ರತಾ ಅಭಿಧೇಯಸ್ಯ ಚ (ವಕ್ರತಾ) ಲೋಕೋತ್ತೀರ್ಣೇನನ

ರೂಪೇಣ ಅವಸ್ಥಾನಂ ಇತ್ಯಯ ಮೇವಾಸೌ ಅಲಂಕಾರಾಂತರ್ಭಾವಃ

ಎಂದಿರುವನು. ಇದರ ಆಧಾರದ ಮೇಲೆ ಮಲ್ಲಿನಾಥನು ಇವನನ್ನು ಧ್ವನ್ಯ ಭಾವನಾದಿ ಎಂದು ಹೇಳಿದ್ದರೂ. ಧ್ವನಿಯ ವಿಷಯದಲ್ಲಿ ಭಾಮಹನಿಗೆ ದ್ವೇಷವಿದ್ದಂತಿಲ್ಲ. ಇವನು ತನ್ನ ವಾಕ್ಯಗಳಲ್ಲಿ ಎಲ್ಲೂ ಧ್ವನಿವಾದವನ್ನು ಪ್ರತಿಭಟಿಸಿಲ್ಲ. ಆನಂದವರ್ಧನನಿಗೆ (ಕ್ರಿ. ಶ. 850) ಭಾಮಹನಲ್ಲಿ ಗೌರವವಿದೆ. ರುಯ್ಯಕನು (12ನೇ ಶತಮಾನ) ಇವನ ವಿಷಯದಲ್ಲಿ ಹೀಗೆ ಹೇಳಿರುವನು.

ಇಹಹಿವೌವತ್ ಭಾಮಹಲುದ್ಭಟ ಪ್ರಭೃತಯಃ ಚಿರಂತನಾಲಂಕಾರಿಕಾಃ
ಪ್ರತೀಯಮಾನಮರ್ಥಂ ವಾಚ್ಯೋ ಪಸ್ಕಾರಕತಯಾ
ಅಲಂಕಾರ ಪಕ್ಷನಿಕ್ಷಿಪ್ತಂ ಮನ್ಯಂತೇ

ಭರತನನ್ನು ಇವನು ಪ್ರಸ್ತಾಪಿಸಿ ಪ್ರಥಮ ಅಲಂಕಾರಿಕನನ್ನಾಗಿ ಒಪ್ಪಿರುವಂತಿದ್ದರೂ. ಇವನಿಗ ಅಲಂಕಾರಶಾಸ್ತ್ರದಲ್ಲಿ ಪ್ರಥಮಾಚಾರ್ಯ ಸ್ಥಾನವು ಸಂದಿದೆ.

5. ದಂಡೀ- ಇವನು ಭಾಮಹನ ವೃದ್ಧಾಪ್ಯದ ಸಮಕಾಲಿಕ. ಇವನ ಗ್ರಂಥ ಕಾವ್ಯಾದರ್ಶವು ೪ ಅಧ್ಯಾಯವುಳ್ಳದ್ದು -1 ಮಾರ್ಗ 2. ಅರ್ಥಾಲಂಕಾರ 3. ಶಬ್ದಾಲಂಕಾರ ಮತ್ತು 4. ದೋಷ. ಇವೇ ಈ ನಾಲ್ಕು ಅಧ್ಯಾಯಗಳ ವಿಷಯ. ಇದಕ್ಕೆ ವ್ಯಾಖ್ಯಾನಗಳಿವೆ.

ಕ್ರಿ. ಶ. 8ನೇ ಶತಮಾನದಲ್ಲೇ ಇದು ಕವಿರಾಜಮಾರ್ಗ ವಿಜಯನೆನ್ನುವ ಕನ್ನಡ ಅಲಂಕಾರಗ್ರಂಥಕ್ಕೆ ಆದರ್ಶವಾಗಿದೆ. ಭಾಮಹನಿಗೆ ರೀತಿಯೇ ಮುಖ್ಯ. ವೈದರ್ಭೀ ಮತ್ತು ಗೌಡೀ –ಈ ಎರಡು ಶೈಲಿಯೂ ಆಯಾಪ್ರಕರಣಕ್ಕೆ ಬೇಕೆಂದಿರುವನು. ಭಾಮಹನಿಗೆ ಅಲಂಕಾರವಾಗಿರುವುದು ಇವನಿಗೆ ಗುಣ. ಅಲಂಕಾರವು ಅರ್ಥಕ್ಕೆ ರಸವನ್ನು ತರುತ್ತದೆ. ಅಂದರೆ ರಸವು ಅಲಂಕಾರಕ್ಕೆ ಅಧೀನ – ಆದರೂ ಇವೆರಡು: ರೀತಿಗೆ ಅಧೀನ ಕುಂತಲಕನು (ಕ್ರಿ. ಶ. 11ನೇ ಶತಮಾನ) ತನ್ನ ವಕ್ರೋಕ್ತಿ ಜೀವಿತದಲ್ಲಿ ಹೇಳಿಯವಂತೆ ಭಾಮಹನ ಅಭಿಪ್ರಾಯವು

ವಕ್ರೋಕ್ತಿಃ ಕಾವ್ಯ ಜೀವಿತಂ. ಶಬ್ದಾರ್ಥೌ ಸಹಿತೌ
ವಕ್ರಕವಿ ವ್ಯಾಪಾರ ಶಾಲಿನೀ. ಬಂಧೇ ವ್ಯವಸ್ಥಿತೌ
ಕಾವ್ಯಂತದ್ವಿದಾಹ್ಲಾದ ಕಾರಿಣೇ.

ಎನ್ನಬಹುದು ವಕ್ರೋಕ್ತಿಯು ಅಲಂಕಾರ ಮತ್ತು ಧ್ವನಿಯನ್ನು ವ್ಯಾಪಿಸಿಕೊಳ್ಳುತ್ತದೆ ದಂಡಿಯ ವಿಷಯವಾಗಿ ಮೂರನೇ ಭಾಗದಲ್ಲಿ ಅಧಿಕಾಂಶವು ಹೇಳಲ್ಪಟ್ಟಿದೆ

6. ವಾಮನ –ಇವನು ಕಾಶ್ಮೀರದ ಜಯಾಪೀಡನ ಕಾಲದವನು. ಅಂದರೆ ಇವನ ಕಾಲ ಕ್ರಿ. ಶ. ೮ನೇ ಶತಮಾನ. ಇವನ ಗ್ರಂಥ ಕಾವ್ಯಾಲಂಕಾರ ಸೂತ್ರ ವೃತ್ತಿ. ಇದು 5ಅಧ್ಯಾಯವುಳ್ಳದ್ದು. ಕಾವ್ಯಗಳಲ್ಲಿ ರೀತಿಯ ಮುಖ್ಯವೆಂದು ದಂಡಿಯು ಹೇಳಿದ್ದರೂ ಅವನ ಅಭಿಪ್ರಾಯಕ್ಕಿಂತಲೂ ಭೇದವನ್ನು ಕಲ್ಪಿಸಿಕೊಂಡು "ರೀತಿರಾತಾ ಕಾವ್ಯಸ್ಯ" "ವಿಚಿತ್ರ ರಚನಾರೀತಿಃ "ಎಂದರಿರುವನಿವನು. ಇವನ ದೃಷ್ಟಿಯಲ್ಲಿ ಕಾವ್ಯವು ಶರೀರ. ಅದರಲ್ಲಿ ಆತ್ಮಾ. ರೀತಿ. ಎಂದು ಪ್ರಪ್ರಥಮವಾಗಿ ಕಾವ್ಯಕ್ಕೆ ಆತ್ಮವಾವುದೆಂದು ಹೇಳಲು ಪ್ರಾರಂಭಿಸಿದವನು. ತನ್ನ ನಿರ್ದಿಷ್ಟ ಅಭಿಪ್ರಾಯದಿಂದ ಇವನು "ಕವಿಪ್ರಿಯ"ಎನ್ನುವ ಬಿರುದನ್ನು ಗಳಿಸಿರುವನು.

7. ಉದ್ಭಟ –ಇವನು ವಾಮನನ ಸಮಕಾಲಿಕ. ಇವನಿಗೆ ರಾಜಸ್ಥಾನದಲ್ಲಿ ೧ ಲಕ್ಷ ದೀನಾರವು ಸಂಬಳವಿತ್ತೆಂದು ರಾಜತರಂಗಿಣಿಯಲ್ಲಿ ಹೇಳಿದೆ. ದಿನಾರ್ ಆಗಿನ ಕಾಲದ ನಾಣ್ಯ. ಇವನ ದೊರೆ ಜಯಾಪೀಡನು ಕಲ್ಲಟನೆಂಬ ಹೆಸರಿನಿಂದ ಗೌಡದೇಶದ ನರ್ತಕಿಯೊಬ್ಬಳಿಗೆ ಮನಸೋತು ಅವಳನ್ನು ಕರೆತಂದು ರಾಣಿಯನ್ನಾಗಿ ಮಾಡಿಕೊಂಡನೆಂದೂ. ಅವಳ ಕಲೆಯಿಂದ ಉತ್ತೇಜಿತನಾಗಿ ಉದ್ಭಟನಿಗೆ ಒಂದು ಅಂಲಕಾರ ಶಾಸ್ತ್ರವನ್ನು ಬರೆಯುವಂತೆ ಹೇಳಿದನೆಂದೂ ಹೇಳಲಾಗಿದೆ. ಆನಂದವರ್ಧನನು ಇವನನ್ನು ಪೂಜ್ಯತೆಯಿಂದ ಕಂಡಿರುವನು. ಇವನ ಕಾವ್ಯಾಲಂಕಾರ ಸಂಗ್ರಹವು ೬ ಅಧ್ಯಾಯವುಳ್ಳದ್ದು. ಇಲ್ಲಿ 41ಅಲಂಕಾರಗಳು ವರ್ಣಿತಗಳಾಗಿವೆ. ಇವನ ಭಾಮಹವಿವರಣೆ ಎನ್ನುವ ವೃತ್ತಿಗ್ರಂಥವು ಆನಂದವರ್ಧನ. ಅಭಿನವಗುಪ್ತ ಮತ್ತು ಹೇಮಚಂದ್ರ ಇವರಿಂದ ನಮೂದಿಸಲ್ಪಟ್ಟಿದೆ ಇವನು ವೃತ್ತಿಗೆ ಆತ್ಮತ್ವವನ್ನು ಕೊಟ್ಟಿರುವನು. ಇವನೇ ಪ್ರಪ್ರಥಮವಾಗಿ ಶಾಂತಿಯನ್ನು ೯ನೇ ರಸವನ್ನಾಗಿ ಹೇಳಿರುವನು.

8. ಲೋಲ್ಲಟ –ಇವನು ಕಾಶ್ಮೀರದವನು. ಇವನ ಕಾಲ 9ನೇ ಶತಮಾನದ ಪೂರ್ವ ಭಾಗ. ಇವನು ರಸವಾದೀ. ಭರತನ ನಾಟ್ಯಶಾಸ್ತ್ರಕ್ಕೆ ವ್ಯಾಖ್ಯಾನವನ್ನು ಬರೆದಿರುವನು. ಉದ್ಭಟನನ್ನು ಪ್ರತಿಭಟಿಸಿರುವನು ಎಂದು ಅಭಿನವಗುಪ್ತನು ಅಭಿಪ್ರಾಯಪಟ್ಟಿರುವನು. ಇವನಿಗೆ ಅಭಿಧಾನವೃತ್ತಿಯೇ ಸಾಕು. ಅದಕ್ಕಾಗಿ ಮಮ್ಮಟ ಮತ್ತು ಹೇಮಚಂದ್ರ ಇವರಿಬ್ಬರೂ ಇವನನ್ನೇ ದೀರ್ಘವ್ಯಾಪಾರ ವಾದೀ ಎಂದಿರುವನು. ಇವನು ಅಪರಾಜಿತೆನ್ನುವನ ಮಗ.

9. ಶಂಕುಕ – ಇವನು ಲೋಲ್ಲಟನ ಉತ್ತರ ವಯಸ್ಸಿನಲ್ಲಿ ಪ್ರಾಯದವನು. ಇವನು ಲೋಲ್ಲಟನ ಪ್ರತಿಕಕ್ಷಿ. ನಾಟ್ಯಶಾಸ್ತ್ರಕ್ಕೆ ಇವನದೂ ವ್ಯಾಖ್ಯಾನವು ಇದೆ. ಇವನು ಆನಂದವರ್ಧನಿಗೆ ಹಿಂದಿನವನು. ಇವನ ಪದ್ಯಗ್ರಂಥವೇ "ಭುವನಾಭ್ಯುದಯ"

10. ರುದ್ರಟ – 9ನೇ ಶತಮಾನದ ಉತ್ತರ ಭಾಗದಲ್ಲಿದ್ದವನು. ಭಟ್ಟ ವಾಮುಕನ ಮಗ. ಶತಾನಂದ ಎಂದು ಇವನ ಪ್ರಸಿದ್ಧ ಹೆಸರು. ಇವನ ಗ್ರಂಥ ಕಾವ್ಯಾಲಂಕಾರ. ಇದು 16 ಅಧ್ಯಾಯವುಳ್ಳದ್ದು. ಇವನು ವಕ್ರೋಕ್ತಿಯನ್ನು ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳಲ್ಲಿ ಸೇರಿಸಿರುವನು. ಅರ್ಥಾಲಂಕಾರವನ್ನು ವಾಸ್ತವ, ಔಪಮ್ಯ, ಅತಿಶಯ ಮತ್ತು ಶ್ಲೇಷ್ಮ –ಎಂದು 4 ಭಾಗಗಳಾಗಿ ವಿಮರ್ಶಿಸಿರುವನು. ಇವನ ಮತ್ತೊಂದು ಗ್ರಂಥವಾದ ಶೃಂಗಾರತಿಲಕ ಮೂರು ಭಾಗದಲ್ಲಿದೆ. ಇದರ ರೀತಿ, ರಸವು ನಾಟಕಗಳಲ್ಲಿ ಇರುವುದಕ್ಕಿಂತಲೂ ಶ್ರವ್ಯಕಾವ್ಯಗಳಲ್ಲಿ ಹೇಗಿರಬೇಕೆಂದು ವರ್ಣಿಸಿರುವನು. ಮುಂದಿನ ಅಲಂಕಾರಿಕರಿಗೂ ಕವಿಗಳಿಗೂ ಇದು ಗೌರವ ಗ್ರಂಥವಾಗಿದೆ.

## ೧೧೫. ಪ್ರಥಮಪರ್ವದ ಸಾಮೂಹಿಕ ಸಮೀಕ್ಷೆ

ಅಗ್ನಿಪುರಾಣ, ಮೇಧಾವಿ ಮತ್ತು ಧರ್ಮಕೀರ್ತಿಯ ಹಿನ್ನೆಲೆಯಲ್ಲಿ ಭರತನ ನಾಟ್ಯಶಾಸ್ತ್ರದ ಆದರ್ಶದ ಮೇಲೆ ಭಾಮಹನು ತನ್ನ ಮನೋಧರ್ಮಕ್ಕೆ ಅನುಗುಣವಾಗಿ ಅಲಂಕಾರಶಾಸ್ತ್ರಕ್ಕೆ ಒಂದು ಪೀಳಿಗೆಯನ್ನು ಕಾವ್ಯದ ಆಧಾರದ ಮೇಲೆ ಹೇಳುವುದಕ್ಕಿಂತಲೂ, ಪ್ರಮಾಣಬದ್ಧವಾಗಿ, ಅಲ್ಲಿಯವರಿಗೆ ಬೆಳೆದು ಬಂದಿದ್ದ ಪಾರಮಾರ್ಥಿಕ ದೃಷ್ಟಿಯಲ್ಲಿ ತೊಯ್ದು ಮನಸ್ಸಿನಿಂದ ವಿಮರ್ಶಿಸಿರುವುದರಲ್ಲಿ ಭಾಮಹನೇ ಮೊದಲಿಗನು. ಬೌದ್ಧರ ಮೂಲತತ್ತ್ವೋಪದೇಶವು ಅಂದರೆ 'ಸರ್ವ ಸ್ವಲಕ್ಷಣಂ, ಸರ್ವ ದುಃಖಿ, ಸರ್ವಂ ಶೂನ್ಯಂ; ಎನ್ನುವ ಬುದ್ಧನ 4 ಉಪದೇಶಗಳು ಭಾಮಹನಲ್ಲಿಗೆ ಶಾಸ್ತ್ರೀಯವಾಗಿ ಚಿಂತಿಸಲ್ಪಟ್ಟು" ಲಂಕಾವತಾರ" ಮೊದಲಾದ ಗ್ರಂಥಗಳು ಬೌದ್ಧ ಸಿದ್ಧಾಂತ ಗ್ರಂಥಗಳಾಗಿದ್ದವು. ಮಾನವನು ಸ್ವಭಾವವಾದವನ್ನು ಚೆನ್ನಾಗಿ ಅರಿತು ಕ್ಷಣಿಕ ಪ್ರಪಂಚದಿಂದ ದೂರವಾಗಿ ಸರಿದು, ಮನಸ್ಸನ್ನು ನಿರ್ಲಿಪ್ತವಾಗಿಸಿಕೊಂಡರೆ ಬೋಧಿಸತ್ವನಾಗುವನೆನ್ನುವ ಬೌದ್ಧಸಿದ್ಧಾಂತವು ಭಾಮಹನಿಗೆ ಕಾವ್ಯಚಿಂತನದಲ್ಲೂ ದಾರಿಕೊಟ್ಟಂತಿದೆ. ಉಕ್ತಿಯು ಜೀವನದಲ್ಲಿ ಸ್ವಾಭಾವಿಕವಾಗಿರುವುದಕ್ಕಿಂತಲೂ ಪರಿಷ್ಕರಿಸಲ್ಪಟ್ಟರೆ ಅಂದರೆ ತನ್ನ ಸ್ವಾಭಾವಿಕತೆಯನ್ನು ಬಿಟ್ಟರೆ ಅರ್ಥಾತ್ ವಕ್ರವಾದರೆ ಆಗಲೇ ಬೌದ್ಧಸಿದ್ಧಾಂತದಲ್ಲಿ ಶಾಂತಿ ದೊರಕುವುದು. ಹಾಗೆಯೇ ಕಾವ್ಯದಲ್ಲಿ ಆಹ್ಲಾದವು ತೋರುವುದು ಎನ್ನುವುದೇ ಭಾಮಹನ ಮೂಲ ಮನೋವೃತ್ತಿಯಾದಂತಿದೆ.

ಅಲಂಕಾರವು ಕಳಚಿಬಿಡಲು ಸಾಧ್ಯವಾದ ಆಭರಣ. ವಕ್ರೋಕ್ತಿಯು ಹಾಗೆ ಗುಣವು ಹಾಗಲ್ಲ. ಇದು ನೀರಂಧ್ರ ಸಂಶ್ಲೇಷದಲ್ಲಿರುವ ಆಭರಣ. ಜ್ಞಾನವು ಆತ್ಮಗುಣವಾಗಿರುವುದರಿಂದ ಕಾವ್ಯದಿಂದ ಬರುವ ಆಹ್ಲಾದವು ಆತ್ಮಗುಣವಾಗುತ್ತದೆ. ಇದು ವೇದಾಂತ ದೃಷ್ಟಿ ಬೌದ್ಧ ದೃಷ್ಟಿಯಿಂದ ಕಾವ್ಯಾಲಂಕಾರವೇ ವಕ್ರೋಕ್ತಿ ಭಾಮಹನಿಗೆ. ಬ್ರಾಹ್ಮಣನಾದ ದಂಡಿಗೆ ವಕ್ರೋಕ್ತಿ ಎನ್ನುವುದಕ್ಕಿಂತಲೂ ಗುಣವೆನ್ನುವುದು ಹಿತವಾಗಿ ಕಂಡುಬಂದಿದೆ. ಗುಣಬೇರೆ. ಅಲಂಕಾರ ಬೇರೆ ಇವೆರಡೂ ರೀತಿಗೆ ಅಧೀನ ಎಂದರೆ ಕಾವ್ಯಾತ್ಮಾ ರೀತಿಯಾದರೆ ಅದಕ್ಕೆ ಗುಣ ಮತ್ತು ಅಲಂಕಾರ ಎರಡೂ ಸೇರಿದರೆ ಸುಂದರವಾಗುತ್ತದೆ ದಂಡಿಯಕಾಲಕ್ಕೆ ಅದ್ವೈತ ಸಿದ್ಧಾಂತದ ಮೂಲಾಕಾರವು ಸಿದ್ಧವಾಗಿತ್ತೆನ್ನ ಬಹುದು. ಗೌಡಪದರ ಅಥವಾ ಗೋವಿಂದಾಚಾರ್ಯರ ಉಪದೇಶಗಳು ಇವನಿಗೆ ಲಭ್ಯವಾಗಿರಬೇಕು. ಅದರ ಬಲದಿಂದ ಗುಣವನ್ನು ಅಲಂಕಾರಕ್ಕೆ ಭಿನ್ನವಾಗಿ ತಿಳಿಯಲು ಸಮರ್ಥವಾಗಿರಬಹುದು. ಅವನ ಮುಂದೆ ಬಂದ ವಾಮನನು ಸ್ಪಷ್ಟವಾಗಿ ಗುಣಚಿಂತನೆಗಿಂತಲೂ ಆತ್ಮಚಿಂತನೆಯಲ್ಲಿ ಮನವಿಟ್ಟು ರೀತಿಯನ್ನು ಕಾವ್ಯಾತ್ಮ ಎಂದು ಹೇಳಿ ಅದರ ಲಕ್ಷಣವನ್ನು ಪರಿಷ್ಕರಿಸಿರುವನು. ಇವನು ಕಾಶ್ಮೀರದವನಾದ್ದರಿಂದ ಅವನ ಕಾಲಕ್ಕೆ ಸಿದ್ಧವಾಗಿದ್ದ ಕಾಶ್ಮೀರ ಶೈವ ಸಂಪ್ರದಾಯದ ಪ್ರತ್ಯಭೀಜ್ಞಾನವಾದವು ಇವನಿಗೆ ಕಾವ್ಯ ವಿಮರ್ಶನದಲ್ಲಿ ಬಹಳವಾಗಿ ನೆರವಾದಂತಿದೆ. ಇವನ ಸಮಕಾಲಿಕನಾದರೂ ಭಾವನಾ ಭೇದದಿಂದ ಉದ್ಭಟನು ವೃತ್ತಿಯೇ ಕಾವ್ಯಾತ್ಮಾ ಎಂದು ಸಮರ್ಥಿಸಿದನು. ಲೋಲ್ಲಟನು ಪ್ರತ್ಯೇಜ್ಞಾ. ಸಿದ್ಧಾಂತದ ಮೂಲ ತ್ವವನ್ನು ಚೆನ್ನಾಗಿ ಅರಿತಂತಿದೆ. ಸ್ವಾಭಾವಿಕ ಜೀವಿಕೆಯ ಪರಿಷ್ಕಾರದಿಂದಲೇ ಅಂದರೆ ಅಂತರ್ಗತ ಆತ್ಮ ಶಕ್ತಿಯ ಪ್ರಕಾಶದಿಂದಲೇ ಪ್ರಾಕೃತಿಕ ಜೀವನವನ್ನು ಸ್ವಾಭಾವಿಕವಾಗಿ ದಾಟಬಹುದೆನ್ನುವ ಪ್ರತ್ಯಭಿಜ್ಞಾನವಾದ ಜ್ಞಾನದೀಪ್ತಿಯು ಕಾವ್ಯದಲ್ಲಿ ಇವನಿಂದ ಅನ್ವಯಿಸಲ್ಪಟ್ಟಿದೆ. ಅಭಿಧಾವೃತ್ತಿಯೇ ಪರ್ಯಾಪ್ತವಾಗಿದೆ. ಅದೇಮೂಲಭೂತ ಶಬ್ದ ಶಕ್ತಿ. ಅದರ ವಿಸ್ತರಣದಿಂದಲೇ ಲಕ್ಷಣಾವನ್ನು ಅರ್ಥ ಮಾಡಿಕೊಳ್ಳಬಹುದು. ಧ್ವನಿಯು ಈ ಅಭಿಧಾವೃತ್ತಿಯ ಅಲೌಕಿಕಾಕಾರ ಮತ್ತು ಅನುಭವ ಎನ್ನಬಹುದು. ಶಂಕುಕನಿಗೆ ಇದು ಅರ್ಥವಾಗದಿರಬಹುದು. ಅದಕ್ಕಾಗಿಯೇ ಇವನು ಲೋಲ್ಲಟನನ್ನು ಪ್ರತಿಭಟಿಸಿರಬೇಕು. ಆತ್ಮವನ್ನೇ ಸ್ವೀಕಾರ ಮಾಡದ ಬೌದ್ಧ ಭಾಮಹನಿಗೆ ವಕ್ರೋಕ್ತಿಯು ಅಲಂಕಾರ ಶೂನ್ಯತೆಯಲ್ಲಿ ಕಳಚಲುಯೋಗ್ಯವಾದ ಆಭರಣ. ವಕ್ರೋಕ್ತಿ ಅನುವುದಕ್ಕಿಂತಲೂ ಅದು ರೀತಿ ಎಂದು ಹೇಳಿ ವೈದರ್ಭಿ ಮತ್ತು ಗೌಡೀ ಎರಡರನ್ನೂ ಕ್ರೂಢೀಕರಿಸಿಕೊಂಡು. ಈ ರೀತಿಗೆ ಆತ್ಮ ಗುಣತ್ವವನ್ನು ಮಾತ್ರ ಹೇಳಿರುವನು. ದಂಡೀವಾಮನ ಇವರಿಬ್ಬರಿಗೆ ಈ ರೀತಿ ಆತ್ಮವಾಯಿತು. ಉದ್ಭಟನಿಗೆ ವೃತ್ತಿಯಾಯಿತು. ಆನಂದವರ್ದನನಾದ ಮೇಲೆ ಒಂದು ಧ್ವನಿ ವಾದವನ್ನು ಖಂಡಿಸಿ, ಭಾಮಹನನ್ನೇ ಸಮಾರ್ಥಿಸಲು ಹೊರಟ ಭಟ್ಟನಾಯಕನು ಭಾಮಹನು ಹೃದಯವು ರಸಕ್ಕೆ ಪ್ರಾಧನ್ಯತೆಯನ್ನು ಕೊಟ್ಟಿದೆ ಎಂದಿರುವನು. ಒಂದು ಮಾತಿನಲ್ಲಿ ಹೇಳಿವುದಾದರೆ ಭಟ್ಟ ಗೋಪಾನಲು ಕಾವ್ಯ ಪ್ರಕಾಶದಲ್ಲಿ ಹೇಳಿರುವ ಮಾತು ಸತ್ಯಾಂಶವೆನ್ನಬಹುದು. ಅವನು ಹೇಳಿರುವ ಮಾತಿದೆ.

ಉದ್ಭಟೇನಾತಿಮ್ರೇಣ ನಾಯಕೇನೋ ಪಲಾಲಿತಃ
ಹೃದ್ಯೋ ಭಾಮಾ ಇವ ಸ್ತ್ರೀಣಾ ಮಲ್ಪಾರಂಭೋಪಿ ಭಾಮಹಃ

ರುದ್ರಟನಿಗೆ ಇದೊಂದು ಹಿಡಿಸಿದಂತಿಲ್ಲ. ಶಬ್ದಾಲಂಕಾರವೇ ಬೇರೆ. ಅರ್ಥಾಲಂಕಾರವೇ ಬೇರೆ. ಎರಡನ್ನೂ ಸೇರಿಸುವುದರಿಂದ ಕಾವ್ಯದ ರುಚಿಯೇ ಅನುಭವಕ್ಕೆ ಬರುವುದಿಲ್ಲ. ಶಬ್ದವು ಅರ್ಥವನ್ನು ಸೂಸುವಂತಿರಬೇಕೆಂದು ಸರ್ವಸಮ್ಮತವಾಗಿರುವಾಗ. ಆ ಅರ್ಥಚಿಂತನೆ ಸಾಕು. ವಾಸ್ತವಾರ್ಥಕ್ಕಿಂತಲೂ. ಔಪಮ್ಯವು ಉತ್ತಮ ಕಾವ್ಯವನ್ನು ಕೊಡಬಲ್ಲದು. ಅದಕ್ಕಿಂತಲೂ ಅತಿಶಯೋಕ್ತಿ. ಕೊನೆಯದಾಗಿ ಶ್ಲೇಷೆ. ಈ ನಾಲ್ಕು ವಿಧ ಚಿಂತನೆಯೇ ಸಾಕು ಇವನಿಗೆ. ಇದರಿಂದ ಬರುವ ಆಹ್ಲಾದವನ್ನು ಹೇಗಾದರೂ ಅರ್ಥಮಾಡಿಕೊಳ್ಳಬಹುದು ಎನ್ನುವುದರಲ್ಲಿ ಈ ವರ್ಗವು ನಿಂತಿದೆ.

## ೧೧೭. IIನೇ ಪರ್ವ

ಹಿರಿಕೆ –ವೇದ ಕಾಲದಿಂದಲೂ ಜ್ಞಾನದ ರುಚಿಯು ರಸವೆಂದೂ. ಅದರ ಅನುಭವವೇ ಆನಂದವೆಂದೂ. ಬೆಳೆದು ಬಂದುದನ್ನು ಭರತನು. ಮೊದಲು ಕಾವ್ಯದಿಂದ ನಾವು ಅಪೇಕ್ಷಿಸುವುದು ಈ ರಸವೆಂದೂ. ಈ ರಸೋತ್ಪತ್ತಿಗೆ ವಿಭಾವಾದಿಗಳೇ ಕಾರಣವೆಂದೂ ಪ್ರತಿಪಾದಿಸಿದನು. ಭಾಮಹನಿಗೆ ಈ ರಸೋತ್ಪತ್ತಿಯು ಉಕ್ತಿವೈಚಿತ್ರ್ಯದಿಂದ ಎಂದು ಕಂಡು ಬಂದು ಕಾವ್ಯದಲ್ಲಿ ಈ ಉಕ್ತಿವಕ್ರತೆಯೋ ಜೀವಿತವೆಂದನು. ಇದಕ್ಕಿಂತಲೂ ಭಾವವು ಒಳನುಗ್ಗಿ ದಂಡಿಗೆ ಕಾವ್ಯವೆನ್ನುವ ಆತ್ಮಕ್ಕೆ ಈ ವಕ್ರೋಕ್ತಿಯು ಆತ್ಮಗುಣವಾಯಿತು. ಈ ವಕ್ರೋಕ್ತಿಯು ಇವನ ರೀತಿಯಲ್ಲಿ ಶಬ್ದ ವೈಚಿತ್ರವಲ್ಲದೆ ಅರ್ಥವೈಚಿತ್ರ್ಯವೂ ಸೇರುವುದರಿಂದ ಇದರ ಹೆಸರು 'ರೀತಿ'ಯಾಯಿತು. ವಾಮನನಿಗೆ ಕಾವ್ಯವು ಶರೀರವಾಗಿ ಅದಕ್ಕೆ ಅಂತರ್ಯಾಮಿಯಾದ ಆತ್ಮಾವೇ ರೀತಿ ಆಯಿತು. ಹೀಗೆ ಭಾಮಹ. ದಂಡಿ ಮತ್ತು ವಾಮನರು ಕಾವ್ಯದ ಪ್ರಯೋಜನವನ್ನು ರಸವೆಂದು ಸ್ವೀಕರಿಸಿದರೂ ಈ ರಸಕ್ಕೆ ಹೇತುವಾದಿಗಳಾಗಿ ತಮ್ಮ ಕಾವ್ಯಸಿದ್ಧಾಂತಗಳಲ್ಲಿ ಭೇದವನ್ನು ತೋರಿಸಿಕೊಂಡರು. ಉದ್ಭಟನಿಗೆ ಈ ದ್ರಾವಿಡಪ್ರಾಣಾಯಾಮವು ಹಿಡಿಸದೆ ಶಬ್ದಾರ್ಥವು ಅಭಿಧಾ ವೃತ್ತಿಯಿಂದ ವಾಸ್ತವವಾಗಿ ಕವಿತಾತ್ಪರ್ಯ ಮತ್ತು ಪ್ರಯೋಜನವು ಹೆಚ್ಚದಂತೆಲ್ಲಾ ತನ್ನ ಅಂತ್ಯಶಕ್ತಿಯನ್ನು ತೋರ್ಪಡಿಸಿಕೊಳ್ಳುವುದರಿಂದ ಶಬ್ದಾರ್ಥ ಅಥವಾ ವೃತ್ತಿಯೇ ಕಾವ್ಯಾತ್ಮವಾಗಿ ತೋರಿತು. ರುದ್ರಟನಿಗೆ ವಾಸ್ತವಾಂಶವಾದ ಅಭಿಧಾವನ್ನು ಅತಿಶಯಾರ್ಥದಿಂದ ಬೇರೆ ಮಾಡುವುದು ಉಚಿತವಾಗಿ ಕಂಡು ಒಂದು ಈ ಅತಿಶಯಾರ್ಥವನ್ನು ಔಪಮ್ಯ. ಅತಿಶಯ ಮತ್ತೂ ಶ್ಲೇಷ ಎಂದು ಬಿಚ್ಚಿರುವನು.

ಈ ಕ್ರಮದಲ್ಲಿ ಕವಿಯ ತಾತ್ಪರ್ಯ ಮತ್ತು ಪ್ರಯೋಜನವು ಅಭಿಧಾನದಿಂದ ಲಕ್ಷಣಾ ಮತ್ತು ವ್ಯಂಜನಾ ವೃತ್ತಿಯಲ್ಲಿ ಪರಿಷ್ಕಾರ ಹೊಂದಿ ಕಡೆಗೆ ಅನ್ಯಾರ್ಥದಲ್ಲಿ ಪರ್ಯವಸಾನ ಹೊಂದುವುದೆನ್ನುವ ಭಾವನ್ನು ಪ್ರಪ್ರಥಮವಾಗಿ ಆನಂದವರ್ಧನನು ಹೊಂದಿದರೂ ಈ ಭಾವವು ಅಥವಾ ಉದ್ದೇಶವು ವೇದಕಾಲದಿಂದಲೂ ಹೃಯದದಲ್ಲಿತ್ತು ಎಂದು ತಿಳಿಸುವುದಕ್ಕಾಗಿಯೇ.

ಕಾವ್ಯಸ್ಯಾತ್ಮಾಧ್ವನಿ ರೀತಿ ಬುಧೈರ್ಯಸ್ಸಮಾನ್ನೂತ ಪೂರ್ವಃ

ಎನ್ನುವ ಮಂಗಳ ಶ್ಲೋಕದಿಂದ ತನ್ನ ಧ್ವನ್ಯಾಲೋಕವನ್ನು ಪ್ರಾರಂಭಿಸಿರುವನು.

II. ಆನಂದವರ್ಧನ –ಇವನ ಜೀವನ ಚರಿತ್ರೆ ಮೊದಲಾದವು ಮೂರನೇ ಭಾಗದಲ್ಲಿ ಬಂದಿದೆ. ಇವನ ಪ್ರಸಿದ್ಧ ಅಲಂಕಾರಗ್ರಂಥವೇ ಧ್ವನ್ಯಾಲೋಕ. ಲೋಚನವೆನ್ನುವ ವ್ಯಾಖ್ಯಾನವು ಅಭಿನವಗುಪ್ತನಿಂದ ಕೊಡಲ್ಪಟ್ಟಿದೆ. ಅಭಿನವಗುಪ್ತನು 11ನೇ ಶತಮಾನದವನು. ಇವನಿಂದ ಧ್ವನಿವಾದಕ್ಕೆ ಪೂರ್ಣಬೆಂಬಲ ಸಿಕ್ಕಿದೆ. ಇವನು "ಕಾರಿಕಾಕಾರ" "ವೃತ್ತಿಕಾರ" ಎಂದು ಬೇರೆ ಬೇರೆ ಪ್ರಯೋಗವನ್ನು ಮಾಡಿರುವುದರಿಂದ ಕಾರಿಕೆ ಮತ್ತು ವೃತ್ತಿ ಇವೆರಡೂ ಭಿನ್ನ ಕರ್ತೃಕವೆಂದು ಹೇಳಲಾಗಿದೆ. ಎಸ್ .ಕೆ. ದೇ ಜಾಕೋಬಿ (Jacobi) ಇವರಿಬ್ಬರೂ, ಆನಂದವರ್ಧನನು ವೃತ್ತಿಕಾರನೆಂದೂ, ಧ್ವನಿಕಾರನು ಬೇರೆಯಾಗಿರಬೇಕೆಂದು ಹೇಳಿ ಅದನ್ನು ಸಮರ್ಥಿಸಲು ಈ ಕಾರಣಗಳನ್ನು ಕೊಟ್ಟಿರುವರು.

1) ಕಾರಿಕೆ ಮತ್ತು ವೃತ್ತಿಯಲ್ಲಿ ವಿಷಯಭೇದವು ಕಂಡುಬರುತ್ತದೆ.

2) ಕಾರಿಕೆಯ ಅಭಿಪ್ರಾಯವು ವೃತ್ತಿಯಲ್ಲಿ ವಿಸ್ತಾರ, ಪರಿಣಾಮ ಮತ್ತು ಪರಿಷ್ಕಾರವನ್ನು ಹೊಂದಿದೆ.

3) ಎರಡಕ್ಕೂ ಕಾಲವ್ಯತ್ಯಾಸವಿರುವಂತಿದೆ

4) ಅಭಿನವಗುಪ್ತನು ಕಾರಿಕಾಕಾರಃ ಮತ್ತು ವೃತ್ತಿಕಾರಃ ಎಂದು ಭೇದವನ್ನು ಹೇಳಿರುವನು.

ಈ ಮೇಲೆ ಹೇಳಿರುವ 4 ಕಾರಣಗಳು ಸಮಂಜಸವಾಗಿರುವಂತೆ ತೋರುವುದಿಲ್ಲ. ಕಾರಿಕೆಯ ಅಭಿಪ್ರಾಯವನ್ನು ಬಿಚ್ಚುವುದೇ ವೃತ್ತಿಯ ಉದ್ದೇಶವಾಗಿರುವುದರಿಂದ ಮೊದಲಿನ ಎರಡು ಕಾರಣಗಳು ಸರಿಯಲ್ಲ. ಒಬ್ಬನೇ ಮೂಲಗ್ರಂಥವನ್ನೂ ಅದರ ವೃತ್ತಿ ಮತ್ತು ವ್ಯಾಖ್ಯಾನವನ್ನೂ ಬರೆಯುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಭಿನ್ನಕಾಲಿಕವಾಗಿರಬೇಕೆನ್ನುವ ನಿಯಮವೂ ಇಲ್ಲ. ಆನಂದವರ್ಧನನು ಅವಂತಿವರ್ಮನ ಆಸ್ಥಾನ ಪಂಡಿತನಾಗಿದ್ದನು (ಕ್ರಿ.ಶ. 856) ಪಲ್ಲಟನೂ ಅದೇ ಕಾಲದವನು. ಸ್ಪಂದಕಾರಿಕೆ ಎನ್ನುವ ಶೈವ ಸಂಪ್ರದಾಯ ಗ್ರಂಥವು ಶಿವ ಸೂತ್ರ ವ್ಯಾಖ್ಯಾನವಾಗಿದೆ. ಸ್ಪಂದಕಾರಿಕೆಯು ವಸುಗುಪ್ತನದೇ ಅಥವಾ ಕಲ್ಲಟನದೋ ಎನ್ನುವ ಸಂಶಯವಾಗಿದೆ. ಹೇಗಿದ್ದರೂ ೯ನೇ ಶತಮಾನದಲ್ಲಿ ಒಬ್ಬನೇ ಮೂಲ ಮತ್ತು ವ್ಯಾಖ್ಯಾನವನ್ನು ಬರೆಯುವ ಪದ್ಧತಿ ಇತ್ತು. ವಸುಗುಪ್ತನೋ ಅಥವಾ ಕಲ್ಲಟನೋ ಶಿವಸೂತ್ರ ಮತ್ತು ಸ್ಪಂದಕಾರಿಕೆ ಇವೆರಡನ್ನೂ ಬರೆದನು. ಸೋಮನಂದನು ಶಿವ ದೃಷ್ಟಿ ಮತ್ತು ಅದರ ವ್ಯಾಖ್ಯಾನ –ಇವೆರಡನ್ನೂ ಬರೆದನು. ಅವನ ಶಿಷ್ಯ ಉತ್ಪಲಾಚಾರ್ಯನು ವೃತ್ತಿ, ವಿವೃತಿ ಮತ್ತು ಈಶ್ವರ ಪ್ರತ್ಯಭಿಜ್ಞಾಕಾರಿಕೆ ಈ ಮೂರನ್ನೂ ಬರೆದನು. ಈ ಕಾರಣಗಳಿಂದ ಧ್ವನ್ಯಾಲೋಕ ಮತ್ತು ವೃತ್ತಿ ಇವೆರಡೂ ಒಬ್ಬನದೇ. ಭಿನ್ನಕರ್ತೃವೆನ್ನುವುದಕ್ಕೆ ಹೇಳಿರುವ ಮೂರು ಕಾರಣಗಳೂ ಸಮಂಜಸವಾಗಿಲ್ಲ.

ಇನ್ನೂ ನಾಲ್ಕನೇ ಕಾರಣ–ಉತ್ಪಲಾಚಾರ್ಯನು ವೃತ್ತಿಕಾರ ಮತ್ತು ಟೀಕಾಕಾರನೆಂದು ಒಂದೇ ಪ್ರಸಂಗದಲ್ಲಿ ಅಭಿನವಗುಪ್ತನು ಹೇಳಿರುವನು. ಇಬ್ಬರೂ ಒಂದೇ ಎನ್ನುವುದು ಅವನ ಅಭಿಪ್ರಾಯ.

ಹಾಗೆಯೇ ಕಾರಿಕಾಕಾರ ಮತ್ತು ವೃತ್ತಿಕಾರ ಎಂದು ಅವನೇ ಆನಂದವರ್ಧನನ ವಿಷಯದಲ್ಲೂ ಹೇಳಿರಬೇಕು. ಇನ್ನೂ ಪ್ರಬಲ ಕಾರಣಗಳೂ ಇವೆ.

1) ಗ್ರಂಥದ ಮಂಗಳಾಚರಣೆಯು ವೃತ್ತಿಗೆ ಬೇರೆ ಇಲ್ಲ. ಇದು ಭಿನ್ನಕರ್ತೃಕವಾಗಿದ್ದರೆ ಮಂಗಳವು ಅವಶ್ಯಕವಾಗಿ ಹೇಳಲ್ಪಡುತ್ತಿತ್ತು.

2) ವೃತ್ತಿಯನ್ನು ಓದುವಾಗ ಕೆಲಕಾರಿಕೆಗಳ ಪ್ರಸ್ತಾವನೆಯ ಕೊನೆಯಲ್ಲಿ "ಉಚ್ಯತೇ" ಎಂದಿದೆ. ಅಭಿನವನು "ಇಮತ್ ಪುರುಚ್ಯತೇ" ಎನ್ನುವ 2ನೇ ಅಧ್ಯಾಯದ 28ನೇ ಕಾರಿಕೆಯಲ್ಲಿ ಹೇಳಿರುವನು. ಇದಕ್ಕೆ ವ್ಯಾಖ್ಯಾನ ಮಾಡುವಾಗ " ಅಸ್ಮಾಭರಿತಿ ವಾಕ್ಯಶೇಷಃ" ಎಂದು ಹೇಳಿರುವನು.

3) 2ನೇ ಅಧ್ಯಾಯದ ಪ್ರಾರಂಭದಲ್ಲಿ ಲೋಚನ ವಾಕ್ಯವು ಹೀಗಿದೆ. "ವೃತ್ತಿಕಿ "ಧ್ವನಿಃ ದ್ವಿಃಪ್ರಕಾರಃ ಪ್ರಕಾಶಿತಃ "ಇದಕ್ಕೆ " ಲೋಚನವು " ಪ್ರಕಾಶಿತ ಇತಿಮ[illegible] ವೃತ್ತಿ ಕಾರೇಣ ಸತೇತಿಭಾವಃ ಎಂದಿದೆ.

4) ಧ್ವನ್ಯಾಲೋಕದ 104ರಲ್ಲಿರುವ "ತಥಾಚ" ಎನ್ನುವುದನ್ನು ವ್ಯಾಖ್ಯಾನ ಮಾಡುವಾಗ

"ಪ್ರಕ್ರಾಂತ ಪ್ರಕಾರದ್ವಯೋಪ ಸಂಭಾರಂ ತೃತೀಯ ಪ್ರಕಾರ ಸೂಚನಂ
ಚ ಏಕೇನೈವ ಯತ್ನೇನ ಕರೋಮಿತ್ಯ ತೇನಾಶಯೋನ ಸಾಧಾರಣಂ"

ಅವತರ ಪದಂ ಪ್ರಕ್ಷಿಪತಿ. ವೃತ್ತಿಕೃತ್ "ಏಕೇನೈವಯತ್ನೇನ –ಎನ್ನುವುದು ಮುಂದಿನ ಕಾರಿಕೆಗೆ ಅನ್ವಯಿಸುತ್ತದೆ. ಹೀಗೆಯೇ 82-83, 85, 105, 223, 246 ಪ್ರಕರಣಗಳಲ್ಲಿಯೂ ಇದೆ.

ಕೊನೆಯದಾಗಿ

5) ಧ್ವನ್ಯಾಲೋಕವೆನ್ನುವ ಹೆಸರು ಕಾರಿಕೆ ಮತ್ತು ವೃತ್ತಿ ಎರಡಕ್ಕೂ ಹೆಸರು –ಉದಾಹರಣೆಗಾಗಿ I,3 ಮತ್ತು 6 ನೇ ಕಾರಿಕೆಗೆ ಲೋಚನವು ಹೀಗಿದೆ –"ತತ್ರೇತಿ ದ್ವ್ಯಂಶತ್ವೇ ಸತ್ಯಪ್ರೀತ್ಯರ್ಥಃ ಪ್ರಸಿದ್ಧ ಇತಿ ವನಿತಾ ವದನೋದ್ಯಾನೇಂದೂದಯ ದಿವಲ್ಲೌಕಿಕ ಏವೇತ್ಯರ್ಥಃ ಉಪಮಾದಿಭಿಃ ಪ್ರಕಾರೈಃ ಸ ವ್ಯಾಕೃತೋ ಬಹುದೇತಿ ಸಂಗತಿಃ

ವೃತ್ತಿಯಲ್ಲಿ ಎರಡು ವಿಧ –ಅಭಿಧಾ ಮತ್ತು ಲಕ್ಷಣಾ. ದೀರ್ಘವ್ಯಾಪಾರವಾದೀ ಲೋಲ್ಲಟನನ್ನು ಬಿಟ್ಟರೆ ಆನಂದವರ್ಧನನಿಗೆ ಹಿಂದಿದ್ದವರೆಲ್ಲರೂ ಲಕ್ಷಣಾವೃತ್ತಿಯನ್ನೆ ನಾನಾರೀತಿಯಲ್ಲಿ ಯೋಜನೆ ಮಾಡಿ ವಿಮರ್ಶಿಸಿರುವರು. ಕಾವ್ಯದಲ್ಲಿ ಲಕ್ಷಣೆಯಾಗಿರುವುದು ಅತಿಶಯ ದೃಷ್ಟಿಯಲ್ಲಿ ವ್ಯಂಜನಾ ವೃತ್ತಿಯಾಗಿದೆ. ಅಸ್ತ್ರವು ಬಿಲ್ಲಿನಿಂದ ಬಿಡಲ್ಪಟ್ಟು ಬಿಡುವವರ ಕುಶಲತೆಗೆ ಅನುಗುಣವಾಗಿ

ಪ್ರಬಲವಾಗಿರುವಂತೆ ಕವಿಯು ಮಾತು ಪ್ರಬಲಾರ್ಥವನ್ನು ಕೊಟ್ಟು ಹೃದಯಕ್ಕೆ ತಾಗಿ ಭಾವವನ್ನುಂಟು ಮಾಡುತ್ತದೆ. ಕೆಲವರು ಇದನ್ನು ಕವಿ ಪ್ರಯೋಜನವೆಂದರೆ ಮತ್ತೆ ಕೆಲವರು ಕವಿತಾತ್ಪರ್ಯವೆನ್ನುವರು. ಮತ್ತೆ ಕೆಲವರು ಇಂತಹ ಭಾವನೆಗಳು ಅನುಮಾನ ಸಿದ್ಧವೆನ್ನುವರು. ಇದೊಂದು ಅಲ್ಲ. ಇದನ್ನು ಧ್ವನಿ ಎಂದಿರುವವನು ಆನಂದವರ್ಧನ. ಅಂತರ್ಗತಾರ್ಥವೇ ಧ್ವನಿ (Suggestion) ಇದೇ ಕಾವ್ಯದ ಆತ್ಮಾ. ಇವನಿಗೆ ಹಿಂದೆ ವಾಮನನು ಮಾತ್ರ ಕಾವ್ಯದ ಆತ್ಮತ್ತ್ವವನ್ನು ಚಿಂತಿಸಿರುವನು. ಭಾಮಹನು ಕಾವ್ಯದ ಆತ್ಮಾ ವಕ್ರೋಕ್ತಿ ಎಂದು ಹೇಳದಿದ್ದರೂ ಮುಂದೆ ಬಂದ ಕುಂತಕನು ತನ್ನ ವಕ್ರೋಕ್ತಿ ಜೀವಿತದಲ್ಲಿ ಹಾಗೆ ಹೇಳಿರುವನು. ಆನಂದವರ್ಧನನು ತನ್ನ ಕಾರಿಕೆಯ ಪ್ರಾರಂಭದಲ್ಲಿ ಧ್ವನಿಯು ತನ್ನ ಹಿಂದಿನ ಕಾಲದಿಂದಲೂ ಕಾವ್ಯಾತ್ಮವಾಗಿ ಸ್ವೀಕರಿಸಲ್ಪಟ್ಟಿದೆ ಎಂದು ಹೇಳಿದ್ದರೂ ಹಾಗೆ ಹೇಳಿರುವ ಗ್ರಂಥವಾದರೂ ಇಲ್ಲ. ಧ್ವನಿ ಎನ್ನುವುದಕ್ಕೆ ಅಂತರಾರ್ಥ ಎಂದು ಅಭಿಪ್ರಾಯವಾದರೆ ಅದು ಕವಿ ಹೃದಯ ಕವಿತಾತ್ಪರ್ಯ ಮತ್ತು ಕವಿ ಪ್ರಯೋಜನ ಎನ್ನಬಹುದು. ಇದರಲ್ಲಿ ಭಾವುಕತ್ವವೇ ಪ್ರಧಾನವೆಂದು ಅಭಿನವನು ಹೇಳಿರುವನು "ಭಾವುಕತ್ವಮತಿಸಮುಚಿತ ಗುಣಾಲಂಕಾರಪರಿಗ್ರಹಮಸ್ಮಾಭಿರೇವ ವಿತತ್ಯವಕ್ಷತೇ" ಎನ್ನುವ ಅವನ ಮಾತಿನಂತೆ ಇದು ಸಿದ್ಧವಾಗುವುದು. ಲಕ್ಷಣಾವಿಗೆ ಭಾವುಕತ್ವ ಸೇರಿದರೆ ಅದು ವ್ಯಂಜನೆ ಆಗುತ್ತದೆ. ಆವಂಚನೆಯು ಅತ್ಯುತ್ತಮ ರೂಪವೇ ಧ್ವನಿ. ಭಟ್ಟಲೋಲ್ಲಟನಿಗೆ ಇದು ಅಭಿಧಾವೃತ್ತಿಯ ದೀರ್ಘವ್ಯಾಪಾರ. ಭಾಮಹ ಮತ್ತು ದಂಡೀ ಇವರಿಬ್ಬರೂ ಇದನ್ನು ಸಮಸೋಕ್ತಿ. ಅಪ್ರಸ್ತುತಿ ಪ್ರಶಂಸಾ ಮತ್ತು ವ್ಯಾಜಸ್ತುತಿಯಲ್ಲಿ ಸೇವಿಸಿರುವರು. ಅಂದರೆ ಅಲಂಕಾರಾ ತರ್ಗತವೆಂದಿರುವರು ಉದ್ಭಟ ರುದ್ರಟರು ಪರ್ಯಾಯೋಕ್ತಿಯಲ್ಲೂ ವಾಮನನು ವಕ್ರೋಕ್ತಿಯಲ್ಲೂ ವಿವರಿಸಿರುವರು. ಅಂದರೆ ವಾಚ್ಯದಲ್ಲಿ ವ್ಯಂಜಿತಾರ್ಥವೂ ಅಂಗವಾಗಿ ಪರಿಗಣಿಸಲ್ಪಟ್ಟಿದೆ. ಆನಂದವರ್ಧನನು ಧ್ವನಿಯನ್ನು ವಾಚ್ಯಾರ್ಥವಿಲ್ಲದೆ ಸಹೃದಯರ ಮನಸ್ಸಿನಲ್ಲಿ ಹೊರಹೊಮ್ಮುವ ಭಾವ ವಿಶೇಷವೆಂದಿರುವು. ಇದೇ ಆತ್ಮಾ. ಮಾಧುರ್ಯ. ತೇಜಸ್ಸು ಮೊದಲಾದ ಗುಣಗಳು ಶೂರನಿಗೆ ವೀರ್ಯದಂತೆ ಆತ್ಮಕ್ಕೆ ಸೇರಿದವು. ಅಲಂಕಾರಗಳು ಆಭರಣಗಳು. ಇಂತಹ ಧ್ವನಿ ಮಮ್ಮಟನು ಸಂಗ್ರಹಿಸಿವಂತೆ ಮೂರು ರೂಪದಲ್ಲಿದೆ –ವಸ್ತು ಅಲಂಕಾರ ಮತ್ತು ರಸ ಎಂದು. ಅಭಿನವನು ಇನ್ನೂ ಸ್ವಲ್ಪ ಮುಂದಕ್ಕೆ ಹೋಗಿ ಭಾವವೇ ಪ್ರಧಾನವೆಂದೂ ಮಿಕ್ಕೆರಡೂ ಈ ಭಾವವನ್ನೇ ಅನುಸರಿಸುತ್ತಿದೆ ಎಂದೂ ಅಭಿಪ್ರಾಯ ಪಟ್ಟಿರುವನು. ಅವನನ್ನು ಅನುಸರಿಸಿ ವಿಶ್ವನಾಥನು (14ನೇ ಶತಮಾನ) ತನ್ನ ಸಾಹಿತ್ಯ ದರ್ಪಣದಲ್ಲಿ ಈ ಅಭಿಪ್ರಾಯವನ್ನೇ ಸಮರ್ಥಿಸಿರುವನು. ಇದು ಕೆಲವರಿಗೆ ಒಪ್ಪಿಗೆ ಇಲ್ಲ. ಕಾವ್ಯದ ಆಕಾರವು ಕೆಡುವುದೆನ್ನುವುದೇ ಅವರವಾದ.

ಅಲಂಕಾರಿಕರಲ್ಲಿ 2 ವಿಧ ಶಬ್ದ ಬ್ರಹ್ಮವಾದದಲ್ಲಿ ವಿಶ್ವಾಸವಿಟ್ಟಿರುವರು ಮತ್ತು ಅದಿಲ್ಲದಿರುವರು ಎಂದು. ಆನಂದವರ್ಧನನಿಗೆ ಹಿಂದೆ ಶಬ್ದಕ್ಕೆ ಮಹತ್ವವನ್ನು ಇಟ್ಟು ಆ ಉದ್ದೇಶದಿಂದಲೇ ವಕ್ರೋಕ್ತಿ. ವೃತ್ತಿ ಮತ್ತು ರೀತಿಗೆ ಕಾವ್ಯದಲ್ಲಿ ಪ್ರಥಮ ಸ್ಥಾನವನ್ನು ಕೊಡಲಾಗಿದೆ ಆನಂದವರ್ಧನನಾದ ಮೇಲೆ ಬಂದ ಕುಂತಕನೂ ಇದನ್ನೇ ಸಮರ್ಥಿಸಿ ಪ್ರಾಚೀನ ಸಂಪ್ರದಾಯಕ್ಕೆ ಮನ್ನಣೆ ಕೊಟ್ಟಿರುವನು. ಸಾಹಿತ್ಯಕ್ಕೆ ಅಸ್ತಿಕತ್ವದ ಸೊಂಕನ್ನು ತೆಗೆದು ಹಾಕುವ ಉದ್ದೇಶದಿಂದಲೋ ಎನ್ನುವಂತೆ ಆನಂದವರ್ಧನನು ಅರ್ಥಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟು, ಆ ಅರ್ಥವು ಕವಿಯ ಹೃದಯದಲ್ಲಿ ಉತ್ತಮ ಆಕಾರವನ್ನೂ ಮತ್ತು ಭಾವುಕತ್ವವನ್ನೂ ಹೊಂದುವಂತಾದರೆ ಅದು ಶಬ್ದದ ಮುಖೇನ ತಾನೇ ಹೊರ

ಹೊಮ್ಮುವುದು. ಅದಕ್ಕಾಗಿ ಕವಿ ಹೃದಯಗತ ವಿಶೇಷಾರ್ಥವೇ ಕಾವ್ಯದ ಆತ್ಮಾ ಎಂದು ಸಮರ್ಥಿಸುವಂತಿದೆ. ವಾಚ್ಯಾರ್ಥವಲ್ಲದ್ದು ಓದುಗರ ಮನಸ್ಸಿನಲ್ಲಿ ಹೊಳೆಯುವ ಅರ್ಥವೇ ಧ್ವನಿ. ಅಂದರೆ ವ್ಯಂಜನಾ ವ್ಯಕ್ತಿಯಿಂದ ಉತ್ಪನ್ನವಾಗುವ ಅರ್ಥವಿಶೇಷ ಇದರಿಂದ ಕಾವ್ಯವು ಮೂರು ಪ್ರಕಾರವಾಗುತ್ತದೆ. ಪ್ರಕಟವಾಗಿದ್ದರೆ ಧ್ವನಿ 2. ಪ್ರಕಟವಾಗಿಲ್ಲದಿದ್ದರೆ ಗುಣೀಭೂತ ವ್ಯಂಗ್ಯ ಮತ್ತು ಸ್ಫುರಣವಾಗದಿದ್ದರೆ ಚಿತ್ರ.

೧೨. ಭಟ್ಟನಾಯಕ. – ಇವನು ಆನಂದವರ್ಧನನ ಸಮಕಾಲೀನನಾದರೂ ಅವನ ಮುಪ್ಪಿನಲ್ಲಿ ಪ್ರಾಯದವನು ಅವಂತಿವರ್ಮ ಮತ್ತು ಶಂಕರವರ್ಮ – ಇವರಿಬ್ಬರ ಕಾಲವಿದು. ಇವನು ಭಾಮಹನ ಪೂಜಕನಾಗಿ ಧ್ವನಿಯನ್ನು ಖಂಡಿಸಿರುವನು. ಇವನು ಭಾಮಹಾಲಂಕಾರವೆನ್ನುವ ವ್ಯಾಖ್ಯಾನವನ್ನು ಬರೆದನೆಂದೂ ಹೇಳಲಾಗಿದೆ. ಆದರೆ ಗಣ್ಯವಾದ ಇವನ ಗ್ರಂಥವೆಂದರೆ ಹೃದಯದರ್ಪಣ. ಇದನ್ನೇ ಸಹೃದಯ ದರ್ಪಣವೆನ್ನುವುದೂ ಉಂಟು. ಅಲಂಕಾರ ಶಾಸ್ತ್ರದಲ್ಲಿ ಇವನ ಸ್ಥಾನವನ್ನು ಹೇಳುವಾಗ ಕಾವ್ಯ ಪ್ರಕಾಶ ವ್ಯಾಖ್ಯಾತಾ ಭಟ್ಟ ಗೋಪಾಲನು

ಉಪ್ಪಟೇನಾತಿನ ಷ್ಟ್ರೇಣ ನಾಯಕೇನೋಪಲಾಲಿತಃ
ಸ್ವಮ್ನ್ಯೋಭಾಮ ಇವಸ್ತ್ರೀಣಾಮುತ್ಕಾರಂ ಭೋಜಿ ಭಾಮಹಃ

ಎಂದಿರುವನು ಭಟ್ಟನಾಯಕನಿಗೆ ಕಾವ್ಯದಲ್ಲಿ ಭಟ್ಟಲೋಲ್ಲಟನಂತೆ ಅಭಿಧಾವ್ಯಕ್ತಿಯೇ ಸಾಕು. ಆದರೆ ಭಟ್ಟಲೋಲ್ಲಟನು ಅಭಿಧೆಯ ದೀರ್ಘವ್ಯಾಪಾರವನ್ನು ಹಾಡಿಸಿದರೆ. ಇವನು ಅಷ್ಟು ವಿಸ್ತಾರವಾಗಿ ಹೋಗದೇ ಬರೀ ವ್ಯಾಪಾರ ಎಂದಿರುವನು ಭಾಮಹನ ವಕ್ರೋಕ್ತಿ ಎಂದಿರುವ ಸ್ಥಾನದಲ್ಲೇ ಅಭಿಧಾನವನ್ನು ತಿಳಿದಿರುವನು ಆನಂದವರ್ಧನನು ಕವಿತಾತ್ಪರ್ಯಕ್ಕೆ ಭಾವುಕತ್ವದಿಂದ ಅಲೌಕಿಕ ರಸವಾದ ಧ್ವನಿಯು ಮುಖ್ಯವೆಂದು ಹೇಳಿದರೆ. ಭಟ್ಟನಾಯಕನಿಗೆ ಇದು ಅಲೌಕಿಕವಲ್ಲ. ಅಭಿಧಾವಿನ ಮಹಿಮೆಯೇ ಆಗಿರುವುದು ಇದೇ ಇವನ ಹೃದಯ ದರ್ಪಣ ಅಥವಾ ಸಹೃದಯರ ದರ್ಪಣ ಮುಂದೆ ಬಂದ ಮಹಿಮಭಟ್ಟನಿಗೆ (11ನೇ ಶತಮಾನ) ಇದು ದರ್ಪಣವಲ್ಲ. ಅಂದರೆ ಪ್ರತಿಬಿಂಬವನ್ನು ಉಂಟುಮಾಡುವ ಸಾಧನವಲ್ಲ ಇವನ ಖಂಡನಾ ದೃಷ್ಟಿಯಲ್ಲಿ ನೀರಸ ಭಾವವು ತೋರಿ ಇವನು ತಾನೇ ಹೇಳಿಕೊಂಡಿರುವಂತೆ ಅದೃಷ್ಟಾ ದರ್ಪಣಾಮಮುಧೀಃ ಆಗಿರುವನು. ಭಟ್ಟನಾಯಕನ ಕಾಲ 9ನೇ ಶತಮಾನ

13. ರಾಜಶೇಖರ – 9ನೇ ಶತಮಾನದ ಕೊನೆ ಭಾಗ ಮತ್ತು 10ನೇ ಶತಮಾನದ ಆರಂಭ

ಇವನು ಮರಾಠ ದೇಶದವನು ಅವಂತಿ ಸುಂದರಿ ಎನ್ನುವ ಒಬ್ಬ ಸಂಸ್ಕೃತಜ್ಞಳಾದ ಕ್ಷತ್ರಿಯ ಮಹಾಪಂಡಿತಳಾದ ರಜಪೂತರಾಜ ಕನ್ಯೆಯನ್ನು ಮದುವೆಯಾಗಿದ್ದನು. ತನ್ನ ಕಾವ್ಯ ಮಂಜರಿಯಲ್ಲಿ ಇವಳನ್ನು ಗೌರವದಿಂದ ಕಾಣುತ್ತಿರುವನು ಇವನ ತಂದೆ ರಾಜಪುರೋಹಿತನಾದ ದುರ್ದಕ ಇವನ ಮುತ್ತಾತ ಆ ಕಾಲಜಲದ ಎನ್ನುವ ಒಬ್ಬ ದೊಡ್ಡ ಕವಿ. ಅಂದರೆ ರಾಜಶೇಖರ ವಂಶವೇ

ಕವಿವಂಶ. ಈ ವಂಶಕ್ಕೆ "ಮಯೂರವರ" ವಂಶವೆನ್ನುವ ಹೆಸರಿದೆ. ಇವನು ಹಿಂದೂ ದೇಶವನ್ನೆಲ್ಲ ಪರ್ಯಟನ ಮಾಡಿ ಬಂದನು. ಇವನ ಕಾವ್ಯಮೀಮಾಂಸದಿಂದ ಈ ದೇಶ ಪರ್ಯಟನದ ಫಲವಾದ ಜ್ಞಾನ ವೈಶಾಲ್ಯವು ಕಂಡುಬರುತ್ತದೆ. ತನ್ನ ನಾಟಕಗಳಲ್ಲಿ ತಾನು ಮಹೇಂದ್ರಪಾಲ ಮತ್ತು ಮಹೀಪಾಲ ಇವರ ಕಾಲದವನೆಂದು ತೋರಿಸಿಕೊಂಡಿರುವನು. ಇವನನ್ನು ಶಂಕರ ವಿಜಯದಲ್ಲಿ ಕೇರಳ ದೊರೆ ಎಂದು ಹೇಳಲಾಗಿದೆ. ವಿಮರ್ಶಕರು ಆಲಂಕಾರಿಕ ರಾಜಶೇಖರನು, ರಾಜಶೇಖರದೊರೆಯ ಉತ್ತರಾಧಿಕಾರಿ ಅಥವಾ ಸಹೋದರನ ಮಗ ಎಂದು ಊಹಿಸಿರುವರು. ಇವನು ಭವಭೂತಿಯನ್ನೂ (7ನೇ ಶತಮಾನದ ಕೊನೆಯ ಭಾಗ ಅಥವಾ 8ನೇ ಶತಮಾನದ ಮೊದಲಿನ ಭಾಗ) ಉದ್ಭಟನನ್ನೂ (8ನೇ ಶತಮಾನ) ಆನಂದವರ್ಧನನ್ನೂ (9ನೇ ಶತಮಾನ) ನಮೂದಿಸಿರುವನು. ಆದ್ದರಿಂದ ಇವನು ಕ್ರಿ. ಶ. 900 ಅಥವಾ 10ನೇ ಶತಮಾನದ ಪ್ರಾರಂಭದಲ್ಲಿದ್ದನೆಂದು ಹೇಳಬೇಕು.

ಬಾಲರಾಮಾಯಣ ಮತ್ತು ಬಾಲಭಾರತ (ನಾಟಕಗಳು). ಕರ್ಪೂರ ಮಂಜರೀ (ಪ್ರಾಕೃತ ನಾಟಕ) ಎನ್ನುವ ನಾಟಕಗಳಿಗಿಂತಲೂ ಇವನ ಪ್ರಸಿದ್ಧ ಕಾವ್ಯ ಮೀಮಾಂಸಾ ಎನ್ನುವ ಅಲಂಕಾರ ಗ್ರಂಥ ಇದು. ಇವನ ಕವಿರಹಸ್ಯವೆನ್ನುವ ಬೃಹತ್ ಗ್ರಂಥದ ಒಂದು ಭಾಗವೆಂದು ಹೇಳಲಾಗಿದೆ. ಎ. ಬಿ. ಕೀತ್ ವಿಮರ್ಶಕನು ಇವನನ್ನು [illegible] ಹೊಗಳಿರುವನು. ಇದು ಒಂದು ದೊಡ್ಡ ಅಲಂಕಾರಶಾಸ್ತ್ರದ ಗಣಿ ಎನ್ನಬಹುದು. ನಾನಾ ದೇಶಗಳ ಭಾಷೆ, ಪ್ರಾಕೃತ, ಅಥವಾ ಸಂಸ್ಕೃತವನ್ನು ಯಾವ ದೇಶದವರು ಹೇಗೆ ಉಚ್ಚರಿಸುವರು. ಕವಿ ಶಿಕ್ಷಣ ಇದಕ್ಕೆ ಬೇಕಾದ ಸಾಧನಗಳು - ಇತ್ಯಾದಿಯಾಗಿ ಅನೇಕ ವಿಷಯಗಳನ್ನು ತಿಳಿಸಿರುವನು. ಇವನ ತನ್ನ ಹಿಂದಿನ ಆಲಂಕಾರಿಕರ ಮತ್ತು ಅಲಂಕಾರ ಶಾಸ್ತ್ರದ ನಿಘಂಟುವಾಗಿರುವನು. ಇವನು ಕಾವ್ಯವನ್ನು ಪುರುಷನನ್ನಾಗಿ ಸರಸ್ವತಿಯ ಮಗನನ್ನಾಗಿ ತಿಳಿದು ಸಾಹಿತ್ಯ ವಿದ್ಯೆಯನ್ನು ಆ ಪುರುಷನ ಪತ್ನಿಯನ್ನಾಗಿ ತಿಳಿದು ಅಲಂಕಾರ ಶಾಸ್ತ್ರವನ್ನು ವಿಮರ್ಶಿಸಿರುವನು. ಇವನು ಹಿಂದಿನ ಅಲಂಕಾರ ಶಾಸ್ತ್ರದ ರಸಾಯನ.

## ೧೪. ಧನಂಜಯ -ಧನಿಕ (974-995)

ಧನಂಜಯನು ದಶರೂಪಕದ ಕರ್ತೃ. ಇದರ ವ್ಯಾಖ್ಯಾತಾ ಧನಿಕ. ಧನಿಕನು ಧನಂಜಯನೋ ಅಥವಾ ಅವನ ತಮ್ಮನೋ ಎಂದು ಹೇಳುತ್ತಾರೆ. ಇವನು ಅಥವಾ ಇವರಿಬ್ಬರೂ ಭೋಜನ ಚಿಕ್ಕಪ್ಪ, ಮುಂಜನ ಆಸ್ಥಾನ ಪಂಡಿತ ಅಥವಾ ಪಂಡಿತರು. ಧನಂಜಯನು ಶೃಂಗಾರ ರಸವನ್ನು ಬಿಟ್ಟು ಮಿಕ್ಕ ರಸಗಳ ವಿಷಯದಲ್ಲಿ ಭರತನ ನಾಟ್ಯಶಾಸ್ತ್ರವನ್ನೇ ಅನುಸರಿಸುತ್ತಾನೆ. ಪ್ರತಿಪಾದನ ಕ್ರಮವು ಚೆನ್ನಾಗಿರುವುದರಿಂದ ಇವನ ಗ್ರಂಥವು ಕವಿಪ್ರಿಯವಾಗಿದೆ.

## ೧೫. ಅಭಿನವಗುಪ್ತ

ಇವನ ವಂಶವೇ ಒಂದು ದೊಡ್ಡ ಶೈವ ಸಂಪ್ರದಾಯದಲ್ಲಿ ಪ್ರಸಿದ್ಧವಾದ ವಂಶ. ಗಂಗಾ-ಯಮುನಾ ಮಧ್ಯೆ ಅಂತರ್ವೇದಿ ಎನ್ನುವ ಗ್ರಾಮದಲ್ಲಿ ಇವನ ಮೂಲಪುರುಷ ಅತ್ರಿಗುಪ್ತನು ಇದ್ದನು. ಅದು ಕನೂಜನ ಯಶೋವರ್ಮನ ಕಾಲ (730-740) ಕಾಶ್ಮೀರದ ಲಲಿತಾದಿತ್ಯನು (725-761) ಇವನನ್ನು ಕರೆಸಿಕೊಂಡು ಸ್ಥಾನಮಾನಗಳನ್ನು ಕೊಟ್ಟನು. ವಿತಸ್ತಾ (Jeelum) ನದೀ ತೀರದಲ್ಲಿ ಒಂದು ಅರಮನೆ ಇವನಿಗೆ ಕಟ್ಟಿಸಿಕೊಡಲ್ಪಟ್ಟಿತು. ಇವನ ವಂಶದಲ್ಲಿ 150 ವರ್ಷಗಳಾದ ಮೇಲೆ ಬಂದ ವರಹಾಗುಪ್ತನೇ ಅಭಿನವನ ತಾತ. ಚಕುಕ ಅಥವಾ ನರಸಿಂಹಗುಪ್ತನ ಅಭಿನವನ ತಂದೆ. ವಿಮಲಕಲಾ ಇವನ ತಾಯಿ. ತಂದೆತಾಯಿಗಳ ಯೋಗ ಬಲದಿಂದ ಇವನು ಹುಟ್ಟಿದ್ದರಿಂದ ಇವನು ಯೋಗಿನೀಭೂ. ಇವನು ಹುಟ್ಟಿದ್ದು ಕ್ರಿ. ಶ. 950-960 ಇವನು ಶೇಷನ ಅವತಾರವೆಂದು ಐತಿಹ್ಯವಿದೆ. ವಾಮನಗುಪ್ತನೇ ಇವನ ಚಿಕ್ಕಪ್ಪ. ಮನೋರಥ ತಮ್ಮ ಕ್ಷೇಮ ಮತ್ತು ಉತ್ಪಲ ಇವನ ಬಂಧುಗಳ ಇವನು ಚಿಕ್ಕ ಮಗುವಾಗಿದ್ದಾಗಲೇ ತಾಯಿ ಸತ್ತಳು. ತಂದೆಯು ವಿರಕ್ತನಾದ. ತಂದೆಯ ಉತ್ತ್ಪ ಆದರ್ಶದಲ್ಲಿ ಅನೇಕ ಗುರುಗಳ ಉಪದೇಶದಿಂದಲೂ. ಮತ್ತು ಇವನಕುಶಾಗ್ರ ಬುದ್ಧಿಯಿಂದಲೂ ಒಟ್ಟು 36 ಗ್ರಂಥಗಳನ್ನೂ ಬರೆದನು. ಶೈವಾಗಮ ಅಲಂಕಾರ ಮತ್ತು ವೇದಾಂತ ಈ ಮೂರು ಶಾಸ್ತ್ರಗಳಲ್ಲಿಯೂ ಇವನ ಪ್ರವೇಶವಿದೆ ಶೈವಾಗಮ ಗ್ರಂಥಗಳಲ್ಲಿ ಇವನ "ಮಾಲಿನೀ ವಿಜಯವಾರ್ತಿಕೆ. "ಯೂ ವೇದಾಂತ ಗ್ರಂಥಗಳಲ್ಲಿ "ತಂತ್ರಾಲೋಕ" ಮತ್ತು "ಈಶ್ವರ ಪ್ರತ್ಯ ಭಿಜ್ಞಾ ವಿಮರ್ಶಿನಿ"ಯೂ. ಅಲಂಕಾರ ಶಾಸ್ತ್ರದಲ್ಲಿ ಧ್ವನ್ಯಾಲೋಕ ವ್ಯಾಖ್ಯಾನ"ಲೋಚನಾ" ಮತ್ತು ಭರತನ ನಾಟ್ಯ ಶಾಸ್ತ್ರ ವ್ಯಾಖ್ಯಾನ "ಅಭಿನವ ಭಾರತಿ"ಗ್ರಂಥಗಳೂ ಪ್ರಸಿದ್ಧವಾಗಿವೆ. ಇವನು ಮೊದಲು ಶೈವಾಗಮ ಗ್ರಂಥಗಳನ್ನು ಬರೆದು ಅನಂತರ ಅಲಂಕಾರಶಾಸ್ತ್ರದಲ್ಲಿ ಪಾಂಡಿತ್ಯವನ್ನು ತೋರಿಸಿ ಕಡೆಗೆ ವೇದಾಂತಕ್ಕೆ ಇಳಿದು ಯೋಗಿಯಾಗಿ ಸಿದ್ಧನಾಗಿ ಭೈರವ ಗುಹೆಯನ್ನು ಪ್ರವೇಶಿಸಿ ಹಿಂತಿರುಗಲಿಲ್ಲ. ಕಾಶ್ಮೀರದಲ್ಲಿ ಈಗಲೂ ಈ ಭೈರವ ಗುಹೆಯನ್ನು ತೋರಿಸುವರಿರುವರು.

ಧ್ವನ್ಯಾಲೋಕಕ್ಕೆ ಇವನ "ಲೋಚನ "ಲೋಚನವಾಗಿಯೇ ಇದೆ. ಆನಂದವರ್ಧನನ ಧ್ವನಿವಾದವನ್ನು ಪೂರ್ಣವಾಗಿ ಸಮರ್ಥಿಸಿರುವನಲ್ಲದೆ ಬೆಳೆಸಿಯೂ ಇರುವನು. ಸಾಮಾನ್ಯ ಶಬ್ದಕ್ಕೂ ಕಾವ್ಯದಲ್ಲಿರಬೇಕಾದ ಶಬ್ದಕ್ಕೂ ವ್ಯತ್ಯಾಸವೇನೆಂದರೆ ಭಾವುಕತ್ವದಲ್ಲೇ ಎನ್ನುವ ಜ್ಞಾನಾಂಶವನ್ನು ಸೇರಿಸಿ ಧ್ವನಿವಾದಕ್ಕೆ ಪ್ರಕಾಶಕೊಟ್ಟಿರುವನು.

## 16. ಭೋಜ (1018-1063)

ಪರಮಾದ ವಂಶದ ದೊರೆ ಇವನು. ರಾಜಧಾನಿ ಮೊದಲು ಉಜ್ಜಯಿನಿ ಆಗಿದ್ದು ನಂತರ ಇವನಾಜ್ಞೆಯಂತೆ ಧಾರಾ ಆಯಿತು. ಇವನ ಚಿಕ್ಕಪ್ಪ ಮಂಜನು ಇವನು ಯುವರಾಜನಾಗಿದ್ದಾಗ ಇವನ ಕೊಲೆಗೆ ಅಧೀನರಾಜ ವತ್ಸರಾಜನ ಮುಖಾಂತರವಾಗಿ ಪ್ರಯತ್ನಪಟ್ಟನು. ಆ ರಾಜನು ಭೋಜನನ್ನು ರಕ್ಷಿಸಿ ಬೇರೆ ಚಿಹ್ನೆಗಳನ್ನು ತೋರಿಸಿ ಅವನನ್ನು ಕೊಂದನೆಂದು ಹೇಳಿ. ಸಾಯುವುದಕ್ಕೆ

ಮುಂಚೆ ಶೋಕದಿಂದ ಅವನು ಬರೆದು ಮುಂಜನಿಗೆ ಕೊಡಬೇಕೆಂದಿದ್ದ ಒಂದು ಶ್ಲೋಕವನ್ನೂ ಕೊಟ್ಟನು. ಆ ಶ್ಲೋಕವು ಹೀಗಿದೆ.

ಮಾಂಧಾತಾ ಚಮಹೀಪತಿಃ ಕೃತಯುಗಾಲಂಕಾರ ಭೂತೋಗತಃ

ಸೇತುರ್ಯೇನ ಮಹೋದಧೌವಿರಚಿತಃ ಕ್ವಾಸೌದಶಾಸ್ಯಾಂತಕಃ

ಅನ್ಯೇಚಾಪಿ ಯುಧಿಷ್ಠಿರ ಪ್ರಭೃತಯೋ ಯಾತಾದಿವಂ ಭೂಪತೇ

ನ್ಯೆಕೇನಾಪಿ ಸಮಂಗತಾ ವಸುಮತೀ ನೂನಂ ತ್ವಯಾಯಾಸ್ಯತಿ

ಈ ಶ್ಲೋಕವನ್ನು ಮುಂಜನು ಓದಿ ತನ್ನ ಕೃತ್ಯಕ್ಕೆ ಪರಿತಪಿಸುತ್ತಿರುವಲ್ಲಿ ಆ ಅಧೀನ ರಾಜನು ಭೋಜನನ್ನು ರಕ್ಷಿಸಿದನೆಂದು ಕೇಳಿ ಸಂತೋಷಪಟ್ಟು ಭೋಜನನ್ನು ರಾಜನನ್ನಾಗಿ ಮಾಡಿದನು. ಇವನ ಕಾಲ ಿ1018 -1063 ಇವನು ವಿದ್ಯಾವಂತನೂ ಕವಿಗಳಿಗೆ ಆಶ್ರಯದಾತನೂ ಆಗಿದ್ದನು. ಒಂದು ದೇವಸ್ಥಾನದಲ್ಲಿ ಇವನ ಸ್ಥಾಪಿಸಿದ್ದ ಸಂಸ್ಕೃತ ಪಾಠಶಾಲೆ ಇದ್ದ ಜಾಗದಲ್ಲಿ ಈಗ ಒಂದು ಮಸೀದಿ ಇದೆ. ಇವನು 350 ಚದರ ಮೈಲಿ ಅಳತೆಯ ಒಂದು ಸರೋವರವನ್ನು ಕಟ್ಟಿಸಿದನು. 15ನೇ ಶತಮಾನದಲ್ಲಿ ಇವನು ಒಬ್ಬ ಮಹಮದೀಯ ದೊರೆಯಿಂದ ಓದಿಸಲ್ಪಟ್ಟಿತು. ಇದರ ಪಾತ್ರವು ಈಗ ಫಲವತ್ತಾದ ಭೂಮಿಯಾಗಿದೆ. ಇವನ ಕೀರ್ತಿಯನ್ನು ಬೆಳಗಲು ಭೋಜಪ್ರಬಂಧವೆನ್ನುವ ಗ್ರಂಥವು ಬರೆಯಲ್ಪಟ್ಟಿತು. ಮೇರುತುಂಗ. ರಾಜವಲ್ಲಭ. ವತ್ಸರಾಜ. ಸಭಾಶೀಲ. ಪದ್ಮಗುಪ್ತ ಇವರೆಲ್ಲರೂ ಬರೆದಿರುವರು. ಇವನ ಬರೆದ ಗ್ರಂಥಗಳು.

1) ರಾಮಾಯಣ ಚಂಪು-ಇದು ಈಗ ಲಭ್ಯವಾಗಿರುವಂತೆ ಕಿಷ್ಕಿಂದಾ ಕಾಂಡದವರೆಗೆ ಇದೆ. ಯುದ್ಧ ಕಾಂಡವನ್ನು ಲಕ್ಷ್ಮಣ ಕವಿಯು ಸೇರಿಸಿದನು. ಉತ್ತರ ಚಂಪುವನ್ನು ವೆಂಕಟಾಧ್ವರಿಯು ಬರೆದನು. ಇದು ಹೀಗೆ ಹೇಳಿರುವನು.

ಶ್ರೀಭೋಜ ಲಕ್ಷ್ಮಣ ಕವೀಂದ್ರ ಕೃತೆಪ್ರಬಂಧೇ
ಲಗ್ನಂದ ಚೋಲ್ಪಮಪಿಮೇ ಭವಿತಾ ರಸಾಢ್ಯಂ

2) ಸರಸ್ವತೀ ಕಂಠಾಭರಣಂ -ಇದರಲ್ಲಿ 5 ಅಧ್ಯಾಯಗಳಿವೆ. ಕಾವ್ಯದ ಗುಣ ದೋಷಗಳು. ಅಲಂಕಾರಗಳು ಮತ್ತೂ ರಸಗಳು ಹೇಳಲ್ಪಟ್ಟಿವೆ.

3) ಶೃಂಗಾರ ಪ್ರಕಾಶ - ಇದನ್ನು ಹೇಮಚಂದ್ರ ಮತ್ತು ಶಾರದಾತನಯ ಇವರಿಬ್ಬರೂ ಬಹಳವಾಗಿ ಉಪಯೋಗಿಸಿಕೊಂಡಿರುವರು. ಇದರಲ್ಲಿ 36 ಪ್ರಕಾಶ (ಅಧ್ಯಾಯ) ಗಳಿವೆ. ಕೊನೆಯ 24 ಅಧ್ಯಾಯಗಳು ರಸಕ್ಕಾಗಿ ಮಿಸಲಾಗಿವೆ. ಮೊದಲಿನ 8ರಲ್ಲಿ ವ್ಯಾಕರಣ

ಬೆಳಕಿನಲ್ಲಿ ವ್ಯಕ್ತವಾಗುವಂತೆ ಕವಿಹೃದಯವು ಕಾವ್ಯದಲ್ಲಿ ವ್ಯಕ್ತವಾಗುತ್ತದೆ. ಇವನು ಭಟ್ಟನಾಯಕನ ಹೃದಯ ದರ್ಪಣವನ್ನು ನೋಡಿಲ್ಲ. ಕೀರ್ತಿಗಾಗಿಯೇ ತನ್ನ ಗ್ರಂಥವನ್ನೂ ಬರೆದನೆಂದು ಚೆನ್ನಾಗಿ ಅವನ ಮಾತಿನಿಂದಲೇ ತೋರುತ್ತದೆ.

ಅನ್ಯೈರನು ಲಿಖಿತ ಪೂರ್ವಮಿದಂ ಬ್ರುವಾಣೋ
ನೂನಂ ಸ್ಮೃತೇರ್ವಿಷಯತಾಂ ವಿದುಷ ಮುಪೇಯಾಂ
ಹಾಸ್ಯೈಕ ಕಾರಣಗವೇಷಣಯಾ ನವಾರ್ಥ
ತತ್ತ್ವಾವಮರ್ಶ -ಪರಿತೋಷ ಸಮೀಹಯಾ ವಾ

೨೦. ಮಮ್ಮಟ - 11ನೇ ಶತಮಾನದ ಉತ್ತರ ಭಾಗ

ಇವನು ಜಯ್ಯಟನ ಮಗ ಕಾಶ್ಮೀರವಾಸೀ. ವಾರಣಾಸಿಯಲ್ಲಿ ವಿದ್ಯಾಭ್ಯಾಸ. ಭೋಜನ ಉತ್ತರ ವಯಸ್ಸಿನ ಕಾಲದವನು ಶಿವಭಕ್ತ. ಒಳ್ಳೆ ವೈಯ್ಯಾಕರಣಿ. ಇವನ ಪ್ರಸಿದ್ಧ ಗ್ರಂಥವೇ ಕಾವ್ಯಪ್ರಕಾಶ 10 ಉಲ್ಲಾಸವುಳ್ಳ ಇದಕ್ಕೆ ಆಕರ ಎನ್ನುವ ಹೆಸರೂ ಇದೆ ಅಲಂಕಾರ ಶಾಸ್ತ್ರದ ವಿಸ್ತಾರವು ಇದರಲ್ಲಿದೆ. ಇದು ಬಂದ ಮೇಲೆ ಹಿಂದಿದ್ದ ಎಲ್ಲಾ ಅಲಂಕಾರ ಗ್ರಂಥಗಳೂ ಪ್ರಧಾನ ಪಠ್ಯಪುಸ್ತಕವಾಗಿ ನಿಲ್ಲಲಿಲ್ಲ. ಈ ಗ್ರಂಥವು ಮಮ್ಮಟ ಮತ್ತು ಅಲ್ಲಟ ಇಬ್ಬರೂ ಸೇರಿ ಬರೆಯಲ್ಪಟ್ಟಿತ್ತೆನ್ನುವರು. ಇದಕ್ಕೆ ಅನೇಕ ವ್ಯಾಖ್ಯಾನಗಳಿವೆ 1. ಮಾಣಿಕ್ಯಚಂದ್ರ (1160) 2. ಸರಸ್ವತೀ ತೀರ್ಥ (1242). 3. ಜಯಂತ ಭಟ್ಟ (1277-1297) 4. ಸೋಮೇಶ್ವರ (14ನೇ ಶತಮಾನ), 5. ವಿಶ್ವನಾಥ (14ನೇ ಶತಮಾನ. 6) ಚಕ್ರವರ್ತಿ (15ನೇ ಶತಮಾನ ) 7. ಮಾಹೇಶ್ವರ (17ನೇ ಶತಮಾನ) 8. ಆನಂದ ರಾಜಾನಕ (18 ನೇ ಶತಮಾನ ). ಇತ್ಯಾದಿಯಾಗಿ ಅನಂತಾನಂತ ವ್ಯಾಖ್ಯಾನಗಳಿಂದ ಇವನ ಗ್ರಂಥವು ಅಲಂಕಾರ ಶಾಸ್ತ್ರದಲ್ಲಿ ಪ್ರಧಾನವಾಗಿದೆ. ತನ್ನ ಹಿಂದಿದ್ದ ಎಲ್ಲಾ ಅಲಂಕಾರವಾದಿಗಳನ್ನು ಕ್ರೋಢೀಕರಿಸಿ ಕೊನೆಗೆ ಯಾವುದನ್ನೂ ಅತ್ಯಂತಿಕವಾಗಿ ದೂಷಿಸಿದೆ. ಪರಸ್ಪರ ಸಂಬಂಧವನ್ನು ಕಲ್ಪಿಸಿ ಎಲ್ಲಾ ವಾದಕ್ಕೂ ಸ್ಥಾನ ಕೊಟ್ಟಿರುವನು

## ೧೦೨. II. ಪರ್ವದ ಸಾಮೂಹಿಕ ಸಮೀಕ್ಷೆ.

ಆಲಂಕಾರಿಕರಲ್ಲಿ ಸಾಮಾನ್ಯವಾಗಿ ಎಲ್ಲರೂ ಒಳ್ಳೆ ವೈಯಾಕರಣರೆನ್ನುವ ಸತ್ಯಾಂಶವನ್ನು ಮರೆಯದಿದ್ದರೆ ಅಲಂಕಾರ ಶಾಸ್ತ್ರವು ಬೆಳೆದಿರುವ ಚಿದಾಕಾಶದಲ್ಲಿ ಎರಡು ನಿರ್ದಿಷ್ಟ ಪ್ರವಾಹವು ಗೋಚರವಾಗುತ್ತದೆ. ಪದಶಕ್ತಿಯಿಂದ ಅರ್ಥಶಕ್ತಿ, ಅದೂ ಅಂತ್ಯದಲ್ಲಿ ಶೂನ್ಯದಲ್ಲಿ ಪರ್ಯವಸಾನವನ್ನು ಹೊಂದುತ್ತದೆನ್ನುವ ಬೌದ್ಧರ ವಾದವನ್ನು ವಿಚಾರ ಮಾಡಿ ವರ್ತಾಕ್ಷ ಮತ್ತು ಔದುಂಬರಾಯಣರು ಪರಿಣಾಮವಾದಕ್ಕೆ ಒಂದು ನಿರ್ದಿಷ್ಟ ರೂಪವನ್ನು ಕೊಟ್ಟಿರುವರು. ಔದುಂಬರಾಯಣರ ಇವರೇ ಸ್ಫೋಟವಾದ ಕ್ರಿ. ಪೂ 150ರ ಪಾತಂಜಲಯೋಗ ಸೂತ್ರದ " ಕ್ರಮಾನ್ಯತ್ವಂ ಪರಿಣಾಮಾನ್ಯತ್ವೇ ಹೇತುಃ "ಎನ್ನುವ ಸೂತ್ರದಿಂದ ಪರಿಣಾಮ ಹೊಂದುತ್ತಿರುವ ಒಂದು ಪದಾರ್ಥವು ತನ್ನ ಮೂಲರೂಪಕ್ಕಿಂತಲೂ ಬೇರೆಯಾಗಿ ಕಾಣುವಂತಾಗಿ ಬೇರೆ ವಸ್ತುವಾಗಿಯೂ ಆಗಬೇಕಾದರೆ ಅದು

ತನ್ನ ಪೂರ್ವಸ್ವರೂಪವನ್ನೇ ಬಿಡಬೇಕು. ಅಂದರೆ ಅದು ವಿವರ್ತವಾಗಬೇಕು. ವಿವರ್ತದಿಂದ ಬೇರೆಯಾದ ವಸ್ತುವು ಮತ್ತೆ ಪರಿಣಾಮ ಹೊಂದುತ್ತಾ ಹೋಗುತ್ತದೆ. ಇದನ್ನೇ ಕ್ರಮಾನ್ಯತ್ವಂ ಎಂದು ಸೂತ್ರದದಲ್ಲಿ ಹೇಳಿದೆ. ಉದಾಹರಣೆಗೆ ಕಬ್ಬಿಣ. ಉಕ್ಕು, ಸ್ಟೈನ್‌ಲೆಸ್‌ಸ್ಟೀಲ್ ಇತ್ಯಾದಿ. ಅಂದರೆ ಪರಿಣಾಮದ ಒಂದು ಪರ್ವಭೇದವೇ ವಿದರ್ತ. ವಿವರ್ತವು ಪರಿಣಾಮದ ಎರಡನೇ ಮತ್ತು ಮುಂದಿನ ಪರ್ವಕ್ಕೆ ಹೇತು. ಔದಂಬರಾಯಣರ ಪರಿಣಾಮವಾದದಲ್ಲಿ ವಿವರ್ತವೂ ಸೇರಿದೆ ಆದರೆ ಮುಂದೆ ಭರ್ತೃಹರಿಯು ತನ್ನ ವಾಕ್ಯ ಪದಿಯಲ್ಲಿ, ಮಂಡನಮಿಶ್ರಯ ತಮ್ಮ ವಿಧಿವಿವೇಕದಲ್ಲಿ ವಿವರ್ತವನ್ನು ಪರಿಣಾಮದಿಂದ ಬ್ರಹ್ಮಸೂತ್ರ ಬೇರ್ಪಡಿಸಲು ಪ್ರಯತ್ನಿಸಿರುವರು. ಆದರೆ I,4, 17ರ ಅದ್ವೈತ ಭಾಮತಿಯಲ್ಲಿ ಪರಿಣಾಮವೆಂದರೆ ವಿವರ್ತವೆಂತಲೂ II, 2, 1 ರ ರಾಮಾನುಜ ಭಾಷ್ಯದಲ್ಲಿ ವಿವರ್ತವೆಂದರೆ ಪರಿಣಾಮವೆಂತಲೂ ಹೇಳಿದೆ

ಈ ರೀತಿಯ ಭಾಷ್ಯಭೇದವು ಅಲಂಕಾರ ಶಾಸ್ತ್ರಕ್ಕೆ ಅನ್ವಯಿಸಲ್ಪಟ್ಟು ಅದು ಶಾಖೋಪಶಾಖೆಯಾಗಿ ಬೆಳೆಯಲು ಅವಕಾಶವಾಯಿತು ಕೇವಲ ಪರಿಣಾಮವಾದದ ಸರಣಿಯಲ್ಲಿ I ಪರ್ವರು ಕಾವ್ಯ ಸ್ವರೂಪವನ್ನೂ ವಿಮರ್ಶಿಸಿದೆ. II ಪರ್ವದಲ್ಲಿ ಧ್ವನಿಯನ್ನು ಕಾವ್ಯಾತ್ಮಾ ಎಂದು ಕೆಲವರು ( ಆನಂದವರ್ಧನ. ಅಭಿನವಗುಪ್ತ ಪ್ರಭೃತಿಗಳು) ವಾದಿಸಿದರೆ ಮತ್ತೆ ಕೆಲವರು ( ಅಂದರೆ ಭಟ್ಟನಾಯಕ. ಧನಂಜಯ. ಧನಿಕ. ಕುಂತಕ ಮೊದಲಾದವರು) ಧ್ವನಿಯನ್ನು ರಸಾಂತರ್ಗತವಾಗಿಯೂ ಅಲಂಕಾರಾಂತರ್ಗತವಾಗಿಯೂ ತಿಳಿದು ಹೇಳಿ ಪರಿಣಾಮೈಕತ್ವವಾದವನ್ನೆ ಸಮರ್ಥಿಸಿರುವರು ಮಹಿಮಭಟ್ಟನ ದಾರಿಯೇ ಬೇರೆ. ಪರಿಣಾಮವಾದವು ಸತ್ಕಾರ್ಯವಾದರೆ. ಇವನದು ಅಸತ್ಕಾರ್ಯವಾದ ಅಂದರೆ ಪರಿಣಾಮ ಮತ್ತು ವಿವರ್ತ ಇವೆರಡು ಭಾವವು ಅಲಂಕಾರಶಾಸ್ತ್ರದಲ್ಲಿ, ಇವನ ದೃಷ್ಟಿ ಕೋನವನ್ನು ಕಲ್ಪಿಸಿಲ್ಲ. ಇವನನ್ನು ರಸೋತ್ಪತ್ತಿವಾದೀ ಎಂದು ಹೇಳಬಹುದು ಅದು ತಾರ್ಕಿಕರಂತೆ ಅದೇ ಅವನ ವ್ಯಕ್ತಿತ್ವ. ಮಮ್ಮಟನು ಪರಿಣಾಮ ಮತ್ತು ವಿವರ್ತವಾದ ಎರಡನ್ನೂ ಸಮನ್ವಯ ಮಾಡಿರುವನು. ಮಹಿಮ ಭಟ್ಟನ ಮತವು ಯಾರಿಗೂ ಹಿತವಿಲ್ಲ. ಯಾವ ಪ್ರಜೆಯು ಇಲ್ಲದ ರಾಜ್ಯಕ್ಕೆ ಇವನೊಬ್ಬನೇ ರಾಜ. ಇವನು ಏಕಾಧಿಪತ್ಯ ಇವನ ಸ್ಮೃತಿಯು ಎರಡನೇ ಪರ್ವದಲ್ಲಿ ಸ್ವಲ್ಪ. ಉಳಿದಿದ್ದರೂ ಮೂರನೇ ಪರ್ವದಲ್ಲಿ ಇವನು ನಾಮಶೇಷವಿಲ್ಲದಂತಾಗಿರುವನು

## ೧೦೮. IIIಪರ್ವ -ಪೀಠಿಕೆ

ಧ್ವನಿವಾದವನ್ನು ಆನಂದವರ್ಧನನಿಗೆ ಮುಂದೆ ಬಂದವರಲ್ಲಿ ಅನೇಕರು ಒಪ್ಪಲಿಲ್ಲ. ರಸಾಭಿಮಾನಿಗಳಾಗಿಯೇ ಉಳಿದಿದ್ದರು. ಉದ್ಭಟ ಗ್ರಂಥಕ್ಕೆ ಪ್ರತಿಹಾರೇಂದು ರಾಜನು ಲಘುವೃತ್ತಿಯನ್ನು ಬರೆದು ಧ್ವನಿಯು ಸ್ನೇಹ. ರಸವತ್. ಪರ್ಯಾಯೋಕ್ತಿ ಮೊದಲಾದ ಅಲಂಕಾರಗಳಲ್ಲಿ ಅಂತರ್ಗತವಾಗಿದೆ ಎಂದಿರುವನು. ಇವನಿಗೆ ರಸವೇ ಕಾವ್ಯಾತ್ಮಾ. ಭಾಮಹನಿಗೆ ರಸವು ಅಲಂಕಾರದಲ್ಲಿ ಸೇರಿದೆ ಎನ್ನುವುದೂ ಒಪ್ಪಿಗೆ ಇಲ್ಲ. ಬ್ರಾಹಮನ ಪೂಜಕವಾದ ಭಟ್ಟನಾಯಕನು ಭರತನ ಅವಿಚ್ಛಿನ್ನ ಭಕ್ತನಾಗಿಯೂ ಇದ್ದು ಅಭಿದಾವೃತ್ತಿಯಲ್ಲಿ ಭಾವುಕತ್ವ ಮತ್ತು ಭೋಜಕತ್ವವು ಸೇರಿದರೆ ಅದೇ ಮುಖ್ಯವಾಗುವುದೆ ಎಂದು ಅಭಿಪ್ರಾಯಪಟ್ಟಿರುವನು. ಭೋಜನಿಗೆ ಕಾವ್ಯದಲ್ಲಿ ಗುಣ. ಅಲಂಕಾರ ಮತ್ತು ರಸವಿದ್ದರೆ ಸಾಕು. ಧನಂಜಯ ಮತ್ತು ಧನಿಕ ಇವರಿಬ್ಬರೂ ಧ್ವನಿವಾದವನ್ನು ಒಪ್ಪಲ್ಲ. ತಾತ್ಪರ್ಯ ಶಕ್ತಿ, ವಿವಕ್ಷಾ ಮತ್ತು ಅರ್ಥಜ್ಞಾನ. ಇವೆಲ್ಲವೂ ಒಟ್ಟುಗೂಡಿ ಪ್ರೇಕ್ಷಕನಲ್ಲಿ ಮತ್ತು

ಓದುಗರಲ್ಲಿ ರಸವನ್ನು ಉತ್ಪತ್ತಿ ಮಾಡುತ್ತದೆ. ಇದು ಧ್ವನಿ ಅಲ್ಲ. ವ್ಯಂಜನಾವೃತ್ತಿಯೂ ಅಲ್ಲ. ಧನಿಕನ ರೀತಿಯಲ್ಲಿ ಕಾವ್ಯಕ್ಕೂ ರಸಕ್ಕೂ ಭಾವ್ಯ ಭಾವಕತ್ವ ಸಂಬಂಧವಿದೆ. ವ್ಯಂಗ್ಯ ವ್ಯಂಜನಕ್ಕೆ ಭಾವವಲ್ಲ. ಇದು ನೈಯಾಯಿಕರ ಅಂದರೆ ಮಹಿಮಭಟ್ಟನ ಜನ್ಯಜನಕ ಭಾವವೂ ಅಲ್ಲ. ಧನಂಜಯನಿಗೆ ಶಾಂತವು ರಸವಲ್ಲ.

ಇಷ್ಟು ಪ್ರತಿಭಟನೆ ಇದ್ದರೂ ಅಭಿನವಗುಪ್ತನ ಕೈಯಲ್ಲಿ ಧ್ವನಿವಾದಕ್ಕೆ ಪೂರ್ಣ ಬೆಂಬಲ ಸಿಕ್ಕಿತು. ವಿದ್ಯಾಧರನು ಭಾಮಹ ಮೊದಲಾದವರನ್ನು ಖಂಡಿಸಿರುವನು. ಮಮ್ಮಟನು ಧ್ವನಿವಾದಕ್ಕೆ ಪೂರ್ಣ ಬೆಂಬಲ ಕೊಟ್ಟರೂ ಹಿಂದಿನವರ ಅಭಿಪ್ರಾಯಗಳಿಗೆ ಮನ್ನಣೆ ಕೊಟ್ಟು ಇದಕ್ಕೆ ಅಂಗವಾಗಿ ಅಲಂಕಾರ ಮತ್ತು ರಸಕ್ಕೆ ಸ್ಥಾನ ಕೊಟ್ಟಿರುವರು. ಭಾಮಹನ ವಕ್ರೋಕ್ತಿ ಇವನಲ್ಲಿ ಪ್ರೌಢೋಕ್ತಿ.

## ೨೧. ಹೇಮಚಂದ್ರ –ಕ್ರಿ. ಶ. 1088–1174

ಅಹಿಲ್ವಾಡ್ ಜಯಸಿಂಹನ ಆಸ್ಥಾನ ಪಂಡಿತ. ಇವನ ಗ್ರಂಥದ ಕಾವ್ಯಾನುಶಾಸನ. 8 ಅಧ್ಯಾಯವುಳ್ಳದ್ದು ಅವನದೇ ವ್ಯಾಖ್ಯಾನವಿದೆ.

## ೨೨. ವಾಗ್ಭಟ ಕ್ರಿ. ಶ. 1094–1143

ಸೋಮನ ಮಗ. ಚಾಲುಕ್ಯದೊರೆ ಜಯಸಿಂಹನ ಸಿದ್ಧರಾತನ ಮಂತ್ರಿ. ಇವನ ಗ್ರಂಥ ವಾಗ್ಭಟಾಲಂಕಾರ –5 ಅಧ್ಯಾಯವುಳ್ಳದ್ದು.

## ೨೩. ರುಯ್ಯಕ ಕ್ರಿ. ಶ. 1124–1150

ಕೀಲಕನ ಮಗ. ಕಾಶ್ಮೀರ ವಾಸಿ. ಮಂಖನ ಗುರು. ಜಯಸಿಂಹನ ಆಸ್ಥಾನ ಪಂಡಿತ. ಇವನ ಗ್ರಂಥ ಅಲಂಕಾರ ಸರ್ವಸ್ವ. ಸಹೃದಯ ಲೀಲಾ ಎನ್ನುವುದೂ ಇವನದೇ

## ೨೪. ಶಾರದಾತನಯ ಕ್ರಿ. ಶ. 12ಮತ್ತು 13ನೇ ಶತಮಾನ

ಕಶ್ಯಪಗೋತ್ರದ ಭಟ್ಟ ಗೋಪಾಲನ ಮಗ. ಇವನ ಮುತ್ತಾತ ವೇದಭೂಷಣವೆನ್ನುವ ವೇದ ವ್ಯಾಖ್ಯಾನವನ್ನು ಬರೆದನು. ತಾತನ ಹಾಗೆಯೇ ವಿದ್ವಾಂಸ. ತಂದೆಯಾದ ಭಟ್ಟಗೋಪಾಲನು 18ಶಾಸ್ತ್ರದಲ್ಲಿ ಪಾಂಡಿತ್ಯವನ್ನು ಸಂಪಾದಿಸಿದನು. ಶಾರದೆಯ ಅನುಗ್ರಹದಿಂದ ಇವನುಗೆ ಹುಟ್ಟಿದ ಮಗನೇ ಶಾರದಾತನಯ. ಪ್ರತ್ಯಭಿಜ್ಞಾ ಸಂಪ್ರದಾಯಕ್ಕೆ ಸೇರಿದವನು. ಈ ವೇದಾಂತ ಜ್ಞಾನವನ್ನು ತನ್ನ ಅಲಂಕಾರಶಾಸ್ತ್ರವಿಮರ್ಶನೆಯಲ್ಲಿ ಸೇರಿಸಿಕೊಂಡಿರುವನು. ಭೋಜನ ಶೃಂಗಾರ ಪ್ರಕಾಶದ ಸಂಗ್ರಹ ಮಾಡಿರುವನು. 13ನೇ ಶತಮಾನದ ಕೆಲವರು ಇವನನ್ನು ನಮೂದಿಸಿರುವರು. ಕಾವ್ಯ ಪ್ರಕಾಶಕ್ಕೆ ಇವನದೂ ವ್ಯಾಖ್ಯಾನವಿದೆ. ಆದರೆ ಅವನ ಅಭಿಪ್ರಾಯವು ಮಮ್ಮಟನ ಅಭಿಪ್ರಾಯಕ್ಕೆ ಸರಿಹೋಗುವುದಿಲ್ಲ. ಅವನ ಅಭಿಪ್ರಾಯವನ್ನು ಭಾವಪ್ರಕಾಶನಂ ಎನ್ನುವುದರಲ್ಲಿ ನೋಡಬಹುದು. ಅಭಿನವನು ರಸವೇ ಕಾವ್ಯಾತ್ಮಾ ಎಂದಿದ್ದರೂ ಆ ರಸವು ವ್ಯಂಗ್ಯವಾಗಿರಬೇಕೆನ್ನುವುದನ್ನೂ ಇವನು

ಒಪ್ಪಿಲ್ಲ. ಅಭಿಧಾ ಲಕ್ಷಣ ಮತ್ತು ತಾತ್ಪರ್ಯ ಶಕ್ತಿ ಎನ್ನುವ ಮೂರು ವೃತ್ತಿಗಳಲ್ಲಿ ಧ್ವನಿಯನ್ನು ತಾತ್ಪರ್ಯ ಶಕ್ತಿಯಲ್ಲಿ ಸೇರಿಸಿರುವನು. ಭಟ್ಟನಾಯಕ ಮತ್ತು ಧನಿಕ ಹೇಳುವಂತೆ ಭವ್ಯ-ಭಾವಕ ಸಂಬಂಧಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟು ವ್ಯಂಗ್ಯ -ವ್ಯಂಜಕ ಭಾವಕ್ಕೆ ಮನ್ನಣೆಯನ್ನು ಕೊಟ್ಟಿಲ್ಲ. ಉದ್ಭಟ. ಆನಂದವರ್ಧನ. ಅಭಿನವ ಮತ್ತು ರುದ್ರಟರು ಶಾಂತರಸವನ್ನು ಒಪ್ಪಿರುವುದನ್ನು ಇವನು ಖಂಡಿಸಿರುವನು. ರಂಗದಲ್ಲಿ ಈ ರಸವನ್ನು ತೋರಿಸಲಾಗುವುದಿಲ್ಲವೆನ್ನುವುದೇ ಇವನ ಮತ.

## ೨೫. ವಾಗ್ಭಟ (ಕ್ರಿ. ಶ. 13ನೇ ಶತಮಾನ)

ಇವನು 11 ಮತ್ತು 12ನೇ ಶತಮಾನದಲ್ಲಿದ್ದ ವಾಗ್ಭಟನಿಗಿಂತಲೂ ಭಿನ್ನನು. ಇವನು ನೇಮಿಕುಮಾರನ ಮಗ. ಹಿಂದಿನ ವಾಗ್ಭಟನನ್ನು ನಮೂದಿಸಿರುವನು. ಇವನ ಗ್ರಂಥ ಕಾವ್ಯಾನುಶಾಸನ.

## ೨೬. ವಿಶ್ವನಾಥ -14ನೇ ಶತಮಾನದ ಉತ್ತರ ಭಾಗ

ಚಂದ್ರಶೇಖರನ ಮಗ. ಕಳಿಂಗ ದೇಶದ ಬ್ರಾಹ್ಮಣ. ಕಾವ್ಯ ನಮೂದಿಸಿರುವನು. ಕಳಿಂಗ ದೊರೆ ನರಸಿಂಹ III (1326-1350) ಮತ್ತು ಅವನ ಮಗ ಭಾನುದೇವ (1350-1376) ಇವರಿಬ್ಬರ ಅಸ್ಥಾನದಲ್ಲಿದ್ದಿರಬೇಕು. ಇವನ ಗ್ರಂಥ ಸಾಹಿತ್ಯದರ್ಪಣ. ಇದಕ್ಕೆ ಇವನದೇ ವ್ಯಾಖ್ಯಾನವಿದೆ. 10 ಅಧ್ಯಾಯವುಳ್ಳದ್ದು. ಇದು ಅಲಂಕಾರಶಾಸ್ತ್ರದ ಸಂಗ್ರಹ. ಹೊಸ ಮಾರ್ಗವನ್ನೇನೂ ಕಲ್ಪಿಸಿಲ್ಲ.

## ೨೭. ಭಾನುದತ್ತ (1350-1450)

ಗೋಣನಾಥನ ಮಗ. ಇವನ ತಂದೆ ರಸರತ್ನ ದೀಪಿಕಾ ಎನ್ನುವ ಗ್ರಂಥವನ್ನು ಬರೆದಿದ್ದನು. ಇದನ್ನು ಇವನು ತನ್ನ ಗ್ರಂಥದಲ್ಲಿ ನಮೂದಿಸಿರುವನು. ಇವನ ವಂಶವೇ ಅಲಂಕಾರಿಕರ ವಂಶ. ಇವನ ಗ್ರಂಥಗಳಲ್ಲಿ ಮುಖ್ಯವಾದವು. 1. ಗೀತಾ ಗೌರಿಶಂ 2. ರಸತರಂಗಿಣೀ 3. ರಸಮಂಜರೀ

## ೨೮. ಜಯದೇವ (ಕ್ರಿ. ಶ. 15ನೇ ಶತಮಾನ)

10 ಮಯೂಖಗಳಲ್ಲಿ ಅಲಂಕಾರಗಳನ್ನು ಹೇಳಿರುವ ಚಂದ್ರಾಲೋಕ ಇವನದು. ಮಹಾದೇವ ಸುಮಿತ್ರಾದೇವಿಯರ ಮಗ. ಪ್ರಸನ್ನ ರಾಘವವು ಇವನದೇ. ಇವನದು ಕೌಂಡಿನ್ಯ ಗೋತ್ರ. ಹರಿಮಿಶ್ರನ ಶಿಷ್ಯ. ವಿದರ್ಭ ದೇಶದವನು. ಶೈವನಾದರೂ ರಾಮಭಕ್ತ. ಸೀತಾಪಹಾರ ಎನ್ನುವುದೂ ಇವನದೇ.

## ೨೯. ಅಪ್ಪಯ್ಯದೀಕ್ಷಿತ (ಕ್ರಿ. ಶ. 1554-1626)

ಕಾಂಚೀಪುರದ ಹತ್ತಿರದ ಒಂದು ಹಳ್ಳಿಯಲ್ಲಿ ಹುಟ್ಟಿದವನು. ಭರದ್ವಾಜ ಗೋತ್ರದ ರಂಗರಾಜನ ಮಗನು. ಚಿನಬೊಮ್ಮ ಭೂಪಾಲನ ಆಶ್ರಯದಲ್ಲಿ ವೆಲ್ಲೂರಿನಲ್ಲಿ ಬಹಳ ಕಾಲವಿದ್ದನು. ಕಡೆಗೆ ವಿಜಯನಗರದ ವೆಂಕಟದೇವನ (ಪೆಯಗೊಂಡ) ಆಸ್ಥಾನಕ್ಕೆ ಕರೆಯಲ್ಪಟ್ಟನು ಅದ್ವೈತ ಸಿದ್ಧಾಂತಕ್ಕಾಗಿ ತನ್ನ ಕೊನೆಯ ಕಾಲದಲ್ಲಿ ಪಾಂಡ್ಯದೇಶದ ದೊರೆ ತಿರುಮಲ ನಾಯಕರ ಆಸ್ಥಾನಕ್ಕೆ ಹೋದನು (ಮಧುರೆ). ಇವನು ಭಟ್ಟೋಜಿಗೆ ದೀಕ್ಷಿತನ ಗುರು. ಭಟ್ಟೋಜಿ ದೀಕ್ಷಿತನು ಒಬ್ಬ ಪ್ರಸಿದ್ಧ ವೈಯಾಕರಣಿ ಶ್ರೀಕಂಠ ಸಂಪ್ರದಾಯದ ಶಿವಾರ್ಕಮಣಿ ದೀಪಿಕಾ ಎನ್ನುವುದು ಇವನ (ಅಪ್ಪಯ್ಯದೀಕ್ಷಿತ) ಗ್ರಂಥ. ಶಂಕರ, ರಾಮಾನುಜ, ಭಾಷ್ಯಗಳಿಗೆ ಸಮವಾದ ಭಾಷ್ಯವಿದು ಇವನು ಪೂರ್ವೋತ್ತರ ಮೀಮಾಂಸದಲ್ಲಿ ಪ್ರವೀಣ. ಇವನಿಗೆ ೧೧ ಮಕ್ಕಳಿದ್ದರು. ೧೦೪ ಗ್ರಂಥಗಳನ್ನು ಬರೆದಿರುವನು. ಇವುಗಳಲ್ಲಿ ಪ್ರಸಿದ್ಧವಾದುವು ೧. ಚಿತ್ರಮೀಮಾಂಸಾ ೨. ಕುವಲಯಾನಂದ ೩. ಯಾದವಾಭ್ಯುದಯ ವ್ಯಾಖ್ಯಾಚಿತ್ರಮೀಮಾಂಸವನ್ನು ಜನನ್ನಾಥನು ತನ್ನ ಚಿತ್ರ ಮೀಮಾಂಸಾ ಖಂಡನದಲ್ಲಿ ಖಂಡಿಸಿರುವನು. ಇವನನ್ನು ಇವನ ಮುಂದೆ ಬಂದ ನೀಲಕಂಠ ಮತ್ತು ಚಂಡ ಮಾರುತಾಚಾರ್ಯ -ಇವರು ಖಂಡಿಸಿರುವರು.

## ೩೦. ಜಗನ್ನಾಥ (1628-1674)

ಪೆರುಂಭಟ್ಟ ಮತ್ತು ಲಕ್ಷ್ಮೀಪುತ್ರ. ಮುಕುಂದ ಗ್ರಾಮದ ತೈಲಿಂಗ ಬ್ರಾಹ್ಮಣ (ಗೋದಾವರಿ ಜಿಲ್ಲೆ) ಇವನ ಮಠದ ಹೆಸರು ಉಪದ್ರಷ್ಟಾ. ತಂದೆಯಿಂದ ಕಾವ್ಯ ಮತ್ತು ಅಲಂಕಾರ ಶಾಸ್ತ್ರವನ್ನು ಕಲಿತು ತರ್ಕ, ವ್ಯಾಕರಣ ಮತ್ತು ಇತರ ಶಾಸ್ತ್ರಗಳನ್ನು ಜ್ಞಾನೀಂದ್ರ, ಭಿಕ್ಷು, ಮಹೇಶಾಚಾರ್ಯ, ಖಂಡದೇವ, ಶೇಷವೀರೇ ಶ್ವರ-ಇವರಿಂದ ಕಾಶಿಯಲ್ಲಿ ಅಭ್ಯಾಸ ಮಾಡಿದನು. ಷಹಜಹಾನ್ ಮತ್ತು ಅವನ ಮಗದಾರನ ಆಸ್ಥಾನದಲ್ಲಿ ಆಶ್ರಯ ಹೊಂದಿದ್ದನು. ಮುಸ್ಲಿಂ ಹುಡುಗಿಯನ್ನು ಮದುವೆ ಮಾಡಿಕೊಂಡು ಜಾತಿಭ್ರಷ್ಟನಾಗಿ ಅಪವಾದಕ್ಕೆ ಗುರಿಯಾಗಿ ಅವಳು ಸತ್ತಮೇಲೆ ಮುತ್ರದಲ್ಲಿ (ಉತ್ತರ ಮಧುರೆ) 1674ರಲ್ಲಿ ಸತ್ತನು. ಸಂಸ್ಕೃತ ಕವಿ ಚರಿತೆಯಲ್ಲಿ ಸೂರ್ಯನಾರಾಯಣ ಶಾಸ್ತ್ರಿಯು ಇವನ ಕಾಲವನ್ನು 1575-1653ಎಂದಿರುವನು. ಇದು ಸರಿಯಿಲ್ಲ. ಇವನ ಕೊನೆಯ ಶ್ಲೋಕವನ್ನು ಹೇಳಿರುವ ಪದ್ಯವು ಹೀಗಿದೆ.

ಯವನೀ ನವನೀತ ಕೋಮಲಾಂಗೀ
ಶಯನೀಯೇ ಯದಿಲಂಭ್ಯನೇ ಕದಾಚಿತ್
ಅವನೀ ತಲಮೇವ ಸಾಧುಮನ್ಯೇ
ನವನೀ ಮಾಘವನೀ ವಿನೋದ ಹೇತುಃ

ಇವನ ಬಿಡಿಶ್ಲೋಕಗಳೆಲ್ಲವೂ ಭಾಮಿನೀ ವಿಲಾಸವೆನ್ನುವ ಗ್ರಂಥದಲ್ಲಿ ಅಡಗಿವೆ. ಇದರಲ್ಲಿ ನಾಲ್ಕು ಪುರುಷಾರ್ಥ ಮತ್ತು ಧಾರ್ಮಿಕ ದೃಷ್ಟಿಯು ವರ್ಣಿತವಾಗಿವೆ. 4 ಉಲ್ಲಾಸಗಳಲ್ಲಿ ಅನ್ಯೋಕ್ತಿ, ಶೃಂಗಾರ, ಕರುಣಾ ಮತ್ತು ಶಾಂತ ವರ್ಣಿತವಾಗಿವೆ

ಇವನ ವಂಶದಲ್ಲಿ ಮುಂದೆ ಕೃಷ್ಣ ಸುಧೀ ಎನ್ನುವನು ಕಾಂಚೀಪುರದ ಹತ್ತಿರವಿರುವ ಮುಲ್ಲೂರಿನಲ್ಲಿದವನು. ಇವನು ಕಾವ್ಯ ಕಲಾನಿಧಿ ಎನ್ನುವ ಗ್ರಂಥವನ್ನು ಕೊಟ್ಟಿರುವನು

## ೧೧೫. III ಪರ್ವದ ಸಾಮೂಹಿಕ ಸಮೀಕ್ಷೆ

ಆನಂದ ವರ್ಧನನಿಗೆ ಧ್ವನಿಯು ಅಲೌಕಿಕ ಅನುಭವಕ್ಕ ಹೇತುವಾದ ವಿವರ್ತದಿಂದ ಬರುವ ಅರ್ಥವೆನ್ನಬಹುದು. ಅಭಿನವನು ಭರತನ ರಸವನ್ನು ಕಾವ್ಯಾತ್ಮ ಎಂದು ಸ್ವೀಕಾರ ಮಾಡಿದರೂ ಅದು ವ್ಯಂಗವಾದರೆ ಮಾತ್ರ ಅದು ಧ್ವನಿಯಾಗುತ್ತದೆಂದು ಅಭಿಪ್ರಾಯಪಟ್ಟಿರುವರು. ವಿವರ್ತದಿಂದ ಪರಿಣಾಮಾನ್ಯತ್ವಕ್ಕೆ ಹೇತುವಾಗಿರುವ ನಾದರೆ ಅದಕ್ಕೆ ವ್ಯಂಗವೆನ್ನಬಹುದು. ಶಾರದಾತನಯನಿಗೆ ಈ ವ್ಯಾಖ್ಯಾನವು ಹಿಡಿಸಿಲ್ಲವೆಂದು ಕಾಣುತ್ತದೆ. ಅಭಿಧೆಗಿಂತಲೂ ಲಕ್ಷಣವು ಮನಸ್ಸಿನ ದೃಷ್ಟಿ ಸೌಕ್ಷ್ಮವಾದರೆ ಅದಕ್ಕು ಹಿನ್ನೆಲೆಯಲ್ಲಿ ತಾತ್ಪರ್ಯ ಶಕ್ತಿ ಇರುವುದರಿಂದ ಇದನ್ನೇ ಧ್ವನಿ ಎನ್ನಬಹುದು ಎಂದಿರುವನು ಜಗನ್ನಾಥನು ಇದನ್ನು ಇನ್ನೂ ಬಿಚ್ಚಿರುವನು. ವ್ಯಂಜನಾವೃತ್ತಿಯು ಎರಡು ವಿಧ. ಅವಿವಕ್ಷಿತವಾಚ್ಯ ಮತ್ತು ವಿವಕ್ಷಿತಾನ್ಯ ಪರವಾಚ್ಯ. ಎರಡನೆಯದರಲ್ಲಿ ಅಸಂಲಕ್ಷ್ಯ ಕ್ರಮ (Instantaneous), ಸಂಲಕ್ಷ್ಯ ಕ್ರಮ (Perceptible Process) ಎಂದು ಎರಡು ಭಾಗ ಮಾಡಬಹುದು. ಭಾವೋತ್ಪತ್ತಿಯು ಅನುಮಾನ ಪ್ರಕ್ರಿಯೆಗೆ ಬೇಕಾದ ಕ್ರಮವನ್ನು ಆಶ್ರಯಿಸಿ ಅರ್ಥಕೊಡುವುದಿಲ್ಲ. ಧ್ವನಿಯು ಸಹೃದಯರಿಗೆ ರುಚಿಸುತ್ತದೆ. ಆದರೆ ಸಹೃದಯರು ಯಾರು ? ಕಾವ್ಯಗಳಲ್ಲಿ ಕೇವಲ ಲೌಕಿಕ ಕ್ರಮದಿಂದ ರಸವನ್ನು ಸವಿಯಲಪೇಕ್ಷಿಸುವವರಲ್ಲ. ಈ ರಸಾಸ್ವಾದವು ಅಲೌಕಿಕವೆಂದು ಧ್ವನಿಕಾರರ ಮತ. ಅದಕ್ಕಾಗಿಯೇ ಕಾವ್ಯವೆಂದರೆ "ಲೋಕೋತ್ತರಾಹ್ಲಾದ". ಇದು ಭಾವನೆಯು ಜಾನ್ಯತ್ವ "ತವಪುತ್ರೋಜಾತ :" ಎನ್ನುವುದರಿಂದ ಹೇಗೆ ಸಂತತ ಜೀವನ ಪರ್ಯಂತವೂ ಒಂದು ಆನಂದವು ಹರಿದು ಬರುತ್ತದೆಯೋ ಅಂತಹ ರಸ ವಿಶೇಷವೇ ಧ್ವನಿ ಎಂದು ತಿಳಿಯುವುದು ತಪ್ಪು. ಧ್ವನಿಯು ಅಲೌಕಿಕಾನುಭವ.

ಮಿಕ್ಕ ಅಲಂಕಾರಿಕರೆಲ್ಲರೂ ಸಾಮಾನ್ಯವಾಗಿ ಧ್ವನಿಪಕ್ಷವನ್ನೋ ಅಥವಾ ರಸಪಕ್ಷವನ್ನೋ ಹಿಡಿದು ತಮ್ಮ ಬುದ್ಧಿಶಕ್ತಿಗೆ ಅನುಸಾರವಾಗಿ ವಾದ ಮಾಡಿ ನಿಷ್ಕರ್ಷೆಯನ್ನು ಕೊಟ್ಟಿರುವರು. ಜಯದೇವನು ಕೇವಲ ಅಲಂಕಾರಗಳನ್ನೇ ವಿಮರ್ಶೆಮಾಡಿರುವನು. ಅವನನ್ನೇ ಹಿನ್ನೆಲೆಯಲ್ಲಿ ಇಟ್ಟುಕೊಂಡು ಶಾಸ್ತ್ರೀಯವಾಗಿ ವೃತ್ತಗಳನ್ನೂ ಕೊಟ್ಟು ಅಪ್ಪಯ್ಯ ದೀಕ್ಷಿತನು ವಿಸ್ತರಿಸಿರುವನು.

# ಎರಡನೇ ಭಾಗ

## ವ್ಯಾಕರಣ ಶಾಸ್ತ್ರ-ವ್ಯಾಕರಣ ಸಾಹಿತ್ಯ

## ಸಂಸ್ಕೃತ ಭಾಷೆಯ ಮತ್ತು ವ್ಯಾಕರಣದ ಮಹತ್ವ

ಈಗ ಪ್ರಪಂಚದಲ್ಲಿರುವ ಅನೇಕ ಭಾಷೆಗಳಲ್ಲಿ ಸಂಸ್ಕೃತವೂ ಒಂದು ಭಾಷೆಯೆಂದು ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿದ್ದರೂ, ಅದು ದೇಶೀಯ ಭಾಷೆಯಾಗಿಲ್ಲದಿರುವುದರಿಂದ ಅದು ಸತ್ತ ಭಾಷೆ ಅಂದರೆ ಮೃತ ಭಾಷೆ ಎಂದು ಅನೇಕರ ಅಭಿಪ್ರಾಯವಾಗಿದೆ. ಆದರೆ ಈಗ ಪ್ರಧಾನವಾಗಿ ನಮ್ಮ ಹಿಂದೂ ದೇಶದಲ್ಲಿರುವ 14 ದೇಶೀಯ ಭಾಷೆಗಳಿಗೆ ಜೀವನಾಡಿಯಂತಿದ್ದು ತನ್ನದೇ ಆದ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಬಂದಿರುವ ಈ ಭಾಷೆಯನ್ನು ಮೃತ ಭಾಷೆ ಎಂದು ತಿಳಿಯುವುದು ತಪ್ಪಾಗುವುದು. ಅಲ್ಲದೆ ಇದು ಒಂದಾನೊಂದು ಕಾಲದಲ್ಲಿ ಸಾಮಾಜಿಕ ಭಾಷೆಯಾಗಿತ್ತು ಎನ್ನುವುದಕ್ಕೆ ಅನೇಕ ಆಧಾರಗಳಿವೆ. ಈಗಲೂ ಇದನ್ನು ನಮ್ಮ ರಾಷ್ಟ್ರ ಭಾಷೆಯನ್ನಾಗಿ ಮಾಡಿದರೆ ನಮ್ಮ ದೇಶದಲ್ಲಿ ಐಕ್ಯತೆಯೂ, ಸಾಮರಸ್ಯವೂ ಸಂಸ್ಕೃತಿಯ ಔನ್ನತ್ಯವೂ ಬರುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಇದು ಕಠಿಣವಾದ ಭಾಷೆ ಎನ್ನುವ ಭಾವನೆಯಿಂದಲೂ, ಇದು ಹಿಂದುಗಳಿಗೆ ಮೀಸಲಾದ ಭಾಷೆ ಅದರಲ್ಲೂ ಬ್ರಾಹ್ಮಣ ಭಾಷೆ ಎನ್ನುವ ಆಂಗ್ಲರ ಬೋಧನೆಯಿಂದಲೂ ಇದು ನಮ್ಮ ದೇಶ ಭಾಷೆಯಾಗಲು ತಡೆಯುಂಟಾಗಿದೆ. ಶಾಸ್ತ್ರಗ್ರಂಥಗಳನ್ನು ಓದಲು ಅದರಲ್ಲಿ ಬಳಸಿರುವ ಭಾಷೆಯನ್ನು ಕಲಿಯಲು ಶ್ರಮವಾದರೂ ಸುಲಭವಾಗಿ ಈ ಭಾಷೆಯನ್ನು ಪ್ರಚಾರಕ್ಕೆ ತರಲು ಸಾಧ್ಯವಾಗಿದೆ. ಹೀಗೆಯೇ "ಹೀಬ್ರು" ಭಾಷೆಯು ಒಂದು ಕಾಲದಲ್ಲಿ ಮೃತ ಭಾಷೆಯಾಗಿತ್ತು. ಆದರೆ 'ಇಸ್ರೈಲ್' ದೇಶವು ಯಹೂದಿ ಜನಾಂಗಕ್ಕೆ ಮೀಸಲಾದ ಮೇಲೆ ಆ ಜನಾಂಗವು ಬಹಳ ಕೊಂಚ ಕಾಲದಲ್ಲಿಯೇ ಆ ಭಾಷೆಯನ್ನು ದೇಶ ಭಾಷೆಯನ್ನಾಗಿ ಮಾಡಿಕೊಂಡಿರುವುದನ್ನು ಗಮನಿಸಬೇಕು. ಆದ್ದರಿಂದ ಸಂಸ್ಕೃತವು ದೇಶ ಭಾಷೆಯಾಗಲು ಯಾವ ತೊಂದರೆಯೂ ಇಲ್ಲ.

ಮಿಕ್ಕ ಭಾಷೆಗಳಿಗಿಂತ ಸಂಸ್ಕೃತದಲ್ಲಿ ಒಂದು ವಿಶೇಷವಿದೆ. ಭಾಷಾ ಪ್ರವೀಣರು ಪ್ರಪಂಚದ ಎಲ್ಲಾ ಭಾಷೆಗಳನ್ನು ಏಳು ಜಾತಿಗೆ ಸೇರಿಸಿರುವರು. ಅದರಲ್ಲಿ ಹಿಂದೂ ವಿಭಾಗವೂ ಒಂದಾದರೂ, ಆ ವಿಭಾಗದ ಮಹತ್ವದಿಂದಲೇ, ಭಾಷಾಶಾಸ್ತ್ರವನ್ನು ಕಲ್ಪಿಸಿಕೊಳ್ಳಲು ಅವರಿಗೆ ಸಹಾಯ ಸಂಪತ್ತು ದೊರಕಿತೆಂದು ನಿರ್ವಿವಾದವಾಗಿ ಎಲ್ಲಾ ವಿದ್ವಾಂಸರೂ ಒಪ್ಪಿರುವರು. ಈ ಏಳು ಜಾತಿ ಭಾಷೆಗಳು ಹೀಗಿವೆ.

a) ಹಿಂದೂ ವಿಭಾಗದಲ್ಲಿ - ಸಂಸ್ಕೃತ, ಪಾಲಿ ಪ್ರಾಕೃತ ಮತ್ತು ಉತ್ತರ ದೇಶದ ಭಾಷೆಗಳಾದ ಹಿಂದಿ, ಬೆಂಗಾಲಿ, ಮರಾಠಿ, ಪಂಜಾಬಿ, ಮೊದಲಾದವುಗಳು.

b) ಇರಾನಿಯನ್ ವಿಭಾಗದಲ್ಲಿ -ಜೆಂಡ್, ಪೆಹ್ಲವಿ ಮತ್ತು ಅದಕ್ಕೆ ಸಂಬಂಧಪಟ್ಟ ಭಾಷೆಗಳು

c) ಹೆಲೆನಿಕ್ ಅಥವಾ ಗ್ರೀಕ್ ವಿಭಾಗದಲ್ಲಿ –ಗ್ರೀಕ್ ಮತ್ತು ತಜ್ಜನ್ಯ ಭಾಷೆಗಳು

d) ಇಟಾಲಿಯನ್ ವಿಭಾಗದಲ್ಲಿ –ಲಾಟಿನ್ ಮತ್ತು ತಜ್ಜನ್ಯ ಭಾಷೆಗಳು. ಇಟಾಲಿಯನ್, ಫ್ರೆಂಚ್ ಸ್ಪಾನಿಷ್, ಪೋರ್ಚುಗೀಸ್, ಕೆಲ್ಟಿಕ್, ಮತ್ತು ದರ ವಿಭಾಗಗಳಾದ ಕಮ್ರಿಕ್, ವೇಲ್ಸ್ ಮತ್ತು ಫ್ರಾಂಪ್ ಮತ್ತು ಬ್ರಿಟನಿನಲ್ಲಿ ಮಾತನಾಡುವ ಭಾಷೆಗಳು. ಲಿಥೂನಿಯನ್ ಮತ್ತು ಸ್ಲಾವಾನಿಕ್ –ಅಂದರೆ ಲಿಥೂನಿಯಾ, ರಷ್ಯಾ, ಬಲ್ಗೇರಿಯಾ ದೇಶಗಳ ಭಾಷೆಗಳು.

e) ಟ್ಯೂಟಾನಿಕ್ ವಿಭಾಗದಲ್ಲಿ –ನಾರ್ವೆ, ಸ್ವೀಡನ್, ಐರ್ಲಂಡ್, ಡೆನ್ಮಾರ್ಕ್, ಜರ್ಮನ್, ಇಂಗ್ಲಿಷ್ ಮತ್ತು ಹಾಲೆಂಡ್ ದೇಶದ ಭಾಷೆ.

f) ಸೆಮೆಟಿಕ್ ಜಾತಿಯಲ್ಲಿ –ಹೀಬ್ರು, ಅರಾಬಿಕ್, ಬಾಲ್ಡಿ, ಸಿರಿಯಾಕ್ ಕಾರ್ಥನೇಜಿಯನ್ –ಮೊದಲಾದವುಗಳು

g) ಟುರೇನಿಯನ್ ಜಾತಿಯಲ್ಲಿ –ಟರ್ಕಿಷ್, ಹಿಂದೂದೇಶದ ದಕ್ಷಿಣದ ಭಾಷೆಗಳು – ಅಂದರೆ ತಮಿಳು, ತೆಲುಗು ಕನ್ನಡ, ತುಳು ಮೊದಲಾದವುಗಳು

ಇಷ್ಟು ಜಾತಿಯ ಭಾಷೆಗಳ ಮೂಲರೂಪಗಳು ಪ್ರಚಾರದಲ್ಲಿ ಪೂರ್ಣವಾಗಿ ಹೋಗಿ, ರೂಪಾಂತರಗಳನ್ನು ಹೊಂದಿದ್ದರೂ, ಸಂಸ್ಕೃತವು ಮಾತ್ರ ತನ್ನ ಪ್ರಾಚೀನ ರೂಪಗಳನ್ನೂ ಶೈಲಿಯನ್ನೂ ಕ್ರಮವನ್ನೂ ಕಾಪಾಡಿಕೊಂಡು ಬಂದಿರುತ್ತದೆ. ಆದ್ದರಿಂದಲೇ ಭಾಷಾ ವಿಜ್ಞಾನಕ್ಕೆ ಸಂಸ್ಕೃತಾಧ್ಯಯನವು ಅತ್ಯಾವಶ್ಯಕವೆಂದು ಒಬ್ಬ ಭಾಷಾ ವಿಜ್ಞಾನಿಯು ಹೇಳಿರುವನು (Sanskrit has preserved a greates number of ancient forms than any of these lanugages, hence it is indisfensible for purposes of comparative phiology")

ಇವೆಲ್ಲಕ್ಕೂ ಮೂಲಕಾರಣವು ಪಾಣಿನಿಯ ಅಷ್ಟಾಧ್ಯಾಯೀ. ಪಾಣಿನಿಯು ತನ್ನ ಪ್ರತಿಭೆಯಿಂದ ಇದನ್ನು ಕೊಡದಿದ್ದರೆ ಭಾಷಾ ವಿಷಯದಲ್ಲಿ ಪ್ರಪಂಚವೇ ಅಂಧಕಾರದಲ್ಲಿ ಮುಳುಗಿರಬೇಕಾಗಿತ್ತು. ಪಾಣಿನಿಯ ಸೂತ್ರಗಳಿಗೆ ಆಧಾರಗಳಾಗಿರುವ "ಅ –ಇ– ಉ–ಣ್" ಮೊದಲಾದ 14 ಮಾಹೇಶ್ವರ ಸೂತ್ರಗಳನ್ನು ನೋಡಿ ಚಕಿತರಾಗದವರು ವಿರಳ. ಅವರಾದ ಮೇಲೆ ಕಾತ್ಯಾಯನರು ಅವರಾದ ಮೇಲೆ ಪತಂಜಲಿ ಮಹರ್ಷಿಗಳು ವ್ಯಾಕರಣವನ್ನು ಒಂದು ದೊಡ್ಡ ಪ್ರಧಾನ ಶಾಸ್ತ್ರವನ್ನಾಗಿ ಮಾಡಿರುವರು. ಇವರಾದ ಮೇಲೆ ಕಲಾಪವ್ಯಾಕರಣ, ಮುಗ್ಧ ಬೋಧ ಮೊದಲಾದವು ವ್ಯಾಕರಣ ಶಾಸ್ತ್ರಾಧ್ಯಯನಕ್ಕೆ ಸಹಾಯ ಮಾಡಿದವು. ಮುಂದೆ ಕ್ರಿ. ಶ. 16ಮತ್ತು 17ನೇ ಶತಮಾನದಲ್ಲಿ ಭಟ್ಟೋಜಿ ದೀಕ್ಷಿತರು ಪಾಣಿನಿಯ ಅಷ್ಟಾಧ್ಯಾಯಿಗೆ ಸಿದ್ಧಾಂತ ಕೌಮುದಿಯನ್ನು ಕೊಟ್ಟರು. ಇವರಿಂದ ಈ ಶಾಸ್ತ್ರವು ಅಚ್ಚಳಿಯದೆ ಶಾಶ್ವತವಾಗಿ ಉಳಿಯಲು ಅವಕಾಶವಾಯಿತು.

ಈ ಶಾಸ್ತ್ರಾಧ್ಯಯನವು ನಮ್ಮ ದೇಶದಲ್ಲಿ ಎಂಟು ಪರ್ವದಲ್ಲಿ ಅಳಿಯದ ಒಂದು ವಿಶಿಷ್ಟರೂಪವನ್ನು ತಾಳಿತೆನ್ನಬಹುದು.

i) ಕ್ರಿ. ಪೂ. 1500ಕ್ಕೆ ಹಿಂದೆ ವೇದದ ಸಂಹಿತಾ ಬ್ರಾಹ್ಮಣಗಳಲ್ಲಿ ಕಾಣುವ ವ್ಯಾಕರಣ ರೂಪ ಮತ್ತು ಅಭ್ಯಾಸ.

ii) ಕ್ರಿ. ಪೂ. 1000-800 ಪ್ರಾತಿಶಾಖ್ಯ ಮತ್ತು ನಿರುಕ್ತದ ಕಾಲ

iii) ಕ್ರಿ. ಪೂ. 700-600 ಪಾಣಿನಿಯ ಅಷ್ಟಾಧ್ಯಾಯೀ

iv) ಕ್ರಿ. ಪೂ. 400-300 ಕಾತ್ಯಾಯನರ ವಾರ್ತಿಕ

v) ಕ್ರಿ. ಪೂ 200-100 ಪತಂಜಲಿ ಮಹರ್ಷಿಗಳ ಮಹಾಭಾಷ್ಯ

vi) ಕ್ರಿ. ಶ. 1ನೇ ಶತಮಾನದಿಂದ ಕ್ರಿ. ಶ. 1100-ಕಾಲಾಪ ವ್ಯಾಕರಣ ಬೌದ್ಧ ವ್ಯಾಕರಣ ಗ್ರಂಥಗಳು. ಜಯಾದಿತ್ಯನ ಕಾಶಿಕಾ ಮೊದಲಾದವು ಮತ್ತು ಜೈನ ವ್ಯಾಕರಣಗ್ರಂಥಗಳು

vii) ಕ್ರಿ. ಶ ಸುಮಾರು 1200ರಿಂದ 1600ವರೆಗೆ ಬೋಪದೇವನ ಮುಗ್ಧ ಬೋಧ ಮೊದಲಾದವು. ಮತ್ತು

viii) ಕ್ರಿ. ಶ. 1600-1750 ಭಟ್ಟೋಜಿಯ ಸಿದ್ಧಾಂತ ಕೌಮುದಿ. ನಾಗೋಜಿ ಭಟ್ಟನ ಪರಿಭಾಷೇಂದು ಶೇಖರ

ಕ್ರಿ ಪೂ. 1500ಕ್ಕೆ ಹಿಂದೆ ಮತ್ತು ಕ್ರಿ. ಪೂ. 1000-800ವ್ಯಾಕರಣ ಶಾಸ್ತ್ರಸ್ಯ ಮೂಲಮುದ್ಭಾವ್ಯ ಅಪಾಣಿನಿ. ತಚ್ಛಾಸ್ತ್ರಂ ಕಥಂವಿವೃಧೇ ಇತಿ.

a) ವೇದ ಕಾಲ -ವ್ಯಾಕರಣವೆಂದರೆ ಭಾಷೆಯನ್ನು ವಿಮರ್ಶಿಸುವುದು -ವಾಕ್ಯ. ಪದ ಮತ್ತು. ಅದರ ಮೂಲವನ್ನು ಭೇದಿಸುವ ಸಾಧನ ಕ್ರಿಯ. ಅದಕ್ಕಾಗಿಯೇ ಪತಂಜಲಿಗಳು "ಅಥಶಬ್ದಾನುಶಾಸನಂ" ಎಂದರುವರು."ಅಥ" ಅಧಿಕಾರಾರ್ಥ ಭಾಷೆಯಾದ ಮೇಲೆಯೇ ವ್ಯಾಕರಣವು ಅದನ್ನು ಪರಿಷ್ಕರಿಸುವುದಕ್ಕಾಗಿ ಅವಶ್ಯಕವಾಗಿದೆ. ಆರ್ಯರು ಭಾಷೆಯೊಡನೆ ಅದಕ್ಕೆ ಬೇಕಾದ ವ್ಯಾಕರಣ. ಆದರಿಂದ ಬಂದ ಸಂಸ್ಕೃತಿ. ಇವುಗಳಿಂದ ಪ್ರಪಂಚದ ಎಲ್ಲಾ ಸಂಸ್ಕೃತಿಗೂ ಬೀಳಿಗೆಯನ್ನು ಕಲ್ಪಿಸಿಕೊಟ್ಟರೆಂದು ನಂಬುವಂತಿದ್ದರೂ. ಈ ಸಂಸ್ಕೃತಿಯೂ ಭಾರತದಲ್ಲಿ ಅಚ್ಚಳಿಯದೇ ಅನುಸ್ಯೂತವಾಗಿ ಬಂದಿರುವುದನ್ನು ಕಂಡು ಕೆಲವರು ಅಸೂಯಾದಿಗಳಿಂದ ಆ ಕೀರ್ತಿಯನ್ನು ಅದಕ್ಕೆ ಸಲ್ಲಿಸಲು ಹಿಂತೆಗೆದಿರುತ್ತಾರೆ ವೇದಕಾಲಕ್ಕೆ ಹಿಂದೆ ವ್ಯಾಕರಣವು ಯಾವ ಸ್ವರೂಪದಲ್ಲಿತ್ತೆಂದು ಹೇಳಲು ಸಾಧ್ಯವಾಗಿಲ್ಲ. ವೇದದಲ್ಲಿ ಶಬ್ದ. ವಾಕ್ಯ. ಅರ್ಥ ಮೊದಲಾದಗಳ ಸೌಷ್ಠವವನ್ನೂ

ಗಮನಿಸಿದರೆ, ಅದರ ಹಿನ್ನಲೆಯಲ್ಲಿ ವ್ಯಾಕರಣವು ಒಂದು ಪರಿಷ್ಕೃತ ರೂಪದಲ್ಲಿದ್ದಿತೆಂದು ಊಹಿಸಲು ಸಾಧ್ಯವಿದೆ. ವೇದದಲ್ಲಿ ಸ್ವರವಿರುವುದು ಇದಕ್ಕೆ ಮತ್ತು ಪೋಷಕವಾಗಿದೆ. ಸ್ವರ ವ್ಯತ್ಯಾಸದಿಂದ ಸಮಾನ ವ್ಯತ್ಯಾಸ ಹೊಂದುವುದನ್ನು ನೋಡಿದರೆ ಆರ್ಯರ ಮನಸ್ಸು ಎಷ್ಟು ಪುಷ್ಟವಾಗಿ ಬೆಳೆದಿತ್ತು ಎಂದು ಗೋಚರವಾಗುತ್ತದೆ. ಈ ವೇದ ಸಂಪ್ರದಾಯವುದನ್ನೇ ರಕ್ಷಿಸಿಕೊಂಡು ಬಂದಿರುವ ನಮ್ಮ ದೇಶದಲ್ಲಿ ವ್ಯಾಕರಣಾಧ್ಯನಕ್ಕೆ ಪ್ರಾಶಸ್ತ್ಯ ಕೊಟ್ಟಿರುವಂತೆ ಯಾವ ದೇಶದಲ್ಲೂ ಕೊಟ್ಟಿಲ್ಲವೆನ್ನಬಹುದು. ಹಾಗೆಯೇ ಮ್ಯಾಕ್‌ಡೊನೆಲ್ ವಿಮರ್ಶಕನು ಹೇಳಿರುವನು. ಅವನು ಹೇಳಿರುವಂತೆ ಭಾಷಾಶಾಸ್ತ್ರಕ್ಕೆ (Philology) ಒಂದು ಅಸ್ತಿತ್ವವನ್ನು ಕೊಟ್ಟಿರುವುದು ಸಂಸ್ಕೃತದ ವ್ಯಾಕರಣಶಾಸ್ತ್ರ.

ವೇದಾಧ್ಯಯನ ಮತ್ತು ಅದರ ಸಂಪ್ರದಾಯವನ್ನು ಕೂಡಿಕೊಂಡು ಬರಲು ಆರ್ಯರು ಅದಕ್ಕೆ ಆರು ಅಂಗಗಳನ್ನು ಕಲ್ಪಿಸಿಕೊಂಡರು. ಅದರಲ್ಲಿ ವ್ಯಾಕರಣವೂ ಒಂದಲ್ಲದೆ ಪ್ರಾಧಾನ್ಯವೂ ಆಗಿದೆ. "ಪ್ರಧಾನಂ ಚ ಷಡಂಗೇಷು ವ್ಯಾಕರಣ"ಎಂದು ಪತಂಜಲಿಗಳು ಹೇಳಿರುವರು ಮತ್ತು " ಸಂಸ್ಕಾರೋತ್ತರ ಕಾಲಂ ಬ್ರಾಹ್ಮಣಾಃ ವ್ಯಾಕರಣಂ ಸ್ಮ ಅಧೀಯತೆ "ಎಂದೂ ಹೇಳಿರುವರು. ಇವರಿಗೆ ಹಿಂದೆಯೇ ವಾರ್ತಿಕಕಾರರು" ರಕ್ಷೋಹಾಗ ಮಲಘ್ವ ಸಂದೇಹಾಃ ಪ್ರಯೋಜನಂ"ಎಂದು ವ್ಯಾಕರಣ ಶಾಸ್ತ್ರಾಧ್ಯಯನದ ಅವಶ್ಯಕತೆ ಮತ್ತು ಪ್ರಯೋಜನವನ್ನು ತಿಳಿಸಿರುವರು. ."ವೇದ ಮಾರ್ಗೇ ಸ್ವರೋಗಣ್ಯತೇ"ಎನ್ನುವ ನಿಯಮದಿಂದ. ವೇದಾಧ್ಯಯನ ಮಾಡುವವರೆಲ್ಲರೂ ಆ ಸಂಸ್ಕೃತಿಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲಪೇಕ್ಷಿಸುವವರೂ ವ್ಯಾಕರಣಕ್ಕೆ ಮೊದಲನೇ ಸ್ಥಾನವನ್ನು ಕೊಡದೇ ಗತ್ಯಂತರವಿಲ್ಲ. ಋಗ್ವೇದದ vii-69-12ರಲ್ಲಿ ಸಪ್ತಸಿಂಧ್ವಃ ಅಂದರೆ ಸಪ್ತವಿಭಕ್ತಿಗಳೆಂದೂ. ಅಗ್ನ್ಯಾವಾಹನ ಮಂತ್ರವಾದ "ಚತ್ವಾರಿಶೃಂಗಾಃ ತ್ರಯೋ ಅಸ್ಯಪಾದಾಃ ಬ್ರಾಹ್ಮಣ ಭಾಗದಲ್ಲಿ ಬಂದಿರುವ "ಚತ್ವಾರಿವಾಕ್ ಪರಿಮಿತಾಪದಾನಿತಾನಿ ವಿದುರ್ಬ್ರಾಹ್ಮಣಾಃ ಯೇ ಮನೀಷಿಣಂ"ಎನ್ನುವ ಮಂತ್ರಗಳಲ್ಲಿ ಕಾಣುವ "ಚತ್ವಾರಿ" ಎನ್ನುವುದಕ್ಕೆ ನಾಮ, ಆಖ್ಯಾತ, ಉಪಸರ್ಗ ಮತ್ತು ನಿಪಾತ ಎಂದೂ ವಿಮರ್ಶಕನು " I (grammer) green upin connection with the shedy and recitation of the vedic texts ಎಂದು ಹೇಳಿರುವನು. ಅದನ್ನೇ (Mrs. Manning) ಮ್ಯಾನಿಂಗ್ ಎನ್ನುವಳು ಸಮರ್ಥಿಸಿರುವಳು. ಯಾಸ್ಕರು ವ್ಯಾಕರಣ ತಿಳಿಯದ ವೈದಿಕರನ್ನು

ಮದ್ಧ್ಯಹೀತ ಮವಿಜ್ಞಾತಂ ನಿಗದೇನ್ಯೆ ವಶಬ್ಧ್ಯತೇ
ಅನುಗ್ನಾ ಇವಶುಷ್ಕಾಘೋನ ತಜ್ಜ್ವಲತಿ ಕರ್ಹಿಚಿತ್

ಎಂದು ದೂಷಿಸಿರುವರು.

ಉಪನಿಷತ್ತುಗಳಲ್ಲಿರುವ "ಸರ್ವೇಷಾಂವೇದಾನಾಂ ವಾಗೇವಾ ಯತನಂ" ಓಂ ಶೀಕ್ಷಾಂ ವ್ಯಾಖ್ಯಾಸ್ಯಾಮಃ ಇತ್ಯಾದಿಗಳಿಂದ ಆ ಕಾಲದಲ್ಲಿ ವ್ಯಾಕರಣಾಭ್ಯಾಸವು ಅತ್ಯಾವಶ್ಯಕವೆಂದು ತಿಳಿದಿದ್ದರು

ಎಂದು ಊಹಿಸಬೇಕಾಗುತ್ತದೆ. ಮುಂಡಕೋಪನಿಷತ್ತಿನಲ್ಲಿ ಅಪರಾವಿದ್ಯಾದಲ್ಲಿ ವ್ಯಾಕರಣವೂ ಸೇರಿದೆ. ಇವೆಲ್ಲವನ್ನೂ ತೋಲವ ಮಾಡಿ ಕೆಲವು ವಿಮರ್ಶಕರು ಸಂಹಿತಾಕಾಲದಲ್ಲಿ ವ್ಯಾಕರಣಾಭ್ಯಾಸವು ಅಷ್ಟು ಮುಖ್ಯವಾಗಿರಲಿಲ್ಲವೆಂದೂ ಬ್ರಾಹ್ಮಣಕಾಲದಲ್ಲಿ ಮಂತ್ರಗಳನ್ನು ರಕ್ಷಿಸಲು ಅತ್ಯಾವಶ್ಯಕವಾಗಿ ಕಂಡು ಬಂತೆಂದೂ. ಬೇರೆ ಬೇರೆ ಜನಾಂಗಗಳೊಡನೆ ಸೇರಿ ತಮ್ಮ ಭಾಷೆಯು ಹಾಳಾಗದಿರಲೆಂದು ವ್ಯಾಕರವನ್ನು ಕಲ್ಪಿಸಿಕೊಂಡರೆಂದೂ ಅಭಿಪ್ರಾಯಪಟ್ಟಿರುವರು. ಇದಕ್ಕಾಗಿಯೇ ಶೌನಕರ ಪ್ರಾತಿಶಾಖ್ಯೆಯ ಹುಟ್ಟಿದೆಂದು ಡಾಕ್ಟರ್ ಬರ್ನೆಲ್ (Dr. Burnell) ಮೊದಲಾದವರು ಹೇಳಿರುವರು. ಯಾಸ್ಕರಿಗೂ ಹಿಂದೆ ಪ್ರಾತಿಶಾಖ್ಯೆಗಳಿದ್ದವು. ಆದರೆ ಅವು ಈಗ ಲಭ್ಯವಾಗಲ್ಲ. ಈಗಿರುವ ಪ್ರಾತಿಶಾಖ್ಯೆಗಳಿದ್ದವು. ಆದರೆ ಅವು ಈಗ ಲಭ್ಯವಾಗಿಲ್ಲ. ಈಗಿರುವ ಪ್ರಾತಿಶಾಖ್ಯೆಗಳು ಪಾಣಿನಿಗೂ ಮುಂದಿನವೆಂದು ಹೇಳಲಾಗಿದೆ ಹ್ರಸ್ವದೀರ್ಘ. ಪ್ಲುತ. ಉದಾತ್ತಾದಿ. ಪ್ರಗೃಹ್ಯ. ಯಮ. ಷತ್ವ. ವಿಧಾನ. ಣತ್ವ ವಿಧಾನ. ಪುರುಷಾಧಿಕಾರ. ಗುರು. ಲಘು. ಸಂಧಿ. ಇವೆಲ್ಲವನ್ನೂ ಪಾಣಿನಿಯು ಎಲ್ಲರಿಗೂ ತಿಳಿದ ವಿಷಯವೆಂದು ಪರಿಗ್ರಹಿಸಿರುವರು.

ಇಷ್ಟು ಮೊದಲನೇ ಹಂತದಲ್ಲಿ ವ್ಯಾಕರಣದ ಮೂಲವನ್ನು ತಿಳಿದ ಮೇಲೆ. ಎರಡನೇ. ಹಂತದಲ್ಲಿ ನಾವು ಯಾಸ್ಕರ ನಿರುಕ್ತವನ್ನು ಕಾಣುವೆವು.

b) i) ಯಾಸ್ಕರು

ಇವರ ಕಾಲ –ಯಾಸ್ಕರಿಗೂ ಹಿಂದೆ ಅನೇಕ ವೈಯಾಕರಣರಿದ್ದರೆನ್ನುವುದಕ್ಕೆ ಅವರ ಗ್ರಂಥದಲ್ಲಿ ಆಧಾರಗಳಿವೆ. ಅದರಲ್ಲಿ ಆಗ್ರಾಯಣಃ. ಅಗ್ರಯಾಣಃ ಆಚಾರ್ಯಾಃ ಏಕೇ. ಐತಿಹಾಸಿಕಾಃ ಔದುಂಬರಾಯಣಃ ನೈದಾನಾಃ ನೈರುಕ್ತಾಃ ಪರಿವ್ರಾಜಕಃ ಇಂತಹ ಪ್ರಯೋಗಗಳಿಂದ ಇವರ ಹಿಂದೆಯೇ ವ್ಯಾಕರಣಾಧ್ಯಯನವು ಬಹಳ ಪ್ರಚಾರದಲ್ಲಿತ್ತೆಂದು ತಿಳಿಯಬಹುದು ಆದರೆ ಆ ಗ್ರಂಥಗಳು ಈಗ ನಮಗೆ ಲಭ್ಯವಾಗಿಲ್ಲ.

a) ಸಾಕ್ಷಾತ್ಕೃತ ಧರ್ಮಾಣಃ ಋಷಯೋಬಭೂವುಃ

b) "ತೇಪ ವರೇಭ್ಯೋಸಾಕ್ಷಾತ್ಕೃತ ಧರ್ಮಭ್ಯಃ ಉಪದೇಶೇನ ಮಂತ್ರಾನ್ ಸಂಪ್ರಾಪುಃ

c) ಉಪದೇಶಾಯ ಗ್ಲಾಯಂತೊ ಅಪರೆ ಗ್ರಹಣಾಯ ಇಮಂ ಗ್ರಂಥಂ ಸಮಾಮ್ನಾಸಿಘುಃ ವೇದು ಚವೇದಾಂಗಾನಿಚ"

ಈ ಮೂರು ವಾಕ್ಯಗಳಿಂದ ಋಷಿಗಳು. ಬ್ರಾಹ್ಮಣ. ವಚನಕಾರಣರೂ ಮತ್ತು ಪದ–ನಿಘಂಟು ಮೊದಲಾದ ಗ್ರಂಥಕಾರರೂ ಇವರಿಗೆ ಆದರ್ಶರಾಗಿದ್ದುದು ಕಂಡುಬರುತ್ತದೆ.

ಇವರು ಪಾಣಿನಿಗೆ ಹಿಂದೆ ಇದ್ದವರು ಎನ್ನುವುದರಿಂದ ಯಾವ ಸಂಶಯವೂ ಇಲ್ಲ. ಆದರೂ ಮ್ಯಾಕ್‌ಡೊನೆಲ್ ಮೊದಲಾದವರು ಎರಡು ಕಾರಣಗಳಿಗಾಗಿ ಯಾಸ್ಕರು ಪಾಣಿನಿಗಿಂತ ನವೀನರೆಂದು ಹೇಳಿರುವರು. ಆ ಎರಡು ಕಾರಣಗಳಿವು.

i) ನಿರುಕ್ತದ" ಅಪಾರ್ಣ" ಮುಂತಾದ ಶಬ್ದಗಳ ಉತ್ಪತ್ತಿಗೆ ಪಾಣಿನಿಯ ಸೂತ್ರಗಳಿಲ್ಲ. ಇವು ಗೊತ್ತಿದ್ದರೆ ಪಾಣಿನಿಯು ಹೇಳುತ್ತಿದ್ದರು.

ii) ಸೂರ್ಯಾ-ಎಂದರೆ ಸೂರ್ಯನ ಪತ್ನಿ ಎಂದು ಪಾಣಿನಿಗೆ ಗೊತ್ತಿಲ್ಲ. ಆದರೆ ಕಾತ್ಯಾಯನರು ಪಾಣಿನಿ iv, 1, 48 ಕ್ಕೆ ಸೂರ್ಯಾದೇವತಾಯಾಂ ಚಾಪ್ ವಕ್ತವ್ಯಃ ಎಂದು ವಾರ್ತಿಕವನ್ನು ಕೊಟ್ಟಿರುವನು. ಹಾಗೆಯೇ iv,1, 89ರಲ್ಲಿ, "ಪ್ರಾರ್ಣ. ಋಣಾರ್ಣ "ಎನ್ನುವುದಕ್ಕೆ ವಿವರಣೆಯನ್ನು ಕೊಟ್ಟಿರುವನು.

ಈ ಎರಡು ಕಾರಣಗಳು ಅಷ್ಟು ಸಮಂಜಸವಾಗಿಲ್ಲ. ಅವರು ಹೇಳದಿದ್ದರೆ ಗೊತ್ತಿಲ್ಲವೆನ್ನುವುದು ಸ್ಥೂಲದೃಷ್ಟಿ. ಅಷ್ಟಾಧ್ಯಾಯಿ ಮತ್ತು ನಿರುಕ್ತದಲ್ಲಿ ಕಂಡುಬರುವ ವ್ಯಾಕರಣ ವೈಲಕ್ಷಣ್ಯವನ್ನು ಮತ್ತು ಯಾಸ್ಕ ಮತ್ತು ಪಾಣಿನಿಯ ಶಬ್ದಗಳ ವೈಶಿಷ್ಟ್ಯವನ್ನೂ ಗಮನಿಸಿದರೆ, ಯಾಸ್ಕರಿಗೂ ಪಾಣಿನಿಗೂ ಮಧ್ಯೆ ಒಂದು ಶತಮಾನದವರೂ ಕಾಲಭೇದವೂ ಕಂಡುಬರುತ್ತದೆ. ಈಗ ಪಾಣಿನಿಯ ಕಾಲವು ಕ್ರಿ. ಪೂ. 7ನೇ ಶತಮಾನವೆಂದು ನಂಬಲಾಗಿದೆ. ಅಂದರೆ ಯಾಸ್ಕರ ಕಾಲ ಕ್ರಿ. ಪೂ. 8ನೇ ಶತಮಾನವೆಂದಾಗುತ್ತದೆ.

ii) ಯಾಸ್ಕರ ನಿರುಕ್ತ-ವೇದದಲ್ಲಿ ಬಂದಿರುವ ಮುಖ್ಯವಾದ ಪದಗಳನ್ನೆಲ್ಲಾ ಆರಿಸಿ ಅವುಗಳನ್ನು 5 ಅಧ್ಯಾಯಗಳಲ್ಲಿ ಸೇರಿಸಿಕೊಟ್ಟಿರುವ ಗ್ರಂಥವೇ ನಿರುಕ್ತ. ಮೊದಲಿನ 3 ಅಧ್ಯಾಯಗಳಲ್ಲಿ ಪರ್ಯಾಯಪದಗಳೂ, 4ರಲ್ಲಿ ಕಠಿಣಪದಗಳೂ ಮತ್ತು 5ರಲ್ಲಿ ದೇವತೆಗಳ ಹೆಸರುಗಳು ಅವುಗಳ ಅರ್ಥವು ಕೊಡಲ್ಪಟ್ಟಿವೆ. ಅಲ್ಲದೆ ಆ ಶಬ್ದಗಳು ಬಂದಿರುವ ವೇದ ಭಾಗವನ್ನು ತಿಳಿಸಿ ಆ ಶಬ್ದಗಳು ಧಾತುಗಳಿಂದ ಹೇಗೆ ಉತ್ಪನ್ನವಾಗಿದೆ. ಹಾಗೆ ರೂಪಗೊಳ್ಳಲು ಸಾಮಾಜಿಕ ಮತ್ತು ಚಾರಿತ್ರಿಕ ದೃಷ್ಟಿಯು ಹೇಗೆ ಸಹಾಯಕವಾಗಿದೆ. ಎನ್ನುವುದನ್ನು ತಿಳಿಸಿರುವರು. ಹೀಗೆ ಹೇಳುವಾಗ ತಮ್ಮ ಹಿಂದಣ ವೈಯಾಕರಣರನ್ನು ತಿಳಿಸಿರುವುದು. ವೇದಾಧ್ಯಾಯನದ ಸ್ವರೂಪ ಮತ್ತು ಫಲ ಮತ್ತು ದೇವತೆಗಳ ಪ್ರಕೃತಿಮಂಡಲದಲ್ಲಿ ಯಾವ ನಿಯತ ಕರ್ಮವನ್ನು ಹೊಂದಿರುವರು (cormological functions) ಎನ್ನುವುದನ್ನು ಆಯಾ ಸಂದರ್ಭಗಳಲ್ಲಿ ತಿಳಿಸಿರುವರು. ಎಲ್ಲಾ ನಾಮಪದಗಳೂ ಧಾತುಗಳಿಂದಲೇ ಉತ್ಪನ್ನವಾದವೆನ್ನುವುದು ಇವರ ಮತ. ಪ್ರತಿಪದವೂ ತನ್ನ ನೈಜರೂಪವನ್ನು ಹೇಗೆ ಧಾತುವಿನಿಂದ ಹೊಂದುತ್ತದೆ. ಇದಕ್ಕೆ ಪೂರ್ವಿಕ ಪ್ರತ್ಯಯ, ಉತ್ತರ ಪ್ರತ್ಯಯ ಮತ್ತು ವಿಭಕ್ತಿ ಮೊದಲಾದ ಪ್ರತ್ಯಯ ಹೀಗೆ ಪ್ರತಿ ಶಬ್ದದಲ್ಲಿಯೂ ನಾಲ್ಕು ಭಾಗಗಳಿರುವುದನ್ನು ತಿಳಿಸಿರುವರು. ಇದೇ ಕ್ರಮವನ್ನು ಮುಂದೆ ಗ್ರೀಸ್ ದೇಶದ ಅರಿಸ್ಟಾಟಲ್ ಅವನ ಗ್ರಂಥಗಳಲ್ಲಿ ನೋಡಬಹುದು. ಇದರಿಂದ ಗ್ರೀಕ್ ಭಾಷೆ ನಮ್ಮ ಭಾಷೆಯಿಂದ ಸ್ಫೂರ್ತಿಯನ್ನು ಹೊಂದಿತೆಂದು ಊಹಿಸಲು ಸಾಧ್ಯವಾಗಿದೆ. ಒಟ್ಟಿನಲ್ಲಿ ಯಾಸ್ಕರು ಸಂಸ್ಕೃತ ಭಾಷೆಗೆ ಜೀವಕಳೆ ತುಂಬಿದರೆಂದು ನಿಸ್ಸಂದೇಹವಾಗಿ ಹೇಳಬಹುದು.

c) i) ಯಾಸ್ಕರಿಗೂ ಪಾಣಿನಿಗೂ ಮಧ್ಯವರ್ತಿ ಕಾಲ -ಯಾಸ್ಕರಾದ ಮೇಲೆ ಪಾಣಿನಿಗೆ ಮುಂಚೆ ಅನೇಕ ವೈಯಾಕರಣಿಗಳಿದ್ದರೆನ್ನುವುದಕ್ಕೆ ನಮಗೆ ಪಾಣಿನಿಯೇ ಪ್ರಮಾಣ. ಇವರಲ್ಲಿ ಆಪಿಶಲಿ ಮತ್ತು ಕಾಶಕೃತ್ಸ್ನರು ಪ್ರಸಿದ್ಧರಾಗಿದ್ದರೆಂದು ತೋರುತ್ತದೆ. ಪಾಣಿನಿಯ vi-1-3-92, vi-95ರಲ್ಲಿ ಆಪಿಶಲಿರನ್ನು iv,2, 65 ಮತ್ತು v,1,51,ರಲ್ಲಿ ಕಾಶಕೃತ್ಸ್ನರನ್ನು ಪಾಣಿನಿಯು ನಮೂದಿಸಿರುವರು (ಆಪಿಶಲಸ್ತು ರುಸ್ತು ಲಾಯಮಃ ಸಾರ್ವಧಾತುಕಾಸು ಛಂದ ಸೀತಿ ವರಂತಿ) vi, 3,95, ತ್ರಿಕಂಕಾಶಕೃತ್ಸ್ನಂ v,1,51, ತ್ರಿಕಾಃ ಕಾಶಕೃತ್ಸ್ನಃ iv,2, (65) 'ಅಸ್' ಧಾತುವನ್ನು 'ಸ' ಎಂದು ಆಪಿಶಲಿಯು ಆ ಗ್ರಂಥಭಾಗವನ್ನು ಉಲ್ಲೇಖಿಸಿರುವರು (ಆಪಿಶಲಿ-ಕಾಶಕೃತ್ಸ್ನಯೋಃ ತದ್ಗ್ರಂಥೇ ಇತಿವಚನಾತ್ ಅನ್ಯತ್ರ ಪ್ರತಿಷೇಧಾಭಾವಃ) ಪಾಣಿನಿಯು ಪ್ರತ್ಯಯ ಪ್ರಥಮಾ. ದ್ವಿತೀಯಾ. ತತ್ಪುರುಷ. ಕರ್ಮಧಾರಯ. ಬಹುವ್ರೀಹಿ. ಕೃತ್ ತದ್ಧಿತ ಮುಂತಾದ ಅನೇಕ ಶಬ್ದಗಳನ್ನು ಅರ್ಥವಿವರಣೆ ಇಲ್ಲದೆ ಪ್ರಯೋಗಿಸಿರುವುದರಿಂದ ಇವರ ಹಿಂದಣ ವೈಯಾಕರಣರಿಂದ ಇವುಗಳ ಅರ್ಥವು ಸ್ಪಷ್ಟವಾಗಿರಬೇಕು.

c. (ii) ಐಂದ್ರ ವ್ಯಾಕರಣ-ಪಾಣಿನಿಗೆ ಹಿಂದೆ "ಐಂದ್ರವ್ಯಾಕರಣ"ವಿತ್ತೆಂದು ಇದನ್ನು ಪಾಣಿನಿಯು ವಿನಾಶಗೊಳಿಸಿದರೆಂದೂ ಕಥಾಸರಿತ್ಸಾಗರದ 4ನೇ ತರಂಗದಲ್ಲಿ ಹೇಳಿದೆ ಅಲ್ಲಿಯೇ ಈ ಐಂದ್ರ ವ್ಯಾಕರಣವನ್ನು ಅನುಸರಿಸುತ್ತಿದ್ದವರು ಕಾತ್ಯಾಯನ (ವರರುಚಿ), ವ್ಯಾಡಿ ಮತ್ತು ಇಂದ್ರದತ್ತ -ಎಂದು ಹೇಳಲಾಗಿದೆ. ಹುಯೆಂತ್ಸಾಂಗ್ ಮತ್ತು ಟಿಬೆಟ್ ಚರಿತ್ರಕಾರನಾದ ತಾರಾನಾಥನೂ ಹಾಗೆಯೇ ಹೇಳಿರುವರು. ತಾರಾನಾಥನು. ಚಾಂದ್ರವ್ಯಾಕರಣವು ಪಾಣಿನಿಯ ಮತಕ್ಕೆ ಹೋಲುತ್ತದೆಂದೂ. ಕಾಲಾಪವ್ಯಾಕರಣವು ಐಂದ್ರ ಪದ್ಧತಿಯಂತಿದೆ ಎಂದೂ ಈ ವ್ಯಾಕರಣವನ್ನು ಶರ್ವವರ್ಮನಿಗೆ ಕಾರ್ತಿಕೇಯನು ಉಪದೇಶಿಸಿದನೆಂದೂ ಹೇಳಿರುವನು. ಇದೆಲ್ಲಕ್ಕೂ ಮೂಲಕಾರಣ. ತೈತ್ತರೀಯ ಸಂಹಿತೆಯ(VII 4-7)

ವಾಗ್ವೈ ಪರಾಚ್ಯವ್ಯಾಕೃತಾವದತ್. ತೇ ದೇವಾಃ
ಇಂದ್ರ ಮಬ್ರುವನ್. ಇಮಾಂ ನೋ ವಾಚಂ ವ್ಯಾಕುರ್ವಿತಿ
ತಮಿಂದ್ರೋ ಮಧ್ಯತೋ ವಕ್ರಮ್ಯ ವ್ಯಾಕರೋತ್

ಎನ್ನುವ ಮಂತ್ರವೇ ಎಂದು ತೋರುತ್ತದೆ ಅಲ್ಲದೆ ಐಂದ್ರ ವ್ಯಾಕರಣದಲ್ಲಿರುವ ಪಾರಿಭಾಷಿಕ ಪದಗಳು ಪಾಣಿನಿಯ ಪಾರಿಭಾಷಿಕ ಪದಗಳಿಗಿಂತಲೂ ಸರಳ ಮತ್ತು ಪುರಾತನವೆಂದು ತೋರುತ್ತದೆ ಐಂದ್ರವ್ಯಾಕರಣವು ಪಾಣಿನಿಗಿಂತಲೂ ಪ್ರಾಚೀನವೆನ್ನುವುದಕ್ಕೆ ಇದೂ ಒಂದು ಕಾರಣವಿರಬಹುದು. ಡಾ. ಬಾರ್ನೆಲ್ (Dr. Barnell) ವಿಮರ್ಶಕನು "ತೊಳಕಾಪ್ಪಿಯಂ" ಎನ್ನುವ ತಮಿಳು ವ್ಯಾಕರಣವು ಈ ಐಂದ್ರವ್ಯಾಕರಣವನ್ನು ಅನುಸರಿಸುತ್ತದೆಂದು ಹೇಳಿರುವನು ಅದು ಪಾಂಡ್ಯರಾಜನ ಆಸ್ಥಾನದಲ್ಲಿ ಓದಲ್ಪಟ್ಟು ಅನುಮೋದಿಸಲ್ಪಟ್ಟಿತೆಂದೂ ಹೇಳಿರುವನು.

ಇಷ್ಟಾದರೂ ಐಂದ್ರ ವ್ಯಾಕರಣದಿಂದಲೇ ಪಾಣಿನಿಗೆ ಸಹಾಯವಾಯಿತೆಂದೂ ಹೇಳುವುದು ತಪ್ಪು. ಹಾಗಿದ್ದರೆ ಅದನ್ನು ಪಾಣಿನಿಯು ಹೇಳದೇ ಇರುತ್ತಿರಲಿಲ್ಲ. ಅಷ್ಟಾಧ್ಯಾಯಿ. ಮಹಾಭಾಷ್ಯ

ಮತ್ತು ಕಾಶಿಕಾ (ಕ್ರಿ. ಶ. 650) ಈ ಗ್ರಂಥಗಳಲ್ಲಿ ಐಂದ್ರ ವ್ಯಾಕರಣದ ಪ್ರಸ್ತಾಪವಿಲ್ಲದುದರಿಂದ. ಕ್ರಿ. ಶ. 650ಕ್ಕೂ ಅರ್ವಾಚೀನ ಗ್ರಂಥವೆಂದು ಹೇಳಬೇಕಾಗುತ್ತದೆ.

(iii) ಕ್ರಿ. ಪೂ. 700-600 ಪಾಣಿನಿ ಮುನೇಃ ಕಾಲ ದೇಶ ಗ್ರಂಥಾವಿಕರಂ

a) ಕಾಲ- ಪೀಟರ್‌ಸನ್ ಮತ್ತು ಪಿಶ್ಚಲ್ ಇವರಿಬ್ಬರೂ ಪಾಣಿನಿಯ ಕಾಲವನ್ನು ಕ್ರಿ.ಪೂ. 500 ಎಂದರಿರುವರು. ವಲ್ಲಭದೇವನ ಸುಭಾಷಿತಾವಳಿಯಲ್ಲಿರುವ ಶ್ಲೋಕವು ಪಾಣಿನಿಯು ರಚಿಸಿದ್ದು ಎನ್ನುವ ಆಧಾರದ ಮೇಲೆ ಈ ಅಭಿಪ್ರಾಯವನ್ನು ಕೊಟ್ಟಿರುವರು. ವೀಬರ್ ಮತ್ತು ಮ್ಯಾಕ್ಸ್‌ಮುಲ್ಲರ್ ಇವರಿಬ್ಬರೂ ಪಾಣಿನಿಯ ಕಾಲವನ್ನು ಕ್ರಿ. ಪೂ. 350 ಎಂದು ಹೇಳಿರುವನು. ಇವರೆಲ್ಲರಿಗೂ ಅಷ್ಟಾಧ್ಯಾಯಯ iv-1-49ರಲ್ಲಿ ಬಂದಿರುವ 'ಯವನ' ಶಬ್ದವೇ ಆಧಾರವಾಗಿದೆ. ಡಾ ಗೋಲ್ಡ್ ಸ್ಟಕರ್ ಮತ್ತು ಭಂಡಾರ್ಕರ್ ಇವರಿಬ್ಬರೂ ಪಾಣಿನಿಯು ಕ್ರಿ. ಪೂ. 500ಕ್ಕಿಂತ ಅರ್ವಾಚೀನರಲ್ಲವೆಂದೂ ಹೇಳಿರುವರು.

# u¨ra "ಯಮನ" ಶಬ್ದವು ಪಾಣಿನಿಯ ಸೂತ್ರದಲ್ಲಿ ಇರುವುದೇ ಕಾರಣವಾಗಿದೆ. ಅಲೆಕ್ಸಾಂಡರನು (ಕ್ರಿ. ಪೂ. 327) ನಮ್ಮವರಿಗೆ ಪರಿಚಯವಾದ ಮೇಲೆ, ಪಾಣಿನಿಯು ಇದ್ದಿರಬೇಕು ಎಂದು ಅದಕ್ಕೆ ಸ್ವಲ್ಪ ಹಿಂದು ಮುಂದು ಇರಬೇಕೆಂದು ಊಹೆಗೆ ಈ ಶಬ್ದವು "ಗ್ರೀಕರ" ಎನ್ನುವ ಅರ್ಥವನ್ನು ಮಾತ್ರ ಕೊಡುತ್ತದೆ. ಎನ್ನುವುದೇ ಆಧಾರ. ಆದರೆ ಡಾ. ರಾಜೇಂದ್ರಲಾಲ್ ತನ್ನ ಇಂಡೋ ಆರ್ಯನ್ ಎನ್ನುವ ಪುಸ್ತಕದಲ್ಲಿ ಯವನ ಎಂದರೆ ಅಯೋನಿಯನ್ ಗ್ರೀಕ್ ಎಂದು ಮಾತ್ರ ಅರ್ಥವಲ್ಲವೆಂದು ತಿಳಿಸಿರುತ್ತಾನೆ. ಸಂಸ್ಕೃತದ ಯವನ ಶಬ್ದವು ಕ್ರಿ. ಪೂ. 9ನೇ ಶತಮಾನದಷ್ಟು ಅಮೋನಿಯನ್ನರು. ಅಸೀರಿಯನ್ನರು (ಅಸುರ). ಸ್ಕಿಥಿಯನ್. ಪಾರ್ಥಿಯನ್ (ಪಲ್ಲವ) ಮತ್ತು ಪಾರಶೀಕರು ಇವರನ್ನೂ ಹಿಂದುಗಳು ಬಹುಕಾಲದ ಹಿಂದೆಯೇ ತಿಳಿದಿದ್ದರೆಂದು ಸಮರ್ಥಿಸಿರುವನು. ಕ್ರಿ. ಪೂ. 400ಕ್ಕಿಂತ ಹಿಂದೆಯೇ ಹಿಂದೂಗಳಿಗೂ ಮೆಡಿಟರೇನಿಯನ್ ಸಮುದ್ರದ ತೀರವಾಸಿಗಳಿಗೂ ಸಂಪರ್ಕವಿತ್ತೆಂದು ನಿಶ್ಚಿತವಾಗಿದೆ. ಮಹೆಂಜೋದಾರೋ ಮತ್ತು ಹರಪ್ಪ ಅವಶೇಷಗಳು ಸಿಕ್ಕಿದ ಮೇಲಂತೂ ಇದು ಸಿದ್ಧವಾಗಿದೆ. ವಿನ್‌ಸೆಂಟ್‌ಸ್ಮಿತ್ ಚರಿತ್ರಕಾರನು ಪತಂಜಲಿಗೂ ಕಾತ್ಯಾಯನರಿಗೂ. ಹಾಗೆಯೇ ಕಾತ್ಯಾಯನರಿಗೂ ಪಾಣಿನಿಗೂ 200-300 ವರ್ಷಗಳ ವ್ಯತ್ಯಾಸವನ್ನು ಕೊಟ್ಟಿರುವನು. ವಿಶ್ವನಾಥ್ ಕಾಶೀನಾಥ ರಾಜವಾಡೆ "ಸಂಕಲಾದಿಭ್ಯಶ್ಚ (iv-2-75) ಎನ್ನುವ ಪಾಣಿನಿ ಸೂತ್ರದ ಆಧಾರದ ಮೇಲೆಯೂ ವಿನ್‌ಸೆಂಟ್ ಸ್ಮಿತ್ ಅಭಿಪ್ರಾಯವನ್ನೂ ಕ್ರೋಢೀಕರಿಸಿ. ಒಂದು ನಿರ್ಧಾರಕ್ಕೆ ಬಂದಿರುತ್ತಾನೆ. ಅಲೆಕ್ಸಾಂಡರನು ಸಂಕಲ ದೇಶದವರು ಪ್ರತಿಭಟಿಸಿದ್ದರಿಂದ ಅವನು ಆ ಪಟ್ಟಣವನ್ನು ನೆಲಸಮ ಮಾಡಿದನು. ಆದರೆ ಪಾಣಿನಿಯ ಕಾಲದಲ್ಲಿ ಅದು ಚೆನ್ನಾಗಿತ್ತು. ಹಾಗೆಯೇ "ಪರ್ಶ್ವಾದಿ ಯೌಧೇಯಾದಿಭ್ಯೋಣಜಾ (iv-8-117) ಎನ್ನುವ ಸೂತ್ರದ ಆಧಾರದ ಮೇಲೆ ಪರ್ಶಿಯನ್ನರು. ಅಸುರರು. ಅಸೀರಿಯನ್ನರು ಆಯುಧ ಜೀವಿಗಳು ಎಂದು ಹೇಳಿರುವುದರಿಂದಲೂ. ಇವರೆಲ್ಲರೂ ಕ್ರಿ. ಪೂ. 329-338ರಲ್ಲಿ ಪೂರ್ಣವಾಗಿ ನಾಶಗೊಳಿಸಲ್ಪಟ್ಟರು ಎನ್ನುವ ಕಾರಣದ ಮೇಲೆ ಈ ನಾಲ್ಕನೇ ಶತಮಾನಕ್ಕೆ ಬಹಳ ಹಿಂದೆಯೇ ಪಾಣಿನಿಯು ಇದ್ದಿರಬೇಕೆಂದು ತಿಳಿಯಬೇಕಾಗುತ್ತದೆ.

ಕಾತ್ಯಾಯನರ ವಾರ್ತಿಕದಲ್ಲಿ 'ಶಕ' ಶಬ್ದವಿದೆ. ಇವರು ಕಾಂಬೋಜಾದಿ ಗಣಕ್ಕೆ ಸೇರಿದವರು. ಇವರಿಗೆ ಮತ್ತು ಸ್ಕಿಥಿಯನ್ನರಿಗೆ ಸ್ವಂತರಾಜ್ಯವಿದ್ದುದು ಪಾಣಿನಿಗೆ ತಿಳಿದಿಲ್ಲ. ಇವರ ಮೊದಲನೇ ರಾಜದಿಪಾರಸ್ –7ನೇ ಶತಮಾನದವನು. ಆದ್ದರಿಂದ ಪಾಣಿನಿಯು ಕ್ರಿ. ಪೂ. 7ನೇ ಶತಮಾನದವರೆಂದೂ. ಆ ರಾಜನಿಗೆ ಹಿಂದೆಯೇ ಇದ್ದಿರಬೇಕೆಂದೂ ತಿಳಿಯಬೇಕಾಗುತ್ತದೆ.

b) ಪಾಣಿನಿಯ ಜೀವನ ಚರಿತ್ರೆ.–ಇತ್ಯಾದಿ– ಪಾಣಿನಿಯ ವಿಷಯದಲ್ಲಿ ಯಾವುದೂ ನಿರ್ದಿಷ್ಟವಾಗಿ ತಿಳಿದಿಲ್ಲ. ಇವರ ವಿಷಯದಲ್ಲಿ ದಂತ ಕಥೆಗಳು ಜಾಸ್ತಿಯಾಗಿವೆ. 1) ಭವಿಷ್ಯತ್ ಪುರಾಣ. ೨. ಪಂಚತಂತ್ರ ೩. ಮತ್ಸ್ಯ ಪುರಾಣ ೪. ವಾಯು ಪುರಾಣ. ೫. ಭಾಮಹನ ಕಾವ್ಯಾಲಂಕಾರ ಸೂತ್ರ ವೃತ್ತಿ ೬. ಕಥಾಸರಿತ್‌ಸಾಗರ ೭. ಬೃಹತ್ಕಥಾಮಂಜರಿ ೮. ನೇಪಾಳ ದೇಶದಲ್ಲಿ ಪ್ರಚಾರದಲ್ಲಿರುವ ಮಹತ್ವ ಇವುಗಳ ಆಧಾರದ ಮೇಲೆ ವಿಷಯಗಳನ್ನು ಸಂಗ್ರಹಿಸಿದರೆ ಎಷ್ಟೋ ವಿಷಯದಲ್ಲಿ ಭಿನ್ನಾಭಿಪ್ರಾಯ ತಲೆದೋರಿದರೂ ಒಂದು ನಿಶ್ಚಿತ ಸಂಗತಿಯನ್ನು ಊಹಿಸಬಹುದು.

ಇದರ ನಾನಾ ಹೆಸರುಗಳನ್ನು–

ಪಾಣಿನಿಸ್ತ್ವಾಹಿಕೋ ದಾಕ್ಷಿ– ಪುತ್ರಃ ಶಾಲಂಗಿ ಪಾಣಿನಾ ಶಾಲಾತುರೀ ಯಃ ಎಂದು ಪುರುಷೋತ್ತಮ ದೇವಕೃತ ತ್ರಿಕಾಂಡ ಶೇಷಕೋಶದಲ್ಲಿಯೂ. ಶಾಲಾ ತುರೀಯ ಕೋದಾಕ್ಷೀಪುತ್ರಃ ಪಾಣಿನಿರಾಹಿಕಃ ಎಂದು ವೈಜಯಂತಿಯಲ್ಲೂ ಕಾಣುವೆವು. ಮತ್ಸ್ಯಪುರಾಣದ. ಧನಂಜಯಃ ಕಪರ್ದೀಯಃ ಪರಿಕೂಟಶ್ಚ ಪಾರ್ಥಿವಃ ಪಾಣಿನಿಶ್ಚೈವ ತ್ರ್ಯಾರ್ಷೇಯಾಃ ಸರ್ವ್ವ ಏತೇಪ್ರತೀರ್ತಿತಾಃ ಎನ್ನುವ ಶ್ಲೋಕವನ್ನೂ ವಾಯುಪುರಾಣದ " ಬಭ್ರ ವಃ ಪಾಣಿನ ಶ್ಚೈವ ಧ್ಯಾನ ಜಪ್ಯಾಸ್ತಥೈವಚ" ಎನ್ನುವ ಶ್ಲೋಕವನ್ನೂ ಗಮನಿಸಿದರೆ 'ಪಾಣಿನಿ' ಎನ್ನುವುದು ಗೋತ್ರ ನಾಮನೆಂದೂ. 'ಆಹಿಕ' ಎನ್ನುವುದ ಇವರ ಮೂಲನಾಮವೆಂದೂ. "ದಾಕ್ಷೀಪುತ್ರಃ" ಎನ್ನುವುದು ಇವರ ಮೂಲ ನಾಮವೆಂದೂ. "ದಾಕ್ಷಿಪುತ್ರಃ ಎನ್ನುವುದು ತಾಯಿಯಿಂದ ಬಂದಿದ್ದ ಎಂದೂ ತಿಳಿಯಬೇಕಾಗುತ್ತದೆ. "ದಾಧಾ ಘ್ವದಾಪ್" ಎನ್ನುವ ಸೂತ್ರ ವ್ಯಾಖ್ಯಾನದಲ್ಲಿ ಮಹಾಭಾಷ್ಯದಲ್ಲಿ " ಸರ್ವೇಸರ್ವಪದಾದೇಶಾಃ ದಾಕ್ಷೀಪುತ್ರಸ್ಯ ಪಾಣಿನೇಃ "ಎನ್ನುವ ವಾಕ್ಯವೂ. ಸಮುದ್ರಗುಪ್ತನು ಬರೆದಿರುವ ಕೃಷ್ಣಚರಿತದಲ್ಲಿ ದಾಕ್ಷೀಪುತ್ರವ ಚೋವ್ಯಾಖ್ಯಾ ಕುರ್ಮಿ ಮೀಮಾಂಸಕಾಗ್ರಣೀಃ" ಎನ್ನುವ ವಾಕ್ಯವು ಪಾಣಿನಿಯ ಶಿಕ್ಷೆಯಲ್ಲಿ "ಶಂಕರಃ ಶಾಂಕರೀಂ ಪ್ರಾದಾತ್ ದಾಕ್ಷೀಪುತ್ರಾಯ ಧೀಮತೇ" ಎನ್ನುವ ವಾಕ್ಯವೂ ಪಾಣಿನಿಯ ತಾಯಿ ದಾಕ್ಷೀ ಎನ್ನುವುದನ್ನೂ ಸಮರ್ಥಿಸುತ್ತದೆ. ದಾಕ್ಷಿಯು ದಕ್ಷಕುಲದ ಕನ್ಯೆ. ಭವಿಷ್ಯತ್ ಪುರಾಣದಲ್ಲಿ ಪಾಣಿನಿಯ ತಂದೆ "ಸಾಮನಸ್ಯ" ಎಂದು ಹೇಳಿದೆ. ( "ಸಾಮಾನ ಸ್ಯಸುತಃ ಶ್ರೋಷ್ಠಃ ಪಾಣಿನಿರ್ನಾಮ ವಿಶ್ರುತಃ )" ತಥಾ ಚಶ್ರೂಯತೇ ಭಗವತಾ ಪಿಂಗಳೇನ ಪಾಣಿನ್ಯನು ಜೇನ" ಎನ್ನುವ ವಾಕ್ಯದಿಂದಲೂ. "ಜ್ಯೇಷ್ಠ ಭ್ರಾತೃ ಭಿರ್ವಿಹಿತೇ ವ್ಯಾಕರಣೇ ಅನುಜಸ್ತತ್ರ ಭವಾನ್ ಪಿಂಗಳಾಚಾರ್ಯಃ ತನ್ಮ ತಮನಾಭಾಷ್ಯಂ ಶಿಕ್ಷಾಂವಕ್ತುಂ ಪ್ರತಿಜಾನೀತೇ" ಎನ್ನುವ ಶಿಕ್ಷಾ ಸಂಗ್ರಹದ ವಾಕ್ಯದಿಂದಲೂ ಪಿಂಗಳನು ಪಾಣಿನಿಯ ಅನುಜ ಎಂದರೆ ತಮ್ಮ ಭಾಮಹನ ಕಾವ್ಯಾಲಂಕಾರ ಸೂತ್ರವೃತ್ತಿಯಲ್ಲಿರುವ ಶಲಾತುರೋ ನಾಮಗ್ರಾಮಃ ಸೋಭಿಜನಃ ಅಸ್ಯಾಸ್ತೀತಿ

ಶಾಲಾತುರೀಯಃ ತತ್ರ ಭವಾನ್ ಪಾಣಿನಿಃ ಎನ್ನುವ ವಾಕ್ಯದಿಂದ ಇವರ ಊರು ಶಲಾತು. ಈ ಶಲಾತುರನೆನ್ನುವ ಹೆಸರು –ಶಲಾತುರೀ ಸಲಾತುರ ಹಲಾಧರ –ಹಲಾಹುರ–ಲಾಹುರ-ಲಾಹೋರ(lahore)'1ಎಂದು ಪರಿವರ್ತನೆ ಹೊಂದಿದೆ ಎಂದು ಹೇಳಲಾಗಿದೆ. ಕ್ರಿ. ಶ. 7ನೇ ಶತಮಾನದ ಚೀನಾಯಾತ್ರಿಕ ಹುಯೆಂತ್ಸಾಂಗ್‌ನ ಮಾತಿನಿಂದಲೂ ಇದೇ ಸಿದ್ಧವಾಗುತ್ತದೆ.

ತಾಯಿ–ದಾಕ್ಷಿ, ತಂದೆ–ಸಾಮಾನಸ್ಯ, ಹುಟ್ಟೂರು –ಶಲಾತುರ ಅಥವಾ ಲಾಹೋರ್ –ತಮ್ಮ ಪಿಂಗಳಾಚಾರ್ಯ.

ಕಥಾಸರಿತ್ಸಾಗರ, ಬೃಹತ್ಕಥಾಮುಂಜರೀ ಮತ್ತು ಭವಿಷ್ಯತ್ ಪುರಾಣ ಈ ಮೂರು ಗ್ರಂಥಗಳನ್ನು ನೋಡಿದರೆ, ಪಾಣಿನಿಯು ತಪಸ್ಸು ಮಾಡಿ, ಈಶ್ವರವನ್ನು ಸಂತೋಷಪಡಿಸಿ ಅವನ ಅನುಗ್ರಹದಿಂದ ವ್ಯಾಕರಣಶಾಸ್ತ್ರವನ್ನೂ ಬರೆದರೆಂದೂ ನಿಶ್ಚಯವಾಗಿ ಹೇಳಬಹುದು.

ಕಥಾಸರಿತ್ಸಾಗರ– ಅಥಕಾಲೇನವರ್ಷಸ್ಯ ಶಿಷ್ಯನರ್ಗೋಮಹಾನಭೂತ್
ತತ್ರೈಕಃ ಪಾಣಿನಿರ್ನಾಮ ಜಡಬುದ್ಧಿ ತರೋಭವತ್
ಸಶುಶ್ರೂಷಾ ಪರಿಕ್ಲಿಷ್ಟಃ ಪ್ರೇಷಿತೋವರ್ಷಭಾರ್ಯಯಾ
ಅಗಚ್ಛತ್ತ ಪಸೇ ಖಿನ್ನಃ ವಿದ್ಯಕಾಮೋಹಿ ಮಾಲಯಂ
ತತ್ರತೀವ್ರೇಣ ತಪಸಾ ತೋಷಿತಾತ್ ಇಂದ್ರುಶೇಖರಾತ್
ಸರ್ವವಿದ್ಯಾಮುಖಂತೇನ ಪ್ರಾಪ್ತಂ ವ್ಯಾಕರಣಂ ನವಂ

ಬೃಹತ್ಕಥಾಮಂಜರಿಕ್ಷ್ಮಾಜೇಂದ್ರದತ್ತ ಸಹಿತೇ ಸರ್ವಕ್ಷೇಮಯಿವಿಶ್ರುತೇ
ಪಾಣಿನಿರ್ನಾಮವರ್ಷಸ್ಯ ಶಿಷ್ಯಃಪೂರ್ವಂ ಜಡಾಶಯಂ
ತಪಸಾ ಶಂಕರಾತ್ ಪ್ರಾಪ್ಯಂ ನವಂ ವ್ಯಾಕರಣಂವಶೀ
ದಿನಾನ್ಯಷ್ಟಾ ವಿವಾದೇ, ಮೇ ಪ್ರತಿವಾದೀ ಚಮೋಬವತ್

ಭವಿಷ್ಯತ್ ಪುರಾಣಾಮನ ಸ್ಯಸುತಃ ಶ್ರೇಷ್ಠಃ ಪಾಣಿನಿರ್ನಾಮು ವಿಶ್ರುತಃ
ಕ್ರಣಭುಕ್ ವರಶಿಷ್ಯೈ ಶ್ಚ ಶಾಸ್ತ್ರ ಜ್ಞೈಃಸ ಪರಾಜಿತಃ
ಲಜ್ಜಿತಃ ಪಾಣಿನಿ ಸ್ತತ್ರ ಯಮೌತೀರ್ಥಾಂತರಂಪ್ರತಿ
ಸ್ನಾತ್ವಾ ಸರ್ವಾಣಿ ತೀರ್ಥಾನಿ ಸಂಸ್ಪೃರ್ಶ್ಯ ಪಿತೃದೇವತಾಃ
ಕೇದಾರ ಮುದಕಂ ಪೀತ್ವಾ ಶಿವಧ್ಯಾನ ಪರೋಭವತ್

ಪಾಣಿನಿಯ ತಪೋಭೂಮಿಯನ್ನು ಹುಡುಕುವಾಗ ನೇಪಾಳದಲ್ಲಿ 'ಪಣೀನ' ಎನ್ನುವ ಗ್ರಾಮವೂ, ಅದೇ ಹೆಸರಿನ ಬೆಟ್ಟವೂ ಈಗ ಗೋಚರವಾಗಿದೆ. ಈ ಬೆಟ್ಟದ ಸುತ್ತಲೂ ಪ್ರಸಿದ್ಧ ಪೌರಾಣಿಕ ಪುಣ್ಯಸ್ಥಳಗಳಿವೆ. ಒಂದು ಕೋಶ ದೂರದಲ್ಲಿ ದುರ್ವಾಸರಾಶ್ರಯವಿದೆ. ಅವರ ಶಿಲಾಪ್ರತಿಮೆಯೂ ಇದೆ. ಉತ್ತರಕ್ಕೆ ೪ ಕ್ರೋಶ ದೂರದಲ್ಲಿ ಗಂಡಕೀನದಿ ದಕ್ಷಿಣ ವೇದದಲ್ಲಿ ರುರುಕ್ಷೇತ್ರವೆನ್ನುವ

ಸಿದ್ಧಪೀಠವಿದೆ. ಈಗ ಅದರ ಹೆಸರು "ರಿಡಿ"ಗಂಡಕೀನದಿಯ ಮಹಿಮೆಯು ವಾರಾಹ ಪುರಾಣದಲ್ಲಿ ವರ್ಣಿತವಾಗಿದೆ.

ಅಸ್ಯಾಂ ಭವಾಯೋ ಬಾಶ್ಮಾನಃ ಚಕ್ರ ಚಿಹ್ನೈರಲಂಕೃತಾಃ
ತೇ ಸಾಕ್ಷಾ ಭ್ಭಗವಂತೋ ಹಿ ಸ್ವಸ್ವರೂಪಧರಾಃ ತರಾಃ

ಈ ಗಂಡಕಿಯ ದಡದಲ್ಲಿ ಭೃಗು ಆಶ್ರಮವಿದೆ. ಇದು ಪುಲಸ್ಯ-ಪುಲಹರು (ಭ್ರಾತೃಗಳು ತಪಸ್ಸು ಮಾಡಿದ ಸ್ಥಳ.

ವರಹಾ ಪ್ರಮಾಣದಲ್ಲಿ-

ಏಕದಾಪ್ರಥಮೇ ಕಲ್ಪೇ ರಸ್ಯಾಘ್ಞಂ ಶಿರಸಾದಧತ್
ಪುಲಹೋನಾಮಬ್ರಾಹ್ಮರ್ಷಿಃ ಪುಲಸ್ತ್ಯೋಽಪಿಮಹಾನ್ ಋಷಿ
ಸೃಷ್ಟ್ಯರ್ಥಂಗಂಡಕೀ ತೀರೇ ಜಗ್ಮತು ಸ್ತ್ವೌಕೃತಾದರೌ
ಕೃತ್ವಾಶ್ರಮವದಂತತ್ರ ಚಕ್ರತು ಸ್ತೌಮಹತ್ತಪಃ

ಈ ವಣೇನ ಪರ್ವತದ ಪಶ್ಚಿಮಕ್ಕೆ"ನರ್ತನಾಚಲ"ವಿದೆ. ಇದು ಈಗ ಅಪಭ್ರಂಶದಿಂದ 'ನರ್ಪಾನಿ' ಆಗಿದೆ. ಇಲ್ಲಿ ರಾವಣನು ನರ್ತನ ಮಾಡಿ ಶಿವನನ್ನು ಸಂತೋಷಪಡಿಸಿದನೆಂದು ಐತಿಹ್ಯವಿದೆ. ಇಲ್ಲಿ ವರಾಹ ಪುರಾಣದಲ್ಲಿ ಹೇಳಿರುವಂತೆ, ವಾಣೇನಾದ್ರಿಯನ್ನು ಭೇದಿಸಿ "ವಾಣ ಗಂಗೆ"ಯು ಪುಣ್ಯತೀರ್ಥವಾಗಿ ಹರಿಯುತ್ತಿದೆ. ಈಗಲೂ ಕೂಡ ಧಾರ್ಮಿಕದೃಷ್ಟಿಯುಳ್ಳ ಜನರು ಏಕಾದಶೀ ಮತ್ತು ಮಕರ ಸಂಕ್ರಾಂತಿ ದಿನಗಳಲ್ಲಿ ವಣೇನ ಪರ್ವತಕ್ಕೆ ಹೋಗಿ ಸಿದ್ಧೇಶ್ವರ (ಶಂಕರ) ನನ್ನನ್ನು ದರ್ಶನಮಾಡಿ ಬರುತ್ತಾರೆ.

ಇಷ್ಟನ್ನು ನಾವು ನಂಬಬಹುದು. ಆದರೂ ಕೆಲವು ದಂತಕಥೆಗಳಲ್ಲಿ ಇವರ ತಂದೆ ವಣಿನ ಎಂದು, ತಾತ ವಣಿ ಎಂದು, ಹೇಳಲಾಗಿದೆ. ಅದು ಅಷ್ಟು ವಿಶ್ವಾಸಾರ್ಹವಾದ ವಿಷಯವಲ್ಲ. ತಕ್ಷಶಿಲಾ ವಿಶ್ವವಿದ್ಯಾಲಯದಲ್ಲಿ ಉಪವರ್ಷಾಚಾರ್ಯರ ಶಿಷ್ಯರಾಗಿದ್ದರೂ ಎನ್ನುವುದನ್ನೂ ನಂಬಬಹುದು. ಆದರೆ ಕಣಾದ ಮತ್ತು ವರರುಚಿ ಇವರಿಬ್ಬರೂ ಸಮಕಾಲಿಕರೂ ಎನ್ನುವುದನ್ನು ನಂಬುವುದಕ್ಕಾಗುವುದಿಲ್ಲ. ಇವರಿಬ್ಬರೂ ಪಾಣಿನಿಯಾದ ಮೇಲೆ 200-300 ವರ್ಷಗಳ ನಂತರ ಇದ್ದರೆನ್ನುವ ವಿಷಯದಲ್ಲಿ ವಿಮರ್ಶೆಯು ನಡೆದಿದೆ.

ಪಾಣಿನಿಯು ಮಹಾಸಮೃದ್ಧರು ಅಂದರೆ ಉದಾರಿ. ಅನೇಕ ಶಿಷ್ಯನಿಗೆ ಅನ್ನ ವಸ್ತ್ರಾದಿಗಳನ್ನು ಕೊಟ್ಟು ಪಾಠ ಹೇಳುತ್ತಿದ್ದರೂ. ಹಾಗೆಯೇ ಮಹಾಭಾಷ್ಯದಲ್ಲಿ "ಉಭಯಥಾ ಹ್ಯಾಚಾರ್ಯೇಣ ಶಿಷ್ಯಾಃ ಸೂತ್ರಂ ಪ್ರತೀಪಾದಿತಾಃ ಕೇಚಿದಾ ಕಡಾರಾ ದೇಕಾ ಸಂಜ್ಞ ಇತಿಕೇಚಿತ್ ಪ್ರಾಕಡಾರಾತ್ ಪರಂಕಾರ್ಯಂ" ಎಂದು ಹೇಳಿರುವುದರಿಂದ, ಅನೇಕ ಶಿಷ್ಯರು ಇದ್ದರೆಂದು ತಿಳಿಯುವುದೇ ವಿನಾ

ಅವರು ಯಾರು ಎಂದು ಲಿಖಿತವಾಗಿಲ್ಲ. ಮತ್ತೊಂದು ಕಡೆ. ಭಾಷಯಾಂ ಸದವಿಸಶ್ರುವಃ" ಎನ್ನುವ ಸೂತ್ರರೂ ಭಾಷ್ಯಾದಲ್ಲಿ "ಉಪಸೇದಿವಾನ್ ಕೌತ್ಸಃ ಪಾಣಿನಂ–ಉಪಶುಷ್ರೂ ಕ್ಷಿವಾನ್ ಕೌತ್ಸಃ ಪಾಣಿನಿಂ" ಇತ್ಯಾದಿಗಳಿಂದ ಕೌತ್ಸನು ಪಾಣಿನಿಯ ಶಿಷ್ಯನೆಂದು ತೋರಿಬರುತ್ತದೆ. ಕಾಳಿದಾಸನು ರಘುವಂಶದಲ್ಲಿ "ಕೌತ್ಸಃ ಪ್ರಪೇದೇ ವರತಂತು ಶಿಷ್ಯಃ ಎಂದರುವನು. ಈ ಕೌತ್ಸನು ಬೇರೆ ಯಾವನೋ ಆಗಿರಬೇಕು. ಪಾಣಿನಿಯು ತನ್ನ ಪಾರ್ಥಿವ ಶರೀರವನ್ನೂ ಬಿಟ್ಟದ್ದು ತ್ರಯೋದಶಿ ತಿಥಿ. ಅದಕ್ಕಾಗಿಯೇ ಅವರ ಕಾಲದಿಂದ ಆ ದಿನದಲ್ಲಿ ವೈಯಾಕರಣರು ವ್ಯಾಕರಣಾಧ್ಯಯನವನ್ನೂ ಮಾಡಿರುವುದಿಲ್ಲ. ಇವರು ತಾವೇ ಶರೀರವನ್ನೂ ಬಿಡಲಿಲ್ಲವೆಂದು ಒಂದು ಸಿಂಹಕ್ಕೆ ಇವರು ಆಹುತಿಯಾರೆಂದು ಪಂಚತಂತ್ರದಲ್ಲಿ ಹೇಳಿದೆ.

ಸಿಂಹೋವ್ಯಾಕರಣಸ್ಯ ಕರ್ತುರಹರತ್ ಪ್ರಾಣಾನ್ ಪ್ರಿಯಾನ್ ಪಾಣಿನೇಃ
ಮೀಮಾಂಸಾಕೃತ ಮುನ್ಮಮಾಥ ಸಹಾಸಹಸ್ತೀಮುನಿಂಜೈಮಿನಿಂ
ಛಂದೋ ಜ್ಞಾನನಿಧಿಂ ಜಘ್ನಾ ಮಕರೋ ವೇಲಾತಟೇ ಪಿಂಗಳಂ
ಅಜ್ಞಾನಾವೃತ ಚೇತಸಾಂ ಅತಿರುಷಾಂ ಕೋರ್ಥಸ್ತಿರಶ್ಚಾಂಗುಣಾ

C) ಪಾಣಿಯ ಅಷ್ಟಾಧ್ಯಾಯಿಯ ಪ್ರಾಶಸ್ತ್ಯ –ಪಾಣಿನಿಯ ಹಿಂದೆ ಹತ್ತು ವೈಯಾಕರಣರಿದ್ದರು. 1) ಆಪಿಶಲಿ 2) ಕಾಶ್ಯಪ 3) ಗಾರ್ಗ್ಯ 4) ಕಾಲವ 5) ಚಾಕ್ರವರ್ಮಣ 6) ಭಾರದ್ವಾಜ 7) ಶಾಕಟಾಯನ 8) ಶಾಕಲ್ಯ 9) ಸೇನಕ ಮತ್ತು 10) ಸ್ಫೋಟಾಯನ – ಇವರನ್ನು ಪಾಣಿನಿಯು ತಮ್ಮ ಸೂತ್ರಗಳಲ್ಲಿ ತೋರಿಸಿರುವರು. ಇವರೆಲ್ಲರ ಮತವನ್ನು ಸಂಗ್ರಹಮಾಡಿ ಲೌಕಿಕ ಮತ್ತು ವೈದಿಕ ಸಂಸ್ಕೃತದ ಸಾಧುತ್ವವನ್ನು ಪ್ರತಿಪಾದಿಸಿರುವರು. ಹೀಗೆ ಸಂಗ್ರಹ ಮಾಡಿದರೂ ಈಶ್ವರದತ್ತವಾದ ಪ್ರತಿಭೆಯಿಂದ ಮತ್ತು ಅವನಿಂದ ಅನುಗೃಹೀತವಾದ 14 ಮಾಹೇಶ್ವರ ಸೂತ್ರಗಳ ಸಹಾಯದಿಂದ ವೃದ್ಧಿರಾದೈಚ್" ಎಂದು ಪ್ರಾರಂಭಿಸಿ "ಅ" ಎನ್ನುವ ಕೊನೆಯ ಸೂತ್ರದವರಿಗೂ 3978 ಸೂತ್ರಗಳನ್ನು ಜೋಡಿಸಿ ಒಂದು ಅಮೂಲ್ಯವಾದ ಮತ್ತು ವೈಜ್ಞಾನಿಕವಾದ ಶಾಸ್ತ್ರವನ್ನು ಕೊಟ್ಟಿರುವರು. ಇವರಾದ ಮೇಲೆ ಬಂದ ವಾರ್ತಿಕಕಾರರಾದ ಕಾತ್ಯಾಯನರು ಮತ್ತು ಅವರಾದ ಮೇಲೆ ಬಂದ ಪತಂಜಲಿ ಮಹರ್ಷಿಗಳು ಮಹಾಪುರುಷರಾದರೂ ಪಾಣಿನಿ ಸೂತ್ರಗಳಿಗೇನೇ ವಾರ್ತಿಕ. ಇಷ್ಟಿ. ಜ್ಞಾಪನ ಯೋಗಭಾಗಾದಿಮುಖೇನ ಸಂಶೋಧನ. ಸಮರ್ಥನ ಮತ್ತು ಪರಿವರ್ಧನ ಮಾಡಿ ಕೃತಾರ್ಥರಾದೆವೆಂದು ತಿಳಿದಿದ್ದರಿಂದ. ಪಾಣಿನಿಗಿಂತ ಹಿಂದಿದ್ದ 10 ವೈಯಾಕರಣರೂ ಅವರಾದ ಮೇಲೆ. ವಾರ್ತಿಕಕಾರರೂ ನಮೂದಿಸಿರುವ 1) ವ್ಯಾಡಿ 2) ಪಾಷ್ಕರಸಾದಿ 3) ಕಾಶಕೃತ್ಸ್ನ 4) ಮಾಧ್ಯಂದಿನ ಮತ್ತು 5) ವೈಯಾಘ್ರಪಂಚ– ಇವರೂ ಕೂಡ ಅಪ್ರಸಿದ್ಧರಾದುವಲ್ಲದೆ. ಅವರ ಗ್ರಂಥಗಳೂ ಈಗ ನಮಗೆ ಲಭ್ಯವಾಗಿಲ್ಲ. ವಿಶ್ವದ ಯಾವುದೇ ಭಾಷೆಯಲ್ಲೂ ಈ ತೆರನಾದ ಪರಿಷ್ಕೃತ ವ್ಯಾಕರಣವು ಇಲ್ಲ. ಈ ಪಾಣಿನಿಯು ವಾಸ್ತವಿಕ ರಹಸ್ಯವನ್ನು ಅರಿಯುವುದೇ ಮುಖ್ಯ ವಿದ್ಯಾಪ್ರಯೋಜನವಾಗಿ ಅವರ ಮುಂದಿನ ವೈಯಾಕರಣರ ಕರ್ತವ್ಯವಾಯಿತು. ಮಹಾಭಾಷ್ಯ, ಸಿದ್ಧಾಂತ ಕೌಮುದೀ. ಪದಮಂಜರಿ ಮೊದಲಾದ ವೃತ್ತಿಗಳು. ಇದರಿಂದಲೇ ಜೀವಿಸುವ ಭರ್ತೃಹರು. ಕೈಯಟ. ನಾಗೇಶ ಮೊದಲಾದ ಪದಗ್ರಂಥಗಳೂ. ಇದಕ್ಕೆ ನಿದರ್ಶನವಾಗಿದೆ ಆದ್ದರಿಂದಲೇ ಪಾರಾಶರ ಪುರಾಣದಲ್ಲಿ-

ಪಾಣಿನೀಯ ಮಹಾಶಾಸ್ತ್ರಂ ಪದ ಸಾಧುತ್ವಲಕ್ಷಣಂ
ಸರ್ವೋಪಕಾರ ಕಂಗ್ರಾಹ್ಯಂ ಕೃತ್ಸ್ನಂತ್ಯಾಜ್ಯಂ ನ ಕಿಂಚನ

ಎಂದು ಹೇಳಿದೆ. ಸೂಕ್ಷ್ಮದೃಷ್ಟಿಯಿಂದ ಪಾಣಿನಿಯ ವ್ಯಾಕರಣವನ್ನು ನೋಡಿದರೆ ಅವರು ಶಬ್ದಶಾಸ್ತ್ರವನ್ನು ಮಾತ್ರ ತಿಳಿದಿರಲಿಲ್ಲವೆಂದೂ ಪ್ರಾಚೀನ ವಾಙ್ಮಯದಲ್ಲಿ ಇವರ ಪ್ರತಿಭೆಯು ಅನ್ಯಾದೃಶ್ಯವಾಗಿತ್ತೆಂದೂ. ಭೂಗೋಲ. ಇತಿಹಾಸ ಮತ್ತು ಲೋಕವ್ಯವಹಾರಗಳಲ್ಲಿ ಅದ್ವಿತೀಯರಾಗಿದ್ದರೆಂದೂ ಕಂಡುಬರುತ್ತದೆ. ಇವರ ಪ್ರತಿಭೆಯು ಎಷ್ಟು ಮುಖದಲ್ಲಿ ಹರಿದಿತ್ತೆಂದು ವಿ. ಎಸ್. ಅಗ್ರವಾಲಾ ಅವರು (V.S. Agravala) ತಮ್ಮ India is known to panini ಎನ್ನುವ ಗ್ರಂಥದಲ್ಲಿ ತೋರಿಸಿರುವರು. 'ವೃದ್ಧಿರಾದೈಚ್' ಎನ್ನುವ ಮೊದಲನೇ ಸೂತ್ರ ಭಾಷ್ಯದಲ್ಲಿ ಪತಂಜಲಿಗಳು:-

"ಪ್ರಮಾಣಭೂತ ಆಚಾರ್ಯೋದ ರ್ಭಪವಿತ್ರ
ಪಾಣಿಃ ಶುಚಾವಕಾಶ್ ಪ್ರಾಙ್ಮುಖಃ ಉ
ಪವಿಶ್ಯ ಮಹತಾಪ್ರಯತ್ನೇನ ಸೂತ್ರಾಣಿ ಪ್ರಣ
ಯತಿ ಸ್ಮ ತತ್ರಾವಶ್ಯಂ ವರ್ಣೇ ನಾಪ್ಯನರ್ಥಕೇನ
ಭವಿತುಂ ಕಿಂ ಪುನರಿಯತಾ ಸೂತ್ರೇಣ"

ಎಂದಿರುವರು "ಇಕೋಯಣಚಿ (VI, 1, 7) ಸೂತ್ರಭಾಷ್ಯದಲ್ಲಿ "ಸಾಮರ್ಥ್ಯಯೋಗಾತ್ ನಹಿ ಕಿಂಚಿದಸ್ಮಿನ್ ಪಶ್ಯಾಮಿ ಶಾಸ್ತ್ರೇ ಯದನರ್ಥಕಂ ಸ್ಯಾತ್" ಮತ್ತೆ "ಉಗ್ಯವಿಕಾಶಃ(W,2,24) ಎನ್ನುವ ಸೂತ್ರವೃತ್ತಿಯಲ್ಲಿ "ಕಾಶಿಕಾಯಾಂ ಜಯಾದಿತ್ಯೋ ವದತಿ ಮಹತೀ ಸೂಕ್ಷ್ಮೇಕ್ಷಿ ಕಾ ವರ್ತತೇ ಸೂತ್ರಕಾರಸ್ಯ" ಎಂದು ಹೇಳಿ ಅಷ್ಟಾಧ್ಯಾಯಿಯ ಮಹತ್ವವನ್ನು ತೋರಿಸಿಕೊಟ್ಟಿರುವರು. ಋಗ್ವೇದ ಭಾಷ್ಯದಲ್ಲಿ ಮಾಧವಾಚಾರ್ಯರು "ಶಾಕಲ್ಯಃ ಪಾಣಿನಿ. ಯಾಸ್ಕಃ ಇತಿಯಾಗರ್ಥ ಪರಾಸ್ತ್ರಯಃ ಎಂದು ಹೇಳಿರುವರು. ವೇದಾರ್ಥಕ್ಕೆ ಬೇಕಾದದ್ದು ಸ್ವರಜ್ಞಾನ. ಆ ಸ್ವರಜ್ಞಾನ ವಿಷಯದಲ್ಲಿ ಚತುಶ್ಶತ ಸೂತ್ರಗಳಿವೆ. ಈ ಅಷ್ಟಾಧ್ಯಾಯಿ ಮಹತ್ವವು ಹೀಗಿರುವುದರಿಂದಲೇ-

ಯೇನಾಕ್ಷರ ಸಮಾಮ್ನ ಯಮಧಿಗಮ್ಯ, ಮಹೇಶ್ವರಾತ್
ಕೃತ್ಸ್ನಂವ್ಯಾಕರಣಂ ಪ್ರೋಕ್ತಂ ತಸ್ಮೈಪಾನಿನಯು ನಮಃ

ಎನ್ನುವ ಮಂಗಳ ಶ್ಲೋಕವನ್ನು ಉಚ್ಚರಿಸಿಯೇ ಆ ಶಾಸ್ತ್ರಧ್ಯಾಯನವು ಪ್ರಾರಂಭವಾಗುವುದು ಅನುಚಾನವಾಗಿ ಬಂದಿದೆ

ಮಹಾಭಾರತದಲ್ಲಿ ಒಬ್ಬ ಸನ್ಯಾಸಿನಿಯು ಧರ್ಮರಾಜನಿಗೆ.

ವಕ್ತಾಶ್ರೋತಾ ತಥಾ ವಾಕ್ಯಂ ಯದಾ ತ್ವನಿಕಲಂ ನೃಪ
ಸಮಮೇತಿ ವಿದಗ್ಧಾಯಾಂ ತದಾಸೋರ್ಥಃ ಪ್ರಕಾಶತೇ

ಎಂದು ಹೇಳಿರುವಂತೆ, ವಕ್ತಾ, ಶ್ರೋತಾ ಮತ್ತು ವಾಕ್ಯ ಮೂರು ಪರಿಶುದ್ಧವಾಗಿರಬೇಕು. ಹಾಗಿದ್ದರೆ ಮಾತ್ರ ಅರ್ಥವು ಸ್ಫುರಣವಾಗುತ್ತದೆ. ವ್ಯಾಕರಣಾಧ್ಯಯನದಲ್ಲಿ ಈ ಕ್ರಮನವ್ನು ಅಕ್ಷರಶಃ ಪಾಲಿಸಿಕೊಂಡು ಬಂದಿದೆ ನಮ್ಮ ಹಿಂದೂ ಸಂಸ್ಕೃತಿ. ಆದಕ್ಕಾಗಿಯೇ ವಾಕ್ಯಪದಿಯಲ್ಲಿ ಭರ್ತೃಹರಿ

"ನಸ್ತೋಽಸ್ತಿ ಪ್ರತ್ಯಯೇಲೋಕೇ ಯಶ್ಶಬ್ದಾನು ಗಮಾದೃತೇ
ಅನುವಿದ್ಧಮಿವ ಜ್ಞಾನಂ ಸರ್ವಂ ಶಬ್ದೇನ ಭಾಷೇತೇ"

ಎಂದಿರುವರು. ಪತಂಜಲಿಗಳು ವ್ಯಾಕರಣಾಧ್ಯಾಯನದಿಂದ 18 ಪ್ರಯೋಜನಗಳೆಂದು ಅವುಗಳಲ್ಲಿ ಮುಖ್ಯವಾದುವು " ರಕ್ಷೋಹಾಗಮಲಘ್ವ ಸಂದೇಹಾಃ" ಎನ್ನುವ ಐದು ಎಂದೂ ಮಿಕ್ಕ 13 ಮ್ಲೇಚ್ಛತಾ ಪತ್ತಿ ಮೊದಲಾದವುಗಳು ಎಂದೂ ಹೇಳಿರುವರು. ಯಾವನು ಶುದ್ಧವಾದ ವಾಕ್ ಪ್ರಯೋಗವನ್ನು ಮಾಡಲಾರನೋ ಅವನೇ ಮ್ಲೇಚ್ಛ. ಆದರೆ-

ಯಸ್ತು ಪ್ರಯುಕ್ತೇ ಕುಶಲೋ ವಿಶೇಷೇ ಶಬ್ದಾನೇ ಯಥಾವತ್ ವ್ಯವಹಾರಕಾಲೇ ಸೋನಂತಮಾಪ್ನೋತಿಫಲಂಪರತ್ರಂವಾಗ್ಯೋಗವಿತ್‌ದುಷ್ಯತಿ ಚಾಪಶಬ್ದೈಃ ಎನ್ನುವಂತೆ ಶುದ್ಧ ವಾಕ್ ಪ್ರಯೋಗ ಮಾಡುವವನೇ ಯೋಗ್ಯನೂ ಪೂಜ್ಯನೂ ಆಗುವನು. ಅವನು ಹಾಗಾಗಬೇಕಾದರೆ ಸಂಸ್ಕೃತವನ್ನು ಕಲಿಯಲೇಬೇಕು ಮತ್ತು ವ್ಯಾಕರಣ ಶಾಸ್ತ್ರವನ್ನು ಅಧ್ಯಯನ ಮಾಡಲೇಬೇಕು. ಗತ್ಯಂತರವಿಲ್ಲ. ವ್ಯಾಕರಣಶಾಸ್ತ್ರಕ್ಕೆ "ವಿಷಯ" ಲೌಕಿಕ ಶಬ್ದಗಳೇ ": ಅಧಿಕಾರಿಗಳು" ಅಧೀತ-ಕಾರ್ಯ-ಕೋಶಾದಿಗಳು. ವ್ಯಾಕರಣ ಜ್ಞಾನ ಪ್ರಯೋಜನ ಪ್ರತಿಪಾದ್ಯ ಪ್ರತಿಪಾದಕ ಭಾವವೇ ಸಂಬಂಧ "ಈ ಶಾಸ್ತ್ರವು ಸಂಸ್ಕೃತ ವಾಙ್ಮಯಕ್ಕೆ ಮುಖಪ್ರಾಯವಾಗಿದೆ.

ಛಂದಪಾದೌತುವೇದಸ್ಯ ಹಸ್ತೌಕಲ್ಪೋಽಥ ಪತ್ಯನೇ
ಜ್ಯೋತಿಷ ಮಯನಂ ಚಕ್ಷುಃ ನಿರುಕ್ತಂ ಶ್ರೋತ್ರ ಮುಚ್ಯತೇ
ಶಿಕ್ಷಾ ಪ್ರಾಣಂತು ವೇದಸ್ಯ ಮುಖಂ ವ್ಯಾಕರಣಂ ಸ್ಮೃತಂ

d) ಅಷ್ಟಧ್ಯಾಯಾಯಿಯ ರಚನಾರೀತಿ -ಪ್ರತಿ ಅಧ್ಯಾಯವನ್ನು 4, ಪಾದಗಳನ್ನಾಗಿ ವಿಭಾಗಿಸಿ ಬಿಟ್ಟು ಎಂಟು ಅಧಯಾಯಗಳಲ್ಲಿ ತಮ್ಮ 3978 ಸೂತ್ರಗಳನ್ನು ಪಾಣಿನಿಯು ಅಡಗಿಸಿರುವರು. ಅವುಗಳ ವಿಷಯಗಳು ಹೀಗಿವೆ.

I. 1, 2 ಮತ್ತು 3 -ಸಂಜ್ಞಾ ಮತ್ತು ಪರಿಭಾಷೆ

I - 4- ಭಕ್ತಿ ವಿಷಯಗಳು

II 1, 2, - ಸಮಾಸ ರಚನೆ ಮತ್ತು ಪ್ರಭೇದ

3. ಕಾರಕಗಳು ಅಥವಾ ವಿಭಕ್ತಿ ಸಂಬಂಧಗಳು

4 ಏಕಶಬ್ದ್ಭಾವ, ಸನ್ನಾಸ, ಲಿಂಗ, ಲಿಂಗಾನುಶಾಸನ, ಅರ್ಥ

ಧಾತುಕ ಇತ್ಯಾದಿ

III 1- ಪ್ರತ್ಯಯಾಧಿಕಾರ, ಸ್ವಪ್ರತ್ಯಯ, ಸುಬ್ಧಾತುಪ್ರತ್ಯಯ, ವಿಕರಣ ಪ್ರತ್ಯಯ, ಉಪಪದ, ಕೃತ್ಸಂಜ್ಞಾ, ಕೃತ್ ಪ್ರತ್ಯಯ ಇತ್ಯಾದಿ

2. ಉಪಪದ ಪ್ರತ್ಯಯ, ಕ -ಅಚ್-ಟ-ಇ-ಬಶ್-ಖಚ್ -ಡ-ಟಕ್ ಮೊದಲಾದ ಪ್ರತ್ಯಯಗಳು.

3. ಭವಿಷ್ಯತ್ ಕಾಲಿಕ ಕೃತ್ಘು ಅಪ್ ಪ್ರತ್ಯಯಗಳು, ಲಕಾರಾರ್ಥ ನಿರ್ದೇಶ.

4. ಲಕಾರಾರ್ಥ ನಿರ್ದೇಶ ತುಮರ್ಥ -ಣಮುಲ್ -ತುಮರ್ಾ ಪ್ರತ್ಯಯ ಇತ್ಯಾದಿಗಳು -ಅಪತ್ಯಾರ್ಥ ಪ್ರತ್ಯಯಗಳು.

IV 1. ಸುಪ್-ಸ್ತ್ರೀ-ಟಾಪ್-ಜೋಷ್-ಜೀ-ಚಾಪ್-ಷ್ಯಂಗ್-ತದ್ಧಿತಲುಕ್-ಇತ್ಯಾದಿ ಪ್ರತ್ಯಯಗಳು

2. ತದ್ಧಿತದಲ್ಲಿ ಚಾತುರರ್ಥಿಕ ಪ್ರತ್ಯಯ, ಶೈಷಿಕ ಪ್ರತ್ಯಯ.

3. ಶೈಷಿಕ ಪ್ರತ್ಯಯಾರ್ಥ ನಿರ್ದೇಶ.

4. ತದ್ಧಿತಗಳಲ್ಲಿ ಠಕ್ ಪ್ರತ್ಯಯ, ಇತ್ಯಾದಿ.

V. 1. ಆರ್ಹೀಯದಲ್ಲಿ ವದ್ಧಿಧಿ-ಪ್ರಕರಣ. ಠಞ್ ಅಧಿಕರಾ. ದ ಇೀ ಸ್ಥಞ್ ಅಧಿಕಾರ

2. ಮತ್ವರ್ಥೀಯ ಪ್ರತ್ಯಯ

3. ಪ್ರಾಗ್ದೀವ್ಯತೀಯ ಪ್ರತ್ಯಯ. ಸ್ವಾರ್ಥಿಕಪ್ರತ್ಯಯ

4. ಸರ್ವಸಮಾಸಾಂತ -ತತ್ಪುರುಷ-ದ್ವಂದ್ವ -ಬಹುವ್ರೀಹಿ

VI 1. ಸಂಧಿ ವಿಷಯಗಳು

2. ಸ್ವರ ಪ್ರಕರಣ -ವೈದಿಕ ಪ್ರಕ್ರಿಯೆ

3. ಅಲುಕ್ ಸಮಾಸ - ಉತ್ತರ ಪದಾಧಿಕಾರ

4. ಅಂಗಾದಿಕಾರ

VII 1. ನಾಲ್ಕು ಪಾದಗಳೂ ಅಂಗಾಧಿಕಾರ ನುಮ್ ಪ್ರಕರಣ

2. ಸಿಚಿವೃದ್ಧಿ. ಇಟ್. ನಿಷೇಧ. ಇಟವಿಧಿ. ಯುಷ್ಮದ ಸ್ಮದೋಃ. ಆದೇಶ

3. ವೃದ್ಧಿ ಪ್ರಕರಣ. ಣೌ- ಆಗಮವಿಕಾರ. ಕೃತ್ವವಿಧಿ

4. ಹ್ರಸ್ವವಿಧಿ. ಅಭ್ಯಾಸವಿಕಾರ

VIII .1. ಅಷ್ಟಮಿಕದ್ವಿತ್ವ. ಪದವಿಕಾರ. ಅನುವಾತ್ತವಿಧಿ

2. ಸಂಧಿವಿಷಯಗಳು. ಸ್ವರವಿಧಿ -ಲತ್ವವಿಧಿ ಇತ್ಯಾದಿ

3. ಷತ್ವ -ವಿಧಿ-ಇತ್ಯಾದಿ

4. ಸಂಧಿ ವಿಷಯಗಳು -ಣತ್ವ ವಿಧಿ

ಈ ಒಟ್ಟು 3978 ಸೂತ್ರಗಳಲ್ಲಿ ಐದು ಸೂತ್ರಗಳು ಮಾತ್ರ ವಾರ್ತಿಕಗಳೆಂದು ಮಹಾಭಾಷ್ಯದಲ್ಲಿ ಹೇಳಿದೆ . ಮಿಶ್ರವೂ ಕೂಡ . "ಅಲ್ಪಾಕ್ಷರಂ ಅಸಂದಿಗ್ಧ ಸಾರತಃ ಸರ್ವತೋಮುಖಂ" ಎನ್ನುವ ಸೂತ್ರಶಾಸ್ತ್ರದ ಲಕ್ಷಣವನ್ನು ಪಾಲಿಸಿದ್ದರೂ, ವಿಷಯದ ಮಹತ್ವದಿಂದ ಈ ಸೂತ್ರಗಳಲ್ಲಿ ಬೇರೆ ಉಪಾಯಗಳೂ ಆಶ್ರಯಿಸಲ್ಪಟ್ಟಿವೆ. ೧. ಪ್ರತ್ಯಾಹಾರ ಇದು ಒಂದು ಅನ್ಯಾದೃಶವಾದ ಪದ್ಧತಿ. ಈ ಪ್ರತ್ಯಾಹಾರವನ್ನು ತಿಳಿಸುವುದಕ್ಕಾಗಿಯೇ ಆದಿರಂತ್ಯೇನ ಸಹೇತ" ಎನ್ನುವ ಸೂತ್ರವನ್ನು ಕೊಟ್ಟಿರುವರು . ಮಾಹೇಶ್ವರ 14 ಸೂತ್ರಗಳನ್ನು ಪ್ರತ್ಯಾಹಾರಮಾಡಿ ಅಂದರೆ ಅಕ್ಷರ ಗಳನ್ನು ಒಂದು ಕ್ರಮದಲ್ಲಿ ಅರ್ಥವಾಗುವಂತೆ ಜೋಡಿಸಿಕೊಟ್ಟಿರುದಲ್ಲದೆ. ಹಾಗೆ ಮಾಡಿಕೊಟ್ಟಿರುವ ಪ್ರತ್ಯಾಹಾರಗನ್ನು. ಸೂತ್ರಗಳಲ್ಲಿ ಸೇರಿಸಿಕೊಂಡಿರುವರು ೨. ಪರಿಭಾಷಾ. ಇದರಿಂದ ಸೂತ್ರಗಳಲ್ಲಿ ಶಬ್ದಗಳೂ ಮತ್ತೂ ಕಮ್ಮಿಯಾಗಿ ಪ್ರಯೋಗಿಸುವಂತಾಗಿದೆ . ಉದಾಹರಣೆಗೆ "ಇಕೊಯಣಚಿ" ಸೂತ್ರ " ಇಕಃ " ಇದು ಇಕ್ ಎನ್ನುವ ಪ್ರತ್ಯಾಹಾರ ಷಷ್ಠಿ ವಿಭಕ್ತಿ . ಇದನ್ನು ಷಷ್ಠಿ ಸ್ಥಾನೇ ಯೋಗ ಎನ್ನುವ ಸೂತ್ರದಿಂದ ಇಕಃ ಎಂದರೆ " ಇಕ್ ಸ್ಥಾನೇ " ಎಂದು ಅರ್ಥಮಾಡಿಕೊಳ್ಳಬೇಕು. ಎನ್ನುವ ನಿಯಮವನ್ನು ಸೂತ್ರರೂಪದಲ್ಲಿಕೊಟ್ಟು . ಹಾಗೆಯೇ ' ಅಚಿ ' ಎಂದರೆ 'ಅಚ್' ಪ್ರತ್ಯಾಹಾರದ ಸಪ್ತಮೀ ವಿಭಕ್ತಿ ಬಂದ ಕಡೆ "ಪರೇ "ಎಂದು ಸೇರಿಸಿಕೊಳ್ಳಬೇಕು . ಎನ್ನುವುದನ್ನು ತಿಳಿಸುವುದರಿಂದ "ಇಕ್ ಸ್ಥಾನೇ ಅಚಿಪರೇ ಯಣ್ ಸ್ಯಾತ್ " ಎಂದು ಮಾತ್ರ ಸೂತ್ರವಾಗುವಂತೆ ಮಾಡಿರುವರು.

೩. ಅನುಬಂಧ. ಪಾಣಿನಿಯ ಹಿಂದೆಯೂ ಈ ಕ್ರಮವಿದ್ದರೂ ಇವರಲ್ಲಿ ಇದು ವೈಶಿಷ್ಟ್ಯ ವನ್ನು ಹೊಂದಿದೆ.

೪. ಗಣಗಳ ರಚನೆ . ಸದೃಶವ್ಯಾಕರಣ ರೂಪ ಬದಲಾವಣೆ ಹೊಂದುವ ಶಬ್ದವಟ್ಟಿ, ಕೆಲವು ಪೂರ್ಣ, ಮತ್ತೆ ಕೆಲವು ಆಕೃತಿ, ಆಕೃತಿ ಗಣಗಳಲ್ಲಿ ಮುಖ್ಯವಾದ ಶಬ್ದಗಳು ಮಾತ್ರ ಕೊಡಲ್ಪಟ್ಟಿವೆ ಸೂತ್ರಗಳಲ್ಲಿ ಒಂದು ಗಣದ ಮೊದಲನೇ ಶಬ್ದ ಮಾತ್ರ ಸೂಚಿತವಾಗಿದೆ. ಪಾಣಿನಿಯಾದ ಮೇಲೆ ಗಣಪಾಠವು ವ್ಯತ್ಯಾಸಹೊಂದಿರಬೇಕೆಂದು ಗೋಲ್ಡ್‌ಸ್ಟಕರ್ ಮೊದಲಾದವರು ಅಭಿಪ್ರಾಯಪಟ್ಟಿರುವರು. ಆದರೆ ಅದರಲ್ಲಿ ಹೆಚ್ಚು ಭಾಗವು ಪಾಣಿನಿಯದೇ ಎಂದು ಒಪ್ಪಿರುವರು.

೫. ಶಾಸ್ತ್ರೋಪಯುಕ್ತವಾದ ಲಘು ಸಂಜ್ಞೆ . ಘ, ಲುಪ್, ಶ್ಲು, ಲುಕ್ ಮುಂತಾದುವು.

೬. ಅನುವೃತ್ತಿ ಕ್ರಮ. ಇದಕ್ಕಾಗಿ ಕೆಲವು ಸೂತ್ರಗಳನ್ನು ಅಧಿಕಾರ ಸೂತ್ರಗಳಾಗಿ ಕೊಟ್ಟಿರುವರು.

೭ ಧಾತುಪಾಠ, ಗಣಪಾಠ, ಉಣಾದಿ ಸೂತ್ರಗಳು . ಧಾತುಗಳನ್ನು ಹತ್ತು ಗುಂಪಿಗೆ ಸೇರಿಸಿ ಅವುಗಳ ಅವಾಂತರ ಭೇದಗಳನ್ನು ಸೂಚಿಸುವರು. ಧಾತುಪಾಠಗಳ ಅನುಬಂಧವು ಅಷ್ಟಾಧ್ಯಾಯ ಅನುಬಂಧದಂತಿದೆ. ಉಣಾದಿಸೂತ್ರಗಳ ವಿಷಯದಲ್ಲಿ ಸ್ವಲ್ಪಸಂದೇಹವಿದೆ . ನಿರುಕ್ತಮತ್ತು ಮಹಾಭಾಷ್ಯಗಳಲ್ಲಿರುವ ಯುಕ್ತಿಗಳನ್ನು ಆಧಾರವಾಗಿಟ್ಟುಕೊಂಡು ಶಾಕಟಾಯನವರು ಈ ಸೂತ್ರಗಳನ್ನು

ಬರೆದಿರುವರೆಂದು ನಂಬಿಕೆ ಇದೆ. ಆದರೆ ಇದು ಸರಿ ಎಂದು ಹೇಳಲಾಗುವುದಿಲ್ಲ. ಇವರದೆಂದು ಹೇಳಲಾಗಿರುವ ಶಬ್ದಾನುಶಾಸನವು ಇತ್ತೀಚಿನದು. ಇವರ ಗ್ರಂಥಗಳೇ ಈಗ ಲಭ್ಯವಾಗಿಲ್ಲ. ಅಲ್ಲದೆ ಈ ಉಣಾದಿ ಸೂತ್ರಗಳಲ್ಲಿ ಪಾಣಿನಿಯ ವ್ಯಾಕರಣ ಚಿಹ್ನೆಗಳೇ ಕಾಣುತ್ತವೆ. ಪಾಣಿನಿಯ ಅರ್ಥದಲ್ಲೇ ಹ್ರಸ್ವ, ಧೀರ್ಘ, ಪ್ಲುತ, ಉಪಧಾ, ಲೋಪ, ಅಭ್ಯಾಸ ಮೊದಲಾದುವು ಉಪಯೋಗಿಸಲ್ಪಟ್ಟಿವೆ. ಪಾಣಿನಿಯ ಅನುಬಂಧಕ್ಕೆ ಉಣಾದಿ ಅನುಬಂಧವು ಸರಿಹೋಗುತ್ತದೆ. ಆದ್ದರಿಂದ ಉಣಾದಿ ಸೂತ್ರಗಳು ಪಾಣಿನಿಯವರದೇ ಎಂದು ತಿಳಿಯಬೇಕು. ಕಾತ್ಯಾಯನರು ಕೆಲವು ಸಂದರ್ಭದಲ್ಲಿ ಅಷ್ಟಾಧ್ಯಾಯ ಸೂತ್ರಗಳಲ್ಲಿ ಕೆಲವು ಉಣಾದಿ ಸೂತ್ರಗಳಿಗೆ ಅನ್ವಯಿಸುದಿಲ್ಲವೆಂದು ಹೇಳಿರುವರು. ಕೆಲವು ಸೂತ್ರಗಳು ಅಷ್ಟಾಧ್ಯಾಯಿಗೆ ವಿರುದ್ಧವಾಗಿವೆ. ಆದ್ದರಿಂದ ಉಣಾದಿ ಸೂತ್ರಗಳಲ್ಲಿ ಕೆಲವಾದರೂ ಪಾಣಿನೀಯವಲ್ಲವೆಂದು ತಿಳಿಯಬೇಕಾಗುತ್ತದೆ. ಆದರೂ ಮಾಘಕವಿಯು ಉಣಾದಿ ಸೂತ್ರಗಳು ಪಾಣಿನಿಯವರದೇ ಎಂದು ಹೇಳಿರುವನು . ಕ್ರಿ. ಶ. ೯ನೇ ಶತಮಾನದಲ್ಲಿದ್ದ ದುರ್ಗಸಿಂಹ ಮತ್ತು ೧೪ನೇ ಶತಮಾನದಲ್ಲಿದ್ದ ವಿಮಲ ಸರಸ್ವತಿ(ರೂಪಮಾಲಗ್ರಂಥ) ಇವರು ಈ ಸೂತ್ರ ವರರುಚಿ (ಕಾತ್ಯಾಯನ) ಬರೆದಿದು ಎಂದಿರುವನು. ಫಿಟ್ ಸೂತ್ರಗಳನ್ನು ಶಾಂತಳಚಾರ್ಯನು ರಚಿಸಿದರೆಂದು ನಂಬಲಾಗಿದೆ. ಇದರ ಒಂದು ಶ್ಲೋಕ ಮಾತ್ರ ಹೇಗೋ ಮಹಾಭಾಷ್ಯದಲ್ಲಿ ಸೇರಿಹೋಗಿದೆ. ಇಷ್ಟಲ್ಲದೆ ಪರಭಾಷೆಗಳೆಲ್ಲವು ಪಾಣಿನಿ ಬರೆದಿದ್ದಲ್ಲವೆಂದು ಪಾಣಿನಿ ಮತ್ತು ಪತಂಜಲಿಗಳ ಮಧ್ಯೆ ವ್ಯಾಡಿಯು ಈ ಪರಿಭಾಷಕಾರೆಂದು ಹೇಳಲಾಗಿದೆ. ಇಂತಹ ಊಹೆಗಳು ಇನ್ನೂ ನಡೆಯುತ್ತಲೇ ಇವೆ.

IV ಕ್ರಿ. ಪೂ. 400-300, ಕಾತ್ಯಾಯನ ಕಾಲ: ಕಥಾಸರಿತ್‌ಸಾಗರದಲ್ಲಿ ಇವರು ಪಾಣಿನಿಯ ಸಮಕಾಲಿಕರೆಂದು ಹೇಳಿದೆ. ಇದು ಸರಿಯಲ್ಲ. ಇವರ ಕಾಲದ ಭಾಷೆಗೂ ಪಾಣಿನಿಯ ಕಾಲದ ಭಾಷೆಗೂ ಇರುವ ವ್ಯತ್ಯಾಸ ಮತ್ತು ವೈಲಕ್ಷಣವನ್ನು ಗಮನಿಸಿದರೆ ಇವರಿಬ್ಬರ ಮಧ್ಯೆ ೨.೩. ಶತಮಾನಗಳಾದರೂ ಕಳೆದಿರಬೇಕೆಂದು, ಕಾತ್ಯಾಯನರು ಅರ್ವಾಚೀನರೆಂದು ತೋರದಿರದು. ಇವರ ಭಾಷೆಯನ್ನು ಪಾಣಿನಿಯವರ ಕಾಲದ ಭಾಷೆಯು ವ್ಯತ್ಯಾಸಹೊಂದಬೇಕಾದರೆ ೨.೩. ಶತಮಾನಗಳ ಅಂತರವನ್ನು ಕೊಡಲೇಬೇಕು. ಕಥಾಸರಿತ್ಸಾಗರದಲ್ಲಿ ಕಾತ್ಯಾಯನರು ನಂದವಂಶರ ಚಕ್ರವರ್ತಿಗಳೊಡನೆ ಸಂಬಂಧವಿಟ್ಟುಕೊಂಡಿದ್ದಾರೆಂದು ಹೇಳಿದೆ. ಇದನ್ನು ಗಣನೆಗೆ ತಂದುಕೊಂಡರೆ ಇವರ ಕಾಲ ಕ್ರಿ. ಪೂ. ೩೫೦ ಆಗಬೇಕಾಗುತ್ತದೆ. ಇವರ ವೈಶಿಷ್ಟ್ಯ—ಪಾಣಿನಿ ಕಾಲದಿಂದ ತಮ್ಮ ಕಾಲದ ಅಂತರದಲ್ಲಿ ಸಂಸ್ಕೃತವು ಬಹಳ ವ್ಯತ್ಯಾಸ ಹೊಂದಿರುವುದನ್ನು ಕಂಡು ಪಾಣಿನಿಯ ಸೂತ್ರಗಳನ್ನು ಕೆಲವು ಕಡೆ ವ್ಯತ್ಯಾಸ ಮಾಡಿ ಅಧಿಕಾಂಶವನ್ನು ಸೇರಿಸಿ ಪರಿಷ್ಕರಿಸಬೇಕೆಂದು ಇವರಿಗೆ ಕಂಡಂತಿದೆ. ಅದಕ್ಕಾಗಿ ಪದ್ಯರೂಪದಲ್ಲೂ, ಗದ್ಯರೂಪದಲ್ಲೂ ಇವರು ತಮ್ಮ ವಾರ್ತಿಕಗಳಿಂದ ಪಾಣಿನಿಯ ಸೂತ್ರಗಳಲ್ಲಿ ೧೫೦೦ ಸೂತ್ರಗಳ ವಿಷಯದಲ್ಲಿ ೪೦೦೦ ವಾರ್ತಿಕಗಳಿಂದ ತನ್ನ ಸಂದೇಹ, ಆಕ್ಷೇಪಣೆ, ಪರಿಹಾರ, ಐಚ್ಛಿಕ ಮಾರ್ಗ ಮತ್ತು ಸಿದ್ಧಾಂತ ಹೀಗೆ ಕ್ರಮವನ್ನು ಆಶ್ರಯಿಸಿ ವ್ಯಾಕರಣಶಾಸ್ತ್ರವನ್ನು ವಿಸ್ತರಿಸಿರುತ್ತಾರೆ. ಸಾಮಾನ್ಯವಾಗಿ ಪಾಣಿನಿಯ ಪರಿಭಾಷೆಗಳನ್ನೇ ಅನುಸರಿಸಿದರೂ ಕೆಲವು ಕಡೆ ಬದಲಾವಣೆಯನ್ನು ಮಾಡಿರುವರು. ಉದಾಹರಣೆಗೆ-

| ಪಾಣಿನಿ | ಕಾತ್ಯಾಯನ |
|---|---|
| a. ಅದರ್ಶದ ಲೋಪಃ | ವರ್ಣಸ್ಯಾದರ್ಶನಂ ಲೋಪಃ |
| b. ತಸ್ಮಾದಿತ್ಯುತ್ತರಸ್ಯ | ತಸ್ಮಾದಿತ್ಯುತ್ತರ ಸಾಧ್ಯೆಃ |
| c. ಮುಖನಾಸಿಕಾವಚನೋಮನಾಸಿಕಃ | ಮುಖನಾಸಿಕಾಕರಣೇನು ನಾಸಿಕಃ |

ಕೆಲವು ಸಂದರ್ಭಗಳಲ್ಲಿ ಪಾಣಿನಿಯ ಸೂತ್ರದಲ್ಲಿರುವ ಮುಖ್ಯವಾದ ಶಬ್ದಗಳನ್ನಾಗಲಿ ಸೂತ್ರಾರಂಭ ಶಬ್ದಗಳನ್ನಾಗಲೀ ಆರಿಸಿಕೊಂಡಿರುತ್ತಾರೆ. ತಮ್ಮ ವಾರ್ತಿಕೆಗಳ ಸಂಬಂಧವನ್ನು "ಉಕ್ತಂಶೇಷೇ", "ಉಕ್ತಂವಾ" "ಉಕ್ತಂಪೂರ್ವೇಣ" ಇತ್ಯಾದಿ ವಾಕ್ಯಗಳಿಂದ ತಿಳಿಸಿರುವರು. ಕಥಾಸರಿತ್ಸಾಗರವನ್ನು ನಂಬಿದರೆ ಇವರು ಐಂದ್ರ ವ್ಯಾಕರಣ ಪದ್ಧತಿಯನ್ನು ಅನುಸರಿಸುವರು. ಇವರ ವಿಷಯವನ್ನು ಮುಂದೆ ರಾಮಭದ್ರನು ತನ್ನ "ಪತಂಜಲಿ ಚರಿತಂ" ಎನ್ನುವ ಗ್ರಂಥದಲ್ಲಿ ಪ್ರಸ್ತಾಪ ಮಾಡಿ ಅವರಿಂದ ಪತಂಜಲಿಗಳು ಪಾಣಿನಿಯ ಸೂತ್ರಗಳನ್ನು ರಕ್ಷಿಸಿದರೆಂದೂ ಹೇಳಿರುವನು. ಅವನು ಹೇಳಿರುವ ಶ್ಲೋಕಗಳಿವು

ಕಾತ್ಯಾಯನಃ ಕರ್ಕಶಯಾ ಪ್ರಸಾಧ್ಯ ತಪಸ್ಯಯಾ ಚಂದ್ರಕಲಾವತಂ ಸಂ

ತಸ್ಮಾರ್ಥ ಸೂತ್ರೇಷು ಪದಾರ್ಥಬೇಧ ಪ್ರವರ್ತಕಂ ವಾರ್ತಿಕಮಾಬಬಂಧ

ಪ್ರಯಕ್ತ ಯಾ ವ್ಯಾಕರಣಸ್ಯ ಸೂತ್ರೈಃ ಸವಾರ್ತಿಕೈಃ ಸಾಧತಯಾಪದಾನಾಂ

ಅದುಗ್ಧಶೌರ್ಲೌಕಿಕ ವೈದಿರಕಾತ್ಮಾ ಚಿರಾಯದುಗ್ಧಂ ತ್ರಿವಿಧಂಜನಾನಾಂ
ಶ್ರುತ್ವಾ ನಿಜಸ್ಯೇಸಂ ವಾರ್ತಿಕಾನೀ ಸೂತ್ರ ಪ್ರಬಂಧಸ್ಯ ಸಸೂತ್ರಕಾರಃ
ಕಾತ್ಯಾಯನೇನ ಗ್ರಥಿತಾಗ್ಯಕುಪ್ಯತ್ ಕಾಲೋಹಿಧೀರೇಪಿ ಕರೋತಿ ಮೋಹಂ
ಪ್ರಕಂಪಿತೋಸ್ಯಂ ಪರಿವರ್ತಿತಾಕ್ಷಂ ಪಾದಪ್ರಮಾಣಂ ಚಿತಭೂಮಿಭಾಗಂ
ತಮಾಶ್ರಮಂ ಪಾಣಿನಿರಾಜನಾಮ ಕಾತ್ಯಾಯನ ಸ್ತಿಷ್ಠತಿ ಯತ್ರಯೋಗಿ

ಇತ್ಯಾದಿ

ಎಂ. ಎ. ಹರಿಪ್ರಸಾದ ಶಾಸ್ತ್ರಿಯವರು ಹೇಳಿರುವಂತಾದರೆ, ಕಾತ್ಯಾಯನ ವಾರ್ತಿಕೆಗಳಿಂದ ಶಿಷ್ಯರ ಮನಸ್ಸಿನಲ್ಲಿ ಸಂಶಯಾದಿಗಳು ತಲೆದೋರಿ, ಸಂಸ್ಕೃತಭಾಷಾವಿಷಯದಲ್ಲಿ ಗೌರವವು ಅಳಿದುಹೋಗುವಂತಾಯಿತು. ಆದರೂ ಪೂರ್ಣವಾಗಿ ಪಾಣಿನಿಯನ್ನು ದೂಷಿಸಲು ಕಾತ್ಯಾಯನರು ಬದ್ಧಕಂಕಣರಾಗಿರಲಿಲ್ಲ. ಇದನ್ನು ಮಹಾಭಾಷ್ಯದಲ್ಲಿ ಸ್ಪಷ್ಟವಾಗಿ ಕಾಣಬಹುದು. ಸದ್ಭಾವನೆಯಿಂದಲೇ ಇವರು ತಮ್ಮಭಾಷೆಗೆ ಅನುಗುಣವಾಗಿ ಪಾಣಿನಿಯನ್ನು ಪರಿಷ್ಕರಿಸಲು ಹೊರಟಂತಿದೆ. ಇದರ ಪೂರ್ಣ ಜವಾಬ್ದಾರಿಯನ್ನು ತಾವೇ

ಹೊತ್ತುಕೊಂಡಿಲ್ಲ. ಪಾಣಿನಿಮೇಲೆ ತಮ್ಮಕಾಲದ ಪರ್ಯಂತ ಬಂದ ಆಚಾರ್ಯರನ್ನು ತಿಳಿಸಿರುವರು. ಅವರಲ್ಲಿ ವಾಜಪ್ಯಾಯನ ವ್ಯಾಜಿ ಮತ್ತು ಪುಷ್ಕರಸ ಮುಖ್ಯರು . ಇನ್ನೂ ಕೆಲವು ಕಡೆ ಕೇಚಿತ್ ಎನ್ನುವ ಪದದಿಂದ ತನ್ನಂತೆಯೇ ಅನೇಕ ಪಾಣಿನಿಯ ಸೂತ್ರ ವಿಮರ್ಶಕರನ್ನು ತಿಳಿಸಿರುವರು.

ವಾಜಸನೇಯ ಪ್ರಾತಿಶಾಖ್ಯ :- ಇದರಲ್ಲಿ ವಾಜಸನೇಯೀ ಸಂಹಿತೆಗೆ ಸಂಬಂಧಪಟ್ಟ ವ್ಯಾಕರಣವಿಷಯಗಳನ್ನು ಮತ್ತು ವರ್ಣಗಳ ವಿಷಯವನ್ನೂ ಚರ್ಚಿಸುತ್ತಾರೆ. ಹೀಗೆ ಮಾಡುವಾಗ ಪಾಣಿನಿಯ ಸೂತ್ರಗಳಲ್ಲಿ ವೇದ ಶಬ್ದಗಳಿಗೆ ಸಂಬಂಧಪಟ್ಟ ಸೂತ್ರಗಳನ್ನು ಮಾತ್ರ ತೆಗೆದುಕೊಂಡು ಅವುಗಳನ್ನು ಚರ್ಚಿಸಿ ಯುಕ್ತಾಯುಕ್ತಾಭಿಪ್ರಾಯವನ್ನು ಹೇಳಿರುವುದಲ್ಲದೆ ತನ್ನ ಅಭಿಪ್ರಾಯವನ್ನು ವಾರ್ತಿಕೆಗಳಲ್ಲಿ ಕೊಟ್ಟಿರುವರು. ಇವುಗಳನ್ನು ಬರೆಯುವಾಗ ಮಿಕ್ಕ ಎಲ್ಲಾ ಸೂತ್ರಗಳಿಗೂ ಹಾಗೆಯೇ ಮಾಡಬೇಕೆಂದು ತೋರಿರಬೇಕು. ೧೫೦೦ ಸೂತ್ರಗಳಿಗೆ ಮಾತ್ರ ೪೦೦೦ ವಾರ್ತಿಕೆಗಳಲ್ಲಿ ತಮ್ಮ ಸಂದೇಹ, ಆಕ್ಷೇಪಣೆ, ಪರಿಹಾರ, ಸಿದ್ಧಾಂತಗಳನ್ನು ತಿಳಿಸಿರುತ್ತಾರೆ. ಇದಕ್ಕೆ ಪತಂಜಲಿಗಳು ಒಪ್ಪಿಲ್ಲ. ಅವರ ಅಭಿಪ್ರಾಯದಲ್ಲಿ ಪಾಣಿನಿಯನ್ನು ಕಾತ್ಯಾಯನರು ಸರಿಯಾಗಿ ಅರ್ಥಮಾಡಿಕೊಂಡಿಲ್ಲ.

## V. ಕ್ರಿ. ಪೂ. 200-100 ಪತಂಜಲಿ -ಕ್ರಿ. ಪೂ. 150

a) ಅನೇಕ ಪತಂಜಲೀನಾಂ ವೈಭಿನ್ಯ ವಿಮರ್ಶಃ ಮಹಾಭಾಷ್ಯ ಕರ್ತೃಗಳಾದ ಪತಂಜಲಿಗಳು ಯೋಗಸೂತ್ರವನ್ನೂ, ಒಂದು ವೈದ್ಯಗ್ರಂಥವನ್ನು ಬರೆದಿರುವರೆಂದು ನಮ್ಮಲ್ಲಿ ರೂಢಮೂಲವಾದ ನಂಬಿಕೆಯು ಬಂದಿದೆ. ಇದಕ್ಕೆ ಆಧಾರವಾಗಿ ನಮ್ಮಲ್ಲಿ ಮೂರು ಪ್ರಮಾಣಗಳಿವೆ.

1) ಶಿವರಾಮನ ವಾಸವದತ್ತನ ವ್ಯಾಖ್ಯಾನದಲ್ಲಿ _
ಯೋಗೇನಚಿತ್ತಸ್ಯಪದೇನ ವಾಚಾಂ ಮಲಂಶರೀರಸ್ಯಚವೈದ್ಯಕೇನ
ಯೋಪಾಕರೋತ್ತಾಂಪರಂಮುನೀನಾಂ ಪತಂಜಲಿ ಪ್ರಾಂಜಲಿರಾನತೋಸ್ಮಿ

2) ರಾಮಭದ್ರನ ಪತಂಜಲಿ ಚರಿತದಲ್ಲಿ
ಸೂತ್ರಾಣಿಯೋಗಶಾಸ್ತ್ರೇ, ವೈದ್ಯಕಶಾಸ್ತ್ರೇ, ಪವಾರ್ತಿದಕಾಲಿತತಃ
ಕೃತ್ವಾ ಪತಂಜಲಿ ಮುನಿಃ ಪ್ರಚಾರಯಾಮಾಸ ಜಗದಿದಂತ್ರಾತುಂ

3) ಚಕ್ರಪಾಣಿಯು ಚರಕವ್ಯಾಖ್ಯಾನದಲ್ಲಿ-
ಪತಂಜಲಿ ಮಹಾಭಾಷ್ಯ_ಚರಕ_ಪ್ರತಿಸಲಸ್ಕಲತ್ಕೈಃ
ಮನೋವಾಕ್ಕಾಯ_ ದೋಷಾಣಾಂ ಹಂತ್ರೇ ಹಿಪತಯೇನಮಃ

ಈ ಮೂರು ಪತಂಜಲಿಗಳೂ ಒಬ್ಬರೇ ಎಂದು ನಮ್ಮಲ್ಲಿ ಕೆಲವರು ಮತ್ತು ಪಾಶ್ಚ್ಯದಲ್ಲಿ ಕೆಲವರು ಒಪ್ಪುವುದಿಲ್ಲ. ಲೇಬಿಷ್ (Leabich) ಮತ್ತು ಚಕ್ರವರ್ತಿ ಇವರಿಬ್ಬರೂ ಯಾರೂ ಗ್ರಂಥ ಬರೆದವರೂ ಒಬ್ಬರೇ ಎಂದು ಹೇಳಿರುವರು.

ಪ್ರೊ. ರೆನೋ (Renow), ವೈ. ಎಚ್ ವುಡ್ಸ್ (Y. H. Woods) ಮತ್ತು ಜಾಕೊಬಿ (Jacobe) ಈ ಮೂವರೂ ಮೂರು ಪತಂಜಲಿಗಳು ಬೇರೆ ಬೇರೆ ಎಂದಿರುವರು.

ಮೂವರೂ ಒಬ್ಬರೇ ಎನ್ನುವ ವಾದವು ಹೀಗಿದೆ.

a) ಯೋಗಸೂತ್ರವೂ ಮಹಾಭಾಷ್ಯವೂ ಒಂದೇ ಕ್ರಮದಲ್ಲಿ ಪ್ರಾರಂಭವಾಗಿದೆ_ ಅಥಯೋಗಾನುಶಾಸನಂ - ಅಥಶಬ್ದಾನುಶಾಸನಂ ಎಂದು.

b) ಯೋಗಸೂತ್ರದಲ್ಲಿ ಸ್ಫೋಟವಾದದ ಚಿಂತನವಿಲ್ಲ. ಮಹಾಭಾಷ್ಯದಲ್ಲಿ ಯೋಗ ಸಂಪ್ರದಾಯವು ನಮೂದಿಸಲ್ಪಟ್ಟಿದೆ

c) ಎರಡು ಶಾಸ್ತ್ರಗಳು ಬೇರೆ ಬೇರೆಯಾಗಿರುವುದರಿಂದ ಒಂದರಲ್ಲಿ ಮತ್ತೊಂದನ್ನು ಹುಡುಕುವುದು. ಸಾಮರಸ್ಯವೈರಸ್ಯವನ್ನು ಪತ್ತೆ ಹಚ್ಚಿ ಹೇಳುವುದು. ಶಬ್ದಗಳ ಭಿನ್ನಾರ್ಥಗಳನ್ನು ನೋಡುವುದು. ಸಾಂಕೇತಿಕ ಪರಿಭಾಷೆಗಳಲ್ಲಿ ಭಿನ್ನಗತಿಯನ್ನು ನೋಡುವುದು ಕ್ರಮವಲ್ಲ [illegible]

ಕಾಯವಾಗ್ಬುದ್ಧಿ ವಿಷಯಾಯೇ ಮಲಾಃ ಸಮುಪಸ್ಥಿತಾಃ
ಚಿಕಿತ್ಸಾಲಕ್ಷಣಾಧ್ಯಾತ್ಮ ಶಾಸ್ತ್ರೈಸ್ತೇಷಾಂ ವಿಶುದ್ಧಯಃ

ಎಂದು ಹೇಳಿರುವಂತೆ ಎರಡು ಶಾಸ್ತ್ರಗಳು ಭಿನ್ನವ್ಯಕ್ತಿಯುಳ್ಳವು

ಇದಕ್ಕೆ ವಿರುದ್ಧವಾಗಿ ಮೂವರು ಬೇರೆ ಬೇರೆ ಎನ್ನುವವರ ವಾದವಿದು.

ಪ್ರೊ. ರೆನೋ -

a) ಪ್ರತ್ಯಾಹಾರ, ಉಪಸರ್ಗ, ಪ್ರತ್ಯಯ, ವಿಕರ್ಣ- ಈ ಪದಗಳು ಯೋಗಸೂತ್ರದಲ್ಲಿ ಬೇರೆ ಅರ್ಥವುಳ್ಳವುಗಳಾಗಿವೆ.

b) ಚ, ವಾ, ಇತಿ -ಇಂತಹ ಪದಗಳಿಗೆ ಅಷ್ಟಾಗಿ ಬೆಲೆ ಇಲ್ಲ ಯೋಗ ಸೂತ್ರದಲ್ಲಿ.

c) ಯೋಗಸೂತ್ರದ ಮತ್ತು ಮಹಾಭಾಷ್ಯದ ಭಾಷೆಗಳಲ್ಲಿ ಭೇದವಿದೆ.

ಜಾಕೊಬಿ- ಬೌದ್ಧದರ್ಶನದ ಸಂಪರ್ಕ ಹೊಂದಿರುವ ಯೋಗಸೂತ್ರವು ಶಿಷ್ಯನಿಗಾಗಿ ಬರೆದ ಮಹಾಭಾಷ್ಯ ಕಾಲಕ್ಕಿಂತ ಅರ್ವಾಚೀನವಾಗಿರಬೇಕು.

ವೈ.ಎಚ್. ವುಡ್ಸ್ -ದ್ರವ್ಯ ಮತ್ತು ಗುಣವಿಭಾಗ ಮತ್ತು ಅವುಗಳ ಲಕ್ಷಣವಿಷಯದಲ್ಲಿ ಮಹಾಭಾಷ್ಯಕ್ಕೂ ಯೋಗಸೂತ್ರಕ್ಕೂ ಲಕ್ಷಣವಿದೆ.

ಡಾ. ಬಾರ್ನೆಟ್ -ಮೂರು ಗ್ರಂಥಗಳೂ ಭಿನ್ನ ಮನೋಧರ್ಮವನ್ನೂ ಪ್ರತಿಪಾದನೆ ಮಾಡಿರುವುದರಿಂದ, ಮೂವರು ಪತಂಜಲಿಗಳು ಒಬ್ಬರೇ ಎಂದು ಸ್ಥಾಪನೆ ಮಾಡಲು ಹೊರಡುವುದೇ ಅನುಚಿತ.

ಎಸ್.ಎನ್. ದಾಸಗುಪ್ತ ಮೂವರೂ ಒಬ್ಬರೇ ಅಲ್ಲ, ಎನ್ನುವುದನ್ನು ಒಪ್ಪಿಸಿಕೊಂಡರೂ ಯೋಗಸೂತ್ರವು ಮಹಾಭಾಷ್ಯಕ್ಕೆ ಅರ್ವಾಚೀನವೆನ್ನುವುದನ್ನು ಒಪ್ಪುವುದಿಲ್ಲ.

ಬಿ ಎಸ್. ಪುರಿ-ಈ ಮೂವರಲ್ಲದೆ ನಿಧಾನಸೂತ್ರವನ್ನು ಬರೆದ ಪತಂಜಲಿಗಳೊಬ್ಬರು. ಯುಕ್ತಿ ದೀಪಿಕಾಗ್ರಂಥ ಬರೆದವರು ಮತ್ತೊಬ್ಬ ಪತಂಜಲಿಗಳು.-ಹೀಗೆ ಪತಂಜಲಿಗಳನೇಕರಿರುವರು. ಅವರೆಲ್ಲರೂ ಒಬ್ಬರೇ ಎಂದು ಹೇಳಲು ಹೊರಡುವುದೇ ತಪ್ಪು. ಪ್ರತಿ ಒಬ್ಬ ಪತಂಜಲಿಯ ಅಭಿಪ್ರಾಯವೇ ಬೇರೆ ಇದೆ ಆದದ್ದಾಗಿಯೇ ಕ್ರಿ. ಶ. 1125ರ ಕಾಲದ 22ನೇ ನಾಯಕೇಳಿ ಕಾಲದ ಶಾಸನದಲ್ಲಿ ದೊರೆಯನ್ನು ಸ್ತೋತ್ರಮಾಡುವಾಗ " ಶಬ್ದವಿದ್ಯಾಪತಂಜಲಿ ಸಃ "ಎಂದು ಮಹಾಭಾಷ್ಯ ಪತಂಜಲಿಯನ್ನು ಮಾತ್ರ ತೆಗೆದುಕೊಳ್ಳಲಾಗಿದೆ.

ಒಟ್ಟಿನಲ್ಲಿ . ಮೂವರು ಪತಂಜಲಿಗಳಲ್ಲದೆ ಇನ್ನೂ ಅನೇಕ ಪತಂಜಲಿಗಳು ಸಂಸ್ಕೃತ ವಾಙ್ಮಯದಲ್ಲಿ ಕಾಣುತ್ತಾರೆ. ಯೋಗ ಸೂತ್ರಕ್ಕೆ ವ್ಯಾಸ ಭಾಷ್ಯವಿದೆ. ಈ ವ್ಯಾಸರು ಮಹಾಭಾರತವನ್ನು ಬರೆದ ವ್ಯಾಸರಾಗಲಾರರು ಅದಕ್ಕೆ ಕಾರಣವಿದೆ. ವ್ಯಾಸರು ತಮ್ಮ ಬ್ರಹ್ಮಸೂತ್ರದಲ್ಲಿ "ಏತೇನಯೋಗಃ ಪ್ರತ್ಯುಕ್ತಃ ಎಂದು ಸಂಪ್ರದಾಯವನ್ನು ಒಪ್ಪದಿದ್ದವರು ಯೋಗಸೂತ್ರಕ್ಕೆ ಹೇಗೆತಾನೆ ವ್ಯಾಖ್ಯಾನ ಬರೆಯಲು ಮನಸ್ಸು ಮಾಡಬಲ್ಲರು. ಅಲ್ಲದೆ ಪಾಣಿನಿ ಸೂತ್ರಗಳಲ್ಲಿ " ಪಾರಾಶರ್ಯಶಿಲಾಲಿಭ್ಯಾಂಯಯೋಃ ಭಿಕ್ಷುನಟಸೂತ್ರಯೋಃ"(IV. 3. 110)"ಎನ್ನುವ ಸೂತ್ರದಿಂದ ವ್ಯಾಸರು ಪಾಣಿನಿಗಿಂತ ಹಿಂದಿನವರು ಎಂದಂತಾಗುತ್ತದೆ. ಇದೇ ವ್ಯಾಸರು ಯೋಗ ಸೂತ್ರ ವ್ಯಾಖ್ಯಾನವನ್ನು ಬರೆದಿದ್ದರೆ, ಪತಂಜಲಿಗಳು ಪಾಣಿನಿಗಿಂತ ಹಿಂದಿನವರಾಗುತ್ತಾರೆ. ಇದು ಯಾವತ್ತಿಗೂ ಸರಿಹೋಗುವುದಿಲ್ಲ ಮತ್ತು ವಾರ್ತಿಕಕಾರರ ಶಿಕಂಧಾದಿಗಣದಲ್ಲಿ ಪತಂಜಲಿ ಪದವಿದೆ. ಅಂದರೆ ಕಾತ್ಯಾಯನರಿಗೆ ಹಿಂದೆ ಮತ್ತೊಬ್ಬರು ಪತಂಜಲಿಗಳಿದ್ದಿರಬೇಕು. ಹೀಗೆ ಅನೇಕ ಪತಂಜಲಿಗಳ ಗೊಂದಲದಲ್ಲಿ ಎಲ್ಲರೂ ಒಬ್ಬರೇ. ಕೆಲವರು ಮಾತ್ರ ಒಬ್ಬರೇ ಎಂದು ಸಮರ್ಥನೆ ಮಾಡಲು ಹೊರಡುವುದೇ ಅನುಚಿತ ಎಂದು ಆಧುನಿಕ ವಿದ್ವಾಂಸರ ವಿಚಾರ ಕ್ರಮವಿದೆ.

ಪತಂಜಲಿಗಳು ಅನೇಕರಿರಬಹುದು. ಅದೆಲ್ಲಾ ಪ್ರಕೃತವಲ್ಲ. ವೈದ್ಯಗ್ರಂಥ. ಯೋಗಸೂತ್ರ ಮತ್ತು ಮಹಾಭಾಷ್ಯ-ಈ ಮೂರನ್ನು ಬರೆದವರು ಒಬ್ಬರು ಅಥವಾ ಬೇರೆ ಎಂದು ಹೇಳಲು ಕೇವಲ ಚಾರಿತ್ರಕ ದೃಷ್ಟಿಯು ಸಾರ್ಥಕವಾಗುವುದಿಲ್ಲ. ವೈದ್ಯಗ್ರಂಥವು ಈಗ ಲಭ್ಯವಾಗಿಲ್ಲ. ಯೋಗಸೂತ್ರದ ಸೂತ್ರಶೈಲಿಯಿಂದ, ಮಹಾಭಾಷ್ಯದ ಶೈಲಿಯನ್ನು ಅಳತೆಮಾಡುವುದು ಸರಿಯಲ್ಲ,

ಪ್ರತ್ಯಾಹಾರ,ಉಪಸರ್ಗ ಮೊದಲಾದ ಪದಗಳು ಸಂದರ್ಭಕ್ಕೆ ಅನುಸಾರವಾಗಿ ಅರ್ಥಕೊಡುತ್ತವೆ. ಅವು ಪಾರಭಾಷಿಕ ಪದಗಳಲ್ಲ. ಇವುಗಳಿಗೆ ಯೋಗಸೂತ್ರ ಮತ್ತು ಮಹಾಭಾಷ್ಯದಲ್ಲಿ ಭಿನ್ನಾರ್ಥವಿದೆ. ಎಂದುತೋರಿಸಿ ಅದರಿಂದ ಈ ಇಬ್ಬರು ಪತಂಜಲಿಗಳೂ ಬೇರೆ ಎಂದು ಹೇಳುವುದು ಸ್ಥೂಲದೃಷ್ಟಿ. ಯೋಗಸೂತ್ರದಲ್ಲಿರುವ " ಚ್ರವಾ" ಮೊದಲಾದ ಪದಗಳು ಸರಿಯಾಗಿ ಓದುವವರಿಗೆ ಪೂರ್ಣಾರ್ಥವನ್ನು ಕೊಡುತ್ತದೆ. ಅದು ವ್ಯರ್ಥಪದಗಳಲ್ಲ. ಬೌದ್ಧದರ್ಶನದ ಸಂಪರ್ಕವು ಯೋಗಸೂತ್ರದಲ್ಲಿ ಕಾಣುವುದು ನಿಜ. ಬುದ್ಧನಾದ ಮೇಲೆ ಅದು ಬರೆಯಲ್ಪಟ್ಟಿರಬೇಕು ಎನ್ನುವುದನ್ನು ಮಾತ್ರ ಅದು ಸಿದ್ಧಪಡಿಸುತ್ತದೆ. ಈ ಕಾರಣವು ಯೋಗಸೂತ್ರ ಕಾರಣ ಮತ್ತು ಭಾಷ್ಯಕಾರರೂ ರರೂ ಭಿನ್ನರು ಎಂದು ಸಮರ್ಥಿಸಲಾರದು. ನಮ್ಮ ಸಂಸ್ಕೃತಿಯಲ್ಲಿ ಈ ಮೂವರು ಒಬ್ಬರೇ ಎನ್ನುವ ನಂಬಿಕೆ ಇದೆ. ಆ ನಂಬಿಕೆಯನ್ನು ಹೋಗಲಾಡಿಸಲು ಈಗ ಕೊಟ್ಟಿರುವ ಕಾರಣಗಳು ಕಾರಣಗಳಲ್ಲ. ಮಹಾಭಾಷ್ಯಕಾರರೇ ಯೋಗಸೂತ್ರಕಾರರು ಎನ್ನುವುದರಲ್ಲಿ ಯಾವ ದೋಷವು ಕಾಣುವುದಿಲ್ಲ. ಈ ಪಕ್ಷವನ್ನು ವಹಿಸುವವರೂ ಇರುವರು.

b) ಮಹಾಭಾಷ್ಯ ಪತಂಜಲಿಗಳ ಕಾಲ-

1) ಎಸ್. ಭಾಷಾಚಾರ್ಯ ನು . ಪಾಣಿನಿಗೆ ಹಿಂದೆ ವ್ಯಾಸರಿದ್ದರು. ಈ ವ್ಯಾಸರು ಯೋಗಸೂತ್ರಕ್ಕೆ ವ್ಯಾಖ್ಯಾನ ಕೊಟ್ಟಿರುವರು ಎನ್ನುವ ಕಾರಣದಿಂದ. ಪತಂಜಲಿಯು ಕ್ರಿ. ಪೂ. 10ನೇ ಶತಮಾನದಲ್ಲಿದ್ದರು ಎಂದು ಹೇಳುವುದು ಸರಿಯಲ್ಲ.

2) ಪೀಟರ್ ಸನ್ ಮಹಾಶಯನು. "ಸ್ಕಾಂದ ಗುಪ್ತೇ ಪುಷ್ಯ ಮಿತ್ರಾಂಶ್ಚಜಿತ್ವಾ" ಎನ್ನುವ ಆಧಾರದ ಮೇಲೆ ಸ್ಕಾಂದಗುಪ್ತನ ಕಾಲವಾದ ಕ್ರಿ. ಶ. 4 ನೇಶತಮಾನದಲ್ಲಿ ಪತಂಜಲಿಗಳನ್ನು ಇಟ್ಟಿರುವನು. ಇಲ್ಲಿ ಹೇಳಿರುವುದು ಪುಷ್ಯಮಿತ್ರನ್ನೆನ್ನುವ ದೊರೆಯಲ್ಲ. ಬಹುವಚನವಿದೆ. ಅದು ಒಂದು ಬುಡಕಟ್ಟು. ಇವನು ಹೇಳಿರುವ ಕಾಲವೂ ಸರಿಯಲ್ಲ.

3) ವೇಬರ್ ಮಹಾಶಯನು ಸಾಂಸ್ಕೃತಿಕ ಮತ್ತು ಭೌಗೋಳಿಕ ಚಿಂತನೆಗಳ ಆಧಾರದ ಮೇಲೆ ತನ್ನ " Indian antiqueny" ಎನ್ನುವುದರಲ್ಲಿ ಬರೆದಿರುವ ಲೇಖನದಲ್ಲಿ. ಪತಂಜಲಿಗಳು ಕ್ರಿ. ಶ. 25ರಲ್ಲಿದ್ದವರು ಎಂದು ಹೇಳಿರುವನು. ಅನೇಕ ಕಾರಣಗಳಿಂದ ಇದು ತಪ್ಪು ಅಭಿಪ್ರಾಯ.

4) ಇನ್ನೂ ಕೆಲವು ಪಾಶ್ಚಾತ್ಯ ವಿಮರ್ಶಕರು ಮಹಾಭಾಷ್ಯದು ಬರೆದಿರುವ (a)ಅರುಣ್ ಯುವನಂ ಸಾಕೇತಂ (iii. 2.iii) (b) ಅರುಣ್ ಯವನೋ ಮಧುಮಿಕಾಂ. (c) ಇಹವಸಾಮಃ ಇಹ ಪುಷ್ಯ ಮಿತ್ರಂಯ ಚಾಮಃ (iii. 2. 126). (d) ಮೌರ್ಯಹಿರಣ್ಯಾರ್ಥಿಬಾರರ್ಥಾ ಪ್ರಕಲ್ಪಿತಾಃ (V, 3, 99) ಈ ವಾಕ್ಯಗಳಿಂದ. ಪತಂಜಲಿಗಳ ಕಾಲವನ್ನು .

a) ಬೋಟ್‌ಲಿಂಗ್ (Bohtling k ) ಕ್ರಿ. ಪೂ. 200

b) ಮ್ಯಾಕ್ಸ್‌ಮುಲ್ಲರ್ (Maxmuller) ಕ್ರಿ. ಪೂ. 200

c) ಗೋಲ್ಡ್‌ಸ್ಟಕ್ಕರ್ (Goldstucker) ಕ್ರಿ. ಪೂ. 142

d) ಆರ್.ಜಿ. ಭಂಡಾರ್‌ಕರ್ (R.J. Bhandarker) ಕ್ರಿ. ಪೂ. 142

e) ಕೀತ್ (Keith) ಕ್ರಿ. ಪೂ. 150

ಎಂದು ನಿಶ್ಚಯಿಸಿರುವನು. ಈ ಪತಂಜಲಿಗಳ ವಾಕ್ಯಗಳಿಗೆ Dr. ಬಿ.ಎನ್. ಪುರಿ. I, 1 68 ರಲ್ಲಿ ಬಂದಿರುವ ವಾಕ್ಯವನ್ನು ಸೇರಿಸಿರುವನು " " ಜೀತಪರ್ಯಾಯ ವಚನಸ್ಯೈವ ರಾಜಾದ್ಯರ್ಥಂ" ಎನ್ನುವ ವಾಕ್ಯದಿಂದ. ಸಭಾ ಪದದೊಡನೆ ಕಾಣುವ ತತ್ಪುರುಷ ಸಮಾಸವು. "ರಾಜನ್ " ಅಥವಾ ಮಾನವೇತರ ಪ್ರಾಣಿಪದವನ್ನು ಹಿಂದಣ ಪದವನ್ನಾಗಿ ಹೊಂದಿದ್ದರೆ ನಪುಂಸಕ ಲಿಂಗವಾಗುವುದು. ರಾಜನ ಹೆಸರಿದ್ದರೆ ಹಾಗಾಗುವುದಿಲ್ಲ ಎಂದು ಹೇಳಿ "ಪುಷ್ಯಮಿತ್ರ ಸಭಾ" ಎದು ಉದಾಹರಣೆಯನ್ನು ಕೊಟ್ಟಿರುವನು. ಹೀಗೆ ಇನ್ನೂ ಅನೇಕ ಕಡೆ ಪುಷ್ಯಮಿತ್ರನ ಹೆಸರು ಬಂದಿರುವುದರಿಂದ ಅವನ ಸಮಕಾಲೀನರು ಪತಂಜಲಿಗಳು ಎಂದು ಈಗ ನಿಶ್ಚಿತವಾಗಿದೆ. ಈ ಪುಷ್ಯಮಿತ್ರನ ರಾಜ್ಯಭಾರಕಾಲವು ಕ್ರಿ. ಪೂ 185-149 ಎಂದು ನಿಶ್ಚಿತವಾಗಿದೆ ಇವನು ಎರಡು ಯಾಗ ಮಾಡಿದನು. ಈ ಯಾಗಗಳಲ್ಲಿ ಎರಡನೇಯದರಲ್ಲಿ ಇವರು ಋತ್ವಿಕ್ಕಾಗಿ ಇದ್ದರು. ಈ ರಾಜನು ಆಳಿದ್ದು 36 ವರ್ಷಗಳ ಕಾಲ. ಎರಡನೇ ಯಾಗಮಾಡಿದ್ದದು ಕೊನೆಯ ಕಾಲದಲ್ಲಿ. ಅಂದರೆ 185_30_155 ಅಥವಾ ಕ್ರಿ. ಶ. 150 ಪತಂಜಲಿಗಳ ಕಾಲವಾಗಿರಬೇಕು. R.G. ಭಂಡಾರ್‌ಕರ್ ಹೇಳುವಂತಾದರೆ ಇವರ ಮಹಾಭಾಷ್ಯವು ಮಥುರೆ ಮತ್ತು ಪಾಟಲೀಪುತ್ರದ ಮಧ್ಯಪ್ರದೇಶದಲ್ಲಿ ಬರೆಯಲ್ಪಟ್ಟಿರಬೇಕು.

(C ಪತಂಜಲಿಗಳ ದೇಶ _ ಮಹಾಭಾಷ್ಯದಲ್ಲಿ "ಗೋನರ್ದೀಯಂ" "ಗೋಣಿಕಾಪುತ್ರ" ಎನ್ನುವ ಪದಗಳಿವೆ. ಗೋನರ್ದೀಯ ಎನ್ನುವುದು ಅಪಭ್ರಂಶವಾಗಿ "ಗೋಂಡಾ" ಮಥುರಾಯಾಃ ಪಾಟಲೀಪುತ್ರಂ ಪೂರ್ವಂ" ಎನ್ನುವ ವಾಕ್ಯದ ಆಧಾರದ ಮೇಲೆ ಈಊರು ಮಧ್ಯಪ್ರದೇಶದಲ್ಲಿದ್ದೂದು ಎದು ಊಹಿಸಬಹುದಾದರೂ ನಿಶಯವಾಗಿ ಹೇಳುವದಾಗುವದಿಲ್ಲ. ಪಿ.ಸಿಯು ಭೂಜವತಿಯ"" "ಗೋನರ್ಧವು " ದಕ್ಷಿಣದೇಶದಲ್ಲಿದೆ. ಅದ್ದರಿಂದ ಪತಂಜಲಿಗಳು ದಕ್ಷಿಣದೇಶದವರು. ದಕ್ಷಿಣದೇಶದಲ್ಲಿರುವ ಭಾಷಾಭೇದವನ್ನು ಇವರು ಹೇಳಿರುವರು. ಲೋಕೇ_ವೇದ ಎನ್ನುವುದಕ್ಕೆ ಬದಲಾಗಿ ತಾಕಿತೇವೇದಿಕೇ ಎಂದಿರುವರು" ಎಂದು ಹೇಳಿರುವನು. ಆದರೆ ಬಿ.ಎನ್ ಪುರಿ ಯು ದಕ್ಷಿಣದೇಶದಲ್ಲಿದೆ. ಚೋಳ. ಕೇರಳ. ಕಬೀರ. ಪಾಂಡ್ಯ ಮೊದಲಾದ ದೇಶಗಳನ್ನು ಹೇಳಿರುವರು. ಭಂಡಾರ್‌ಕರ್ ಹೇಳಿರುವಂತೆ. ಇವರು ತಮ್ಮ ಮಹಾಭಾಷ್ಯವನ್ನು ಬರೆಯುವಾಗ ಹಿಂದೂದೇಶದ ಅನೇಕ ಭಾಗಗಳಲ್ಲಿ ಸಂಚಾರ ಮಾಡಿದ್ದರು" ಎಂದು ಹೇಳಿರುವನು.

ಒಟ್ಟಿನಲ್ಲಿ ಪತಂಜಲಿಗಳು ಹುಟ್ಟಿದ ಊರು ಮತ್ತು ದೇಶದ ವಿಷಯವು ಇನ್ನೂ ಅನಿರ್ದಿಷ್ಟವಾಗಿಯೇ ಉಳಿದಿದೆ.

d) ಪತಂಜಲಿಗಳ ಜೀವನ ಚರಿತ್ರೆ- ಇವರ ತಾಯಿ ಗೋಣಿಕಾ. ಇವರು ಶೇಷಾವತಾರವೆಂದು ಐತಿಹ್ಯವಿದೆ. ವೈಯಾರಣ ಭೂಷಣಸಾರದಲ್ಲಿರುವ "ಫಣಿಭಾಷಿತ ಭಾಷ್ಯೆ ಬ್ದೇಃ ಶಬ್ದ ಕೌಸ್ತುಭ ಉದ್ಧೃತಃ" ಎನ್ನುವ ವಾಕ್ಯವೇ ಇದಕ್ಕೆ ಪ್ರಮಾಣ. ಗೇಣಿಕಾ ಎನ್ನುವ ಸ್ತ್ರೀಯು ಹಡೆದ ಮಗುನಲ್ಲ ಇವರು. ಈ ಮಹಾತಾಯಿಗೆ ಬಹಳ ಕಾಲ ಮಕ್ಕಳಿಲ್ಲ ಎನ್ನುವ ಚಿಂತೆ ಇತ್ತು . ಅದನ್ನು ನೀಗಿಸಿಕೊಳ್ಳುವುದಕ್ಕಾಗಿ ಸೂರ್ಯದೇವನನ್ನು ಆರಾಧಿಸಿದಳು. ಇವಳನ್ನು ಅನುಗ್ರಹಿಸುವುದಕ್ಕಾಗಿ ಈಶ್ವರನಿಂದ ವಿಮುಕ್ತನಾದ ಶೇಷನು ಸೂರ್ಯಾರ್ಘ್ಯಪ್ರದಾನ ವೇಳೆಯಲ್ಲಿ ಅವಳ ಅಂಜಲಿಯಲ್ಲಿ ಬಿದ್ದನು. ಹೆದರಿಕೆಯಿಂದ ಅರ್ಘ್ಯವನ್ನು ಕೆಳಗೆ ಬಿಡಲಾಗಿ, ಆ ಶೇಷನು ಒಬ್ಬ ತಪಸ್ವಿಯ ಆಕಾರವನ್ನು ಹೊಂದಿ ಅವಳ ಮಗುವಾಗಿ ಬೆಳೆದನು.

ಇನ್ನೊಂದು ದಂತಕತೆ ಪ್ರಕಾರ. ಗೋಣಿಕಾಪುತ್ರರಾದ ಇವರು ಒಬ್ಬ ಋಷಿಯ ಅಂಜಲಿಯಲ್ಲಿ ಬಿದ್ದಿದರಿಂದ ಇವರ ಹೆಸರು 'ಪತಂಜಲಿ' ಎಂದಾಯಿತು. ಹಾಗೆಯೇ ಬೃಹದ್ಗಣೇಶ ಕಲ್ಪಲತಾ ಗ್ರಂಥದಲ್ಲಿ ಬರೆದಿದೆ. ಈ ಕಥೆಯನ್ನೇ ಪುರಸ್ಕರಿಸಿ ನಾಗೋಜಿಭಟ್ಟನು 'ಅಚೊಂತ್ಯಾದಿ ಟಿ 'C I, 1,64) ಎನ್ನುವ ಪಾಣಿನಿ ಸೂತ್ರದ ವ್ಯಾಖ್ಯಾನದಲ್ಲಿ " ಗೋನರ್ದರೇಶೇ ಭಗವಾನ್ ಪತಂಜಲಿ"ಸಂಧ್ಯಾಕಿರಣ ಸಮಯೇ ಪತಿತಃ ಇತ್ಯತಿಹಾತ್ " ಎಂದು ಬರೆದಿರುವನು. ಒಬ್ಬ ಋಷಿಯ ಹಸ್ತದಿಂದ ಬಿದ್ದು ನಂತರ ಒಬ್ಬ ಬಾಲಕನಾಗಿ ತನ್ನ ತಾಯಿಯ ಅನುಜ್ಞೆಯಿಂದ ದಕ್ಷಿಣದೇಶಕ್ಕೆ ತಪಸ್ಸಿಗಾಗಿ ಹೋದರೆಂದೂ ಹೇಳಲಾಗಿದೆ. ಹೀಗಾಗಿದ್ದು ಗಣೇಶನ ಆಜ್ಞೆ ಎಂದು ಬೃಹದ್ಗಣೇಶ ಕಲ್ಪಲತಾ ಗ್ರಂಥದಲ್ಲಿ ಬರೆದಿದೆ. " (ಎನ್ನುವ ವಾಕ್ಯವೇ ಇದಸ್ತ್ರೀಯು ಹಡೆದ ಮಗುವಲ್ಲ ಇವರು ಮಹಾತಾಯಿಗೆ ಬಹಳಕಾಲ ಮಕ್ಕಳಿಲ್ಲವೆನ್ನುವ ಚಿಂತೆ ಇತ್ತು. ಅದನ್ನು ನೀಗಿಸಿಕ್ಕೊಳ್ಳುವುದಕ್ಕಾಗಿಈಶ್ವರನಿಂದ

ವಿಮುಕ್ತನಾದ ಶೇಷನು ಸೂರ್ಯಾರ್ಘ್ಯಪ್ರದಾನ ವೇಳೆಯಲ್ಲಿ ಅವಳ ಅಂಜಲಿಯಲ್ಲಿ ಬಿದ್ದನು. ಹೆದರಿಕೆಯಿಂದ ಅರ್ಘ್ಯವನ್ನು ಕೆಳಗೆ ಬಿಡಲಾಗಿ, ಆ ಶೇಷನು ಒಬ್ಬ ತಪಸ್ವಿಯ ಆಕಾರವನ್ನು ಹೊಂದಿ ಅವಳ ಮಗನಾಗಿ ಬೆಳೆದನು.

ಇನ್ನೊಂದು ದಂತ ಕತೆ ಪ್ರಕಾರ. ಗೋಣಿಕಿಪುತ್ರರಾದ ಇವರು ಒಬ್ಬ ಋಷಿಯ ಅಂಜಲಿಯಲ್ಲಿ ಬಿದ್ದಿರಿಂದ' ಇವರ ಹೆಸರು' ಪತಂಜಲಿ'ಎಂದಾಯಿತು. ಹಾಗೇಯೆ ಬೃಹದ್ಗಣೇಶ ಕಲ್ಪಲತಾ ಗ್ರಂಥದಲ್ಲಿ ಬರೆದಿದೆ. ಈಕಥೆಯನ್ನೇ ಪುರಸ್ಕರಿಸಿ ನಾಗೋಜಿಭಟ್ಟನು 'ಅಚೊಂತ್ಯಾದಿ' (I,1,64)ಎನ್ನುವ ಪಾಣಿನಿಸೂತ್ರದ ವ್ಯಾಖ್ಯಾನದಲ್ಲಿ "ಗೋನರ್ದರೇಶೇ ಭಗವಾನ್ ಪತಂಜಲಿಃ ಸಂಧ್ಯಾಕರಣ ಸನಯೋಪತಿತಃ ಇತ್ಯತಿಹಾತ್" ಎಂದು ಬರೆದಿರುವನು. ಒಬ್ಬ ಋಷಿಯ ಹಸ್ತದಿಂದ ಬಿದ್ದು ನಂತರ ಒಬ್ಬ ಬಾಲಕನಾಗಿ ತನ್ನ ತಾಯಿಯ ಅನುಜ್ಞೆಯಿಂದ ದಕ್ಷಿಣದೇಶಕ್ಕ ತಪಸ್ಸಿಗಾಗಿ

ಹೋದರೆಂದೂ ಹೇಳಲಾಗಿದೆ. ಹೀಗಾಗಿದ್ದು ಗಣೇಶನ ಆಜ್ಞೆ ಎಂದು ಬೃಹದ್ಗಣೇಶ ಕಲ್ಪಲತಾ ಗ್ರಂಥದಲ್ಲಿ ಬರೆದಿದೆ.

ಇವರ ಮಹಾಭಾಷ್ಯಕ್ಕೆ ಕಾಶೀರಾಜನು ಮಹದ್ಗೌರವವನ್ನು ಸಲ್ಲಿಸುತ್ತಿದ್ದನು ಎಂದು ರಾಜತರಂಗಿಯಣಿಲ್ಲಿದೆ. ಇದರ ಮೇಲೆ ಒಂದು ದಂತಕತೆಯೂ ಪ್ರಚಾರದಲ್ಲಿದೆ ಇವರ ಅವತಾರದ ಉದ್ದೇಶವೇ ಪಾಣಿನಿಯ ಸೂತ್ರಗಳನ್ನು ಯಾವ ದೋಷಗಳೂ ಇಲ್ಲದೆ ಮುಕ್ತನನ್ನಾಗಿ ಮಾಡುವುದು ಎನ್ನುವುದನ್ನು ತಿಳಿಸುವುದಕ್ಕಾಗಿ. ಪಾಣಿನಿಯೂ ಅಂಜಲಿಯಲ್ಲಿ ಬಿದ್ದರೆಂದೂ, ಅವರು ಈ ಶೇಷನನ್ನು ಕುರಿತು "ಕೋಽರ್ಭವಾನ್" ಎಂದು ಹೇಳಿದ ಹಾಗೂ. ಅದಕ್ಕೆ ಉತ್ತರವಾಗಿ "ಸರ್ಪೋಽಹಂ"ಎಂದು ಉತ್ತರ ಕೊಟ್ಟರೆಂದೂ. ಇವರ ವಾಕ್ಯದಲ್ಲಿ ದೋಷವನ್ನು ಕಂಡು "ರೇಫಃ ಕುತ್ರಗತಃ "ಎಂದು ಕೇಳಲಾಗಿ ಶೇಷನು ತ್ವಯಾ ಸಹೃತಃ ಎಂದು ಗೌರವವಾಗಿ ಅವರ ವಾಕ್ಯದೋಷವನ್ನು ಆಘಾತದಿಂದ ಅವರ ಸೂತ್ರಗಳನ್ನು ರಕ್ಷಿಸಲು ಪತಂಜಲಿಗಳಾಗಿ ಅವತರಿಸಿದರೆಂದೂ ಐತಿಹ್ಯವಿದೆ.

ಇವರಿಗೆ ಪಾಣಿನಿಯಲ್ಲಿ ಅಪಾರ ಗೌರವವಿತ್ತೆಂದು ಅವರ ಮಹಾಭಾಷ್ಯದಿಂದಲೇ ಗೊತ್ತಾಗುವುದು. ಇವರು ಹೇಳಿರುವ ರೀತಿಯಲ್ಲಿ ಕಾತ್ಯಾಯನರು ಪಾಣಿನಿಯನ್ನು ಅರ್ಥಮಾಡಿಕೊಂಡಿಲ್ಲ M.M. ಹರಿಪ್ರಸಾದಶಾಸ್ತ್ರಿ ಹೇಳಿರುವಂತೆ ಪತಂಜಲಿಗೆ ಹಿಂದೆ ಸಂಸ್ಕೃತಕ್ಕೆ ಅಪಖ್ಯಾತಿ ಬಂದು ನಶಿಸಿಹೋಗುವ ಕಾಲವು ಬಂದು ಪಾಳಿ ಮೊದಲಾದ ದೇಶ ಭಾಷೆಗಳು ತಲೆಗೋರಿ ಪ್ರಾಧಾನ್ಯವನ್ನು ಹೊಂದಿದವು. ಈಗ ಪತಂಜಲಿಗಳು ಶಿಷ್ಯರಿಗಾಗಿ ಭಾಷ್ಯವನ್ನು ಬರೆದು ಅವರ ಮನಸ್ಸಿನಲ್ಲಿ ಕಾತ್ಯಾಯನರ ವಾರ್ತಿಕೆಗಳಿಂದ ಬಂದಿದ್ದ ಸಂಶಯಾದಿಗಳೆಲ್ಲವನ್ನು ಹೋಗಲಾಡಿಸಿದರು.

(c) ಇವರ ಗ್ರಂಥವಾದ ಮಹಾಭಾಷ್ಯವುದ ಸ್ವರೂಪ -ಪಾಣಿನಿಯನ್ನು ಕಾತ್ಯಾಯನರು ತೀವ್ರವಾಗಿ ಕೆಲವು ಕಡೆ ಖಂಡಿಸಿರುವಂತೆ ಪತಂಜಲಿಯು ಕಾತ್ಯಾಯನರ ವಾರ್ತಿಕಗಳನ್ನು ಕೆಲವು ಕಡೆ ಖಂಡಿಸಿ ಅವರ ವಾರ್ತಿಕೆಗಳಿಲ್ಲದ ಕಡೆ ಇಷ್ಟಿಗಳನ್ನು ರಚಿಸಿರುವರು. ಕೆಲವರ ಅಭಿಪ್ರಾಯದಲ್ಲಿ ಇವರು ಕೆಲವು ಕಡೆ ಕಾತ್ಯಾಯನರನ್ನು ಅನ್ಯಾಯವಾಗಿ ದೂಷಿಸಿರುವರು. ಪ್ರೊ. ಕೀಲ್‌ಹಾರನ್ (Prof. Keelhorn) ಹೇಳಿರುವಂತೆ ಕಾತ್ಯಾಯನರು ಪರಿಷ್ಕರಿಸಲು ಹೊರಟ ಪಾಣಿನಿಯ ಸೂತ್ರಗಳ ವಿಷಯದಲ್ಲಿ ಮಾತ್ರ ಅವರನ್ನು ಪ್ರತಿಭಟಿಸಿ ವ್ಯಾಖ್ಯಾನ ಬರೆಯಲು ಹೊರಟಿರುವಂತಿದೆ. ಕೆಲವು ಕಡೆ ಕಾತ್ಯಾಯನರ ವಾರ್ತಿಗಳನ್ನು ಸಮರ್ಥಿಸುವರು. ಇವರು ಪಾಣಿನಿ ಮತ್ತು ಕಾತ್ಯಾಯನರು ಇಬ್ಬರನ್ನೂ ಗೌರವದಿಂದ ಕಂಡಿರುವರು. ii. 1, 1: 1, 34,, iii,1.44,i, iii3,2ii,8viii.i.iಮೊದಲಾದ ಸ್ಥಳಗಳಲ್ಲಿ ಇವನ್ನು ನೋಡಬಹುದು. ಗೋಲ್ಡ್‌ಸ್ಟಕರ್ ಹೇಳಿರುವಂತೆ ಪತಂಜಲಿಗಳು ಮಹಾಭಾಷ್ಯಕಾರರು ಎಂದು ಹೇಳುವುದಕ್ಕಿಂತ ವಾರ್ತಕಕಾರರು ಎಂದು ಹೇಳಬಹುದು. ಇವರ ಇಷ್ಟಿಗಳು ಪಾಣಿನಿಯ ಸೂತ್ರಗಳ ಮೇಲೆ ಸ್ವತಂತ್ರವಾರ್ತಿಕಗಳು ಆದ್ದರಿದ ಇವರ ಭಾಷ್ಯವು ಪಾಣಿನಿಯ ಸೂತ್ರಗಳ ಮೇಲೂ ಮತ್ತು ಕಾತ್ಯಾಯನರ ವಾರ್ತಿಗಳ ಮೇಲೂ ವ್ಯಾಖ್ಯಾನವಾಗಿರುವುದಲ್ಲದೆ ಸ್ವತಂತ್ರ ವ್ಯಾಕರಣ ಗ್ರಂಥವೂ ಆಗಿದೆ.

ರಾಜತರಂಗಿಣಿ ಮತ್ತು ಭರ್ತೃಹರಿಯ ವ್ಯಾಕಪದೀಯ ಗ್ರಂಥಗಳ ಪ್ರಕಾರ . ಕಾಶ್ಮೀರದೇಶದ ರಾಜನಾದ ಅಭಿಮನ್ಯುವಿನ

ಅನೇಕ ತಪ್ಪುಗಳಿಂದ ಕೂಡಿದ ಒಂದು ಭಾಷ್ಯಪ್ರತಿ ಮತ್ತು ಒಂದೇ ಒಂದು ಶುದ್ಧವಾದ ಪ್ರತಿ ಇತ್ತೆಂದು ತಿಳಿಬರುತ್ತದೆ. ಪಾಣಿನಿಯ ಅಷ್ಟಾಧ್ಯಾಯಿನಿಯಂತೆ ಮಹಾಭಾಷ್ಯವು ಕೂಡ 8 ಅಧ್ಯಾಯಗಳುಳ್ಳದ್ದಾಗಿ. ಪ್ರತೀ ಅಧ್ಯಾಯವು 4 ಮಹಾಭಾಷ್ಯವು ಕೂಡ 8 ಅಧ್ಯಾಯಗಳುಳ್ಳದ್ದಾಗಿ ಪ್ರತಿ ಅಧ್ಯಾಯವು 4 ಪಾದಗಳಾಗಿರುವುದಲ್ಲದೆ ಪ್ರತಿ ಪಾದವೂ 1-9 ಆಹ್ನಿಕಗಳಾಗಿ ವಿಭಾಗಿಸಲ್ಪಟ್ಟಿದೆ. ಇದರಲ್ಲಿ ಪಾಣಿಯ ಎಲ್ಲಾ ಸೂತ್ರಗಳೂ ಚರ್ಚಿಸಲ್ಪಟ್ಟಿಲ್ಲ.

ಭಾತೃಹರಿ ತನ್ನ ವಾಕ್ಯಪದೀಯಲ್ಲಿ ಹೇಳಿರುವಂತೆ ಮಹಾಭಾಷ್ಯವು ಪತಂಜಲಿಯ ಕಾಲದ ಧಾರ್ಮಿಕ (Riligion) ಸಾಮಾಜಿಕ (Social) ವೈಜ್ಞಾನಿಕ (Scientific) ಮತ್ತು ನೈತಿಕ (Moral) ಸ್ಥಿತಿಯನ್ನು ತೋರಿಸುವ ಒಂದು ಮಹಾಗ್ರಂಥ. ಆ ಶ್ಲೋಕಗಳಿವು-

ಪ್ರಾಯೇನಣ ಸಂಕ್ಷೇಪರುಚಿನ್ ಅಲ್ಪವಿದ್ಯಾ ಪರಿಗ್ರಹಾನ್
ಸುತ್ರಾಪ್ಯ ವೈಯಾಕರಣಾನ್ ಸಂಗ್ರಾಹೇಸ್ತಮುಪಾಗತೇ
ಕೃತೇಥ ಪತಂಜಲಿನಾಗುರುಣಾ ತೀರ್ಥದರ್ಶಿನಾ
ಸರ್ವೇಶಾಂ ನ್ಯನಾಯವಿಜ್ಞಾನಾಂ ಮಹಿಭಾಷ್ಯೇ ನಿಬಂಧನೇ
ಅಲಬ್ದ ಗಾಧೇ ಗಾಂಭಿರ್ಯಾತ್ ಉತ್ತಾನ ಇವಸೌಷ್ಟವಾತ್
ತಸ್ಮಿನ್ನಕೃತ ಬುದ್ದೀ ಸಾಂ ನೈವ ವಾಸ್ತವ ನಿಶ್ಚಯಃ
ವೈಜಿ-ಸೌಭಾಗ್ಯ-ಹರ್ಯಕ್ಷೈಃ ಶುಷ್ಕತರ್ಕಾನು ಸಾರಿಭಿಃ
ಆರ್ಷೇನಿಪ್ಲಾವಿತೇ ಗ್ರಂಥೇ ಸಂಗ್ರಹ ಪ್ರತಿಕಂಚುಕೇ
ಯಃ ಪತಂಜಲಿ ಶಿಷ್ಯೇಭ್ಯೋ ಭ್ರಷ್ಟೋ ವ್ಯಾಕರಣಾಗಮಃ
ಕಾಲೇಸ ದಕ್ಷಿಣಾತ್ಯೇಷು ಗ್ರಂಥಮಾತ್ರೇ ವ್ಯವಸ್ಥಿತ

ಇವುಗಳಲ್ಲದೇ ಭೌಗೋಳಿಕ ಜ್ಞಾನ, ಪಟ್ಟಣಗಳು, ರಾಜ್ಯಗಳು,ರಾಜರು,ನದಿಗಳು,ವಾಯುವ್ಯ, ಪೂರ್ವ ಮತ್ತು ದಕ್ಷಿಣದಲ್ಲಿದ್ದ ಜನಪದಗಳು ಸಮಾಜದಲ್ಲಿದ್ದ ವಿಭಾಗ, ಸಾಂಸರಿಕ ಜೀವನಕ್ರಮ, ಆಹಾರ ವಿಹಾರಗಳು, ಊಟ ಉಪಚಾರಗಳಲ್ಲಿದ್ದ ನೀತಿ, ಉಡಿಗೆ ತೊಡಿಗೆಗಳು, ತಲೆಗೂದಲನ್ನು ಹೆಣೆದುಕೊಳ್ಳುವ ವಿಧಾನ, ಹೂವುಗಳಿಂದ ಮುಖವನ್ನು ಅಲಂಕರಿಸಿಕೊಳ್ಳುವುದು, ಸಮಾಜದಲ್ಲಿ ಕಾಣುತ್ತಿದ್ದ ಅಶ್ಲೀಲತೆ, ವೃತ್ತಿಗಳು, ಜೀವನ, ಕಲೆ, ಅಡಿಗೆ ಮತ್ತು ತಿಂಡಿಪದಾರ್ಥಗಳು, ರೈತಾಪಿ ಜನರ ಜೀವನ, ಪಶುಪಾಲನಾದಿಗಳು, ವ್ಯಾಪಾರ, ನಾಣ್ಯ, ರಸ್ತೆ, ಸಹಕಾರ ಸಂಘ, ವಿದ್ಯಾಭ್ಯಾಸಕ್ರಮ, ಧಾರ್ಮಿಕ ಜೀವನಕ್ರಮ,- ಇವೆಲ್ಲವನ್ನು ಉದಾಹರಣೆಗಳ ವ್ಯಾಜದಿಂದ ಕೊಟ್ಟಿರುವರು.

ಒಟ್ಟಿನಲ್ಲಿ ಹೇಳುವುದಾದರೆ ಚಾರಿತ್ರಿಕ, ಸಾಮಾಜಿಕ ಮತ್ತು ಶಾಸ್ತ್ರೀಯ ದೃಷ್ಟಿಯಿಂದ ಮಹಾಭಾಷ್ಯವು ಒಂದು ಅಮೂಲ್ಯ ಗ್ರಂಥ. ಇದರ ಶೈಲಿ ಸಂಸ್ಕೃತದಲ್ಲೇ ಅನುಪಮವಾದುದು. ಶಂಕರಾಚಾರ್ಯರೂ ಕೂಡ ಇವರ ಭಾಷೆಯನ್ನೇ ಅನುಕರಿಸಿದರೆಂದು ಹೇಳಲಾಗಿದೆ.

ಈ ಮಹಾಭಾಷ್ಯವು ವ್ಯಾಕರಣಶಾಸ್ತ್ರದ ಪೂರ್ಣಪರಿಷ್ಕಾರವನ್ನು ಮಾಡಿ ಮುಗಿಸಿದ. ಇದಾದ ಮೇಲೆ, ವ್ಯಾಕರಣ ವಿಷಯದಲ್ಲಿ ಯಾರು ಏನನ್ನು ಹೆಚ್ಚಾಗಿ ಹೇಳುವಂತಿಲ್ಲ. ಅದಕ್ಕಾಗಿಯೇ ಕೈಯಟ್‌ರು " ಯತೋತ್ತರಂ ಮುನೀನಾಂ ಪ್ರಾಮಾಣ್ಯಂ" ಹೇಳಿರುವರು. ಇವರು ಮಹಾಭಾಷ್ಯದ ಹಿರಿಮೆಯನ್ನು ಅರಿತೇ . ಪಾಶ್ಚಾತ್ಯದಲ್ಲಿ ಕೆಲವರು ನಿಷ್ಪಕ್ಷವಾದ ತಮ್ಮ ಮತವನ್ನು ಕೊಟ್ಟಿರುವರು-

(i) ಎ. ಡುಬಾಯ್ (A.Dubois)- ಇವರ Bible in India ಎನ್ನುವ ಗ್ರಂಥದಲ್ಲಿ -Hindu Superiority ಎನ್ನುವ ಶಿರೋನಾಮದಲ್ಲಿ ಸಂಸ್ಕೃತದ ಮಹಿಮೆಯನ್ನು ಹೇಳುವಾಗ _ Sanskrit is the mother of Greek, Latin and German Languages and it has mother relation to them;

(ii) Mamullers Science of Languages ಎನ್ನುವ ಗ್ರಂಥದಲ್ಲಿ Sanskrit is the original Scienceof all the European Languages of the present days.

(iii) ದ್ವಿಜೇಂದ್ರನಾಥಗುಹ_ Journal of Sanskrit Sahitya Parishat, Calcuttaದಲ್ಲಿ ಕೊಟ್ಟಿರುವ ಲೇಖನದಲ್ಲಿ "in point of fact the zend is derived from the Sanskrit".

ಈ ಅಭಿಪ್ರಾಯವನ್ನು ಇನ್ನೂ ವಿಸ್ತಾರವಾಗಿ R.G.ಭಂಡಾರ್ಕರ್ ಅವರು "Development of languages of Sanskrit" ಎನ್ನುವ ಉಪನ್ಯಾಸದಲ್ಲಿ ಕೊಟ್ಟಿರುವರು.

ಪಾಣಿನಿಯು ತಮ್ಮ ಸೂತ್ರಗಳಿಂದ ವ್ಯಾಕರಣಶಾಸ್ತ್ರವನ್ನು ಕೊಟ್ಟರು. ಕಾತ್ಯಾಯನರು ತಮ್ಮ ವಾರ್ತಿಕಗಳಿಂದ ಭಾಷೆಯನ್ನು ಇನ್ನೂ ಪರಿಷ್ಕರಿಸಿದರು. ಪತಂಜಲಿಗಳು ತಮ್ಮ ಇಷ್ಟಿಗಳಿಂದ. ಸಂಸ್ಕೃತಕ್ಕೆ ಅಂತಿಮಸಂಸ್ಕಾರವನ್ನು ಮಾಡಿ ಮುಗಿಸಿದರು. ಅದಕ್ಕಾಗಿಯೇ ಕೈಯಟ್‌ನು " ಯಥೋತ್ತರಂ ಮುನಿತ್ರಯ ಸ್ವಪ್ರಾ ಯಾಣ್ಯಂ "ಎಂದಿರುವುದು. ಇದಕ್ಕಾಗಿಯೇ ವ್ಯಾಕರಣಾಧ್ಯಯನ ಮಾಡುವಾಗ - ವಾಕ್ಯಕಾರಂ ರುಚಿಂ ಭಾಷ್ಯಾಕಾರಂ ಪತಂಜಲಿಂ 1. ಪಾಣಿನಿಸೂತ್ರಕಾರಂಚ ಪ್ರಣತೋಷ್ಮಿ ಮುನಿತ್ರಯಂ - ಎಂದು ಮಂಗಳ ಹೇಳುವ ಪದ್ಧತಿ ಇದೆ.

VI) ಕ್ರಿ. ಶ. ೧ನೇ ಶತಮಾನ -ಮೊದಲನೇ ಪರ್ವ(a) ಕಾಲಾಪ. ವ್ಯಾಕರಣ ವ್ಯಾಕರಣಶಾಸ್ತ್ರಕ್ಕೆ ಪತಂಜಲಿಗಳು ಅಂತಿಮ ರೂಪವನ್ನು ಕೊಟ್ಟಮೇಲೆ. ಮುಂದಿನವರ ದೃಷ್ಟಿಯು ಆ

ಶಾಸ್ತ್ರದಲ್ಲಿ ವಿಶ್ವಾಸ ಗೌರವವಿಟ್ಟು ಅಧ್ಯಯನ ಮಾಡುವುದೇ ಪರಮ ಪ್ರಯೋಜನ ವೆಂದು ಕಾಣುತ್ತದೆ. ಕ್ರಿ. ಶ. 1ನೇ ಶತಮಾನದಲ್ಲಿ ಪಾಣಿನಿ ಸೂತ್ರಗಳಿಗೆ ಕೈಪಿಡಿಯಂತೆ ಇರುವ ಒಂದು ವ್ಯಾಕರಣ ಬರೆಯಲ್ಪಟ್ಟಿತು. ಅದರ ಹೆಸರು ಕಾತಂತ್ರ ವ್ಯಾಕರಣ. ಇದು ಒಂದು ಹೊಸ ವ್ಯಾಕರಣವಲ್ಲ, ಜನಗಳ ಅಪೇಕ್ಷೆಯನ್ನು ವ್ಯಾಕರಣ ವಿಷಯದಲ್ಲಿ ತೀರಿಸಲು ಬರೆದ ಗ್ರಂಥವಿದು. ಹಾಗೆಯೇ ವ್ಯಾಖ್ಯಾನ ಪ್ರಕ್ರಿಯದಲ್ಲಿ-

ಛಾಂದಸಃ ಸ್ವಲ್ಪಮತಯಃ ಶಾಸ್ತ್ರಾಂತರ ರತಾಶ್ಚಯೇ
ಈಶ್ವರಾವ್ಯಾಧಿನಿರತಾಃ ತಥಾಲಸ್ಯಯು ತಾಶ್ಚಯೇ
ವಣಿಕ್ ಸ್ಯಸಾದಿ ಸಂಯುಕ್ತಾಃ ಲೋಕಯಾತ್ರಾದಿಷು ಸ್ಥಿತಾಃ
ತೇಷಾಂ ಕ್ಷಿಪ್ರ ಬೋಧಾರ್ಥಂ

ಎಂದಿದೆ. ವೆಬರ್ (Weber) ಹೇಳುವಂತೆ ಪ್ರಾಕೃತ ಭಾಷಾದ್ವಾನಾ ಸಂಸ್ಕೃತವನ್ನು ಕಲಿಯಲು ಇದು ಉಪಯುಕ್ತವಾಗಿದೆ. ಬರ್ನೆಲ್ (Burnell) ಹೇಳುವಂತೆ ಕಾತಂತ್ರಕ್ಕೂ, ತಮಿಳು ವ್ಯಾಕರಣಕ್ಕೂ, ಐಂದ್ರವ್ಯಾಕರಣಕ್ಕಕೂ ಸಂಬಂಧವಿರುವಂತಿದೆ.

ಈ ವ್ಯಾಕರಣ ಗ್ರಂಥಕ್ಕೆ ಮೂರು ಹೆಸರುಗಳು ಪ್ರಚಾರದಲ್ಲಿದೆ.-ಕಾತಂತ್ರ, ಕಾಮಾನ ಮತ್ತು ಕಾಲಾಪ ವ್ಯಾಕರಣ. ಈ ಮೂರು ಹೆಸರು ಬರಲು ಒಂದು ದಂತಕತೆ ಇದೆ. ಅದು ಶಾತವಾಹನನೆನ್ನುವ ದಕ್ಷಿಣ ದೇಶದ ದೊರೆಗೆ ಸಂಬಂಧಿಸಿದೆ. ಇದನ್ನು ಈಗಾಗಲೇ ಕೊಡಲಾಗಿದೆ.

ಈ ಶಾತವಾಹನನು ತಾನು ಬೇಗನೆ ಸಂಸ್ಕೃತವನ್ನು ಕಲಿಯಲು ಶರ್ಮವರ್ಮನನ್ನು ಆರು ತಿಂಗಳಲ್ಲಿ ವ್ಯಾಕರಣವನ್ನು ಕಲಿಸುವಂತೆ ಕೇಳಿಕೊಂಡನು. ಆ ವಿದ್ವಾಂಸನು ರಾಜನಿಗೆ ಅನುಕೂಲವಾದ ಗ್ರಂಥವನ್ನು ಬರೆಯಲು ಈಶ್ವರನನ್ನು ಕುರಿತು ತಪಸ್ಸು ಮಾಡಿದನು. ಈಶ್ವರನು ಅದರಿಂದ ಪ್ರೀತನಾಗಿ ತನ್ನ ಕುಮಾರ ಷಣ್ಮುಖನಿಗೆ ಆದೇಶವಿತ್ತನು. ಷಣ್ಮುಖನು ತನ್ನ ಮಯೂರ (ಅವನ ವಾಹನ)ದಿಂದ ಉಪದೇಶ ಮಾಡಿಸಿದನು. ಕುಮಾರನಿಂದ ಬಂದುದರಿಂದ "ಕೌಮಾರ ವ್ಯಾಕರಣ" ಮಯೂರದಿಂದ ಬಂದುದರಿಂದ (ಕಲಾಪ) "ಕಾಲಾಪ ವ್ಯಾಕರಣ" ಎಂಬ ಒಂದು ಸಣ್ಣ ಗ್ರಂಥವಾದುದರಿಂದ "ಕಾತಂತ್ರವ್ಯಾಕರಣ."

ಇದಕ್ಕೆ ಲಭ್ಯವಾಗುವಂತೆ ದುರ್ಗಸಿಂಹನ (ಕ್ರಿ. ಶ. 800) ವ್ಯಾಖ್ಯಾನ ಮಾತ್ರವಿದೆ. ಆದರೆ ಇದರಲ್ಲಿರುವ ಪಾಠವು ಕ್ರಿ. ಶ. 11ನೇ ಶತಮಾನದ ಕಾಶ್ಮೀರ ಪ್ರತಿಯಲ್ಲಿರುವದಕ್ಕಿಂಲೂ ಭಿನ್ನವಾಗಿದೆ. ಗ್ರಂಥ ವಿಮರ್ಶಕರು ಕಾಲಾಪ ವ್ಯಾಕರಣ ಗ್ರಂಥದ ಕಾಲವನ್ನು ಕ್ರಿ. ಶ. 1ನೇ ಶತಮಾನವೆಂದು ಹೇಳುವರು.

(b) ಈ ವ್ಯಕರಮದ ಸ್ವರೂಪ - ಇದರಲ್ಲಿ ನಾಲ್ಕು ಭಾಗಗಳಿವೆ

(i) ಸಂಧಿ ಪ್ರಕರಣ-ಇದರಲ್ಲಿ ಸಂಜ್ಞಾಪಾದ. ಸ್ವರಸಂಧಿ(ಸಮಾನ)ಸ್ವರ ಸಂಧಿ ನಿಷೇಧ (ಓದಂತ), ವ್ಯಂಜನ ಸಂಧಿ. (ಧರ್ಮ), ವಿಸರ್ಗ ಸಂಧಿ ಮತ್ತು ನಿಪಾತ ಇವು ಇವೆ.

ii) ನಾಮಪ್ರಕರಣ- ಇದರಲ್ಲಿ ಸ್ವರಾಂತ (ಲಿಂಗ) ಪಾದ. ವ್ಯಂಜನಾಂತ ಪಾದ. ಸಖಿಪಾದ. ಯುಷ್ಮ ಪಾದ. ಕಾರಕಪಾದ.ಸಮಾಸ ಪಾದ. ತದ್ಧಿತ ಮತ್ತು ಸ್ತ್ರೀಪ್ರತ್ಯಯಪಾದ-ಇವು ಇವೆ.

iii) ಅಖ್ಯಾತ ಪ್ರಕರಣ-ಪರಸ್ಮೈ ಪ್ರತ್ಯಯ. ದ್ವಿರ್ವಚನ. ಸಂಪ್ರಸಾರಣ. ಗುಣ. ಅನುಷಂಗ. ಇಡಾಗಮ ಮತ್ತು ಘಟ್.

iv) ಕೃತ್ ಪ್ರಕರಣ-ಸಿದ್ಧಿ. ಧಾತು. ಕರ್ಮಣಿ ಉಣಾದಿ ಮತ್ತು ಧಾತು ಸಂಬಂಧ- ಈ ಪ್ರಕರಣವನ್ನು ಶರ್ಮವರ್ಮನು ಬರೆಯಲಿಲ್ಲವೆಂದು ವ್ಯಾಖ್ಯಾನ ದುರ್ಗಸಿಂಹನು ಹೇಳಿರುವನು. ಈ ದುರ್ಗಸಿಂಹನ ವೃತ್ತಿಗೆ ರಘುನಂದನ ಶಿರೋಮಣಿಯು ವ್ಯಾಖ್ಯಾನವನ್ನು ಬರೆದಿರುವನು. ನಿಪಾತ. ಸ್ತ್ರೀಪ್ರತ್ಯಯ.ಉಣಾದಿಗಳಿಗೆ ದುರ್ಗಸಿಂಹನ ವ್ಯಾಖ್ಯಾನವಿಲ್ಲ. ಇದಕ್ಕೆ ಸಂಬಂಧಪಟ್ಟ ಸೂತ್ರಗಳು ಕಾಶ್ಮೀರ ಪ್ರತಿಯಲ್ಲಿದೆ. ಅಂದರೆ ಇವನು ವ್ಯಾಖ್ಯಾನವನ್ನು ಬರೆಯುವುದಕ್ಕೆ ಮುಂಚೆಯೇ ಮೂರು ಗ್ರಂಥವು ಕಾಶ್ಮೀರವನ್ನು ತಲುಪಿರಬೇಕು. ಮತ್ತೆ ಕೆಲವರ ಅಭಿಪ್ರಾಯದಲ್ಲಿ ಅಖ್ಯಾತ ಪ್ರಕರಣ. ಕೃತ್ ಪ್ರಕರಣ. ಮತ್ತು ತದ್ಧಿತವೂ ಕೂಡ ರಾಜನಿಗೆ ಉಪದೇಶಿಸಲ್ಪಡಲಿಲ್ಲ. ಅವನ ಆಸ್ಥಾನದ ಮತ್ತಾರೋ ಪಂಡಿತರು ಇದನ್ನು ಸೇರಿಸಿರಬೇಕು.

ವೈದಿಕ ಪ್ರಕರಣ. ಶಿಕ್ಷಾಸೂತ್ರಗಳು. ಪ್ರತ್ಯಾಹಾರಗಳು-ಇವುಗಳನ್ನು ಬಿಟ್ಟು "ಸ್ವರ ವ್ಯಂಜನ" ಮತ್ತು"ಸಮಾಸ"ವೆನ್ನುವ ಬೇರೆ " ಸಂಜ್ಞೆಗಳನ್ನು ಉಪಯೋಗಿಸಿ ವರ್ಣಗಳ ಕೃತಕ ವಿರ್ಮಾಡನ್ನು ಬಿಟ್ಟು ಪ್ರತಿ ಶಾಖೆಯ ,ವರ್ಣಗಳ ಸ್ವಾಭಾವಿಕ ಕ್ರಮಗಳನ್ನು ಅನುಸರಿಸಿ. ಪಾಣಿನಿಯ 3978 ಸೂತ್ರಗಳು 855 ಇಳಿಸಲ್ಪಟ್ಟಿವೆ. ಕೃತ್‌ಪ್ರಕರಣವ ಸೇರಿಸಿಕೊಂಡರೆ 1400 ಸೂತ್ರಗಳಾಗುತ್ತವೆ. ಹೀಗೆ ಇದು ಸುಲಭ ಗ್ರಂಥವಾಗಿ ಕಾಶ್ಮೀರದಿಂದ ಸಿಂಹಳದವರೆಗೂ ಹರಡಿತು. ಆದ್ದರಿದ ಔತ್ತರೇಯ ಮತ್ತು ದಕ್ಷಿಣಾತ್ಯವೆನ್ನುವ ಪಾಠ ಭೇದವಾಯಿತು.

ಈ ವ್ಯಾಕರಣವು ಸರಳವೂ ಸುಲಭವೂ ಇದ್ದು ಎಲ್ಲರಿಗೂ ಉಪಯುಕ್ತವಾಗಿರುವುದರಿಂದ ಅಲ್ಲಲ್ಲಿ ಬೇಕಾದ ವಿಷಯಗಳನ್ನು ಕೂಡಿಸಿಕೊಟ್ಟು ವ್ಯಾಕರಣ ಮಾಡಿರುವ ದುರ್ಗಸಿಂಹನ ಹೊರತು ಮಿಕ್ಕ ವ್ಯಾಖ್ಯಾನಕಾರರು ಇದ್ದರೊ ಇಲ್ಲವೊ ಎಂದು ಹೇಳಲು ಸಾಧ್ಯವಿಲ್ಲ. ಆದರೆ ಹೇಮಚಂದ್ರನು ಇವನನ್ನು ಮಾತ್ರ ಹೇಳಿರುವನು. ಇವನ ಕಾಲ ಕ್ರಿ. ಶ. ೮ನೇ ಶತಮಾನವೆಂದು ಹೇಳಲಾಗಿದೆ. ಉಣಾದಿ ಸೂತ್ರಗಳ ಮಂಗಳ ಶ್ಲೋಕವು ಶಿವ ಪರವಾಗಿರುವುದರಿಂದ ಇವನು ಬೌದ್ಧನಲ್ಲ.

(c) ದುರ್ಗಸಿಂಹನ ವೃತ್ತಿಗೆ ಇರುವ ವ್ಯಾಖ್ಯಾನಗಳು.

i) ವರ್ಧಮಾನನ " ಕಾತಂತ್ರ ವಿಸ್ತರ "ಇವನು ಕ್ರಿ. ಶ. 1088ರಲ್ಲಿ ಗುಜರಾತಿನ ದೊರೆ ಕರ್ಣದೇವನ ಆಸ್ಥಾನ ಪಂಡಿತ ಬೋಪದೇವನಿಗೆ (ಕ್ರಿ. ಶ. 1200) ಇವನು ಗೊತ್ತು. ಇದನ್ನು ತನ್ನ 'ಕಾವ್ಯನಾಮಧೇಯ"ವಿನಲ್ಲಿ ವರ್ಧಮಾನನನ್ನು ನಮೂದಿಸಿರುವನು ಈ ವರ್ಧಮಾನನ ವ್ಯಾಖ್ಯಾನಕ್ಕೆ ಮಹಾಮಹೋಪಧ್ಯಾಯ ಪೃಥ್ವೀದರನು ವ್ಯಾಖ್ಯಾನವನ್ನು ಬರೆದಿರುವನು.

"ii) ತ್ರಿಲೋಚನದಾಸನ "ಕಾತಂತ್ರ ವೃತ್ತಿಪಂಚಿಕಾ" ಇದಕ್ಕೆ ಜಿನಪ್ರಭುಸೂರಿ. ಕುಶಲ. ರಾಮಚಂದ್ರ ಮೊದಲಾದವರು ವ್ಯಾಖ್ಯಾನವನ್ನು ಬರೆದಿಯತ್ತಾರೆ.

iii) ಮಹಾದೇವನ "ಶಬ್ದಶುದ್ಧಿ"

iv) ಘಂಡಿಕಾ. ಇದರ ಕರ್ತಾ ಯಾರೆಂಬುದೇ ತಿಳಿಯದು ಹೇಮಚಂದ್ರನ ಶಬ್ದಾನುಸಾರಕ್ಕೆ ಇರುವ ಘಂಟಿಕಾವಿನ ಶೈಲಿಯೇ ಇಲ್ಲೂ ಇದೆ

d) ಬಂಗಾಳದಲ್ಲಿ ಕಾತಂತ್ರ ವ್ಯಾಕರಣ- ಯಾವಾಗ ಈ ವ್ಯಾಕರಣವು ಇಲ್ಲಿಗೆ ಬಂತೆಂದು. ಹೇಳಲು ಸಾಧ್ಯವಾಗಿಲ್ಲ ಕ್ರಿ ಶ 15 ಮತ್ತು 16 ಶತಮಾನಗಳ ಅನೇಕ ವ್ಯಾಖ್ಯಾನಗಳೂ ಮತ್ತು ಪರಿಶಿಷ್ಟಗಳೂ ಇಲ್ಲಿಯವೇ ಈಗಲೂ ಇಲ್ಲಿರುವವರು ಇದನ್ನು ಓದುತ್ತಿರುವರು. ಅದಕ್ಕಾಗಿ ಅನೇಕ ಸಾಧನಗಳೂ ಇವೆ

i) ತ್ರಿಲೋಚಲದಾಸನನ್ನು ಉಲ್ಲೇಖಿಸಿರುವ ಹರಿರಾಮನಿಂದ ಉಲ್ಲೇಖಿಸಲ್ಪಟ್ಟಿರುವ ಕವಿರಾಜನ ಗ್ರಂಥ

ii) ರಾಮರಾಜನಿಂದ ಉಲ್ಲೇಖಿಸಲ್ಪಟ್ಟಿರುವ "ಕುಲಚಂದ್ರ"ಇದಕ್ಕೆ ರಾಮಚಂದ್ರಾಚಾರ್ಯನ ವ್ಯಾಖ್ಯಾನವಿದೆ. ರಾಮಚಂದ್ರನೇ"ಕಾತಂತ್ರವೃತ್ತಿ ಸಂಚಿಕಾ" ಕ್ಕೆ ಸ್ವಂತ ವ್ಯಾಖ್ಯಾನ ಬರೆದಿರುವನು.

iii) ಶ್ರೀಪತಿಯ "ಪರಿಶಿಷ್ಟ"-ಇದಕ್ಕೆ ಗೋಪಿನಾಥ ತರ್ಕಾಚಾರ್ಯ. ರಾಮಭದ್ರ ಚಕ್ರವರ್ತಿ. ಶಿವರಾಮ ಚಕ್ರವರ್ತಿ ಮತ್ತು ಪುಂಡರೀಕ-ಮೊದಲಾದವರ ವ್ಯಾಖ್ಯಾನಗಳಿವೆ.

iv) ತ್ರಿಲೋಚನ "ಉತ್ತರ ಪರಿಶಿಷ್ಟ" ಇದರಲ್ಲಿ ಧಾತು. ತದ್ಧಿತ ಮತ್ತು ಸಮಾಸಗಳ ವಿಷಯದಲ್ಲಿ ಶ್ರೀಪತಿಯು ಬಿಟ್ಟ ಅಂಶಗಳಿವೆ.

ಇವರ ಪೈಕಿ ಅನೇಕರು ಬಂಗಾಳ ದೇಶದ ವೈದ್ಯ ಅಂಶದವರು. ಕಾತಂತ್ರವು ಈಗ ಬಂಗಾಳದಲ್ಲಿ ಕೆಲವು ಭಾಗಗಳಲ್ಲಿ ಮಾತ್ರ ವ್ಯಾಸಂಗ ಮಾಡಲ್ಪಡುತ್ತಿದೆ.

(e) ಕಾಶ್ಮೀರದಲ್ಲಿ ಕಾತಂತ್ರ-ಇಲ್ಲಿ ಪ್ರಚಾರದಲ್ಲಿರುವ ಪಾಠವು ದುರ್ಗಸಿಂಹನ ವ್ಯಾಖ್ಯಾನಕ್ಕೆ ಹೊಂದುವ ಪಾಠಕ್ಕಿಂತಲೂ ಬೇರೆಯಾಗಿದೆ. ಈಚೀಚೆಗೆ ದುರ್ಗಸಿಂಹನ ವ್ಯಾಖ್ಯಾನದೊಡನೆ ಅವನ ಪಾಠವೂ ಪರಿಚಯವಾದಂತಿದೆ. ಅಲ್ಲಿಯವರೆವಿಗೂ ತಮ್ಮದೇ ಆದ ವ್ಯಾಖ್ಯಾನ ಮತ್ತು ಸಾರ ಗ್ರಂಥಗಳನ್ನು ಬಳಸುತ್ತಿದ್ದರು. ಬುಹ್ಲರ್ (Buhler) ಹೇಳುವಂತೆ ಕ್ರಿ. ಶ. 15ನೇ ಶತಮಾನ, 16ನೇ ಶತಮಾನದವರೆವಿಗೂ ಅಲ್ಲಿಯವರು ಕಾತಂತ್ರ ವ್ಯಾಸಾಂಗವನ್ನು ಮಾಡುತ್ತಿದ್ದರು.

ಕಾತಂತ್ರಕ್ಕೆ ಜಗದ್ಧನನ "ಬಾಲಬೋಧ" ವ್ಯಾಖ್ಯಾನವಿದೆ. ಇದಕ್ಕೆ ಉಗ್ರಭೂತಿಯ "ನ್ಯಾಸ" ವಿದೆ. ಇವನು ಕ್ರಿ. ಶ. 10ನೇ ಶತಮಾನದ ಉತ್ತರಾರ್ಧದಲ್ಲಿ ಕಾಶ್ಮೀರರಾಜ ಆನಂದಪಾಲನ ಗುರು. ಈ ರಾಜನೇ ಇದನ್ನು ಪ್ರಚಾರಕ್ಕೆ ತಂದವನು. ಚಿಚ್ಚುಭಟ್ಟನ "ಲಘುವೃತ್ತಿ" ಇದೇ ಕಾಲದ್ದು.

ಈಗ ಕಾಶ್ಮೀರದಲ್ಲಿ ಅಭ್ಯಸಿಸಲ್ಪಡುತ್ತಿರುವ ವ್ಯಾಕರಣ ಗ್ರಂಥಗಳಿಗೆಲ್ಲಾ ಕಾತಂತ್ರವೇ ಆಧಾರ.

vi) ಎರಡನೇ ಸರ್ಗದ ಸಾಮಾನ್ಯ ಸಮೀಕ್ಷೆ-ಕ್ರಿ. ಶ. 470ರಿಂದ 1200 ವರೆಗೆ ಪತಂಜಲಿಗಳಾದ ಮೇಲೆ .ಆಸ್ತಿಕರು ವ್ಯಾಕರಣಾಧ್ಯಯನವನ್ನು ಅಳಿಯದಂತೆ ಮಾಡಲು ಬಾಲಪಾಠವನ್ನು ಕಾಲಾಪವ್ಯಾಕರಣದಿಂದ ಆರಂಭ ಮಾಡುತ್ತಿದ್ದರು. ಇದು ದಕ್ಷಿಣ ದೇಶದಲ್ಲಿ ಹುಟ್ಟಿತಾದರೂ, ತನ್ನ ಪ್ರಭಾವದಿಂದ ಇತ್ತ ಬಂಗಾಳ ಅತ್ತ ಕಾಶ್ಮೀರದವರೆವಿಗೂ ಉತ್ತರದಲ್ಲಿ ಪ್ರಸಿದ್ಧಿ ಹೊಂದಿತು. ಇದು ಬರುವುದಕ್ಕೆ ಮುಂಚೆಯೇ ಬೌದ್ಧ ಮತ್ತು ಜೈನ ಸಂಪ್ರದಾಯಸ್ಥರ ಪ್ರಚಾರ ಕಾರ್ಯವು ಕುಂಠಿತವಾಗಿತ್ತು. ಇದಕ್ಕೆ ಮೂಲ ಕಾರಣ ಆರ್ಷೇಯ ಮತ್ತು ವೈದಿಕ ಸಂಪ್ರದಾಯದಲ್ಲಿ ಪುನರುಜ್ಜೀವಿಸಲ್ಪಟ್ಟ ಆಸ್ಥೆಯೇ. ಇದರ ಅಂಗವಾಗಿ ಸಂಸ್ಕೃತಾಧ್ಯಯನಕ್ಕೆ ಎಲ್ಲಾ ಕಡೆಯಿಂದಲೂ ಉತ್ತೇಜನ ಸಿಕ್ಕಿತು. ಈ ಅಧ್ಯಯನಕ್ಕೆ ಸಹಕಾರಿಯಾಗಿ ವ್ಯಾಕರಣವು ಜನಪ್ರಿಯವಾಗಿರಬೇಕು. ಪ್ರಾಕೃತ ಭಾಷೆಗಳ ಮೂಲಕವಾಗಿ ತಮ್ಮ ಮತ ಪ್ರಚಾರವನ್ನು ಮಾಡುವುದಕ್ಕಿಂತಲೂ ಸಂಸ್ಕೃತದ ಮೂಲಕವೇ ಸಾರ್ಥಕವಾದೀತೆಮ್ಬುವ ಅಭಿಪ್ರಾಯದಿಂದ ಬೌದ್ಧರು ಮತ್ತು ಜೈನರೂ ಸಂಸ್ಕೃತವನ್ನು ವಿಶೇಷವಾಗಿ ಕಲಿಯಲು ಹೊರಟಂತಿದೆ. "ಕಾಣಾದಂ ಪಾಣಿನೀಯಂ ಚಸರ್ವ ಶಾಸ್ತ್ರೋಪಕಾರಕಂ" ಅಂದರೆ ತರ್ಕ ಮತ್ತು ವ್ಯಾಕರಣ-ಇವೆರಡೂ ಸರ್ವಶಾಸ್ತ್ರಕ್ಕೂ ಉಪಕಾರಕ" ಎಂದು ಅರಿತು ಎಲ್ಲರೂ. ಅದರಲ್ಲಿಯೂ ಬೌದ್ಧ ಮತ್ತು ಜೈನ ವಿದ್ವಾಂಸರು . ತಮ್ಮ ಸಿದ್ಧಾಂತಗಳನ್ನು ಸಂಸ್ಕೃತದಲ್ಲಿ ಬರೆಯಲು ಹೊರಟರು. ಇತ್ತ ಮೊದಲು ಬ್ರಾಹ್ಮಣನಾಗಿ ನಂತರ ಬೌದ್ಧ ಅಶ್ವಘೋಷನು (ಕ್ರಿ. ಶ. 1ನೇ ಶತಮಾನ ಕಾವ್ಯಗಳ ಮೂಲಕ ತನ್ನ ಸಿದ್ಧಾಂತವನ್ನು ಪ್ರಚಾರ ಮಾಡಲು ಹೊರಟರೆ ಹಾಗೆಯೇ ಮೊದಲು ಬ್ರಾಹ್ಮಣನಾಗಿ ನಂತರ ಬೌದ್ಧನಾಗಿ ದಿಜ್ನಾಗನು (ಕ್ರಿ. ಶ. 450-520)ತನ್ನ ಪ್ರಮಾಣ ಸಮುಚ್ಚಯ ಮೊದಲಾದ 8ತರ್ಕಗ್ರಂಥಗಳಿಂದ ಸಿದ್ಧಾಂತ ಸ್ಥಾಪನೆಗೆ ಬೇಕಾದ ವಾದ ಶಕ್ತಿಯನ್ನು ಬೆಳೆಯಿಸಿಕೊಟ್ಟನು. ಇದೇ ಕಾಲದವನಾದ ಚಂದ್ರಗೋಮಿಯು ತನ್ನ ಸಿದ್ಧಾಂತದವರಿಗೆ ಉಪಯುಕ್ತವಾದ ವ್ಯಾಕರಣವನ್ನು ಕೊಟ್ಟಿರುವನು. ಜೈನಾಚಾರ್ಯದಲ್ಲಿ ಸಿದ್ಧಸೇನ ದಿವಾಕರನು (ಕ್ರಿ. ಶ.5ನೇ ಶತಮಾನಕ್ಕೆ ಸೇರಿದ ಜೈನೇಂದ್ರ ವ್ಯಾಕರಣವು ಇದೆ.

(b) ಬೌದ್ಧ ವ್ಯಾಕರಣಗಳು

i) ಚಂದ್ರಗೋಮೀ-ಕ್ರಿ. ಶ. 470-ಇವನು ಪಾಣಿನೀ, ಕಾತ್ಯಾಯನ ಮತ್ತು ಪತಂಜಲಿಗಳ ಗ್ರಂಥಗಳನ್ನು ಚೆನ್ನಾಗಿ ಅಧ್ಯ.ಯನ ಮಾಡಿ, ಸಂಸ್ಕೃತಭಾಷೆಯಲ್ಲಿ ಆಗಿದ್ದ ಬದಲಾವಣೆಗಳನ್ನು ತಿಳಿದುಕೊಂಡು, ಸೂತ್ರ, ವಾರ್ತಿಕೆ ಮತ್ತು ಇಷ್ಟಿಗಳನ್ನು ಉತ್ತಮಗೊಳಿಸುವ ಪ್ರಯತ್ನವನ್ನು ಮಾಡಿರುವಂತಿದೆ. ಬ್ರಾಹ್ಮಣಪದ್ಧತಿಯನ್ನು ಅಧ್ಯಯನದಲ್ಲಿ ತಪ್ಪಿಸುವ ಉದ್ದೇಶವು ಇವನಲ್ಲಿ ಕಂಡುಬರುತ್ತದೆ. ಪ್ರಾಚೀನರು ಇವರು ಮಾಡಿರುವ ಬದಲಾವಣೆಗಳನ್ನು ಒಪ್ಪಿಲ್ಲ . ಜ್ಞಾಪಕಗಳ ಮತ್ತು ಪರಿಭಾಷೆಗಳ ವಿಸ್ತರಣ ಕಾರ್ಯವು ಇವನ (ಕ್ರಿ. ಶ. 470)ಮತ್ತು ಕೌಶಿಕಕಾರರ (ಕ್ರಿ. ಶ.650) ನಡುವೆ ಆಗಿರಬೇಕೆಂದು ಊಹಿಸಲಾಗಿದೆ.

6 ಅಧ್ಯಾಯದ ಸೂತ್ರಗ್ರಂಥಗಳಲ್ಲದೆ 3 ಅಧ್ಯಾಯದ ಉಣಾದಿ, 10 ಭಾಗದ ಧಾತು ಪಾಠ, ಲಿಂಗಕಾರಿಕಾ ( ಲಿಂಗಾನುಶಾಸನ), ಗಣಪಾಠ, ಉಪಸರ್ಗವೃತ್ತಿ ಮೊದಲಾದುವುಗಳು ಇವನಿಂದಲೇ ರಚಿಸಲ್ಪಟ್ಟವೆ. ಉಣಾದಿಗಳು ಪಾಣಿನಿಯ ಉಣಾದಿಗಿಂತಲೂ ಬೇರೆಯಾಗಿವೆ. ಇವನ ಧಾತುಪಾಠಗಳು ಮುಂದೆ ಕಾತಂತ್ರ ವ್ಯಾಕರಣದಲ್ಲಿ ಸೇರಿಸಲ್ಪಟ್ಟವೆ. ಇವು ಕ್ಷೀರಸ್ವಾಮಿಯಿಂದ ಉಲ್ಲೇಖಿಸಲ್ಪಟ್ಟವೆ. ವಾಮನಾಚಾರ್ಯ, ಉಜ್ವಲದತ್ತ ಮತ್ತು ರಾಮಮಕುಟರು ಈ ಲಿಂಗಾನುಶಾಸನವನ್ನು ಉಲ್ಲೇಖಿಸಿರುವರು. ಈ ವ್ಯಾಕರಣ ಗ್ರಂಥವಲ್ಲದೆ ಚಂದ್ರಗೋಮಿಯು 'ಶಿಷ್ಯಲೇಖ 'ಎನ್ನುವ ಮತೀಯ ಗ್ರಂಥವನ್ನು "ಲೋಕಾಂತ"ವೆನ್ನುವ ನಾಟಕವನ್ನು ರಚಿಸಿರುವನೆಂದು ಪ್ರತೀತಿ ಇದೆ.

ಮುಂದೆ ಇವನ ವ್ಯಾಕರಣ ಗ್ರಂಥಕ್ಕೆ ಬೌದ್ಧ ಮತಾನುಯಾಯಿಗಳಲ್ಲಿ ಬೆಂಬಲ ಸಿಕ್ಕಿದೆ. ಅನೇಕ ವ್ಯಾಖ್ಯಾನಗಳು ರಚಿಸಲ್ಪಟ್ಟವು. ಇವನ ವೃತ್ತಿಯ ಕೆಲವು ಭಾಗಗಳು ಈಗಲೂ ಇವೆ. ಇದರ ಮೇಲೆ ಧರ್ಮದಾಸನ ವ್ಯಾಖ್ಯಾನವಿದೆ.

ಕ್ರಿ. ಶ. 1000 ಲಾಗಾಯ್ತು ಟಿಬೆಟ್ಟಿನಲ್ಲಿ ಉಪಯೋಗದಲ್ಲಿದೆ. ಆ ದೇಶ ಭಾಷೆಗೆ ಚಾಂದ್ರ ವ್ಯಾಕರಣವು ಭಾಷಾಂತರಿಸಲ್ಪಟ್ಟಿದೆ. ಇತರ ಬೌದ್ಧಗ್ರಂಥಗಳೊಡನೆ ಇದೂ ಸಿಲೋನಿಗೆ ಒಯ್ಯಲ್ಪಟ್ಟಿತು. ಸಂಸ್ಕೃತ ಪ್ರತಿಗಳು ಕೇರಳದಲ್ಲಿ ದೊರೆತಿವೆ. ಇದು ಈಗ ಹಿಂದೂಸ್ಥಾನದಲ್ಲಿ ನಷ್ಟವಾಗಿದೆ. ಪಾಣಿನಿಯ ವ್ಯಾಕರಣಕ್ಕೆ ಭಿನ್ನ ವಿಷಯಗಳು ಇದರಲ್ಲಿ ಇರದಿರುವುದೇ ಇದಕ್ಕೆ ಕಾರಣ. ಬೌದ್ಧಧರ್ಮಗಳಂತೆ ಇದೂ ನಷ್ಟವಾಯಿತು. ಈ ವ್ಯಾಕರಣ ಪದ್ಧತಿಯು ಈಗ ಈ ದೇಶದಲ್ಲಿ ಅಭ್ಯಸಿಸಲ್ಪಡುತ್ತಿಲ್ಲ. ಟಿಬೆಟ್ಟಿನಲ್ಲುಂಟು. ಸಿಂಹಳದಲ್ಲಿ ಈಗ ಇರುವ ಸಂಸ್ಕೃತ ವ್ಯಾಕರಣವು ಚಾಂದ್ರ ವ್ಯಾಕರಣವೇ. ಕ್ರಿ. ಶ. 1200ರಲ್ಲಿ ಕಾಶ್ಯಪನೆಂಬ ಒಬ್ಬ ಬೌದ್ಧ ಪುರೋಹಿತನು "ಬಾಲಾವ ಭೋಧ"ವೆನ್ನುವ ಹೆಸರುಳ್ಳ ಸಂಗ್ರಹವನ್ನು ಬರೆದಿರುವನು. ಇದು ಲಘು ಕೌಮುದಿಯಂತಿದೆ. ಜನಪ್ರಿಯವಾಗಿಯೂ ಇದೆ.

ಈ ಗ್ರಂಥದ ಸ್ವರೂಪ -ಪಾಣಿನಿ, ಕಾತ್ಯಾಯನ ಮತ್ತು ಪತಂಜಲಿಗಳ ಸಂಗ್ರಹ ಗ್ರಂಥವೇ ಇದು.

1) ಮೂಲಭೂತ ಮಾಹೇಶ್ವರ ಸೂತ್ರಗಳಲ್ಲಿ 'ಹಯವರಟ್'ಮತ್ತು' ಲಣ್' ಎನ್ನುವ ಸೂತ್ರಗಳು 'ಹಯವರಲಣ್' ಎಂದು ಒಂದಾಗಿದೆ

2) ವೈದಿಕ ಪ್ರಕರಣವನ್ನು ಬಿಟ್ಟು ವೇದದ ಕೆಲವು ಧಾತುಗಳನ್ನು ತೆಗೆದುಕೊಳ್ಳಲಾಗಿದೆ.

3) ಪ್ರತ್ಯಾಹಾರಗಳಲ್ಲಿ ಕೆಲವನ್ನು ಬಿಟ್ಟು ಹೊಸದಾಗಿ ಕೆಲವನ್ನು ಸೇರಿಸಲಾಗಿದೆ. ಹೊಸದಾಗಿ 35 ಸೂತ್ರಗಳು ಸೇರಿಸಲ್ಪಟ್ಟಿವೆ. ಕಾಶಿಕದಲ್ಲಿ ಇವೆಲ್ಲವೂ ಇವೆ. ಕೈಯಟನು ಇವುಗಳನ್ನು ಅಪಾಣಿನೀಯವೆಂದು ಹೇಳಿರುವನು

4) ಉಚ್ಚಾರಣ ಸೌಕರ್ಯಕ್ಕಾಗಿ ಪಾಣಿನಿಯ ಸೂತ್ರಗಳು ಬದಲಾಯಿಸಲ್ಪಟ್ಟಿವೆ.

5) ಪಾಣಿನಿಯ 'ಸಂಜ್ಞೆ' ಚಂದ್ರಗೋಮಿಗೆ 'ನಾಮನ್'

6) ಪಾಣಿನಿಯ ಮೊದಲಿನ ಎರಡು ಅಧ್ಯಾಯದಲ್ಲಿರುವ ಸೂತ್ರಗಳನ್ನು ಮಿಕ್ಕ ಕಡೆ ಅಲ್ಲಲ್ಲಿ ಸೇರಿಸಿ 6 ಅಧ್ಯಾಯದಲ್ಲೇ ಪರಿಸಮಾಪ್ತಿ ಮಾಡಲಾಗಿದೆ

7) ಪಾಣಿನಿಯು 3978 ಸೂತ್ರಗಳ ಸ್ಥಾನದಲ್ಲಿ ಇಲ್ಲಿ 3100 ಸೂತ್ರಗಳಿವೆ.

8) ಧ್ವನಿಗೆ ಸಂಬಂಧಿಸಿದಂತೆ ಒಂದೇ ವಿಧವಾದ ಪದಗಳ ಗುಂಪಿಗೆ ಸೇರಿದ ಶಬ್ದಗಳನ್ನು ಶಿಸ್ತುಗೊಳಿಸಲಾಗಿದೆ.

ಚಂದ್ರಗೋಮಿಯ ಕಾಲ-ಕ್ರಿ. ಶ. 470-ಕಾಶಿಕರ ಕಾಲವು ಕ್ರಿ. ಶ. 650 ಎಂದು ನಿಶ್ಚಿತವಾಗಿದೆ. ಇದನ್ನು ಚಂದ್ರಗೋಮಿಯ ಸೂತ್ರಗಳೆಂದು ಕೆಲವನ್ನು ಪಾಣಿನಿ ಮತ್ತು ಕಾತ್ಯಾಯನದಿಂದ ತೆಗೆದುಕೊಂಡಿರುವುದನ್ನು ಕಾಣಬಹುದು. ಆದ್ದರಿಂದ ಚಾಂದ್ರ ವ್ಯಾಕರಣವು ಕ್ರಿ. ಶ. 650ಕ್ಕೆ ಹಿಂದಿನದು ಎಂದು ಸ್ಥಿರವಾಗುತ್ತದೆ. ಒಂದು ವೃತ್ತಿಯಲ್ಲಿ "ಅಜಯತ್" ಗುಪ್ತೋಹೂಣಾನ್"ಎನ್ನುವ ವಾಕ್ಯವನ್ನು ಮಾತನಾಡುವವನು ಜೀವಿಸಿರುವಾಗ ಹೇಳಬೇಕು ಎಂದಿದೆ. ಸ್ಕಾಂದಗುಪ್ತನು ಕ್ರಿ. ಶ. 2165 ಹೂಣರನ್ನು ಓಡಿಸಿದನು. ಆದ್ದರಿಂದ ಚಂದ್ರಗೋಮಿಯ ಕಾಲವನ್ನು ಕ್ರಿ. ಶ 470 ಎಂದು ತೆಗೆದುಕೊಳ್ಳಬಹುದು. ಆದರೆ ಹೂಣರನ್ನು ಪೂರ್ಣವಾಗಿ ಓಡಿಸಿದವನು ಯಶೋಧರ್ಮ.(ಕ್ರಿ. ಶ. 554).ಆದ್ದರಿಂದ ಕ್ರಿ. ಶ. 470 ಎನ್ನುವುದು ಸಂಶಗ್ರಸ್ಥವಾಗಬಹುದು. ಅದಕ್ಕಾಗಿ ಮತ್ತೊಂದು ಪ್ರಮಾಣವಿದೆ. ದಿಗಂಬರ ಜೈನರ ಗುರುವಾದ ವಸುರಾತನು ಚಂದ್ರಾಚಾರ್ಯನ ಗುರುವೆಂದು ವಾಕ್ಯದದೀಯದಲ್ಲಿದೆ. ಅಂದರೆ ಭರ್ತೃಹರಿಗೆ ಎರಡು ತಲೆಯಾದರೂ ಚಂದ್ರಗೋಮಿಯು. ಹಿಂದಿನವನಾಗಿರಬೇಕು. ಅಂದರೆ ಕ್ರಿ. ಶ. 470 ಎಂದು ಸಿದ್ಧವಾಗುತ್ತದೆ. ಚಂದ್ರಗೋಮಿಯು ಬೌದ್ಧ ಭಿಕ್ಷುವಲ್ಲ.

ii) ಜಯಾದಿತ್ಯ-ವಾಮನರ ಕಾಶಿಕಾ-(ಕ್ರಿ. ಶ. 650) ಇದನ್ನು ಬರೆದವನು ಕಾಶ್ಮೀರದ ಜಯಾದಿತ್ಯನೆಂದು ಇತ್ಸಿಂಗನು ಹೇಳಿರುವನು. ಆದರೆ ಜಯಾದಿತ್ಯ ಮತ್ತು ವಾಮನರ ಇವರಿಬ್ಬರ ಗ್ರಂಥ. ಇದೇ ಇತ್ಸಿಂಗನು. ಕ್ರಿ. ಶ. 660ರಲ್ಲಿ ಜಯಾದಿತ್ಯನು ಸತ್ತನೆಂದು ಹೇಳಿರುವನು. ಅಂದರೆ ಕಾಶಿಕದ ಕಾಲವು ಕ್ರಿ. ಶ. 650ರಲ್ಲಿ ಎಂದು ತಿಳಿಯಬಹುದು ಪ್ರೌಢಮನೋರಮ ಗ್ರಂಥದಲ್ಲಿ ಜಯಾದಿತ್ಯ ಮತ್ತು ವಾಮನ ಇವರಿಬ್ಬರೂ ಭಿನ್ನವ್ಯಕ್ತಿಗಳೆಂದು ಭಟ್ಟೋಜಿದೀಕ್ಷಿತರು ಬರೆದಿರುವರು. ಮೊದಲನೆ ಐದು ಅಧ್ಯಾಯಗಳನ್ನು ಜಯಾದಿತ್ಯನು ಬರೆದನೆಂದೂ ಉಳಿದ ಮೂರು ಅಧ್ಯಾಯಗಳನ್ನು ವಾಮನನು ರಚಿಸಿದನೆಂದೂ ಹೇಳಲಾಗಿದೆ. ಇವರಿಬ್ಬರ ವಿಷಯದಲ್ಲಿ ನಮಗೆ ಏನೂ ತಿಳಿಯದು. ಯಾರು ಕಾಶಿಕಕ್ಕೆ ಮಂಗಳಶ್ಲೋಕವನ್ನು ಬರೆದಿಲ್ಲ. ಇವರಿಬ್ಬರೂ ಬೌದ್ಧರು . ಜಯಾದಿತ್ಯನು 1,36ರಲ್ಲಿ ಲೋಕಾಯಿತರ ಗ್ರಂಥವನ್ನು ಉಲ್ಲೇಖಿಸಿರುವನು . ಕಾಶೀರಾಜನಾದ ಜಯಾಪೀಡನೇ ಜಯಾದಿತ್ಯನೆಂದೂ ಅವನ ಮಂತ್ರಿ ವಾಮನನೆಂದು ರಾಜತರಂಗಿಣಿಯಲ್ಲಿ ಬರೆದಿದೆ. ವಾಮನನು ಕಾಶ್ಮೀರದವನೆಂದೂ Dr. ಬುಲ್ಹರ್ ಹೇಳಿರುವನು. ಈ ಕಾಶಿಕೆಯು ಅಷ್ಟಾಧ್ಯಾಯಿಗೆ ಕ್ರಮ ವ್ಯಾಕರಣ ವ್ಯಾಖ್ಯಾನವೆನ್ನಬಹುದು. ಕೆಲವು ಪೂರ್ವ ವಿಷಯಗಳೂ ಇದರಲ್ಲಿವೆ. ಚಂದ್ರಗೋಮಿಯು ಉತ್ತಮಗೊಳಿಸಿದ ಎಲ್ಲಾ ಅಂಶಗಳನ್ನು ಪಾಣಿನಿ ಗ್ರಂಥದಲ್ಲಿ ಸೇರಿಸುವುದೇ ಕಾಶಿಕದ ಮುಖ್ಯೋದ್ದೇಶವೆಂದು ಕಂಡು ಬರುತ್ತದೆ. ಹಾಗೆಯೇ ಡಾ.ಕೀಲ್‌ಹಾರನ್(Kielhorn) ಸಮರ್ಥಿಸಿರುವನು.

ಈ ಕಾಶಿಕಕ್ಕೆ ಜಿನೇಂದ್ರಬುದ್ಧಿಯು 'ನ್ಯಾಸ'ವೆಂಬ ವ್ಯಾಖ್ಯಾನವನ್ನು ಬರೆದಿರುವನು. ಇದರ ಮತ್ತೊಂದು ಹೆಸರು " ಕಾಶಿಕಾವಿವರಣಾ ಸಂಚಿಕಾ" ಇವನು ತನ್ನನ್ನು ಬೋಧಿಸತ್ವ ದೇಶಿಕಾಚಾರ್ಯನೆಂದು ಕರೆದುಕೊಂಡಿರುವನು. ಭಾಮಹನು ಇವನ ಹೆಸರನ್ನು ಹೇಳಿರುವನು. ಆದ್ದರಿಂದ ಇವನ ಕಾಲ ಕ್ರಿ ಶ. 750ಕ್ಕಿಂತಲೂ ಅರ್ವಾಚೀನವೆಂದು ಹೇಳಲಾಗುವುದಿಲ್ಲ. ಈ ಕಾಶಿಕಕ್ಕೆ ಮತ್ತೊಂದು ವ್ಯಾಖ್ಯಾನವಿದೆ. ಅದು ಪದಮಂಜರೀ. ಅದನ್ನು ಬರೆದವನು ಹರದತ್ತ . ಇವನ ಮೊದಲ ಹೆಸರು ಸುದರ್ಶನ. ಇವನು ಪದ್ಮಕುಮಾರನ ಮಗ. ಅಗ್ನಿಕುಮಾರನ ತಮ್ಮ. ಅಪರಾಜಿತನ ಶಿಷ್ಯ. ಪ್ರಾಯಶಃ ತಮಿಳು ದೇಶದವನಾಗಿರಬಹುದು. ತೆಲುಗು ಚೆನ್ನಾಗಿ ಪರಿಚಯವಿದ್ದಂತೆ ಕಂಡುಬರುತ್ತದೆ. ಈ ಗ್ರಂಥದಲ್ಲಿ ಮಾಘನ ಕಾವ್ಯವು ಉಲ್ಲೇಖಿತವಾಗಿದೆ. ಇದು ಮಾಧವೀಯ ಧಾತು ವೃತ್ತಿಯಲ್ಲ ಉಲ್ಲೇಖಿಸಲ್ಪಟ್ಟಿದೆ. ಮಲ್ಲಿನಾಥನಿಗೆ ಈ ಗ್ರಂಥವು ತಿಳಿದಿದೆ. ಭವಿಷ್ಯೋತ್ತರ ಪುರಾಣದ ರೀತಿ ಇವನ ಕಾಲ ಕ್ರಿ. ಶ. 878ರಲ್ಲಿ ಮುಗಿಯಿತು. ಇದನ್ನು ಸರಿ ಎಂದು ಹೇಳಲಿಕ್ಕಾಗುವುದಿಲ್ಲ. ಇದರಲ್ಲಿ ಇವನ ತಂದೆ ವಾಸುದೇವ. ಮೊದಲು ವೈಷ್ಣವನಾಗಿದ್ದು ನಂತರ ಶೈವನಾದನೆಂದಿದೆ. ಈ ಪದ ಮಂಜರಿಯ ಕೈಯಟನ ಮಹಾಭಾಷ್ಯ ಪ್ರದೀಪದ ಆಧಾರದ ಮೇಲೆ ಬರೆದಿರುವಂತಿದೆ. ಆದ್ದರಿಂದ ಇವನ ಕಾಲ ಕ್ರಿ. ಶ. 1100 ಆಗಿರಬೇಕು.

ಆಗ ಮಹಮ್ಮದೀಯರ ದಂಡಯಾತ್ರೆ ಪ್ರಾರಂಭ . ಎಲ್ಲೆಲ್ಲೂ ಕ್ಷೋಭೆಯುಂಟಾಗಿತ್ತು. ಒಂದೆರಡು ಶತಮಾನಗಳ ಕಾಲ ವ್ಯಾಕರಣಾಭ್ಯಾಸವು ಮೃತಪ್ರಾಯವಾಗಿದ್ದಿರಬೇಕು. ನಂತರ ಮಹಮ್ಮದ್ದೀಯರು ಇಲ್ಲೇ ನೆಲಸುವಂತಾದ ಮೇಲೆ ಅವರ ಸೌಹಾರ್ದದಿಂದ ಕೆಲವು ವ್ಯಾಕರಣ

ಪದ್ಧತಿಗಳು ಮುಂದೆ ಹುಟ್ಟಿದಂತಿದೆ. ಇದನ್ನು ಮುಂದೆ ರೂಪಮಾಲಾ ಎನ್ನುವ ಕರಣದ ವಿಶೇಷವನ್ನು ಹೇಳುವಾಗ ಪ್ರಸ್ತಾಪಿಸಲಾಗುತ್ತದೆ.

(c) ಜೈನ ವ್ಯಾಕರಣ ಗ್ರಂಥಗಳು

i)ದೇವನಂದಿಯ ಜೈನೇಂದ್ರ ವ್ಯಾಕರಣ-ಕ್ರಿ. ಶ.5ನೇ ಶತಮಾನ ದೇವನಂದಿಗೆ ಪೂಜ್ಯಪಾದ ಎನ್ನುವ ಗೌರವ ಪ್ರಶಸ್ತಿಯಿದೆ. ಇವನಲ್ಲಿ ಅಷ್ಟು ಪ್ರತಿಭೆಯು ಕಂಡು ಬಂದಿಲ್ಲ. ಪಾಣಿನಿಯ ಸೂತ್ರಗಳ ಮತ್ತು ಕಾತ್ಯಾಯನರ ವಾರ್ತಿಕೆಗಳ ಸಂಗ್ರಹವನ್ನು ಇವನು ಮಾಡಿರುವಂತಿದೆ. ಇವನ ವ್ಯಾಕರಣವು ಸಂಕ್ಷೇಪರೂಪದಲ್ಲಿ 3000 ಸೂತ್ರಗಳಿಂದ ಕೂಡಿದೆ. ಇದಕ್ಕೆ ಅಭಯನಂದಿಯ ವ್ಯಾಖ್ಯಾನವಿದೆ. ಇದಕ್ಕೆ ಇನ್ನೂ 700 ಸೂತ್ರಗಳನ್ನು ಸೇರಿಸಿ. ಸೂತ್ರ ಪದಗಳನ್ನು. ಕ್ರಮವನ್ನು ವ್ಯತ್ಯಾಸ ಮಾಡಿ ಒಂದು ದೀರ್ಘ ವ್ಯಾಕರಣವೂ ಇದೆ. ಈ ಗ್ರಂಥವೇ ಮೂಲಭೂತವೆಂದೂ. ಇದರಿಂದ ಸಂಗ್ರಹವು ಮುಂದೆ ಬರೆಯಲ್ಪಟ್ಟಿತ್ತೆಂದೂ ಪ್ರೊ. ಪಥಕ್ (Pathak) ಅವರು ಅಭಿಪ್ರಾಯಪಟ್ಟಿರುವರು. ಲಾಘವಕ್ಕಾಗಿ ಕೆಲವು ಉಪಾಯಗಳು ಆಶ್ರಯಿಸಲ್ಪಟ್ಟಿವೆ. "ವಿಭಾಷಾ"ಎನ್ನುವ ಕಡೆ ಮತ್ತು "ಅನ್ಯತರ ಸ್ಯಾಂ "ಎನ್ನುವ ಕಡೆ "ವಾ"ಎಂದು ಬದಲಾಯಿಸಿರುವರು. ಮಾಹೇಶ್ವರ ಸೂತ್ರಗಳನ್ನು ವೈದಿಕ ಭಾಗವನ್ನು ಬಿಟ್ಟಿರುವರು. ಹೆಚ್ಚಾಗಿ ಚಿಕ್ಕವುಗಳಾದ ಪ್ರತ್ಯಾಹಾರಗಳನ್ನು ಕಲ್ಪಿಸಿಕೊಂಡಿರುವನು.

ಇವನು ತನ್ನ ಮತೀಯ ಗ್ರಂಥಗಳಿಂದ ವಿಷಯಗಳನ್ನು ತೆಗೆದುಕೊಂಡಂತಿಲ್ಲ . ಆರು ಮತಾಚಾರ್ಯರ ಹೆಸರುಗಳನ್ನೇನ್ನೋ ಉಲ್ಲೇಖಿಸಿರುವರು. ಅವರು ಶ್ರೀದತ್ತ. .ಯಶೋಭದ್ರ . ಭೂತಿಬಲಿ. ಪ್ರಭಾಚಂದ್ರ. ಸಿದ್ದಸೇನ. ಮತ್ತು ಸಮಂತಭದ್ರ. ಇನ್ನೂ ಕೆಲವು ಹೆಸರುಗಳನ್ನು ಹೇಳಿರುವರು. ಆದರೆ ಅವು ಕಲ್ಪಿತಗಳೆಂದು ಕಾಣುತ್ತದೆ. ಕೀಲ್‌ಕಾರನ್-ಅವನು ಜೈನೇಂದ್ರ ಪದ್ಧತಿಯಲ್ಲಿ ಇದೊಂದು ನೂತನ ಕ್ರಮವಾಗಿದೆ ಎಂದು ಹೇಳಿರುವನು.

ಈ ಗ್ರಂಥದ ಕಾಲ ನಿರ್ಣಯ -(a) ಕ್ರಿ. ಶ. 1025ರ ಶಾಕಟಾಯನ ಪದ್ಧತಿಯ "ಶಬ್ದಾನುಶಾಸನವು"ಜೈನೇಂದ್ರ ವ್ಯಾಕರಣಕ್ಕೆ ಋಣಿಯಾಗಿದೆ ;(b)ಕ್ರಿ.ಶ.853ರಲ್ಲಿ ರಚಿತವಾದ ಒಂದು ದಿಗಂಬರ ದರ್ಶನ ಶಾಸ್ತ್ರದಲ್ಲಿ ಪೂಜ್ಯಪಾದನ ಶಿಷ್ಯನೊಬ್ಬನು ಒಂದು ದ್ರಾವಿಡ ಸಂಘವನ್ನು ಸ್ಥಾಪಿಸಿದನೆಂದು ಹೇಳಿದೆ. (c)ಕ್ರಿ. ಶ. 730ರ ಲಕ್ಷ್ಮೇಶ್ವರ ದಲ್ಲಿ ಶಂಖಬಸ್ತಿಯಲ್ಲಿರುವ ಒಂದು ಶಾಸನದಲ್ಲಿ ಪೂಜ್ಯಪಾದನು ತನ್ನ ಶಿಷ್ಯರಿಗೆ ಕೊಟ್ಟದಾನದ ಪ್ರಸ್ತಾಪವಿದೆ. (d) ಕಾಶಿಕವು ಈ ಗ್ರಂಥಕ್ಕೆ ಋಣಿಯಾಗಿರುವುದು ಸ್ಪಷ್ಟವಾಗಿ ಕಾಣುತ್ತದೆ. (ಕಾಶಿಕದ ಕಾಲ ಕ್ರಿ. ಶ. 650); (c) ಕ್ರಿ. ಶ. 450ರ ಈಶ್ವರ ಕೃಷ್ಣನ ಸಾಂಖ್ಯಕಾರಿಕೆಯು ಇದರಲ್ಲಿ ಉಲ್ಲೇಖಿತವಾಗಿದೆ;(f) ಕದಂಬರ ಮತ್ತು ಗುಪ್ತರ ಕಾಲದಲ್ಲೂ ಇದು ಪ್ರಚಾರದಲ್ಲಿದ್ದುದು ತಿಳಿದು ಬರುತ್ತದೆ.; ಈ ಕಾರಣಗಳಿಂದ ಇವರ ಕಾಲ ಕ್ರಿ. ಶ. 5ನೆಯ ಶತಮಾನವೆಂದು ಸ್ಪಷ್ಟವಾಗಿ ಹೇಳಬಹುದು.

ಇದರ ಅರ್ವಾಚೀನ ಚರಿತ್ರೆ -ಜೈನೇಂದ್ರ ವ್ಯಾಕರಣವು ಹೊಸಪದ್ಧತಿಯನ್ನೇನು ತಂದಿಲ್ಲ. ಇದಕ್ಕೆ ಎರಡು ವ್ಯಾಖ್ಯಾನಗಳಿವೆ. (i) ಕ್ರಿ. ಶ. 750ರ ಅಭಿನಂದಿಯ ವ್ಯಾಖ್ಯಾನ (2) ಸೋಮದೇವನ ಶಬ್ದಾರ್ಣವ ಚಂದ್ರಿಕಾ; ಇವರ ಕಾಲವು ಎರಡನೇ ಭೋಜದೇವನ ಕಾಲವೆಂದು ಹೇಳಲಾಗಿದೆ. ಯಾರೋ ಇವನ ಸೂತ್ರಪಾಠವನ್ನು "ಪಂಚವಸ್ತು" ಎನ್ನುವ ಹೆಸರಿನಿಂದ ಕೊಟ್ಟಿರುತ್ತಾರೆ.. ಇದನ್ನು ಶ್ರುತಿಕೀರ್ತಿಯು ರಚಿಸಿದಲೆಂದು ಪ್ರತೀತಿ ಮಾತ್ರವಿದೆ. ಹಾಗಿದ್ದರೆ ಇವನ ಕಾಲ ಕ್ರಿ. ಶ. 1045 ಆಗುತ್ತದೆ.

13ನೇ ಶತಮಾನವಾದ ಮೇಲೆ ಜೈನೇಂದ್ರ ವ್ಯಾಕರಣದ ಚರಿತ್ರೇ.ಯೇ ತಿಳಿಯದು. ನಷ್ಟವಾಯಿತೆಂದು ಕಾಣುತ್ತದೆ. ಆದರೂ ಈಗ ಅಲ್ಲಲ್ಲಿ ಕೆಲವು ದಿಗಂಬರ ಜೈನರು ಅಭ್ಯಾಸ ಮಾಡುತ್ತಿರುವರು.

ಕರ್ತೃವಿನ ವಿಚಾರ- ಕೊನೆಯ ತೀರ್ಥಂಕರ "ಜಿನ" ಅಥವಾ ಮಹಾವೀರನೇ ಇವನು ಎಂದು ಕೆಲವರು ಹೇಳುವರು. ಇವನನ್ನು ಇವನ 8ನೇ ವರ್ಷದಲ್ಲಿ ಇಂದ್ರನು ಬಂದು ಕೇಳಿದಾಗ ಅವನಿಗೆ ಉಪದೇಶಿಸಿದನೆಂದು. ಸಮಯಸುಂದರ ಸೂರಿಯು ತನ್ನ ಕಲ್ಪಸೂತ್ರ ವ್ಯಾಖ್ಯಾನದಲ್ಲೂ. ಲಕ್ಷ್ಮಿವಲ್ಲಭನು ತನ್ನ "ಉಪದೇಶಮೂಲಕರ್ಣಿಕ" ದಲ್ಲೂ.

ಯದಿಂದ್ರಾಯ ಜಿನೇಂದ್ರೇಣ ಕೌಮಾರೇಪಿ ನಿರೂಪಿತಂ
ಐಂದ್ರ ಜಿನೇಂದ ಮಿತತತ್ ಪಾಹುಃ ಶಬ್ದಾನುಶಾಸನಂ.

ಎದು ಹೇಳಿರಿವನು. ಪೆಜ. ಥವಾಕೆಟೆಯು (Kathavate)ಈ ಕಥೆಯು ಸುಳ್ಳೆನ್ನುವವರಿಗೆ ಉತ್ತರವನ್ನು ಕೊಡುತ್ತಾ ಯಾವ ಹಸ್ತ ಪ್ರತಿಯಲ್ಲೂ ಕರ್ತೃವಿನ ಹೆಸರು "ದೇವನಂದೀ"ಎಂದು ಇಲ್ಲವೇ ಇರುವುದರಿಂದ ಈ ಕಥೆಯನ್ನು ನಂಬಲೇಬೇಕು ಎಂದಿರುವನು. ಆದರೆ ಬೋಪದೇವ. ಹೇಮಚಂದ್ರ ಮೊದಲಾದವರು ದೇವನಂದಿಯೇ ಬರೆದಿದ್ದು ಎಂದು ಸಾಧಿಸಿರುವರು. Dr.ಕೀಲ್‌ಕಾರನ್ ಮತ್ತು ಪ್ರೊ. ಪಥಕ್ ಇವರಿಬ್ಬರೂ ಈ ಅಭಿಪ್ರಾಯವನ್ನೇ ಹೊಂದಿರುವರು.

ii) ಶಾಕಟಾಯನ- ಕ್ರಿ. ಶ.817-877 ಜೈನೇಂದ್ರ) ವ್ಯಾಕರಣದಂತೆಯೇ ಶ್ವೇತಾಂಬರ ಜೈನರ ಪ್ರಯೋಜನಕ್ಕಾಗಿ. ಇದರ ಕ್ರಮವನ್ನೇ ಅನುಸರಿಸಿ 200 ವರ್ಷಗಳಾದ ಮೇಲೆ 'ಶಬ್ದಾನುಶಾಸನ'ವೆನ್ನುವ ವ್ಯಾಕರಣಗ್ರಂಥವನ್ನು ಇವನು ರಚಿಸಿರುವನು. ಇದು ಒಂದು ಮತೀಯ ಗ್ರಂಥ ಇದಕ್ಕೆ ಅನೇಕ ವ್ಯಾಖ್ಯಾನಗಳಿರುವುದನ್ನು ಗಣರತ್ನಮ ಹೋದಧಿ. ಮಾಧವೀಯ ಧಾತುವೃತ್ತಿ ಮೊದಲಾದ ಗ್ರಂಥಗಳು ತಿಳಿಸಿವೆ. ಜೈನರಲ್ಲದೆ ಮಿಕ್ಕವರಲ್ಲಿಯೂ ಇದು ಪ್ರಚಾರದಲ್ಲಿದಂತಿದೆ. ಇಷ್ಟಾದರೂ ಈ ಪ್ರತಿಭೆಯಿಂದ ಕೂಡಿದ ಗ್ರಂಥವಿಲ್ಲ.

ಪಾಣಿನಿಯ iii, 4, 41; viii 3, 18; viii, 4,50 ಸೂತ್ರಗಳಲ್ಲಿ ಕಾಣುವ ಮತ್ತು 1,3 ಯಾಸ್ಕ ನಿರುಕ್ತದಲ್ಲಿ ಕಾಣುವ ಶಾಕಾಟಾಯನವೇ ಬೇರೆ. ಈ ಶಬ್ದಾನುಶಾಸನ

ಕರ್ತೃವಾದ ಶಾಕಟಾಯನನೇ ಬೇರೆ. ಪಾಣಿನಿ ಮತ್ತು ಯಾಸ್ಕರು ತಿಳಿಸಿರುವ ಶಾಕಟಾಯನು ಬರೆದಿರುವ ಯಾವ ಗ್ರಂಥವು ನಮಗೆ ಲಭ್ಯವಾಗಿಲ್ಲ. ಆದ್ದರಿಂದಬೋಪದೇವ ಮತ್ತು ಹೇಮಚಂದ್ರನು ಹೇಳಿರುವ ಶಾಕಟಾಯನನು ಶಬ್ದಾನುಶಾಸನದ ಶಾಕಟಾಯನನೇ. ಈ ವ್ಯಕ್ತಿಯು ಇದ್ದಾನ್ನೋ ಇಲ್ಲವೋ ಎಂದು ಕೀಲ್‌ಹಾರನ್ ಸಂದೇಹಪಟ್ಟಿರುವನು. ಆದರೆ 1914 Hindu Antiquaryಯಲೇಖನ ಒಂದರಲ್ಲಿ ಇವನಿದ್ದುದಕ್ಕೆ ಕಾರಣವನ್ನು ಕೊಟ್ಟಿರುವನಲ್ಲದೆ ಅವನ ಕಾಲವೂ ನಿರ್ಣೀತವಾಗಿದೆ. ರಾಷ್ಟ್ರಕೂಟ ರಾಜನಾದ 1ನೇ ಅಮೋಘವರ್ಷನ ಕಾಲದಲ್ಲಿ ತನ್ನ ಅಮೋಘವೃತ್ತಿಯನ್ನು ರಚಿಸಿದನೆಂದು ಹೇಳಲಾಗಿದೆ. ಇದರ ಕಾಲ ಕ್ರಿ. ಶ. 817-877.

ಇವನ ಶಬ್ದಾನುಶಾಸನ -ಶಾಕಟಾಯನನು ತನ್ನ ಗ್ರಂಥದಲ್ಲಿ ಪಾಣಿನಿಕಾತ್ಯಾಯನ, ಪತಂಜಲಿ, ಚಂದ್ರಗೋಮೀ ಮತ್ತು ಜೈನೇಂದ್ರರಿಂದ ಸಂಗ್ರಹಿಸಿ ವಿಷಯವನ್ನು ಕೊಟ್ಟಿರುವನು. ಇಲ್ಲಿ ಪಾಣಿನಿಯ ಸೂತ್ರಗಳಂತೆಯೇ ಸೂತ್ರಗಳಿವೆ. ಕೆಲವು ಕಡೆ ಪಾಣಿನಿಯ ಸೂತ್ರಗಳನ್ನು ಚಿಕ್ಕದಾಗಿ ಮಾಡಿರುವರು. ಪಾಣಿನಿಯಲ್ಲಿರುವುದನ್ನು ಚಾಂದ್ರವ್ಯಾಕರಣದಿಂದ ಸಂಗ್ರಹಿಸಿರುವನು. ಚಾಂದ್ರವ್ಯಾಕರಣವನ್ನು ಪರಿಷ್ಕರಿಸುವಾಗ ಜೈನೇಂದ್ರ ವ್ಯಾಕರಣವನ್ನು ಅನುಸರಿಸಿರುವನು. ಇಷ್ಟಾದರೂ ಇದರಲ್ಲಿ ಹೊಸ ವಿಷಯವೇನೂ ಇಲ್ಲ.

ಇದರಲ್ಲಿ 4 ಪಾದಗಳ 4 ಅಧ್ಯಾಯಗಳಿವೆ. ಮುಂದಿನ ಕಾಲದ ಕೌಮುದಿಯ ಕ್ರಮವನ್ನು ಇಲ್ಲಿ ಕಾಣುತ್ತದೆ. ಇಲ್ಲಿ ಕೊಟ್ಟಿರುವುದು 13 ಪ್ರತ್ಯಾಹಾರಗಳು ಮಾತ್ರ ಕಾತ್ಯಾಯನನ ಸಲಹೆಯಂತೆ "ಲ್" ವನ್ನು ಬಿಟ್ಟಿರುವನು. ಇದರ ಸ್ಥಾನದಲ್ಲಿ " ಅಯೋಗವಾದ"ವನ್ನು ಸೇರಿಸಿರುವನು. ಮೂರು ಸಂದರ್ಭಗಳಲ್ಲಿ ಬಿಟ್ಟು ಮಿಕ್ಕೆಡೆ "ವಿಭಾಷಾ" ಅನ್ಯತರಸ್ಯಾಂ "ಅನ್ನುವುದಕ್ಕೆ 'ವಾ' ಹಾಕಿರುವನು. ವಿಪಾತ ಸರ್ವನಾಮ, ಆತ್ಮನೇಪದ, ಪರಸ್ಮೈಪದ ಎನ್ನುವ ಕಡೆ ಚಾದಿ, ಸರ್ವಾದಿ, .ತಂಗ್, ಅತಂಗ್ ಎಂದಿರುವನು

ಈ ಪದ್ಧತಿಯ ಇತರ ಗ್ರಂಥಗಳು ಶಬ್ದನಾನುಶಾಸನ ಮತ್ತು ಅಮೋಘವೃತ್ತಿ ಎನ್ನುವ ಎರಡು ಗ್ರಂಥಗಳಲ್ಲದೆ ಇವನು ಪರಿಭಾಷಾ ಸೂತ್ರಗಳನ್ನು 16 ಪದಗಳುಳ್ಳ ಗಣಪಾಠವನ್ನು, ಧಾತುಪಾಠವನ್ನು, 4 ಪದಗಳುಳ್ಳ ಉಣಾದಿ ಸೂತ್ರಗಳನ್ನು ಮತ್ತು ಆರ್ಯಾವೃತ್ತ, ಶ್ಲೋಕಗಳಲ್ಲಿ ಲಿಂಗಾನುಶಾಸನ ವನ್ನು ರಚಿಸಿದನೆಂದು ಪ್ರತೀತಿ ಇದೆ. ಮುಂದೆ ಬಂದ ಹೇಮಚಂದ್ರನು ತನ್ನ ಲಿಂಗಾನುಶಾಸನವನ್ನು ಶಾಕಟಾಯನ ಲಿಂಗಾನುಶಾಸನದ ಆಧಾರದ ಮೇಲೆ ಬರೆದಿರುವನು.

ಇವರ ವ್ಯಾಕರಣದ ಅರ್ವಾಚೀನ ಚರಿತ್ರೆ ಮಿಕ್ಕ ವ್ಯಾಕರಣ ಪದ್ಧತಿಗಳಲ್ಲಿ ಕಾಣುವಂತೆ ಇದರಲ್ಲೂ ಎರಡು ಪರ್ವಗಳು ಕಂಡು ಬರುತ್ತವೆ. -(a) ವ್ಯಾಖ್ಯಾನ ಮಮತ್ತು ವಿವರಣಕಾಲ;(b)ಸಂಗ್ರಹಕಾಲ ವ್ಯಾಖ್ಯಾನಗಳಲ್ಲಿ ಪ್ರಸಿದ್ಧವಾದುವು. (i)ನ್ಯಾಸ -ಮಾಧವೀಯ ಧಾತುವೃತ್ತಿಯಲ್ಲಿ ಇದನ್ನು ಹೇಳಲಾಗಿದೆ. ಅಮೋಘವೃತ್ತಿಗೆ ಪ್ರಭಾಚಂದ್ರಚಾರ್ಯನು ಬರೆದಿರುವುದು(ii) ಯಕ್ಷವರ್ಮರಚಿತ "ಚಿಂತಾಮಣಿ"ಇದು ಅಮೋಘವೃತ್ತಿಯನ್ನೇ ಅನುಸರಿಸಿದೆ. ಇದಕ್ಕೆ ಅಜಿತಸೇನಾಚಾರ್ಯ ಕೃತ ಮಣಿಪ್ರಕಾಶಿಕಾ, ಮಂಗರಸ ಕೃತ "ಚಿಂತಾಮಣಿ ಪ್ರತಿಪದ" , ಸಮಂತಭದ್ರಕೃತ

"ಟಿಪ್ಪಣಿ" ಎನ್ನುವ ಮೂರು ವ್ಯಾಖ್ಯಾನಗಳಿವೆ. ಕ್ರಮ ವ್ಯಾಖ್ಯಾನವಲ್ಲದೆ ಗ್ರಂಥಗಳ ಪೈಕಿ. ಅಭಯಚಂದ್ರಾಕೃತ "ಪ್ರಕ್ರಿಯಾ ಸಂಗ್ರಹ" ವೇ ಅತ್ಯುತ್ತಮವಾದುದು. ಇವನ ಶಿಷ್ಯ ಕೇಶವ ವರ್ಣಿಯು ಪ್ರಾಕೃತ ಭಾಷೆಯಲ್ಲಿರುವ ತಾತ್ವಿಕ ಗ್ರಂಥವಾದ ಗೋಮಠಸಾರಕ್ಕೆ ಒಂದು ವ್ಯಾಖ್ಯಾನವನ್ನು ಬರೆದಿರುವನು. ಇವನ ಕಾಲ ಕ್ರಿ. ಶ. 1359. ಆದ್ದರಿಂದ ಅಭಯಚಂದ್ರಾಚಾರ್ಯನಕಾಲ 14 ಶತಮಾನದ ಆದಿಭಾಗವಾಗಿರಬೇಕು. ಮಕ್ಕಳಿಗಾಗಿ ಇವನು ಅನಾವಶ್ಯಕ ಸೂತ್ರಗಳನ್ನು ಬಿಟ್ಟಿರುವನು. ಕೆಲವನ್ನು ವಿಸ್ತರಿಸುವನು. ಸಾಮಾನ್ಯವಾಗಿ "ಪ್ರಕ್ರಿಯಾಕೌಮುದಿ"ಯನ್ನು ಅನುಸರಿಸಿರುವನು. (iii) ದಯಪಾಲನ 'ರೂಪಸಿದ್ಧಿ' ಇವನು ಯತಿಸಾಗರನ ಶಿಷ್ಯ. ಚಾಲುಕ್ಯ ಚಕ್ರವರ್ತಿ 2ನೇ ಜಯಸಿಂಹನ ಸತೀರ್ಥ ಕಾಲ ಕ್ರಿ. ಶ. 1026.

ಶಾಕಟಾಯನನ ವ್ಯಾಕರಣವು ಕ್ರಮೇಣ ಹೇಮಚಂದ್ರನ ಶಬ್ದಾನುಶಾಸನದಿಂದ ಹಿಂದಕ್ಕೆ ತಳ್ಳಲ್ಪಟ್ಟಿತು.

(iii) ಹೇಮಚಂದ್ರ-11ನೇ ಶತಮಾನ -ಜೀವನಚರಿತ್ರೆ ಇವನೊಬ್ಬ ಜೈನ ಭಿಕ್ಷು. ಇವನು ಹುಟ್ಟಿದ್ದು ಅಹಮದಾಬಾದ್ ಜಿಲ್ಲೆಯ ದುಂಡಕ ಗ್ರಾಮದಲ್ಲಿ 1089ರ ಕಾರ್ತೀಕ ಶುದ್ಧ ಪೂರ್ಣಿಮಾ ಇವನು ಹುಟ್ಟಿದ ದಿನ. ಛಾಚಿಗ ತಂದೆ ಪಾತಿನೀ ತಾಯಿ . ಮೇರು ತುಂಗಾಚಾರ್ಯ ಮತ್ತು ಪ್ರದ್ಯುಮ್ನಸೂರಿಗಳ ಪ್ರಭಾವಕ ಚರಿತ್ರೆ (1250)ಮೇರುತುಂಗಾಚಾರ್ಯನ ಪ್ರಬಂಧ ಚಿಂತಾಮಣಿ (1305)ಜಿನಮಂಡಲ ಚರಿತ ಕುಮಾರಪಾಲ ಚರಿತ (1435)ಈ ಗ್ರಂಥಗಳಿಂದ ಸಂಗ್ರಹಿಸಿರುವನು.

ಹೇಮಚಂದ್ರನ ತಾಯಿ ಒಳ್ಳೆ ಸಂಪ್ರದಾಯಸ್ಥಳು . ಇವನು ಹುಟ್ಟಿದ ಮೇಲೆ ದೇವಚಂದ್ರ (ದೇವೇಂದ್ರ ಸೂರಿ) ಭಿಕ್ಷುಕನ ಮಾತಿನ ಮೇಲೆ ಅವನನ್ನು ಆಶ್ರಮಕ್ಕೆ ಕೊಟ್ಟುಬಿಟ್ಟಳು. ಕ್ಯಾಂಬೆಯಲ್ಲಿ ಮಾಘಶುದ್ಧ ಚತುರ್ಥಿ ದಿನ ಇವನಿಗೆ ದೀಕ್ಷೆಯನ್ನು ಕೊಡಲಾಯಿತು ಅನಂತರ ಅವನಿಗೆ ಸೋಮಚಂದ್ರನೆನ್ನುವ ಹೆಸರು ಬಂದಿತು 12 ವರ್ಷಗಳ ಕಾಲ ವಿದ್ಯಾಭ್ಯಾಸವಾಯಿತು. ಅನಂತರ ಆಚಾರ್ಯನೆನ್ನುವ ಹೆಸರನ್ನು ಗಳಿಸಿದನು . ಆಗ ಅವನ ಹೆಸರು ಹೇಮಚಂದ್ರವಾಯಿತು. ಅನಹಲ್ಲ ಪಟ್ಟಣದಲ್ಲಿ ಹೇಮಚಂದ್ರನು ಅನೇಕ ಜೈನಪಂಗಡಗಳಿಗೆ ಮುಖಂಡನಾದನು. ಆ ಪಟ್ಟಣದ ದೊರೆ. ಜಯಸಿಂಹ ವಿದ್ವತ್ಪಕ್ಷಪಾತಿಯಾದ್ದರಿಂದ ಹೇಮಚಂದ್ರನನ್ನು ಸನ್ಮಾನಿಸಿದನು. ಈ ದೊರೆ ಶಿವಭಕ್ತನಾದರೂ ಅನ್ಯಮತಸ್ಥರೊಡನೆ ದ್ವೇಷಪಟ್ಟಿರಲಿಲ್ಲ . ಇವನಾದ ಮೇಲೆ ಇವನ ಸಹೋದರನ ಮಗ ಕುಮಾರಸ್ವಾಮಿ ತನ್ನ ರಾಜ್ಯವನ್ನು ವಿಸ್ತರಿಸಿಕೊಂಡು ಶಾಂತಜೀವನ ನಡೆಸಲು ಹೇಮಚಂದ್ರನು ಅನುವಾದನು. ದೊರೆಯೂ ಜೈನನಾದನು. ಆಗ ಜಯಸಿಂಹನಿಗೆ "ಶಬ್ದಾನುಶಾಸನ"ವನ್ನು ಬರೆದಂತೆ ಈಗ ಕುಮಾರಪಾಲನಿಗಾಗಿ ಯೋಗಶಾಸ್ತ್ರವನ್ನು ಬರೆದನು. ಕುಮಾರಪಾಲನು ಜೈನನಾದದ್ದು ಮಾರ್ಗಶಿರ ಶುದ್ಧ ದ್ವಿತೀಯಾ ( ಸಂ 1216). ಇವನು ತನ್ನ ಆಳ್ವಿಕೆಯ ಅಂತ್ಯಭಾಗದಲ್ಲಿ ಹೇಮಚಂದ್ರನೊಡನೆ ಅನೇಕ ಪುಣ್ಯಕ್ಷೇತ್ರಗಳಿಗೆ ಹೋಗಿದ್ದನು. ಹೇಮಚಂದ್ರನಿಗೆ ತನ್ನ ಮರಣಕಾಲವು ಸಮೀಪಿಸಿತೆಂದು ಕಂಡುಬಂದು ಪ್ರಾಯೋಪವೇಶಕ್ಕೆ ಸಿದ್ಧನಾದನು. ಆಗ ಅವನ ವಯಸ್ಸು 84. ಇವನ ಮರಣವಾದ ಆರು ತಿಂಗಳಲ್ಲೇ ಕುಮಾರಪಾಲನು ಸತ್ತನು ಚಕ್ರಾಧಿಪತ್ಯವು ಕೊನೆಗೊಂಡಿತು.

ಇವನ ಶಬ್ದಾನುಶಾಸನ-ಇದರ ಪೂರ್ಣ ಹೆಸರು "ಸಿದ್ಧಹೇಮಚಂದ್ರಾಭಿದ ಸೋಪಜ್ಞ ಶಬ್ದಾನುಶಾಸನ". 4 ಪದಗಳ 8 ಅಧ್ಯಾಯಗಳಿವೆ. ಒಟ್ಟು 4500 ಸೂತ್ರಗಳಿವೆ. ಇದರಲ್ಲಿ ಕಾಲುಭಾಗ ಕೊನೆಯ ಅಧ್ಯಾಯದಲ್ಲಿದೆ. 8 ನೇ ಅಧ್ಯಾಯದಲ್ಲಿ ಆ ಕಾಲದ ಪ್ರಾಕೃತ ಭಾಷೆಯು ವಿವರಿಸಲ್ಪಟ್ಟಿದೆ. ಉಳಿದ 7ಅಧ್ಯಾಯಗಳು ಕೌಮುದಿಯಂತಿವೆ. ತನ್ನ ಮತೀಯರಿಗಾಗಿ ಹಿಂದಿನ ಎಲ್ಲಾ ವಿಷಯಗಳನ್ನು ಹೇಳಲು. ಎಲ್ಲಾ ವ್ಯಾಕರಣದಿಂದ ವಿಷಯವನ್ನು ಸಂಗ್ರಹಮಾಡಿ ಶಾಕಟಾಯನನ ಶಬ್ದಾನುಶಾಸನ ಮತ್ತು ಅಮೋಘವೃತ್ತಿಗ್ರಂಥಗಳನ್ನು ಅನುಸರಿಸಿರುವನು. ಕೆಲವು ಕಡೆ ತನ್ನ ಸ್ವಂತ ವಿಷಯವನ್ನು ಸೇರಿಸಿರುವನು. ತನ್ನ ಶಬ್ದಾನುಶಾಸನಕ್ಕೆ "ಶಬ್ದಾನುಶಾಸನ ಬೃಹದ್ವರುತ್ತಿ"ಎನ್ನುವ ವ್ಯಾಖ್ಯಾನವನ್ನು ಬರೆದಿರುವನು. ಬಹಳ ವಿಸ್ತಾರವಾದ ಗ್ರಂಥ. ಮಿಕ್ಕವರ ಅಭಿಪ್ರಾಯವನ್ನು "ಅಪರಃ. ಪರಃ ಅನ್ಯಂ. ಏಕಃ. ಕಶ್ಚಿಂತ್ " ಮೊದಲಾದ ಪದಗಳಿಂದ ತಿಳಿಸಿರುವನು. ಅವನಲ್ಲೂ ಖಂಡಿಸಿಯೂ ಇರುವನು. 'ನ್ಯಾಸ'ವೆನ್ನುವ ಬೃಹದ್ವೃತ್ತಿ ವ್ಯಾಖ್ಯಾನಕ್ಕೆ ಯಾವ ಯಾವ ಗ್ರಂಥಗಳಿಂದ ವಿಷಯ ಸಂಗ್ರಹಣವಾಗಿದೆ ಎನ್ನುವುದನ್ನು ತಿಳಿಸಿರುವನು. ಶಬ್ದಾನುಶಾಸನದ ಅಧ್ಯಾಯಗಳಿಗೆ ಹೇಮಚಂದ್ರನೇ ತನ್ನ ಬೃಹದತ್ತಿಯ ಸಂಕ್ಷಿಪ್ತರೂಪವನ್ನು ರಚಿಸಿರುವನು . ಭಟ್ಟಿಕಾವ್ಯದಂತೆ ತನ್ನ ಸೂತ್ರಗಳನ್ನು ಉದಹರಿಸುವ ದ್ವಾಶಯ ಮಹಾಕಾವ್ಯವನ್ನು ಬರೆದಿರುವನು . ಇನ್ನೂ ಕೆಲವು ಗ್ರಂಥಗಳನ್ನು ರಚಿಸಿರುವನು.

a) ಪಾಣಿನಿಯ ಧಾತು ಪಾಠವನ್ನು ಹೋಲುವ ಹೈಮಧಾತು ಪಾಠ ;

b) 960 ಸೂತ್ರಗಳುಳ್ಳ ಉಣಾದಿ ಸೂತ್ರಃ

c) ಶ್ಲೋಕರೂಪದಲ್ಲಿರುವ ಲಿಂಗಾನುಶಾಸನ; ಇದ ು ಶಾಕಟಾಯನ ನ ಲಿಂಗಾನ ುಶಾಸ ನ ದ ವಿಸ್ತೃತ ರೂಪ. ಇದರಲ್ಲಿ ಪುಲ್ಲಿಂಗ. ನಪುಂಸಕ ಲಿಂಗ. ಪುಂಸ್ತ್ರೀಲಿಂಗ. ಸ್ತ್ರೀ ಲಿಂಗ. ಪುನಪುಂಸಕಲಿಂಗ. ಸ್ತ್ರೀಕ್ಲೀಬ. ಸ್ತ್ರೀಲಿಂಗ ಮತ್ತು ಪರಲಿಂಗವೆನ್ನುವ 8 ಭಾಗಗಳಿವೆ. d) ಗಣಪಾಠ e) ಪರಭಾಷೆಗಳು.

ವ್ಯಾಖ್ಯಾನಗಳು -a) "ಬೃಹದ್ವೃತ್ತಿಯಂಡಿಕಾ" ಮುಖ್ಯವಾದುದು. ಹಸ್ತಪ್ರತಿಗಳಲ್ಲಿ ಇದರ ಹೆಸರು ದೀಪಿಕಾ. ಅವಚೂರಿ. ಅವಚರ್ಣಿಕಾದುಂಡಿಕಾ ಎಂದಿದೆ. ಇದನ್ನು ಹೇಮಚಂದ್ರನೇ ಬರೆದನೆಂದು ಅಭಿಪ್ರಾಯವಿದೆ. ಇದರಲ್ಲಿ ಶಬ್ದಾನುಶಾಸನದ ಸೂತ್ರಗಳನ್ನು ಕ್ರಮವಾಗಿ ತೆಗೆದುಕೊಂಡು ಅವುಗಳನ್ನು ವಿವರಿಸಲಾಗಿದೆ. ಅಲ್ಲದೆ ಪದ ನಿಷ್ಪತ್ತಿ ಮಾಡಿ ಉದಾಹರಣೆಗಳನ್ನು ಕೊಡಲಾಗಿದೆ.

(b)ಹೇಮಲಘುನ್ಯಾಸ -ಇದು ಚಂದ್ರಗುಚ್ಛದ ಉದಚಯಚಂದ್ರನ ಶಿಷ್ಯದೇವೇಂದ್ರ ಸೂರಿ ಬರೆದಿದ್ದು. ಇದು ಉದಯಚಂದ್ರನ 'ನ್ಯಾಸ'ದ ಸಂಗ್ರಹ. ಈ ನ್ಯಾಸವು ಈಗಿಲ್ಲ.

ಸಂಗ್ರಹ ಕೈಪಿಡಿ-ಇತ್ಯಾದಿ-(a) ಕ್ರಿ. ಶ. 1652 ರಲ್ಲಿ ವಿಜಯಗಣಿಯ "ಹೈಮಲಘು ಪ್ರಕ್ರಿಯಾ" ಇವನೇ 25 ವರ್ಷಗಳಾದ ಮೇಲೆ "ಹೈಮಪ್ರಕಾಶ"ವೆನ್ನುವ ವ್ಯಾಖ್ಯಾನವನ್ನು ಬರೆದಿರುವನು.

ಇವನ ಶಬ್ದಾನುಶಾಸನ-ಇದರ ಪೂರ್ಣ ಹೆಸರು "ಸಿದ್ಧಹೇಮಚಂದ್ರಭಿದ ಸ್ವೋಪಜ್ಞ ಶಬ್ದಾನುಶಾಸನ". 4 ಪದಗಳ 8 ಅಧ್ಯಾಯಗಳಿವೆ. ಒಟ್ಟು 4500 ಸೂತ್ರಗಳಿವೆ. ಇದರಲ್ಲಿ ಕಾಲುಭಾಗ ಕೊನೆಯ ಅಧ್ಯಾಯದಲ್ಲಿದೆ. 8 ನೇ ಅಧ್ಯಾಯದಲ್ಲಿ ಆ ಕಾಲದ ಪ್ರಾಕೃತ ಭಾಷೆಯು ವಿವರಿಸಲ್ಪಟ್ಟಿದೆ. ಉಳಿದ 7ಅಧ್ಯಾಯಗಳು ಕೌಮುದಿಯಂತಿವೆ. ತನ್ನ ಮತೀಯರಿಗಾಗಿ ಹಿಂದಿನ ಎಲ್ಲಾ ವಿಷಯಗಳನ್ನು ಹೇಳಲು. ಎಲ್ಲಾ ವ್ಯಾಕರಣದಿಂದ ವಿಷಯವನ್ನು ಸಂಗ್ರಹಮಾಡಿ ಶಾಕಟಾಯನನ ಶಬ್ದಾನುಶಾಸನ ಮತ್ತು ಅಮೋಘವೃತ್ತಿಗ್ರಂಥಗಳನ್ನು ಅನುಸರಿಸಿರುವನು. ಕೆಲವು ಕಡೆ ತನ್ನ ಸ್ವಂತ ವಿಷಯವನ್ನು ಸೇರಿಸಿರುವನು. ತನ್ನ ಶಬ್ದಾನುಶಾಸನಕ್ಕೆ "ಶಬ್ದಾನುಶಾಸನ ಬೃಹದ್ವೃತ್ತಿ" ಎನ್ನುವ ವ್ಯಾಖ್ಯಾನವನ್ನು ಬರೆದಿರುವನು. ಬಹಳ ವಿಸ್ತಾರವಾದ ಗ್ರಂಥ. ಮಿಕ್ಕವರ ಅಭಿಪ್ರಾಯವನ್ನು "ಅಪರಃ. ಪರಃ. ಅನ್ಯಂ. ಏಕಃ. ಕಶ್ಚಿಂತ್ " ಮೊದಲಾದ ಪದಗಳಿಂದ ತಿಳಿಸಿರುವನು. ಅವನಲ್ಲೂ ಖಂಡಿಸಿಯೂ ಇರುವನು. 'ನ್ಯಾಸ'ವೆನ್ನುವ ಬೃಹದ್ವೃತ್ತಿ ವ್ಯಾಖ್ಯಾನಕ್ಕೆ ಯಾವ ಯಾವ ಗ್ರಂಥಗಳಿಂದ ವಿಷಯ ಸಂಗ್ರಹಣವಾಗಿದೆ ಎನ್ನುವುದನ್ನು ತಿಳಿಸಿರುವನು. ಶಬ್ದಾನುಶಾಸನದ ಅಧ್ಯಾಯಗಳಿಗೆ ಹೇಮಚಂದ್ರನೇ ತನ್ನ ಬೃಹದ್ವೃತ್ತಿಯ ಸಂಕ್ಷಿಪ್ತರೂಪವನ್ನು ರಚಿಸಿರುವನು . ಭಟ್ಟಿಕಾವ್ಯದಂತೆ ತನ್ನ ಸೂತ್ರಗಳನ್ನು ಉದಹರಿಸುವ ದ್ವ್ಯಾಶಯ ಮಹಾಕಾವ್ಯವನ್ನು ಬರೆದಿರುವನು . ಇನ್ನೂ ಕೆಲವು ಗ್ರಂಥಗಳನ್ನು ರಚಿಸಿರುವನು.

a) ಪಾಣಿನಿಯ ಧಾತು ಪಾಠವನ್ನು ಹೋಲುವ ಹೈಮಧಾತು ಪಾಠ ;

b) 900 ಸೂತ್ರಗಳುಳ್ಳ ಉಣಾದಿ ಸೂತ್ರ;

c) ಶ್ಲೋಕರೂಪದಲ್ಲಿರುವ ಲಿಂಗಾನುಶಾಸನ; ಇದು ಶಾಕಟಾಯನನ ಲಿಂಗಾನುಶಾಸನದ ವಿಸ್ತೃತ ರೂಪ. ಇದರಲ್ಲಿ ಪುಲ್ಲಿಂಗ. ನಪುಂಸಕ ಲಿಂಗ. ಪುಂಸ್ತ್ರೀಲಿಂಗ. ಸ್ತ್ರೀ ಲಿಂಗ. ಪುನಪುಂಸಕಲಿಂಗ. ಸ್ತ್ರೀಕ್ಲೀಬ. ಸ್ತ್ರೀಲಿಂಗ ಮತ್ತು ಪರಲಿಂಗವೆನ್ನುವ 8 ಭಾಗಗಳಿವೆ. d) ಗಣಪಾಠ e) ಪರಭಾಷೆಗಳು.

ವ್ಯಾಖ್ಯಾನಗಳು -a) "ಬೃಹದ್ವೃತ್ತಿಯಂಡಿಕಾ" ಮುಖ್ಯವಾದುದು. ಹಸ್ತಪ್ರತಿಗಳಲ್ಲಿ ಇದರ ಹೆಸರು ದೀಪಿಕಾ. ಅವಚೂರಿ. ಅವಚರ್ಣಿಕಾದುಂಡಿಕಾ ಎಂದಿದೆ. ಇದನ್ನು ಹೇಮಚಂದ್ರನೇ ಬರೆದನೆಂದು ಅಭಿಪ್ರಾಯಪಿದೆ ಇದರಲ್ಲಿ ಶಬ್ದಾನುಶಾಸನದ ಸೂತ್ರಗಳನ್ನು ಕ್ರಮವಾಗಿ ತೆಗೆದುಕೊಂಡು ಅವುಗಳನ್ನು ವಿವರಿಸಲಾಗಿದೆ. ಅಲ್ಲದೆ ಪದ ನಿಷ್ಪತ್ತಿ ಮಾಡಿ ಉದಾಹರಣೆಗಳನ್ನು ಕೊಡಲಾಗಿದೆ.

(b)ಹೇಮಲಘುನ್ಯಾಸ -ಇದು ಚಂದ್ರಗುಚ್ಛದ ಉದಯಚಂದ್ರನ ಶಿಷ್ಯದೇವೇಂದ್ರ ಸೂರಿ ಬರೆದಿದ್ದು. ಇದು ಉದಯಚಂದ್ರನ 'ನ್ಯಾಸ'ದ ಸಂಗ್ರಹ. ಈ ನ್ಯಾಸವು ಈಗಿಲ್ಲ.

ಸಂಗ್ರಹ ಕೈಪಿಡಿ-ಇತ್ಯಾದಿ-(a) ಕ್ರಿ. ಶ. 1652 ರಲ್ಲಿ ವಿಜಯಗಣಿಯ "ಹೈಮಲಘು ಪ್ರಕ್ರಿಯಾ" ಇವನೇ 25 ವರ್ಷಗಳಾದ ಮೇಲೆ "ಹೈಮಪ್ರಕಾಶ"ವೆನ್ನುವ ವ್ಯಾಖ್ಯಾನವನ್ನು ಬರೆದಿರುವನು.

b) ಕ್ರಿ. ಶ. 1669ರ ಹೈಮಕೌಮುದೀ (ಚಂದ್ರಪ್ರಭಾ) : ಇದನ್ನು ಬರೆದವನು ಮೇಘವಿಜಯ. ಇದೇ ಸಿದ್ಧಾಂತ ಕೌಮುದಿಗೆ ಮೇಲ್ಪಂಕ್ತಿಯಾಗಿರುವಂತಿದೆ.

c) ಪುಣ್ಯಸುಂದರಗಣಿಯು ಧಾತುಗಳನ್ನು ಅಕಾರಾದಿಯಾಗಿ ವಿಂಗಡಿಸಿ, ಅವುಗಳ ಅರ್ಥ, ಗಣ ಮತ್ತು ಕ್ರಿಯಾರೂಪಗಳ ವೈಲಕ್ಷಣ-ಇವೆಲ್ಲವನ್ನೂ ಕೊಟ್ಟಿರುವನು.

d) ಶ್ರೀವಲ್ಲಭಚಾರ್ಯನ " ದುರ್ಗಪದಪ್ರಯೋಗ"ವೆನ್ನುವ ವ್ಯಾಖ್ಯಾನ. ಕ್ರಿ. ಶ. 1594ರಲ್ಲಿ ಜೋಧ್‌ಪುರದ ಸೂರಸಿಂಹನ ಕಾಲದಲ್ಲಿ ಬರೆಯಲ್ಪಟ್ಟಿತು

e) ಹೇಮಚಂದ್ರನ 140 ಪರಿಭಾಷೆಗಳಿಗೆ "ನ್ಯಾಯಾರ್ಥಮಂಜೂಷಾ" ಎನ್ನುವ ವ್ಯಾಖ್ಯಾನ. ಇದನ್ನು ಬರೆದವನು ಹೇಮಚಂದ್ರ ವಿಜಯಗಣಿ. ಇದು ಅಹಮದಾಬಾದಿನಲ್ಲಿ ಕ್ರಿ. ಶ. 1547ರಲ್ಲಿ ಬರೆಯಲ್ಪಟ್ಟಿತು.

f) "ಸ್ಯಾದಿ ಸಮುಚ್ಚಯ"-13ನೇ ಶತಮಾನದ, ವಾಯಡಗಚ್ಛದ ಜಿನದತ್ತಸೂರಿಯ ಶಿಷ್ಯ ಅಮರಚಂದ್ರನು ಬರೆದಿದ್ದು. ಇವರಲ್ಲಿ ವಿಭಕ್ತಿ ರೂಪಗಳಲ್ಲಿ ಕೊಡಲಾಗಿದೆ.

(g) ಗುಣರತ್ನಸೂರಿಯು `ಕ್ರಿಯಾರತ್ನ ಸಮುಚ್ಚಯ'. ಇದರಲ್ಲಿ ಧಾತುಗಳ ರೂಪಗಳನ್ನು ಕೊಡಲಾಗಿದೆ. ಇವನು ದೇವಸುಂದರ ಸೂರಿಯ ಶಿಷ್ಯ. 1408ರಲ್ಲಿ ಬರೆದನು.

ಈ ವ್ಯಾಕರಣ ಪದ್ಧತಿಯ ಪರಿಸಮಾಪ್ತಿ-ಮತೀಯ ದೃಷ್ಟಿಯಿಂದ ಕೂಡಿ ಇದ್ದುದರಿಂದ ಈ ಪದ್ಧತಿ ಬೇಗ ಕೊನೆಗೊಂಡಿತು. ಇದಕ್ಕೆ ಪ್ರತಿಸ್ಪರ್ಧಿಗಳಾಗಿ ಜೈನೇಂದ್ರ ವ್ಯಾಕರಣ ಮತ್ತು ಶಾಕಟಾಯನನ ಗ್ರಂಥಗಳಿದ್ದವು. ಅಲ್ಲದೇ ಇವನ ಕಾಲದಲ್ಲೇ "ಮಲಯಗಿರಿ"ಎನ್ನುವ ವಿದ್ವಾಂಸನು ತನ್ನದೇ ಆದ ಶಬ್ದಾನುಶಾಸನವನ್ನೂ, ಅದರ ವ್ಯಾಖ್ಯಾನವನ್ನೂ ರಚಿಸಿದನು

viii) ಕ್ರಿ. ಶ. 1200ರಿಂದ 1600ರವರೆಗೆ

(a) ಮುಗ್ಧಬೋಧ 1250 ಕ್ರಿ. ಶ. ಭಟ್ಟೋಜಿ ದೀಕ್ಷಿತನು ಪಾಣಿನಿಯ ಪುನರುಜ್ಜೀವನವನ್ನು ಮಾಡುವುದಕ್ಕೆ ಮೊದಲು ವೇದ ಪ್ರಾಮಣ್ಯವನ್ನು ಸ್ವೀಕಾರ ಮಾಡಿದ ನಂತರ ಬೌದ್ಧ ಮತ್ತು ಜೈನ ವ್ಯಾಕರಣಗಳು ಜನಾಕರ್ಷಕವಾಗಿದ್ದವು. ಅದರ ಉಚ್ಛ್ರಾಯದ ಕಾಲದಲ್ಲಿ ಮತೀಯ ದೃಷ್ಟಿಯಿಂದ . ವ್ಯಾಕರಣವು ಪ್ರಧಾನವಾದ ವೇದಾಂಗವನ್ನು ತಪ್ಪಿಸಿ ಜನರ ಮನಸ್ಸನ್ನು ತಮ್ಮ ಕಡೆಗೆ ಸೆಳೆಯಲು ಪ್ರಯತ್ನಿಸಿದ ಬೌದ್ಧ ಮತ್ತು ಜೈನ ಆಚಾರ್ಯರ ಎಣಿಕೆಯು ಬಹಳಕಾಲ ಉಳಿಯಲಿಲ್ಲ. ಬೌದ್ಧ ಸಂಪ್ರದಾಯವೇ ಟಿಬೆಟ್ ಮತ್ತು ಸಿಂಹಳಕ್ಕೆ ವಲಸೆ ಹೋಗುವಂತಾಯಿತು. ಜೈನ ಸಂಪ್ರದಾಯಸ್ಥರು ಆಸ್ತಿಕರೊಡನೆ ಕಲೆತು ಇಲ್ಲಿಯೇ ಇದ್ದುಕೊಂಡು ತಮ್ಮ ಸಿದ್ಧಾಂತವನ್ನು ತಮ್ಮಲ್ಲಿಯೇ ರಕ್ಷಿಸಿಕೊಂಡು ಬರುವ ಮನೋಧರ್ಮವನ್ನು ಬೆಳೆಯಿಸಿಕೊಂಡರು . ಕ್ರಿ. ಶ

600ರಿಂದ ಕ್ರಿ.ಶ.1400 ಅಂತರದಲ್ಲಿ ಪ್ರಚಂಡಮತಾಚಾರ್ಯರಾದ ಗೌಡಪಾದ, ಶಂಕರ, ರಾಮಾನುಜ, ಮಧ್ವಮೊದಲಾದವರು ವೇದ ಪ್ರಾಮಣ್ಯವನ್ನು ಅದರ ಪ್ರಧಾನ ಅಂಗವಾದ ವ್ಯಾಕರಣದ ಆಸ್ತಿಕ ಕ್ರಮಾಧ್ಯಯವನ್ನು ಜನಗಳ ಶ್ರದ್ಧಾ ವಿಷಯವನ್ನಾಗಿ ಮಾಡಿದರು. ಬೌದ್ಧ ಜೈನಾಚಾರ್ಯರ ವ್ಯಾಕರಣ ಗ್ರಂಥಗಳು ಮತ್ತು ಅವುಗಳ ವ್ಯಾಖ್ಯಾನ, ಕೈಪಿಡಿ ಮೊದಲಾದುವುಗಳು. ಕ್ಷೀಣಾವಸ್ಥೆಯನ್ನು ಹೊಂದುವಂತಾದಾಗ, ಆಸಕ್ತರಿಗಾಗಿ ಸುಲಭ ಶೈಲಿಯಲ್ಲಿ, ಸರಳವಾಗಿ ಮತ್ತು ಸಂಕ್ಷೇಪವಾಗಿ ಬರೆಯಲ್ಪಟ್ಟಿತ್ತೆಂದು ಹೇಳಲಾಗಿರುವ ಗ್ರಂಥವೇ ಮುಗ್ಧಬೋಧ. ಇದನ್ನು ಭಟ್ಟೋಜಿಯು ಖಂಡಿಸಿರುವನು. ಇಲ್ಲಿ ಕೊಟ್ಟಿರುವ ಉದಾಹರಣೆಗಳೆಲ್ಲಾ ಮತೀಯ ಶಬ್ದ ಮತ್ತು ವಾಕ್ಯಗಳಿವೆ. ಪಾಣಿನಿಯ ಪ್ರತ್ಯಾಹಾರ ಮತ್ತು ಸಂಜ್ಞೆಗಳು ವ್ಯತ್ಯಾಸವನ್ನು ಹೊಂದಿದೆ. ಪಾಣಿನಿಯಲ್ಲಿ ಗೌರವವಿಟ್ಟಿರುವರಿಗೆ ಸಂದೇಹವನ್ನುಂಟು ಮಾಡುವ ಗ್ರಂಥವಾಗಿ ಇದು ಪರಿಣಮಿಸಿದ್ದರಿಂದ ಇದರ ವ್ಯಾಸಂಗವು ಅಷ್ಟಾಗಿ ಪ್ರಚಾರಕ್ಕೆ ಬರಲಿಲ್ಲ. ಆದರೂ 15ಮತ್ತು16. ನೇ ಶತಮಾನಗಳಲ್ಲಿ ಮಹಾ ಮಹಾರಾಷ್ಟ್ರದಲ್ಲಿ ಜನಪ್ರಿಯವಾಗಿತ್ತು.. 17ನೇ ಶತಮಾನದಿಂದಲೂ ಕೆಲವು ಕಡೆ ಬಂಗಾಳದಲ್ಲಿ ಇದರ ವ್ಯಾಸಂಗವು ನಡೆಯುತ್ತಿದೆ

ಈ ಮುಗ್ಧ ಬೋಧಕ್ಕೆ ಸಂಬಂಧಿಸಿದ ವ್ಯಾಖ್ಯಾನ ಮತ್ತು ಸಂಗ್ರಹಗ್ರಂಥಗಳೂ ರಚಿತವಾಗಿವೆ. ರಾಮತರ್ಕವಾಗೀಶನ ವ್ಯಾಖ್ಯಾನವು ಪ್ರಸಿದ್ಧಿ ಹೊಂದಿದೆ. ಈಗಲೂ ಅನೇಕ ವ್ಯಾಖ್ಯಾನಗಳು ಬಂಗಾಳದಲ್ಲಿ ರಚಿತವಾಗಿ ವೆ. ರಾಮಚಂದ್ರ ವಿದ್ಯಾಭೂಷಣನು (1610) ಒಂದು ಪರಿಭಾಷಾ ವೃತ್ತಿಯನ್ನು ಬರೆದಿರುವನು.

ಮುಗ್ಧಬೋಧದ ಕರ್ತಾ ಬೋಪದೇವ-ಬೋಪದೇವನು ಕೇಶವನೆನ್ನುವ ವೈದ್ಯನ ಮಗ; ಧನೇಶನ ಶಿಷ್ಯ. ಇವನು ಮಹಾರಾಷ್ಟ್ರದ ದೌಲತ್ತಾಬಾದಿನ ಸಮೀಪದಲ್ಲಿ ಹುಟ್ಟಿದನು. ಅದು ದೇವಗಿರಿ ಯಾದವರ ಕಾಲ. ಮಲ್ಲಿನಾಥನಿಗೆ (1350) ಇವನು ಗೊತ್ತು. ಬುದ್ಧದೇವನ ತಂದೆ ಮತ್ತು ಗುರು ಇಬ್ಬರೂ ವರದಾ ನದಿ ತೀರದಲ್ಲಿ ಸಾರ್ಥವೆಂಬ ಸ್ಥಳದಲ್ಲಿ ವಾಸಿಸುತ್ತಿದ್ದರು. ಆದ್ದರಿಂದ ಇವನು ಬಿಹಾರ ಪ್ರಾಂತದವನು. ಇವನು ಒಳ್ಳೆ ವಿದ್ವಾಂಸ. 'ಗೋಸ್ವಾಮಿ' ಮತ್ತು " ಮುಖ್ಯ ಪುರೋಹಿತ "ಎನ್ನುವ ಕೀರ್ತಿಯನ್ನು ಗಳಿಸಿದ್ದನು . ಮುಗ್ಧ ಬೋಧನಲ್ಲದೆ ಇವನು "ಕವಿ ಕಲ್ಪದ್ರುಮ". "ಮುಕ್ತಾಫಲ'. ಹರಿಲೀಲಾವಿವರಣವೆನ್ನುವ ಭಾಗವತ ಪುರಾಣಕ್ಕೆ ಸಂಬಂಧಿಸಿದ ಗ್ರಂಥ. "ಶತಃ ಶ್ಲೋಕಿ" ಎನ್ನುವ ವೈದ್ಯಗ್ರಂಥ. ಒಂದು ಧರ್ಮಶಾಸ್ತ್ರ ಗ್ರಂಥ. ಇಷ್ಟನ್ನು ಬರೆದಿರುವನು. ಸಾರಸ್ವತ ವ್ಯಾಕರಣ-ಕ್ರಿ.ಶ.1250-1450ರ ಮಧ್ಯಕಾಲ -ಮುಗ್ಧಬೋಧಕಾರನಾದ ಬೋಪದೇವನಿಗೆ ಇದರ ವಿಷಯವು ತಿಳಿಯದು. ಹೇಮಚಂದ್ರನಿಗೂ ತಿಳಿಯದು. ಆದ್ದರಿಂದ ಕ್ರಿ.ಶ.1250 ಆದಮೇಲೆ ಇದು ಬರೆಯಲ್ಪಟ್ಟಿರಬೇಕು. ಈ ವ್ಯಾಕರಣಕ್ಕಿರುವ ವ್ಯಾಖ್ಯಾನಗಳೆಲ್ಲವೂ ಕ್ರಿ.ಶ.1450ಕ್ಕೆಮುಂದಿನವು ಆದ್ದರಿಂದ ಇದು ಈ ಕಾಲಕ್ಕೆ ಹಿಂದಿನದು ಎಂದು ಸಿದ್ಧವಾಗುತ್ತದೆ. ಇದರ ನಿರ್ದಿಷ್ಟಕಾಲವನ್ನು ಹೇಳುವುದಕ್ಕೆ ಆಗುವುದಿಲ್ಲ.

ಇದರಲ್ಲಿರುವುದು 700 ಸೂತ್ರಗಳು ಮಾತ್ರ.. ವ್ಯಾಖ್ಯಾನಕಾರರ ಸ್ಥಳ. ಹಸ್ತಪ್ರತಿಗಳು ಸಿಕ್ಕಿರುವ ಸ್ಥಳ - ಇವುಗಳ ಆಧಾರದ ಮೇಲೆ ಪರ್ಯಾಲೋಚನೆ ಮಾಡಿದರೆ ಇದು ಜನಗಳ

ಅಪೇಕ್ಷೆಯ ಮೇಲೆ ಸಂಸ್ಕೃತವನ್ನು ಸುಲಭವಾಗಿ ಕಲಿಯಲು ಬರೆಯಲ್ಪಟ್ಟಿದೆ. ಇದು ಗುಜರಾತ್, ನಾಗಪುರ, ಉದಯಪುರ, ಬಿಕನೀರ್, ದೆಹಲಿ ಮತ್ತು ಬಂಗಾಳ ಈ ಪ್ರಾಂತ್ಯಗಳಲ್ಲಿ ಪ್ರಚಾರದಲ್ಲಿದೆ. ಸಿದ್ಧಾಂತ ಕೌಮುದಿಯು ತಲೆಹಾಕಿದ ಮೇಲೆ ಮಿಕ್ಕ ವ್ಯಾಕರಣ ಪದ್ಧತಿಗಳಂತೆ ಇದೂ ಕೂಡ ಪ್ರಾಶಸ್ತ್ಯವನ್ನು ಕಳೆದುಕೊಂಡು ಬಂಗಾಳ ಗಡಿಪ್ರದೇಶಕ್ಕೆ ಹೋಯಿತೆನ್ನಬಹುದು . ಇದರಿಂದ ಸಂಸ್ಕೃತವನ್ನು ಸುಲಭವಾಗಿ ಕಲಿಯಬಹುದು. ಅದಕ್ಕಾಗಿಯೇ ಮಾಳವಾಧಿಪತಿ ಗಯಾಸುದ್ದೀನ್ ಖಿಲ್ಜಿ, ಹುಮಾಯೂನನು ರಾಜ್ಯಭ್ರಷ್ಟನಾಗಿದ್ದಾಗ ದೆಹಲಿ ಚಕ್ರವರ್ತಿ ಸಲಿಂಷಾ (1555-56), ಮೊಗಲ ಚಕ್ರವರ್ತಿ ಜಹಾಂಗೀರ್ ಉದಯಸಿಂಗ್ (1670) ಇವೇ ಮೊದಲಾದವರು ಅದು ವ್ಯಾಸಂಗಕ್ಕೆ ಉತ್ತೇಜನಕೊಟ್ಟರು.

ಇದರಲ್ಲಿ ಇತ್ ಸಂಜ್ಞೆಯಿಲ್ಲ, ಪ್ರತ್ಯಾಹಾರವಿಲ್ಲ. ;ಸ್ವರ ಮತ್ತು ವೈದಿಕ ಪ್ರಕರಣವಿಲ್ಲ;ಉಣಾದಿಪ್ರಕರಣಗಳಂತೂ ಇಲ್ಲವೇ ಇಲ್ಲ. ಸಂಕ್ಷೇಪವಾಗಿಯೂ ಸರಳವಾಗಿಯೂ ಇದೆ.

ಗ್ರಂಥಕರ್ತೃವಿನ ವಿಚಾರ-ಅನುಭೂತಿ ಸ್ವರೂಪಚಾರ್ಯನು ಸರಸ್ವತಿಯ ಅನುಗ್ರಹದಿಂದ ಇದನ್ನು ರಚಿಸಿದನೆಂದು ಐತಿಹ್ಯವಿದೆ. ಆದರೆ ಅದು ನಂಬಿಕೆಗೆ ಅರ್ಹವಾದುದಲ್ಲ. ಇವನು ಸರಸ್ವತ ಪ್ರಕ್ರಿಯಾ ಎನ್ನುವ ಗ್ರಂಥವನ್ನು ಬರೆದು ಅದರಲ್ಲಿ " ಋಜುಂಕುತ್ವೀ "ಎಂದು ಹೇಳಿರುವುದರಿಂದ, ಮೂಲವನ್ನು ಅವನು ಬರೆದಿರಲಾರನು. ಅಲ್ಲದೆ ಇವನು ಮೂಲಕ್ಕೆ ವಾರ್ತಿಕವನ್ನು ಕೊಟ್ಟಿರುವನು. ಅಲ್ಲದೆ ಕ್ಷೇಮೇಂದ್ರ . ಸುಬೋಧಿಕಾವನ್ನುಬರೆದ ಅಮೃತಭಾರತೀ ಪ್ರಕ್ರಿಯಾ ಕೌಮುದಿ ಬರೆದ ವಿಠಲಾಚಾರ್ಯ-ಈ ಮೂವರು ನರೇಂದ್ರಚಾರ್ಯನೇ ಈ ಗ್ರಂಥದ ಕರ್ತಾ ಎಂದು ಹೇಳಿರುವರು ಇದನ್ನೆ ನಾವು ನಂಬಬೇಕು.

ವ್ಯಾಖ್ಯಾನಗಳು ಮತ್ತು ಸಂಗ್ರಹಗಳು -ಇದೇ ಸಂಗ್ರಹವಾಗಿದ್ದರೂ. ಇದಕ್ಕೆ ಅನೇಕ ವ್ಯಾಖ್ಯಾನಗಳಿವೆ. ಮತ್ತು ಸಂಗ್ರಹಗಳೂ ಇವೆ.

ವ್ಯಾಖ್ಯಾನಗಳು 1) ಕ್ರಿ.ಶ. 1450ರಲ್ಲಿ -ಪುಂಜರಾಜನ ವ್ಯಾಖ್ಯಾನ. ಇವನು ಮಾಳವ ರಾಜನಾದ ಗಯಾಸುದೀನ್ ಖಿಲ್ಜಿಯ ಮಂತ್ರಿಯಾಗಿದ್ದನೆಂದು ಅವನಿಂದಲೇ ಗೊತ್ತಾಗಿದೆ. ಇವನು ಶಿಶು ಪ್ರಬೋಧವೆನ್ನುವ ಅಲಂಕಾರ ಗ್ರಂಥವನ್ನು 'ಧ್ವನಿ ಪ್ರದೀಪ'ವೆನ್ನುವ ಗ್ರಂಥವನ್ನು ಬರೆದಿರುವದು ಗೊತ್ತಾಗಿದೆ.

2) ೧೫ನೇ ಶತಮಾನದ ಕೊನೆಯಲ್ಲಿ ಸುಬೋಧಿಕಾ-ಇವನ್ನು ಬರೆದವನು ಅಮೃತಭಾರತಿ. ಇವನು ಅಮಲ ಸರಸ್ವತಿಯ ಶಿಷ್ಯ. ಇವನಿಗೆ ಪರಮಹಂಸ ಪರಿವ್ರಾಜಕಾಚಾರ್ಯ-ಎನ್ನುವ ಬಿರುದು ಇತ್ತು. ಪುರುಷೋತ್ತಮ ಕ್ಷೇತ್ರದಲ್ಲಿ ಬರೆದ ಗ್ರಂಥವಿದು.

3) ಮೂರನೇ ವ್ಯಾಖ್ಯಾನ -ಬರೆದವನು ಕ್ಷಮೇಂದ್ರ. ಇವನು ಪ್ರಸಿದ್ಧ ಕವಿ ಕ್ಷೇಮೇಂದ್ರನಲ್ಲ. ಇವನು ಹರಿಭಟ್ಟನ ಮಗ; ಕೃಷ್ಣಾಶಯನ ಶಿಷ್ಯ. "ಸಾರದೀಪಿಕಾ"ಕಾರನು ಇವನನ್ನು

ಉಲ್ಲೇಖಿಸಿರುವನು. ಭಟ್ಟಿಧನೇಶ್ವರನು ಇವನ ವ್ಯಾಖ್ಯಾನವನ್ನು ಖಂಡಿಸಿರುವನು. ಇವನ ಕಾಲ 16ನೇ ಶತಮಾನ.

4) "ಸುಬೋಧಿಕಾ "ಅಥವಾ ದೀಪಿಕಾ-ಇದನ್ನು ಬರೆದವನು ಚಂದ್ರಕೀರ್ತಿ. ಗಚ್ಛ ಸಂಪ್ರದಾಯದ 15ನೇ ತಲೆಯವನಾದ ಒಬ್ಬ ಜೈನ. ಹರ್ಷಕೀರ್ತಿ ಇವನ ಶಿಷ್ಯ. ಇವನು ಒಂದು ಧಾತುಪಾಠವನ್ನು ಬರೆದಿರುವನು. ದೆಹಲಿ ಚಕ್ರವರ್ತಿ ಸಾಹಿ ಸೇಲಿಯನು ಇವನನ್ನು ಗೌರವಿಸುತ್ತಿದ್ದವು. ಆದ್ದರಿಂದ ಇವನ ಕಾಲ 16ನೇ ಶತಮಾನ.

5) ಇನ್ನೊಂದು ವ್ಯಾಖ್ಯಾನ ಬರೆದವನು ಮಾಧವ. ಇವನು ಕಾನ್ಹುವಿನ ಶ್ರೀರಂಗನ ಶಿಷ್ಯ. ಚಂದ್ರಕೀರ್ತಿಗಿಂತಲೂ ಹಿಂದಿನವನು.

6) ಸಾರಸತ್ವಪ್ರಸಾದ· ಇದು ಚಂಡೀಶ್ವರನ ಶಿಷ್ಯನಾದ ವಾಸುದೇವಭಟ್ಟನದು.

7) [illegible]ರಾಜನ ಮಹಾಪ್ರಧಾನಿ ಮತ್ತು ಸಂಘಪಟಿಯಾಮಂಡನನು ಒಂದು ವ್ಯಾಖ್ಯಾ[illegible] ಕೊಟ್ಟಿರುವನು. ಖರತರ ಗಚ್ಛದವಾಹಡನ ಮಗ. ಅಲ್ಲಸಾಹಿ ಅಥವಾ [illegible]ಲಮಸ [illegible]ಳವರಾಜ. ಅವನ ಮಂತ್ರಿ ಪದ್ಮವಾಹಡನು ಪದ್ಮನ ಸಹೋದರ. ಕಾಲ ಕ್ರಿ. ಶ. 1574.

8) "ಸಾರಸ್ವತಧುಂಡಿಕಾ"-ಇದನ್ನು ಬರೆದವನು ಮೇಘರತ್ನ. ಬೃಹತ್ತರ ಗಚ್ಛಕ್ಕೆ ಸೇರಿದ ಜೈನ; ವಿನಯಸುಂದರನ ಶಿಷ್ಯ ಇವನ ಕಾಲ ಹದಿನಾರನೇ ಶತಮಾನದ ಪೂರ್ವಾರ್ಧ. ಈ ವ್ಯಾಖ್ಯಾನಕ್ಕೆ ಮತ್ತೊಂದು ಹೆಸರು "ಸಾರಸ್ವತ ದೀಪಿಕಾ".

9) ಪ್ರಕ್ರಿಯಾಮಣಿ-ಇದನ್ನು ಬರೆದವನು ಧನೇಶ್ವರ. ಇವನು ಭೋಗದೇವನ ಗುರುವಾದ ಧನೇಶ್ವರನಲ್ಲ. ಕ್ಷೇಮೇಂದ್ರನಾದ ಮೇಲೆ ಬಂದವನಿವನು. ಇವನ ಗ್ರಂಥದ ಒಂದು ಪ್ರತಿಯು ಕ್ರಿ.ಶ.1595ರಲ್ಲಿ ಬರೆಯಲ್ಪಟ್ಟಿರುವುದರಿಂದ ಆ ಕಾಲಕ್ಕೆ ಹಿಂದಿನದು. ಮಹಾಭಾಷ್ಯಕ್ಕೆ ಇವನು "ಚಿಂತಾಮಣಿ" ಯನ್ನು ಕೊಟ್ಟಿರುವನು.

10) ಸಾರಪ್ರದೀಪಿಕಾ-ಇದನ್ನು ಬರೆದವನು ಜಗನ್ನಾಥ. ಇವನು ಪ್ರಸಿದ್ಧ ಜಗನ್ನಾಥನಲ್ಲ. ಧನೇಶ್ವರನಾದ ಮೇಲೆ ಬಂದನಿವನು.

11) ಸಾರಸತ್ವಭಾಷ್ಯ-ಇದನ್ನು ಬರೆದವನು. ಕಾಶೀನಾಥ. ಕ್ರಿ.ಶ.16 ನೇಶತಮಾನದ ಉತ್ತರಾರ್ಧದಲ್ಲಿದ್ದವನು.

12) ಭಟ್ಟಗೋಪಾಲ-1615ಕ್ಕೆ ಹಿಂದಿನವನು.

13)ಸಾರಸತ್ವಪ್ರಕ್ರಿಯಾವರ್ತಿಕ-ಬರೆದವನು ಸಹಜಕೀರ್ತಿ. ಇವನು ಜೈನ; ಇವನ ಕಾಲ 1623.

14)ಹಂಸ ವಿಜಯರ್ಗಣಿ -ಗಣಿಂ ರವನು. ಸಾರಸತ್ವ ಪ್ರಕ್ರಿಯಾ ಗ್ರಂಥದ ಪೀಠಿಕಾ ಶ್ಲೋಕಗಳಿಗೆ ಸ್ಥೂಲ ವ್ಯಾಖ್ಯಾನವನ್ನು ಕೊಟ್ಟಿರುವನು..

15) ವಿದ್ವತ್‌ಪ್ರಬೋಧಿನಿ- ಆಂಧ್ರಪ್ರದೇಶದ ರಾಮಭಟ್ಟ ಇದನ್ನು ಬರೆದವನು. ತನ್ನ ವಂಶ ಮತ್ತು ಗ್ರಂಥಗಳನ್ನು ತಾನೇ ಹೇಳಿಕೊಂಡಿರುವನು. ತಂದೆ ನರಸಿಂಹ. ಕಾಮೂತಾಯಿ. ತನ್ನ 73ನೇ ವಯಸ್ಸಿನಲ್ಲಿ ಇಬ್ಬರು ಗಂಡು ಮಕ್ಕಳು ಸೊಸೆಯರೊಡನೆ ತೀರ್ಥಯಾತ್ರೆಗೆ ಹೊರಟರು. ಅಲ್ಲಿ ವಿರಾಮ ಕಾಲದಲ್ಲಿ ಬರೆದ ಗ್ರಂಥವೇ ಇದು.

16) ಕ್ರಿ.ಶ.1500ರಿಂದ ರಾಮಚಂದ್ರನಿಂದ ಬರೆಯಲ್ಪಟ್ಟ ಪ್ರಕ್ರಿಯಾ ಕೌಮುದಿಯನ್ನು ಅನುಸರಿ. ಈ ಸಾರಸತ್ವ ವ್ಯಾಕರಣಕ್ಕೆ 4 ವ್ಯಾಖ್ಯಾನಗಳಿವೆ

a) ರಾಮಚಂದ್ರಾಶ್ರಯನ "ಸಿದ್ಧಾಂತಚಂದ್ರಿಕಾ"(b) ಲೋಕೋಶಕರನ ತತ್ವದೀಪಿಕಾ (c) ಸದಾನಂದನ "ಸುಬೋಧನಿ" ಮತ್ತು (d) ತರ್ಕವೆಲಕ. ಭಟ್ಟಾಚಾರ್ಯನ ವ್ಯಾಖ್ಯಾನ.

17) ಭಟ್ಟೋಜದೀಕ್ಷಿತನ ಶಿಷ್ಯ ರಘುನಾಥನು 'ಲಘುಕಾವ್ಯ'ವೆನ್ನುವ ವ್ಯಾಖ್ಯಾನವನ್ನು ಕೊಟ್ಟಿರುವನು.

**ಕೈಪಿಡಿಗಳು:**

1.ಹರ್ಷಕೀರ್ತಿಯ ಧಾತು ಪಾಠ. 2. ಜ್ಞಾನತಿಲಕರ ಕೃತ್. ತದ್ಧಿತ. ಉಣಾದಿಪ್ರತ್ಯಯಗಳಿಗೆ ಉದಾಹರಣೆಗಳು ಮತ್ತು (3) ಮಾಧವನ "ಶಬ್ದವ್ಯುತ್ಪತ್ತಿ."

**ಸಂಕ್ಷೇಪಗ್ರಂಥ**

"ಲಘುಸಿದ್ಧಾಂತ ಚಂದ್ರಿಕಾ

c)ಕೌಮಾರ ವ್ಯಾಕರಣ

ಇದನ್ನು ಬರೆದವನು ವಾದೀಂದ್ರ ಚೂಡಾಮಣಿ ಎಂದು ಪ್ರಸಿದ್ಧನಾಗಿದ್ದ ಕ್ರಮುದೀಶ್ವರ. ಇವನ ವಿಷಯವು ನಮಗೆ ಏನೂ ತಿಳಿಯದು. ಓಫ್ರಿಟ್ (Aufreet) ವಿಮರ್ಶಕನು ಈ ಗ್ರಂಥವು ಬೋಪದೇವನ ಮುಗ್ಧದೋಷಕ್ಕಿಂತಲೂ ಹಿಂದಿನವದೆಂದೂ. ಕೋಲ್‌ಬ್ರೂಕ್(Colebroke) ಮುಂದಿನದೆಂದೂ ವಾದಿಸಿರುವನು. ಇದರ ಸರಿಯಾದ ಹೆಸರು.

"ಸಂಕ್ಷಿಪ್ತಸಾರ ". ಇದು ಪಾಣಿನಿಯ ವ್ಯಾಕರಣ ಸಂಗ್ರಹವೆಂದು ಹೇಳಲಾಗಿದೆ. ಈ ವ್ಯಾಕರಣ ಪದ್ಧತಿಯಲ್ಲಿ ಪ್ರಸಿದ್ಧನಾದ ಚಾಮರನಂದಿಯ ಹೆಸರಿನಿಂದಲೇ ಇದು ಈಗ ಪ್ರಸಿದ್ಧವಾಗಿದೆ.

ಅಷ್ಟಾಧ್ಯಾಯಿಯ ಕಠಿಣ ಸೂತ್ರಗಳು ಇಲ್ಲಿಲ್ಲ. ಕ್ರಮವೂ ಬೇರೆಯಾಗಿದೆ. ಭಟ್ಟಿ ಕಾವ್ಯದಿಂದ ಉದಾಹರಣೆಗಳನ್ನು ತೆಗೆದುಕೊಳ್ಳಲಾಗಿದೆ ಭರ್ತೃಹರಿಯ ವಾಕ್ಯಪದೀಯ ಮಾದರಿ ಇಲ್ಲಿ ಕಾಣುತ್ತದೆ. ಇದರಲ್ಲಿರುವ ವಿಷಯಗಳೆಂದರೆ a. ಸಂಧಿ b) ತಿಜಂತ. c.ಕೃದಂತ. d) ತದ್ಧಿತ. e) ಕಾರಕ , f) ಸುಬಂತ. g) ಸಮಾಸ ಪ್ರಾಕೃತ ಭಾಗವೂ ಮುಂದೆ ಸೇರಿಸಲ್ಪಟ್ಟಿದೆ.

ಕುಮುದೀಶ್ವರನ "ಸಂಕ್ಷಿಪ್ತಸಾರ"ವು ಅಸಂಪೂರ್ಣವಾಗಿದ್ದುದ್ದರಿಂದ ನೆಯ್ಗೆಯವನೆಂದು ಹೇಳಲಾದ ಚಾಮರನಂದಿಯು ಪೂರ್ಣಗೊಳಿಸಿದ್ದರಿಂದ ಈ ವ್ಯಾಕರಣಕ್ಕೆ ಇವನ ಹೆಸರು ಬಂತು. ಭಟ್ಟಿಕಾವ್ಯದ ವ್ಯಾಖ್ಯಾನ ಭರತನು ಇದಕ್ಕೆ ವ್ಯಾಖ್ಯಾನವನ್ನು ಕೊಟ್ಟು ಪದ್ಧತಿಗೆ. "ರಾಸವತ ವ್ಯಾಕರಣ" ಎನ್ನುವ ಹೆಸರನ್ನು ಪ್ರಚಾರಕ್ಕೆ ತಂದಿರುವನು. ವ್ಯಾಕರಣದ ಹೆಸರು "ರಸವತೀ". ಇದಕ್ಕೆ ಗೋಮಿಚಂದ್ರನ ವ್ಯಾಖ್ಯಾನವೂ ಇದೆ. ಈ ವ್ಯಾಖ್ಯಾನಕ್ಕೆ ಪಂಚಾನನ. ಕೇಶವದಾಸ.ಚಂದ್ರಶೇಖರ. ವಿದ್ಯಾಲಂಕಾರ ಮತ್ತು ವಂಶೀವಾದನ-ಇವರ ವ್ಯಾಖ್ಯಾನಗಳಿವೆ. ಪಶ್ಚಿಮ ಬಂಗಾಳದಲ್ಲಿ ಕಾತಂತ್ರ ವ್ಯಾಕರಣದಂತೆ ಅದೂ ಪ್ರಚಾರದಲ್ಲಿದೆ.

d) ರೂಪಮಾಲಾ (1350)-ಮಹಮ್ಮದೀಯರ ಸೌಹಾರ್ದ ಬಂದ ಮೇಲೆ ವ್ಯಾಕರಣವನ್ನು ಜನಪ್ರಿಯವಾಗುವ ರೀತಿಯಲ್ಲಿ ಅಭ್ಯಾಸ ಮಾಡುವ ಅವಶ್ಯಕತೆ ತೋರಿದ ಮೇಲೆ ಬರೆಯಲ್ಪಟ್ಟ ಗ್ರಂಥವಿದು. ಇಂಡಿಯಾ ಆಫೀಸ್ ಲೈಬ್ರರಿಯಲ್ಲಿರುವ ಹಸ್ತಪ್ರತಿ ಕೃತಿಯಿಂದ ಇದು ಕ್ರಿ.ಶ.1350 ಕ್ಕಿಂತಲೂ ಅರ್ವಾಚೀನವಲ್ಲವೆಂದು ಖಚಿತವಾಗಿದೆ. ಇದನ್ನು ಬರೆದವನು ವಿಮಲಸರಸ್ವತಿ. ಇದು ಅತ್ಯಂತ ಸರಳವಾದ ಗ್ರಂಥ. ಪ್ರತ್ಯಾಹಾರ. ಸಂಜ್ಞಾ ಮತ್ತು ಪರಿಭಾಷೆಗಳನ್ನು ವಿವರಿಸಿ ಮುಂದಿನ ಭಾಗಗಳಲ್ಲಿ ಸಂಧಿಯನ್ನು. ಆರುಭಾಗಗಳಲ್ಲಿ ವಿಭಕ್ತಿಗಳನ್ನು ಕೊಟ್ಟು ಮುಂದೆ ಅಜಂತಮಾಲಾ. ಹಲಂತಮಾಲಾ. ಸರ್ವನಾಮಮಾಲಾ. ಸಂಖ್ಯಾಭಾಗ. ವಕ್ರಶಬ್ದಭಾಗ. ಸತಿ-ಪತಿ ಮೊದಲಾದವರು.ವೇದದಲ್ಲಿರುವ ವಿಶೇಷರೂಪಗಳಾಗಿ –ಇವುಗಳನ್ನು ವಿವರಿಸಿರುವನು. ಇದಾದ ಮೇಲೆ ನಿಪಾತಗಳು. ಅವುಗಳ ಅರ್ಥ ಮತ್ತು ವ್ಯಾಕರಣ ವಿಶೇಷಗಳು. ಸ್ತ್ರೀಪ್ರತ್ಯಯ ಕಾರಕ ಇವುಗಳನ್ನು ಕೊಟ್ಟಿರುವನು. ಆ ಖ್ಯಾತವನ್ನು ವಿಸ್ತಾರವಾಗಿ ಹೇಳಿರುವನು. ಪ್ರತಿ ಒಂದು 'ಲ' ಕಾರದ ವಿಶೇಷ ರೂಪಗಳು. ಲಕಾರ್ಥಮಾಲೆ. ಕೃತ್ತದ್ಧಿತ ಮತ್ತು ಸಮಾಸಪ್ರಕರಣ–ಇಷ್ಟು ಹೇಳಿ ನಿಂತಿರುವನು. ಮುಂದಿನ ಎಲ್ಲಾ ವ್ಯಾಕರಣ ಗ್ರಂಥಗಳಿಗೂ ಇದು ಆದರ್ಶವಾಗಿದೆ.

e. ಸೌಪದ್ಮ ವ್ಯಾಕರಣ –ಕ್ರಿ. ಶ. 1375. ಇದನ್ನು ಬರೆದವನು ಪದ್ಮನಾಭದತ್ತ. ಇವನು ದಾಮೋದರ ದತ್ತನ ಮಗ ಮತ್ತು ಶ್ರೀದತ್ತನ ಮೊಮ್ಮಗ. ಸೌಪದ್ಮಕ್ಕೆ ಪೃಷೋದ್ಗಾರಿಯ ವೃತ್ತಿ ಇದೆ. ಇದನ್ನು ಬರೆದವನ ಹೆಸರು ಪದ್ಮನಾಭದತ್ತನೆಂದಿದ್ದರೂ ಇವನು ಬೇರೆ. ಈ ವ್ಯಾಕರಣದ ಆಧಾರದ ಮೇಲೆ ಉಜ್ವಲದತ್ತನು ಭೂರಿ ಪ್ರಯೋಗವೆನ್ನುವ ಕೋಶವನ್ನು ಬರೆದಿರುವನು.

ಈ ವ್ಯಾಕರಣವೂ ಪಾಣಿನಿಯನ್ನೇ ಅನುಸರಿಸಿದೆ. ಸಾಮಾನ್ಯವಾಗಿ ಪ್ರತ್ಯಾಹಾರಗಳು ಪಾರಿಭಾಷಿಕ ಶಬ್ದಗಳು ಹಾಗೆಯೇ ಇವೆ. ಈ ದಾಮೋದರದತ್ತನೇ "ಸೌಪದಪಂಚಿಕಾ"ಎನ್ನುವ ವ್ಯಾಖ್ಯಾನವನ್ನು ಕೊಟ್ಟಿರುವನು . ಇದಲ್ಲದೆ ಕಂದರ್ಪ ಸಿದ್ಧಾಂತ, ಕಾಶೀಶ್ವರ, ಶ್ರೀಧರ ಚಕ್ರವರ್ತಿ, ರಾಮಚಂದ್ರ ಮೊದಲಾದವರ ವ್ಯಾಖ್ಯಾನಗಳಿವೆ. ವಿಷ್ಣುಶರ್ಮನ "ಸೌಪದ್ಮಮಕರಂದ" ವ್ಯಾಖ್ಯಾನವು ಅತ್ಯುತ್ತಮವಾದುದು.

ಈ ವ್ಯಾಕರಣಕ್ಕೆ ಸಹಾಯವಾಗಿ ಇವನದೇ ಆದ "ಉಣಾದಿವೃತ್ತಿ"ಇದೆ. ಇದರಲ್ಲಿ ಎರಡು ಪ್ರತ್ಯಯಗಳಿವೆ. a. ಸ್ವರಾಂತ ಪ್ರತ್ಯಯ ಮತ್ತು ವ್ಯಂಜನಾಂಶ ಪ್ರತ್ಯಯ ಇವನ ಧಾತು ಪಾಠವು ಪಾಣಿನಿಯ ಭಾಧ್ವಿ ಮತ್ತು ಆದಾದಿಯನ್ನು ಅನುಸರಿಸಿದೆ. ಇದಕ್ಕೆ "ಧಾತು ನಿರ್ಣಯ"ವೆನ್ನುವ ವ್ಯಾಖ್ಯಾನವಿದೆ. ಕಾಶೀಶ್ವರನು ಗಣ ಪಾಠವನ್ನೂ, ರಮಾಕಾಂತನು ವ್ಯಾಖ್ಯಾನವನ್ನು ಕೊಟ್ಟಿರುವರು. ಈ ವ್ಯಾಕರಣವು ಈಗ ಮಧ್ಯಬಂಗಾಳದಲ್ಲಿ ಪ್ರಚಾರದಲ್ಲಿದೆ.

f. ಪ್ರಕ್ರಿಯಾಕೌಮುದೀ-ಕ್ರಿ. ಶ. 1500ದಕ್ಷಿಣದೇಶದವನಾದ ರಾಮಚಂದ್ರನು ಇದನ್ನು ರಚಿಸಿದನು. ಇವನು ಕೃಷ್ಣಾಚಾರ್ಯನ ಮಗ. ಇವನು ವ್ಯಾಕರಣ, ವೇದಾಂತ ಮತ್ತು ಖಗೋಳ ಶಾಸ್ತ್ರದಲ್ಲಿ ದೊಡ್ಡ ವಿದ್ವಾಂಸನಾಗಿದ್ದನು. ಇವನ ಈ ವ್ಯಾಕರಣವೇ ಮುಂದಿನ ಪ್ರಸಿದ್ಧ ಭಟ್ಟೋಜಿಯ ಸಿದ್ಧಾಂತ ಕೌಮುದಿಗೆ ಮೇಲ್ಪಂಕ್ತಿಯಾಗಿದೆ.

ಇದಕ್ಕೆ ಎರಡು ವ್ಯಾಖ್ಯಾನಗಳಿವೆ.1. ವಿಠಲದಾಸನ ಪ್ರಸಾಧ-1525. ಈ ವ್ಯಾಖ್ಯಾನದಲ್ಲಿ ಕೈಯಟ, ತ್ರಿಲೋಚನದಾಸ, ಕ್ಷೀರಸ್ವಮಿ, ದುರ್ಗಸಿಂಹ, ಜಿನೇಂದ್ರಬುದ್ಧಿ, ಭರ್ತೃಹರಿ, ವಾಮನ, ಹರದತ್ತ, ಬೋಪದೇವ ಮೊದಲಾದವರ ವ್ಯಾಕರಣ ಗ್ರಂಥಗಳು ಉಲ್ಲೇಖಿತವಾಗಿವೆ. ಇದನ್ನು ಭಟ್ಟೋಜಿಯು ಅನೇಕ ಕಡೆ ಖಂಡಿಸಿರುವನು. ಇವನು ನೃಸಿಂಹಾಚಾರ್ಯನ ಮಗ, ರಾಮಕೃಷ್ಣಾಚಾರ್ಯನ ಪೌತ್ರ ಮತ್ತು ಲಕ್ಷ್ಮೀಧರನ ತಂದೆ.

2. ಪ್ರಕ್ರಿಯಾ ಪ್ರಕಾಶ-ಇದನ್ನು ಬರೆದವನು ನೃಸಿಂಹಸೂರಿನ ಮಗ ಶೇಷಕೃಷ್ಣ, ಗಂಗಾಯಮುನಾ ನದಿಗಳ ಮಧ್ಯಪ್ರದೇಶದಲ್ಲಿ ಬರೆದದ್ದು. ಪತ್ರಪುಂಜದ ರಾಜನಾದ ಕಲ್ಯಾಣನ ಉಪಯೋಗಕ್ಕಾಗಿ ಇದನ್ನು ಬರೆದನೆಂದುಹೇಳಲಾಗಿದೆ. ಇವನೇ ಭಟ್ಟೋಜಿದೀಕ್ಷಿತನ ಗುರು. ಇವನ ಕಾಲ -1600 VIII 1600 -1750-ಸತ್ಸು ಅನೇಕೇಷು ವ್ಯಾಕರಣ ಶಾಸ್ತ್ರಗ್ರಂಥೇಷು ಸಿದ್ಧಾಂತ ಕೌಮುದ್ಯಾ ಏವ ಬಹುಷಃ ವ್ಯವಹಾರಿಕತೋ ಬೀಜಂ-

(a) ಭಟ್ಟೋಜಿದೀಕ್ಷಿತ-ಸಿದ್ಧಾಂತ ಕೌಮುದಿ -ಇವನು ಲಕ್ಷ್ಮೀಧರನ ಮಗ, ಗಂಗೋಜಿದೀಕ್ಷಿತನ ಸಹೋದರ ಮತ್ತು ಭಾನುದೀಕ್ಷಿತನ ತಂದೆ. ಮೊಗಲ ಚಕ್ರವರ್ತಿ ಷಹಜಹಾನನ ಆಸ್ಥಾನ ಪಂಡಿತ "ಮನೋರಮ ಕುಚ ಮರ್ದಿನಿ" ಗ್ರಂಥಕಾರನಾದ ಜಗನ್ನಾಥ ಪಂಡಿತನು ಇವನನ್ನು ಶೇಷಕೃಷ್ಣನ ಶಿಷ್ಯನೆಂದು ಹೇಳಿರುವನು. ಜಗನ್ನಾಥನೇ ಶೇಷಕೃಷ್ಣನ ಮಗನ ಶಿಷ್ಯನಾದ್ದರಿಂದ

ಭಟ್ಟೋಜಿಯ ಕಾಲವು ಸುಮಾರು ಕ್ರಿ. ಶ. 1630 ಎನ್ನಬಹುದು. ಭಟ್ಟೋಜಿಯ ಶಿಷ್ಯ ನೀಲಕಂಠಶುಕ್ಲನು ಇದನ್ನೇ ಸಮರ್ಥಿಸಿರುವನು.

ಇವನು ತನ್ನ ಸಿದ್ಧಾಂತ ಕೌಮುದಿಯನ್ನು ಬರೆಯುವಾಗ ಹಿಂದಿನ ಎಲ್ಲಾ ವ್ಯಾಕರಣ ಗ್ರಂಥಗಳನ್ನು ಉಪಯೋಗಿಸಿಕೊಂಡಿರುವನು

ಆದರೆ ಹೈಮ ಕೌಮುದಿಕಾರ ಮೇಘ ವಿಜಯನು ಹೇಳಿರುವಂತೆ ಹೇಮಚಂದ್ರನ "ಶಬ್ದಾನುಶಾಸನ"ವನ್ನು ಅನುಸರಿಸಿರುವನು

ತಾನೇ ತನ್ನ ಸಿದ್ಧಾಂತ ಕೌಮುದಿಗೆ "ಬಾಲ ಮನೋರಮಾ" "ಪ್ರೌಢ ಮನೋರಮಾ" ಎನ್ನುವ ಎರಡು ವ್ಯಾಖ್ಯಾನಗಳನ್ನು ಕೊಟ್ಟಿರುವುದಲ್ಲದೆ ಪಾಣಿನಿಯ ಧಾತುಪಾಠ, ಲಿಂಗಾನುಶಾಸನ, ಶಬ್ದಕೌಸ್ತುಭವೆನ್ನುವ ಗ್ರಂಥಗಳನ್ನು ಕೊಟ್ಟು ಶಾಸ್ತ್ರವನ್ನು ಪ್ರೌಢಿಮೆಯಿಂದನಿಸ್ತರಿಸಿರುವನು. ಮೂರು ಅಧ್ಯಾಯಗಳುಳ್ಳ ವ್ಯಾಖ್ಯಾನವನ್ನು ಮಾತ್ರ ಮಾಡಿದನೆಂದು ಹೇಳಲಾಗಿದೆ. ಆದರೆ 3ನೇ ಅಧ್ಯಾಯದ 4ನೇ ಅಹ್ನಿಕದವರೆವಿಗೂ ವ್ಯಾಖ್ಯಾನ ಮಾಡಿರಬೇಕು.

ಪ್ರೌಢಮನೋರಮಕ್ಕೆ ಜಗನ್ನಾಥನ "ಮನೋರಮ ಕುಂಚ ಮರ್ದಿನಿ"ಮತ್ತು ನಾಗೇಶನ ವ್ಯಾಖ್ಯಾನ ಎರಡೂ ಇವೆ. ತನ್ನ ಗುರುಗಳು ಹರಿದೀಕ್ಷಿತನು ರಚಿಸಿದ ಗ್ರಂಥವೆಂದು ಹೇಳಿಕೊಂಡಿರುವನು. ಹಾಗೆಯೇ ತನ್ನ ಆಶ್ರಯದಾತುವಿನಿಂದ ರಚಿತವಾದದ್ದೆಂದು ಹೇಳಿರುವನು. ಶಬ್ದ ಕೌಸ್ತುಭಕ್ಕೆ ಇದೇ ನಾಗೇಶನ ವ್ಯಾಖ್ಯಾನವಿದೆ. ಇದಲ್ಲದೆ ಇವನ ಶಿಷ್ಯ ವೈದ್ಯನಾಥಪಾಯಕೊಂಡನ ವ್ಯಾಖ್ಯಾನವೂ ಇದೆ. ಸಿದ್ಧಾಂತ ಕೌಮುದಿಗೆ ಅನೇಕ ವ್ಯಾಖ್ಯಾನಗಳಿವೆ. (1)ವಾಮನೇಂದ್ರ ಸರಸ್ವತಿಯ ಶಿಷ್ಯ ಜ್ಞಾನೇಂದ್ರ ಸರಸ್ವತಿಯು "ತತ್ವಭೋಧಿನಿ"ಗ್ರಂಥವು ಪ್ರಸಿದ್ಧ ಗ್ರಂಥ. ಇದರಲ್ಲಿ ಸ್ವರ ಮತ್ತು ವೈದಿಕ ಪ್ರಕ್ರಿಯೆಯನ್ನು ಬಿಟ್ಟು ಎಲ್ಲಾ ಸೂತ್ರ ಭಾಗಗಳ ವ್ಯಾಖ್ಯಾನವಿದೆ. ಇದರ ಸರಣಿಯೂ ಸಿದ್ಧಾಂತ ಕೌಮುದಿಯ ಸರಣಿಯಂತಿದೆ (2)ಸ್ವರ ವೈದಿಕ ಪ್ರಕ್ರಿಯಾ ವ್ಯಾಖ್ಯಾನವನ್ನು ರಘುನಾಥಭಟ್ಟನ ಮಗ ಜಯಕೃಷ್ಣನು ಬರೆದಿರುವನು. ಈ ಎರಡು ವ್ಯಾಖ್ಯಾನಕಾರರೂ 18ನೇ ಶತಮಾನದ ಪೂರ್ವಾರ್ಧಕ್ಕೆ ಸೇರಿರುವರು.

ಭಟ್ಟೋಜಿದೀಕ್ಷಿತನ ವಂಶವೇ ಒಂದು ಪ್ರಸಿದ್ಧ ವೈಯಾಯಿಕರಣ ವಂಶ. ಇವನ ಸಹೋದರನ ಮಗ ಕೌಂಡಭಟ್ಟನು ಭಟ್ಟೋಜಿಯ 74 ಕಾರಿಕೆಗಳಿಗೆ ಸಂಬಂಧಪಟ್ಟಂತೆ ಪರಾಮರ್ಶಮಾಡಿರುವನು. ಭಟ್ಟೋಜಿಯಮಗ ಭಾನುಜಿ ಮತ್ತು ಪೌತ್ರ ಹರಿದೀಕ್ಷಿತ. ಇವರಿಬ್ಬರಿಗೂ ಅನೇಕ ಶಿಷ್ಯರಿದ್ದರು. ಇವರಲ್ಲಿ ಪರಿದೀಕ್ಷಿತನ ಶಿಷ್ಯರಲ್ಲಿ ನಾಗೋಜಿಭಟ್ಟನು ಪ್ರಸಿದ್ಧನು.

ಭಟ್ಟೋಜಿದೀಕ್ಷಿತನ ಸಿದ್ಧಾಂತ ಕೌಮುದಿಯನ್ನು ಮನೋರಮಾ ವ್ಯಾಖ್ಯಾನದೊಡನೆ - ಓದಿದ ಮೇಲೆ ಮಿಕ್ಕ ಯಾವ ವ್ಯಾಕರಣ ಪದ್ಧತಿಯೂ ಹೊಸದಾಗಿ ಕಾಣುವುದಿಲ್ಲ. ಇದರಲ್ಲಿ ಅಸ್ಥಿರತ್ವವು ಸ್ಫುಟವಾಗಿ ಕಾಣುವುದು ಅಧಿಕಾಂಶ. ಇವನ ಗ್ರಂಥಗಳ ಮುಂದೆ ಸಮನಾಗಿ ಯಾವ ಗ್ರಂಥವೂ

ನಿಲ್ಲಲಾರದು. ಇದಕ್ಕೆ ವ್ಯಾಖ್ಯಾನ ವ್ಯಾಖ್ಯಾನಕ್ಕೆ ವ್ಯಾಖ್ಯಾನ-ಹೀಗೆ ವಿಶಾಲವಾಗಿ ಬೆಳೆದು ಜನಾದರಣೀಯ ಸ್ಥಿತಿಯನ್ನು ಹೊಂದಿದೆ. ಇವನ ಗ್ರಂಥಗಳು ಹಿಂದಿನ ಮತ್ತು ಮುಂದಿನ ಎಲ್ಲಾ ಗ್ರಂಥಗಳ ಯಶಸ್ಸನ್ನು ಅಪಹರಿಸಿದೆ. ಇವನ ಗ್ರಂಥವನ್ನು ಓದಿ ಜೀರ್ಣಿಸಿಕೊಂಡ ಮೇಲೆ. ಕತ್ಯಾಯನರ ವಾರ್ತಿಕಗಳು ಮತ್ತು ಪತಂಜಲಿಗಳ ಮಹಾಭಾಷ್ಯ-ಇವೆರಡೂ ರಸಮಯವಾಗಿ ಕಾಣುತ್ತದೆ. ವ್ಯಾಕರಣವು ಶುಷ್ಕ ಶಾಸ್ತ್ರವಲ್ಲವೆನ್ನುವುದನ್ನು ತಿಳಿಯಬೇಕಾದರೆ ಇವನ ಗ್ರಂಥಗಳು ಅತ್ಯಾವಶ್ಯಕ.

(b) ನಾಗೋಜಿಭಟ್ಟ ಕ್ರಿ. ಶ. 1714-ಇವನು ಪ್ರಸಿದ್ಧ ಗ್ರಂಥಕಾರ. ಧರ್ಮಶಾಸ್ತ್ರದಲ್ಲಿ 14 ಗ್ರಂಥಗಳು . ಯೋಗಶಾಸ್ತ್ರದಲ್ಲಿ 1, ಅಲಂಕಾರ ಶಾಸ್ತ್ರದಲ್ಲಿ 3, ವ್ಯಾಕರಣದಲ್ಲಿ 12 ಇಷ್ಟನ್ನು ಬರೆದಿರುವನು. ಅಲ್ಲದೆ ವಾಲ್ಮೀಕಿ ರಾಮಾಯಣ. ಅಧ್ಯಾತ್ಮ ರಾಮಾಯಣ-ಇವೆರಡಕ್ಕೂ ವ್ಯಾಖ್ಯಾನ. ಸಪ್ತಶಿಲೀ. ಗೀತಗೋವಿಂದ ವ್ಯಾಖ್ಯಾನಗಳನ್ನು ಬರೆದಿರುವನು. ವ್ಯಾಕರಣದಲ್ಲಿ ಕೈಯಟನ ಮಹಾಭಾಷ್ಯಪ್ರದೀಪಕ್ಕೆ ಇವನ "ಉದ್ಯೋತ" ಪ್ರಸಿದ್ಧವಾದುದು. ಪರಿಭಾಷೇಂದು ಶೇಖರ. ಶಬ್ದೇಂದು ಶೇಖರ. ಲಘುಶಬ್ದೇಂದು ಶೇಖರಸಿದ್ಧಾಂತಕೌಮುದೀ ವ್ಯಾಖ್ಯಾನ. ಪ್ರೌಢಮನೋರಮಾಕ್ಕೆ ಶದರತ್ನ. ಶದಕೌಸ್ತುಭಕೆ ವಿಷಮಾ. ವೈಯಾಯಿಕರಣ ಸಿದ್ಧಾಂತಮಂಜೂಷಾ ಇಷ್ಟನ್ನು ಬರೆದಿರುವನು.

ಇವನ ವಿಷಯದಲ್ಲಿ 'ಗ್ರಂಥಮಾಲೆ' ಯಲ್ಲಿ ಪ್ರಕಟವಾಗಿರುವ ನರಸಗಂಗಾಧರದಲ್ಲೂ ಇರುವ ಒಂದು ಕಥೆ ಇದೆ. ಜಯಪುರದ ದೊರೆ ಸವಾಜೀಸಿಂಹ ಅಶ್ವಮೇಧಯಾಗಕ್ಕೆ ಬರಬೇಕೆಂದು ಆಹ್ವಾನಿಸಿದ್ದರಂತೆ ಆಗುವುದಿಲ್ಲವೆನ್ನುವುದನ್ನು ಗೌರವದಿಂದ ತಿಳಿಸುವಾಗ. ತಾನು ಕ್ಷೇತ್ರ ಸನ್ಯಾಸವನ್ನು ಸ್ವೀಕರಿಸಿರುವನೆಂದು ಹೇಳಿದನಂತೆ. ಇವನ ಅಡ್ಡ ಹೆಸರು 'ಕಾಳೆ' ಮಹಾರಾಷ್ಟ್ರಬ್ರಾಹ್ಮಣ; ಕಾಶಿಯಲ್ಲಿ ವಾಸ. ಶಿವಭಟ್ಟ ಮತ್ತು ಸತೀ ಇವರ ಮಗ. ಅಲಹಾಬಾದ್ ಉತ್ತರದಲ್ಲಿರುವ ಶೃಂಗಿಬೇರಪುರದ ದೊರೆ ರಾಮಸಿಂಹನ ಆಶ್ರಿತನು ಎಂದು ತಾನೇ ಹೇಳಿಕೊಂಡಿರುವನು.

ಇವನ ಸಾಕ್ಷಾತ್ ಶಿಷ್ಯವೈದ್ಯನಾಥ ಅಥವಾ ಬಾಲಂಭಟ್ಟ ಪಾಯಕೊಂಡತನ್ನ ಗುರುವಿನಂತೆ ಅನೇಕ ಗ್ರಂಥಗಳನ್ನು ಬರೆದಿರುವನು. ಮಿಥಿಲಾರಾಜಚಂದ್ರಸಿಂಹನ ರಾಣೀಲಕ್ಷ್ಮೀದೇವಿಯ ಆಶ್ರಯಪಡೆದವನು.1. ಮಿತಾಕ್ಷರ ವ್ಯವಹಾರ ಕಾಂಡಕ್ಕೆ ಬಾಲಂಭಟ್ಟನ ವ್ಯಾಖ್ಯಾನ. 2. ಪರಿಭಾಷೇಂದು ಶೇಖರಕ್ಕೆ "ಗದಾ" 3. ಮಹಾಭಾಷ್ಯ ಪ್ರದೀಪೋದ್ಯೋತಕ್ಕೆ 'ಛಾಯಾ' 4. ವೈಯಾಯಿಕರಣ ಸಿದ್ಧಾಂತ ಮಂಜೂಷಕ್ಕೆ. "ಕಲಾ" 5. ಶಬ್ದ ಕೌಸ್ತುಭಕ್ಕೆ 'ಪ್ರಭ" 6. ಶಬ್ದರತ್ನಕ್ಕೆ ಭಾವ ಪ್ರಕಾಶಿಕಾ ಮತ್ತು 7. ಶಬ್ದೇಂದುಶೇಖರಕ್ಕೆ 'ಮಾಲಾ' ಇಷ್ಟನ್ನು ಬರೆದಿರುವನು.

c. ಸಂಗ್ರಹಗ್ರಂಥಗಳು-ವರದರಾಜನು 1. ಲಘುಸಿದ್ಧಾಂತ ಕೌಮುದೀ. ಮಧ್ಯಸಿದ್ಧಾಂತಕೌಮುದೀ ಮತ್ತು ಸಾರಸಿದಾಂತ ಕೌಮುದೀ ಎನ್ನುವ ಮೂರು ಗ್ರಂಥಗಳನ್ನು ಕೊಟ್ಟಿರುವನು. ಲಘುಸಿದ್ಧಾಂತ ಕೌಮುದಿಗೆ ರಾಮಶರ್ಮನ ವ್ಯಾಖ್ಯಾನವೂ. ಮಧ್ಯಸಿದ್ಧಾಂತ ಕೌಮುದಿಗೆ ಜಯಕೃಷ್ಣನ ವ್ಯಾಖ್ಯಾನವೂ ಇದೆ. ಇವುಗಳಲ್ಲದೆ . ರೂಪಾವಳೀ. ಸಮಾಸಚಕ್ರ ಮೊದಲಾದವು

ಸಿದ್ಧಾಂತ ಕೌಮುದಿಯನ್ನೇ ಅನುಸರಿಸಿರುವ 5 ಸರಳ ಗ್ರಂಥಗಳಿವೆ. ಕ್ರಿ. ಶ. 1631ರಲ್ಲಿ ಪ್ರಕ್ರಿಯಾ ಕೌಮುದಿಗೆ ತತ್ವಚಂದ್ರವೆನ್ನುವ ಸಂಗ್ರಹವು ಜಯಂತನಿಂದ ಕೊಡಲ್ಪಟ್ಟಿದೆ.

d. ಪಾಣಿನಿಯ ವ್ಯಾಕರಣಕ್ಕೆ ಸಂಬಂಧಿಸಿದ ಗ್ರಂಥಗಳ ಅರ್ವಾಚೀನ ಚರಿತ್ರೆ

ಧಾತು ಪಾಠ–ಪಾಣಿನಿಯ ಧಾತುಪಾಠಕ್ಕೆ ಕ್ಷೀರಸ್ವಾಮಿಯ ವ್ಯಾಖ್ಯಾನವಿದೆ. ಇವನಿಗೆ ಭೋಜನು ಗೊತ್ತು. ವರ್ಧಮಾನನು ಗೊತ್ತು. ವರ್ಧಮಾನನು ತನ್ನ 'ಗಣರತ್ನ ಮಹೋದದಿ 'ಯಲ್ಲಿ ಇವನ ಗ್ರಂಥವನ್ನು ಉಲ್ಲೇಖಿಸಿರುವನು . ಆದರಿಂದ ಇವನ ಕಾಲ ಕ್ರಿ. ಶ. 1050. ಈ ಗ್ರಂಥವಲ್ಲದೆ ಇನ್ನೂ 5 ಗ್ರಂಥಗಳನ್ನು ಬರೆದಿರುವವನು. 1. ಅಮರಕೋಶವ್ಯಾಖ್ಯಾನ 2. ನಿಪಾತಾವ್ಯಯೋಪಸರ್ಗವೃತ್ತಿ 3. ಅಮೃತತರಂಗಿಣಿ, 4. ನಿಘಂಟು ವೃತ್ತಿ, 5. ಗಣವೃತ್ತಿ ಚಂದ್ರ ಮೊದಲಾದವರು ತನಗೆ ಮುಂಚಾಯೇ ಧಾತುವೃತ್ತಿಯನ್ನು ರಚಿಸಲು ಯತ್ನಿಸಿ ವಿಫಲರಾದರೆಂದು ಇವನೇ ಹೇಳಿರುವನು. ಈ ಚಂದ್ರನೇ ಚಂದ್ರಗೋಮೀ.

II. ಮಾಧವೀಯ–ಧಾತುವೃತ್ತಿ–ಕ್ರಿ ಶ. 1350 – ಇದನ್ನು ಬರೆದವರು ಸಾಯನಾಚಾರ್ಯನು ತಮ್ಮ ಹಿಂದಿನ ಭೀಮಸೇನ ಮೈತ್ರೇಯರ ಗ್ರಂಥಗಳನ್ನು ಉಪಯೋಗಿಸಿಕೊಂಡಿರುವನು. ಇವರಾದ ಮೇಲೆಯೇ ಭಟ್ಟೋಜಿದೀಕ್ಷಿತರು ಮತ್ತು ನಾಗೋಜಿದೀಕ್ಷಿತರು ಪ್ರಸಿದ್ಧರು.

III. ಗಣಪಾಠ–ಕ್ಷೀರಸ್ವಾಮಿಯು ಗಣವೃತ್ತಿಯನ್ನು ರಚಿಸಿದನೆನ್ನಲಾಗಿದೆ ಆದರೆ ಅದು ದೊರೆತಿಲ್ಲ. ಶ್ಲೋಕರೂಪದಲ್ಲಿರುವ ಮರ್ಧಮಾನನಿಂದ ರಚಿತವಾದ 'ಗಣರತ್ನಮಹೋದಧಿ'ಯೇ ಈಗ ನಮಗೆ ಲಭ್ಯವಾಗಿರುವ ಗ್ರಂಥ.

IV. ಲಿಂಗಾನುಶಾಸನ–ಭಟ್ಟೋಜಿಯು ತನ್ನ ಕೌಮುದಿಯಲ್ಲೂ ರಾಮಚಂದ್ರನು ತನ್ನ ಪ್ರಕ್ರಿಯಾ ಕೌಮುದಿಯಲ್ಲೂ . ಲಿಂಗಾನುಶಾಸನ. ಪ್ರಕರಣವನ್ನು ಸೇರಿಸಿರುವರು. ಇವರಲ್ಲದೆ ಮೀಮಾಂಸಕಲ್ಲದ ಶಬರಸ್ವಾಮಿ ವತ್ತು ಕಾತ್ಯಾಯನರಲ್ಲದ ವರರುಚಿ ಇವರೂ ಲಿಂಗಾನುಶಾಸನ ಗ್ರಂಥಗಳನ್ನು ರಚಿಸಿರುವರು.

V. ಉಣಾದಿ ಪಾಠ–ಹೈಮ ಮೊದಲಾದ ವ್ಯಾಕರಣಗಳಲ್ಲಿ ಪಾಣಿನಿಯ ಉಣಾದಿಗಳು ಹೇಳಲ್ಪಟ್ಟಿವೆ. ಇವುಗಳಲ್ಲಿ ಉತ್ತಮವಾದುದು ಉಜ್ವಲದತ್ತನ ವೃತ್ತಿ. ಇದು ಕ್ರಿ.ಶ. 1250ರಲ್ಲಿ ರಚಿತವಾಯಿತೆನ್ನಲಾಗಿದೆ. ಉಜ್ವಲನು ತನ್ನ ಹಿಂದಿನ ಕ್ಷಪಣಿಕ. ಗೋವರ್ಧನ. ಪುರುಷೋತ್ತಮದೇವ ಮೊದಲಾದವರು ರಚಿಸಿದ್ದ ವೃತ್ತಿಗಳನ್ನು ಉಲ್ಲೇಖಿಸಿರುವರು. ಇವನಾದ ಮೇಲೆಯೆ ಮಾಣಿಕ್ಯದೇವ ಮತ್ತು ಭಟ್ಟೋಜಿ ಈ ಉಣಾದಿಯನ್ನು ಕೊಟ್ಟಿರುವರು.

VI. ಪರಿಭಾಷೆಗಳು–ಪಾಣಿನಿಯು ಕೊಟ್ಟಿರುವ ಪರಿಭಾಷೆಗಳನ್ನು ಕಾತ್ಯಾಯನ ಮೊದಲಾದವರು ವಿಸ್ತರಿಸುವರು. ವ್ಯಾಡಿಯು ಈಗಿರುವ ಎಲ್ಲಾ ಪರಿಭಾಷೆಗಳಿಗೂ ಮೂಲಕರ್ತಾ ಎನ್ನುವ ನಂಬಿಕೆ ಇದೆ. ಪರಿಭಾಷಾ ತಿಳಿದುಕೊಳ್ಳುವದೇ ಒಂದು ಪ್ರಧಾನಧ್ಯಯನವಾಗಿದೆ. ಇದಕ್ಕಾಗಿ ಸ್ವತಂತ್ರಗ್ರಂಥಗಳು ಹುಟ್ಟಿವೆ. ಮಾಧವೀಯ ಧಾತುವೃತ್ತಿಯಲ್ಲಿ "ಸೌರದೇವ"ನ ಗ್ರಂಥವು ಹೇಳಲ್ಪಟ್ಟಿದೆ. ಇದು ಪುರಾತನ ಗ್ರಂಥ. ನಾಗೇಶನ ಪರಿಭಾಷೇಂದು ಶೇಖರ ಉತ್ತಮ ಗ್ರಂಥ. ಇದಕ್ಕೆ ಪಾಯಗೊಂಡ ಭೈರವಮಿಶ್ರ ಶೇಷಶರ್ಮ. ಭೀಮಭಟ್ಟ ಮೊದಲಾದವರ ವ್ಯಾಖ್ಯಾನಗಳಿವೆ. ಇತರ ವ್ಯಾಕರಣ ಪದ್ಧತಿಗಳೂ ಪಾಣಿನೀಯ ಪರಿಭಾಷೆಗಳನ್ನು ಸೇರಿಸಿಕೊಂಡಿದೆ. ಇವುಗಳ ಪೈಕಿ 'ಕಾತಂತ್ರ'ವೇ ಪ್ರಾಚೀನವಾದದ್ದು. ದುರ್ಗಸಿಂಹನು ಪರಿಭಾಷೆಗಳ ಪಟ್ಟಿಯನ್ನು ತಯಾರಿಸಿ ಅದಕ್ಕೆ ಒಂದು ವ್ಯಾಖ್ಯಾನವನ್ನು ಬರೆದಿರುವನು.

'ಧ್ವನಿ ಸ್ವರೂಪ' , 'ಶಬ್ದಾರ್ಥ ಸಂಬಂಧ'ಇವೇ ಮೊದಲಾದ ವ್ಯಾಕರಣ ತತ್ವಕ್ಕೆ ಸಂಬಂಧಪಟ್ಟ ಗ್ರಂಥಗಳು ತಲೆದೋರಿವೆ. ಕೊಂಡಭಟ್ಟನ ' ವೈಯಾಯಿಕರಣಭೂಷಣಸಾರ" ಅರ್ವಾಚೀನವಾದುದ್ದು. ಇದಕ್ಕೆ ನಾಗೇಶನ ವ್ಯಾಖ್ಯಾನವಿದೆ ಕಾರಿಕ ಪ್ರಕ್ರಿಯೆಗಳನ್ನು ಕುರಿತು ಸುಮಾರು 40 ಕ್ಕಿಂತಲೂ ಮೇಲ್ಪಟ್ಟ ಗ್ರಂಥಗಳಿವೆ.

# ಮೂರನೆಯ ಭಾಗ

## ತರ್ಕಶಾಸ್ತ್ರ ತರ್ಕಶಾಸ್ತ್ರ ಸಾಹಿತ್ಯ

ತರ್ಕಶಾಸ್ತ್ರವೆಂದರೇನು ಮತ್ತು ಅದರ ವ್ಯಾಪ್ತಿ –ಈಗ ಸಾಮಾನ್ಯವಾಗಿ ತರ್ಕಸಂಗ್ರಹ. ದೀಪಿಕೆ. ಮುಕ್ತಾವಳಿ ದಿನಕರೀ ಇವೇ ಮೊದಲಾದ ಸಾಹಿತ್ಯತಕ್ಕೆ ಈ ಹೆಸರು ರೂಢವಾಗಿದೆ. ಇದಕ್ಕೆ ನಮ್ಮಲ್ಲಿ ಆನ್ವೀಕ್ಷಿಕೀ. ನ್ಯಾಯ. ನ್ಯಾಯವಿಸ್ತರ. ನ್ಯಾಯದರ್ಶ. ತರ್ಕಶಾಸ್ತ್ರ. ಪ್ರಮಾಣಶಾಸ್ತ್ರ ಎನ್ನುವ ಹೆಸರುಗಳಿವೆ. ಪಾಶ್ಚಾತ್ಯರು ಈ ಶಾಸ್ತ್ರಕ್ಕೆ ಮೂಲ ಗ್ರಂಥಗಳಾದ ಕಣಾದಿ ಸೂತ್ರಗಳು ಮತ್ತು ಗೌತಮ ಸೂತ್ರಗಳು –ಇವುಗಳ ಆಧಾರದ ಮೇಲೆ ನ್ಯಾಯವೈಶೇಷಿಕ ಎಂದು ಕರೆಯುತ್ತಿರುವರು. ಈ ಹೆಸರು ನಮಗೂ ಚಿರಪರಿಚಿತವಾಗಿದೆ. ಗೌತಮಸೂತ್ರಗಳಿಂದ ನ್ಯಾಯಶಾಸ್ತ್ರವೆಂದೂ. ಕಣಾದಿಸೂತ್ರಗಳಿಂದ ವೈಶೇಷಿಕ ಸಾಸ್ತ್ರವೆಂದೂ ಈಗ ರೂಢವಾಗಿದೆ. ಇವೆರಡೂ ಬೇರೆ ಬೇರೆಯಾಗಿ ಉದಯಿಸಿದರೂ. ಬಹಳ ಹಿಂದೆಯೇ ಎರಡೂ ಒಂದನ್ನೊಂದು ಆಶ್ರಯಿಸಿ ಪರಸ್ಪರ ಉಪಕಾರಕವಾಗಿ ವಾದ ವಿಷಯದಲ್ಲಿ 'ತರ್ಕ'ಎನ್ನುವ ಒಂದು ಹೆಸರಿನಿಂದ ವ್ಯವಹರಿಸುವಂತಾಯಿತು. ಆಂಗ್ಲ ಭಾಷೆಯಲ್ಲಿ ಇದರ ಹೆಸರು 'ಲಾಜಿಕ್' (logic)ಈ ಪದವು ಗ್ರೀಕ್ ಪದವಾದ 'ಲೋಗೋಸ್'logos ಎನ್ನುವ ಪದದಿಂದ ಉದ್ಭವಿಸಿದೆ. ಅರಿಸ್ಟಾಟಲ್ (Aristole) ಎನ್ನುವ ಪ್ರಾಚೀನ ಗ್ರೀಕ್‌ದೇಶದ ತಾರ್ಕಿಕನು ತನ್ನ ಆರ್ಗನಾನ್(organon) ಎನ್ನುವ ಗ್ರಂಥದಲ್ಲಿ ಈ ಶಾಸ್ತ್ರಕ್ಕೆ ಪಶ್ಚಿಮದೇಶಗಳಲ್ಲಿ ಮೂಲವನ್ನು ಕಲ್ಪಿಸಿಕೊಟ್ಟಿರುವನು. ಇದು ಬುದ್ಧಿಯ ಪರಿಪಾಕವನ್ನು ಉಂಟುಮಾಡಿ. ವಸ್ತುನಿರ್ಣಯ ಮಾಡಲು ಚಿಂತನಾತ್ಮಕವಾಗಿರುವುದಲ್ಲದೆ. ವಾದ

ರೂಪದಲ್ಲಿ ಒಂದು ನಿಯಮಿತ ಮತ್ತು ವ್ಯವಸ್ಥಿತಮಾರ್ಗವನ್ನು ಕಲ್ಪಿಸಿಕೊಟ್ಟಿದೆ. ಇದೇ ಬೆಳೆದು ಬಂದು ಈಗ ಎಲ್ಲರನ್ನೂ ಮುಗ್ಧಗೊಳಿಸುತ್ತಿರುವ ವಿಜ್ಞಾನಶಾಸ್ತ್ರಕ್ಕೆ (Science) ಅಂಕುರವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಈ ವಿಚಾರಕ್ರಮವನ್ನು ಕೇವಲ ಮಾನಸಿಕವಾಗಿಯೇ ಬೆಳೆಯಿಸಿಕೊಂಡು ಅದೇ ಪಾಶ್ಚಾತ್ಯದೇಶದಲ್ಲಿ ವೇದಾಂತಶಾಸ್ತ್ರವೂ ಬೆಳದು ಬಂದಿದೆ. ಇದನ್ನು 'ಫಿಲಾಸಫಿ ' (Philosophy) ಎನ್ನುತ್ತಾರೆ. ಎಂದರೆ 'ಸಯನ್ಸ್' ಮತ್ತು 'ಫಿಲಾಸಫಿ' ಇವೆರಡಕ್ಕೂ ಲಾಜಿಕ್ ಎನ್ನುವ ತರ್ಕಶಾಸ್ತ್ರವೇ ಮೂಲವಾಗಿದೆ. ತರ್ಕಲಭ್ಯವಾದ ತತ್ತ್ವವನ್ನು ಸತ್ಯವನ್ನಾಗಿ ಪರಿಗ್ರಹಿಸಿ, ಪ್ರತ್ಯಕ್ಷದಿಂದ ಅದರ ಪೂರ್ಣ ಸತ್ಯಾಂಶವನ್ನು ಸಿದ್ಧಮಾಡಿಕೊಳ್ಳುವುದು ವಿಜ್ಞಾನಶಾಸ್ತ್ರ. ಕೇವಲ ಮನಸ್ಸಿನ ತೃಪ್ತಿಗಾಗಿ ಮಾತ್ರ ಫಿಲಾಸಫಿಯು ಈ ತರ್ಕಶಾಸ್ತ್ರವನ್ನು ಉಪಯೋಗಿಸಿಕೊಂಡು ಬೆಳೆದಿದೆ. ಸತ್ಯದ ಹಿನ್ನಲೆಯಲ್ಲಿ ವಿಜ್ಞಾನಶಾಸ್ತ್ರವು ತರ್ಕಶಾಸ್ತ್ರಕ್ಕೆ ಮನ್ನಣೆ ಇತ್ತಿದೆ. ಸತ್ಯವೆಂದರೆ ಪ್ರತ್ಯಕ್ಷ ಗೋಚರವಸ್ತುವು ಮತ್ತು ಪ್ರತ್ಯಕ್ಷದಲ್ಲಿ ಅನುಭವಿಸುವಂತಹ ವಸ್ತು.(Realism). ಕೇವಲ ಭಾವನಾತ್ಮಕ ತೃಪ್ತಿಯಲ್ಲಿ ಅದು ನಿಲ್ಲಲು ಅಪೇಕ್ಷಿಸುವುದಿಲ್ಲ. ಕೇವಲ ಮನಸ್ಸಿಗೆ ಮಾತ್ರ ನೆಮ್ಮದಿ ಮತ್ತು ತೃಪ್ತಿಯನ್ನು ಆಶಿಸಿ 'ಫಿಲಾಸಫಿ'ಯು ಈ ತರ್ಕವನ್ನು ಆಶ್ರಯಿಸಿದೆ. ಇದರಲ್ಲಿ ತರ್ಕಕ್ಕೆ ಭಾವನಾತ್ಮಕವಾಗಿ ಮನ್ನಣೆ ಸಿಕ್ಕಿರುವುದು (Formalism) ಅನುಭವಿಕವಾಗಿ ಅಲ್ಲ. ಅನುಭವವೆಂದರೆ ಇಂದ್ರಿಯಗಳಿಂದ ಅನುಭವಿಸಬಹುದಾದ ವಸ್ತು ಸಾಕ್ಷಾತ್ಕಾರ.

ಇದೇ ಕ್ರಮದಲ್ಲಿ ಸ್ವಲ್ಪ ಹೆಚ್ಚು ಕಮ್ಮಿಯಾಗಿ ನಮ್ಮ ದೇಶದಲ್ಲಿಯೂ ತರ್ಕಶಾಸ್ತ್ರವು ಬೆಳೆದು ಬಂದರೂ , ಪಾಶ್ಚಾತ್ಯರ' ಲಾಜಿಕ್ 'ಗೂ ನಮ್ಮ ತರ್ಕಶಾಸ್ತ್ರಕ್ಕೂ ಬಹಳ ಅಂತರವಿದೆ. ಕೇವಲವಾದ ರೂಪದಲ್ಲಿ ಬೆಳೆದು ವಸ್ತು ನಿರ್ಣಯಮಾಡುವ ಶಕ್ತಿಗಾಗಿ ವೈಶೇಷಿಕಶಾಸ್ತ್ರವು ಬೆಳೆಯಿತುದರೂ ಅದರ ಹಿನ್ನಲೆಯು ನಮ್ಮ ಪ್ರಾಚೀನ ವೈದಿಕ ಸಂಪ್ರದಾಯವನ್ನು ಪ್ರತಿಭಟಿಸಲು ಸಾಮಾನ್ಯ ಮಾನವನ ಮನಸ್ಸನ್ನು ಆಕರ್ಷಿಸಿಕೊಳ್ಳಲು ಏರ್ಪಡಿಸಿಕೊಂಡ ಕ್ರಮವೆಂದು ಊಹಿಸಬಹುದು ಅಲ್ಲದೆ ವೈದಿಕ ಸಂಪ್ರದಾಯದ ರಕ್ಷಣೆಗಾಗಿ ಪರಿಷ್ಕರಿಸಿಕೊಳ್ಳಲ್ಪಟ್ಟ ನ್ಯಾಯಶಾಸ್ತ್ರವೂ ಅದರೊತನೆಯೇ ಬೆಳೆದು ಬಂತು. ಅಂದರೆ ಮೊದಲಿನಿಂದಲೂ ನ್ಯಾಯ ಮತ್ತು ವೈಶೇಷಿಕ ಇವೆರಡೂ ಅಸ್ವತಂಗಿಯರಂತೆ ಬೆಳೆದು ಬಂದಿದೆ. ಇವೆರಡರ ಹಿನ್ನಲೆಯಲ್ಲಿ ಯೋಗಜನ್ಯ ಸಾಕ್ಷಾತ್ಕಾರವೂ ಪರಿಗ್ರಹೀತವಾಗಿದೆ. ಧ್ಯಾನಯೋಗದಿಂದ ಸಾಕ್ಷತ್ಕಾರಿಸಿಕೊಳ್ಳಲ್ಪಟ್ಟ ವಸ್ತುವು ವೇದಾರ್ಥಕ್ಕೆ ಸರಿತೂಗಬೇಕೆಂದು ನ್ಯಾಯಶಾಸ್ತ್ರವು ವಾದಿಸಿದರೆ, ಅದು ಅವಶ್ಯಕವಲ್ಲ, ಕೇವಲ ಧ್ಯಾನದೃಷ್ಟಿ ತತ್ತ್ವವೆ ಸತ್ಯ ಎಂದು ವೈಶೇಷಿಕವು ವಾದಿಸಲು ಹೊರಟಿಂತಿದೆ.

·2. ಪ್ರಮಾಣಶಾಶ್ತ್ರ- 'ಪ್ರಮಾ' ಎಂದರೆ ಯಥಾರ್ಥಜ್ಞಾನ. ಪ್ರತಿ ಒಂದು ವಸ್ತುವನ್ನು ಪ್ರಮಾ ಎಂದು ಕರೆಯುವೆವು. ಇಂತಹ ಪ್ರಮಾವನ್ನು ಕೊಡುವ ಸಾಧನಗಳಿಗೆ ಪ್ರಮಾಣ (ಪ್ರಮಾಣಕರಣಂ) ಎನ್ನುವ ಹೆಸರಿದೆ. ಪರಿಷ್ಕಾರ ಜ್ಞಾನಕ್ಕೆ ಮೂಲವನ್ನು ತಿಳಿಸುವ ವಾಙ್ಮಯಕ್ಕೆ ನಾವು ಪ್ರಮಾಣ ಶಾಸ್ತ್ರ ಎಂದು ಕರೆಯುವೆವು. ಇಮ್ಮುಖವಾಗಿ ಹುಟ್ಟಿದರೂ ಒಮ್ಮುಖವಾಗಿರುವ ನಮ್ಮ ತರ್ಕಶಾಸ್ತ್ರವು ಯಥಾರ್ಥ ವಿಷಯಕ ಜ್ಞಾನಕ್ಕಾಗಿಯೇ ಕಂಕಣಬದ್ಧವಾಗಿರುವುದರಿಂದ ಇದು ನಮಗೆ ಪ್ರಮಾಣಶಾಸ್ತ್ರವಾಗಿದೆ.

3.ತರ್ಕಶಾಸ್ತ್ರವು ಒಂದು ದರ್ಶನ -ದರ್ಶನವೆಂದರೆ ನೋಡುವುದು.ಇಂದ್ರಿಯಗಳಿಂದ ನೋಡುವುದು ದರ್ಶನ. ಇಂದ್ರಿಯಗಳು ನೋಡುವಂತೆ ಮನಸ್ಸಿನಲ್ಲಿ ಜ್ಞಾನ ಪ್ರಕಾಶದಿದ ನೋಡಿ. ನಂಬುವಂತಾಗುವುದು ದರ್ಶನ. ಇವೆರಡರಲ್ಲಿ ಇಂದ್ರಿಯಗಳು ಮನಸ್ಸಿಗೆ ಅಧೀನವಾಗಿರುವುದರಿಂದ. ಮನಸ್ಸಿನ ಪಾಲಶುಧ್ಧದಿಂದಲೇ. ಇಂದ್ರಿಯ ಜನ್ಯಜ್ಞಾನದ ನೈರ್ಮಲ್ಯವನ್ನು ನಿಷ್ಕಳಿಸಬೇಕೆಂದು ಹಿಂದೂ ಸಂಸ್ಕೃತಿಯಲ್ಲಿ ರೂಢವಾಗಿರುವುದರಿಂದಲೂ. ಮನಸ್ಸಿನ ಶುದ್ಧಿಯನ್ನು ಯೋಗಾಭ್ಯಾಸದಿಂದ ಮಾತ್ರ ಸಾಧಿಸಲು ಆಗುವುದರಿಂದಲೂ. ಅಂತಯೋಗಿಗಳಾದ ಕಣಾದರೂ ಮತ್ತು ಗೌತಮರೂ ಈ ತರ್ಕಶಾಸ್ತ್ರಕ್ಕೆ ಮೂಲಭೂತವಾಗಿರುವುದರಿಂದಲೂ ಈ ತರ್ಕಶಾಸ್ತ್ರವನ್ನು ದರ್ಶನವೆಂದು ಕರೆಯಲು ಯಾವ ಅಭ್ಯಂತರವೂ ಇಲ್ಲ. ಇವರು ಸಾಧಿಸಿಕೊಟ್ಟಿರುವ ತತ್ವಗಳನ್ನು ನಾವು ಸಾಕ್ಷಾತ್ಕರಿಸಿಕೊಳ್ಳಬೇಕೆನ್ನುವ ಸಿದ್ಧಾಂತವೇ ಈ ತರ್ಕಶಾಸ್ತ್ರಕ್ಕೆ ರಸಾಯನವಾಗಿರುವುದರಿಂದ. ಹಿಂದೂ ಸಂಸ್ಕೃತಿಯ ಆರು ದರ್ಶನಗಳಲ್ಲಿ ಈ ತರ್ಕಶಾಸ್ತ್ರವು ವೈಶೇಷಿಕದರ್ಶನ ಮತ್ತು ನ್ಯಾಯದ ದರ್ಶನವೆನ್ನುವ ನಾಮಾಂಕಿತ ಪ್ರಸಿದ್ಧಿಯನ್ನು ಹೊಂದಿದೆ. ಸಾಂಖ್ಯ. ಯೋಗ. ಪೂರ್ವಮೀಮಾಂಸ ಮತ್ತು ವೇದಾಂತ ಎನ್ನುವ ನಾಲ್ಕು ದರ್ಶನಗಳೊಂದಿಗೆ ಮಾನ್ಯತೆ ಇದೆ.

4. ಆಸ್ತಿಕ ನಾಸ್ತಿಕ ದರ್ಶನಗಳು-ಕ್ರಿ.ಪೂ.7ನೇ ಶತಮಾನದ ಪಾಣಿನಿ ಮಹರ್ಷಿಗಳ ಕಾಲಕ್ಕೆ ಈ ಆಸ್ತಿಕನಾಸ್ತಿಕ ಪದಗಳ ಪೂರ್ಣಾರ್ಥವು ನಿಶ್ಚಿತ ವಾಗಿದೆ. ಅವರ IV. 4. 60 ಸೂತ್ರದ ಪ್ರಕಾರ (ಅಸ್ತಿ -ನಾಸ್ತಿ ದಿಷ್ಟಂಯುತಃಆಸ್ತಿ ಕ ನಾಸ್ತಿಕ ಮತ್ತುದಾಷ್ಟಿಕ ಪದಗಳು ವ್ಯವಹಾರದಲ್ಲಿಆಗಲೇ ಇದ್ದವು. ಅಸ್ತಿ ಎಂದರೆ "ಇದೆ" ನಾಸ್ತಿ ಎಂದರೆ ಇಲ್ಲ. ಯಾವುದಿದೆ ಎನ್ನುವುದರಲ್ಲಿ ಪೂರ್ಣವಿಶ್ವಾಸವಿರುವುದೋ ಆ ವಿಷಯದಲ್ಲಿ ಅವನು ಆಸ್ತಿಕ. ಅದನ್ನು ತಿಳಿಸುವ ಗ್ರಂಥವೂ ಆಸ್ತಿಕ. ಅದರಲ್ಲಿ ವಿಶ್ವಾಸವಿಲ್ಲದವನು ನಾಸ್ತಿಕ. ಅಂತಹ ಗ್ರಂಥವೂ ನಾಸ್ತಿಕ. ಸಾಮಾನ್ಯವಾಗಿ ಈ ಎರಡು ಪದಗಳನ್ನು ಮೂರು ಅರ್ಥಗಳಲ್ಲಿ ಪ್ರಯೋಗಿಸಬಹುದು 1.ಪರಲೋಕವಿದೆ 2.ಪರಮಾತ್ಮಾನೊಬ್ಬನಿರುವನು. ಮತ್ತು 3.ವೇದವು ಅಪೌರುಷೇಯ ಅಂದರೆ ಯಾವ ಪುರುಷನಿಂದಲೂ ನಿರ್ಮಿತವಾದುದಲ್ಲ ಎನ್ನುವ ಮೂರು ವಿಧ ನಂಬಿಕೆ ಇರುವವರನ್ನು ನಾವು ರೂಢಿಯಲ್ಲಿ ಆಸ್ತಿಕರು ಎನ್ನುತ್ತೇವೆ. ಆದರೆ ಹಿಂದೂ ಸಂಸ್ಕೃತಿಯಲ್ಲಿ ಮೂರನೇ ಅರ್ಥದಲ್ಲಿ ವಿಶೇಷವಾಗಿ ಅದು ಪ್ರಯೋಗಿಸಲ್ಪಡುತ್ತದೆ. ಆಸ್ತಿಕನೆಂದರೆ ವೇದಪ್ರಾಮಣ್ಯವನ್ನು ಸ್ವೀಕಾರ ಮಾಡುವುದಲ್ಲದೆ ಅದು ಅಪೌರುಷೇಯವೆಂದು ನಂಬಿರುವನು. ನಮ್ಮಲ್ಲೂ ಈಗ ವಿಂಗಡಿಸಲ್ಪಟ್ಟಿರುವ ಆರು ದರ್ಶನಗಳು ಆಸ್ತಿಕ ದರ್ಶನಗಳು. ವೇದವನ್ನು ಪ್ರಮಾಣಾಥವನ್ನಾಗಿ ಪರಿಗ್ರಹಿಸದಿರುವ. ಜೈನ ಮತ್ತು ಬೌದ್ಧ ದರ್ಶನಗಳು. ಮತ್ತು ಕ್ರೈಸ್ತ. ಇಸ್ಲಾಂ ಮೊದಲಾದ ಪರದರ್ಶನಗಳು ನಮ್ಮ ದೃಷ್ಟಿಯಿಂದ ನಾಸ್ತಿಕ ದರ್ಶನಗಳು ತರ್ಕಶಾಸ್ತ್ರವು ನಮಗೆ ಆಸ್ತಿಕ ದರ್ಶನ ನ್ಯಾಯವೈಶೇಷಿಕ ಶಾಸ್ತ್ರದ ಮೂಲ ಮತ್ತು ಧ್ಯೇಯ-ವೈಶೇಷಿಕ ದರ್ಶನವನ್ನು ನ್ಯಾಯಶಾಸ್ತ್ರದಿಂದ ಮಾಡಿ. ಅದು ನಾಸ್ತಿಕವೆಂದೂ. ಅದರ ಮೂಲಭೂತ ಅಣುತತ್ವವಾದಕ್ಕೆ ಬ್ರಾಹ್ಮಣ ಮತ್ತು ಉಪನಿಷತ್ತುಗಳಲ್ಲಿ ಮೂಲವಿಲ್ಲವೆಂದೂ. ಸಾಮಾಜಿಕ ದೃಷ್ಟಿಯಿಂದ ಪ್ರತ್ಯಕ್ಷನು ಗೃಹೀತವಾಗಿ ಇದರ ವಾದವೂ ಬೆಳೆದು ಬಂತೆಂದೂ ಫ್ರೋಕೀತನು ತನ್ನ ಗ್ರಂಥದಲ್ಲಿ (Indian Logic and atomism)ಹೇಳಿರುವನು. (The brahmanas and upanishats do not fore shadow these doctries-atomic Theory. The pucdi controversy

followed the growth of logic and splistory). ಆದರೆ ಈ ದರ್ಶನವು ನ್ಯಾಯದರ್ಶನದೊಡನೆ ಒಂದಾಗಿರುವುದರಿಂದ ವಾದ ಕ್ರಮದಲ್ಲಿ ಮಾತ್ರ ಭಿನ್ನವಾಗಿಲ್ಲ. ತರ್ಕವೆಂದರೆ ನ್ಯಾಯ ಮತ್ತು ವೈಶೇಷಿಕ ಎರಡನ್ನೂ ವಾದ ವಿಷಯದಲ್ಲಿ ಒಂದಾಗಿ ಪರಿಗಣಿಸಬೇಕು. ಹಾಗೆ ಮಾಡಿ ಮೂಲವನ್ನು ನೋಡುವಂತಾದರೆ ವೇದದ ಸಂಹಿತಾಕಾಲದಿಂದಲೂ ಇದೆ ಇದಕ್ಕೆ ಆಧಾರವಿದೆ ಮಾನವನ ವಿಮರ್ಶಾತ್ಮಕ ಮನಸ್ಸು ರೂಪಗೊಂಡಾಗಲೇ ಇದು ತಲೆದೋರಿದೆ. ಸಂಕಲನ-ವಿಕಲನ ಶಕ್ತಿಯೇ ಇದಕ್ಕೆ ಆಧಾರ. ವೇದದಲ್ಲಿ ಇದರ ಒಂದು ನಿರ್ದಿಷ್ಟರೂಪವು ಕಂಡುಬರುತ್ತದೆ. ಋಗ್ವೇದದ ಮೊದಲನೇ ಮಂಡಲದಲ್ಲಿ "ಏಕಂ ಸತ್ ವಿಪ್ರಾಃ ಬಹುಧಾವದಂತಿ" ಎನ್ನುವ ಮಂತ್ರದಿಂದ ಎಂದರೆ ವಿಮರ್ಶಾತ್ಮಾಕ ದೃಷ್ಟಿಯುಳ್ಳವ ನೆನ್ನುವ ಅರ್ಥವು ಕಾಣುತ್ತದೆ. (ವಿಶೇಷಣ ಪ್ರಯಂತಿ ವಿಪ್ರಾಃ)ನಾಸದೀಯಮಂತ್ರವು(ಋಗ್ವೇದ X.(29)ಯೋಗದೃಷ್ಟಿತತ್ವದ ವಿಮರ್ಶ ಮತ್ತು ಚಿಂತನೆಯೇ ಆಗಿದೆ. ಅದಕ್ಕೂ ಹಿಂದಿನ ಮಂತ್ರವಾದ ಪುರುಷಸೂಕ್ತವೂ (ಋಗ್ವೇದ X-90)ನಿಶ್ಚಯದೃಷ್ಟಿಯನ್ನು ಕೊಟ್ಟಿದೆ ಯೋಗಸಾಕ್ಷಾತ್ಕೃತ ದೃಷ್ಟಿಯ ತತ್ವಾರ್ಥವನ್ನು ತಿಳಿದುಕೊಳ್ಳುವುದಕ್ಕಾಗಿಯೇ. "ಸಂಗಚ್ಛಧ್ವಂ ಸಂವದಧ್ವಂ ಸಸಂವೋಯಮನಾಂಸಿ ಜಾನತಾಂ" ( ಋಗ್ವೇದ X-191.2)ಎನ್ನುವ ಮಂತ್ರದಿಂದ ಋಗ್ವೇದ ಸಂಹಿತೆಯು ಕೊನೆಗೊಂಡಿದೆ. ಈ ಮಂತ್ರವು ಈಗ ಅದರ ಕರ್ಮ ಪ್ರಯೋಗದಲ್ಲಿ ಬೇರೆ ಅರ್ಥದಲ್ಲಿ ಸೇರಿಸಲ್ಪಟ್ಟಿದೆ. ಕಠೋಪನಿಷತ್ತಿನಲ್ಲಿ ಯಮಧರ್ಮರಾಯನು ನಚಿಕೇತನಿಗೆ ಹೇಳುವಾಗ 'ನೈಷಾತರ್ಕೇಣಮತಿರಾಪನೇಯಾ' ಎನ್ನುವುದರಿಂದ ವಿತಂಡವಾದ ಅಂದರೆ ಹೇಳಿದ್ದನ್ನು ಇಲ್ಲವೆನ್ನಿಸುವುದಕ್ಕೆ ಪ್ರಯೋಗಿಸುವ ವಾದ ಕ್ರಮವನ್ನು ಪಾರಮಾರ್ಥಿಕ ವಿಷಯದಲ್ಲಿ ಬಿಡಬೇಕು ಎಂದು ಹೇಳಿರುವನು. ಇಲ್ಲಿರುವ ತರ್ಕವದಕ್ಕೆ ಪ್ರತ್ಯಕ್ಷಾನುಗ್ರಹಿತಾನುಮಾನ-ಎಂದೂ ತಿಳಿಯಬಹುದು. ಮುಂಡಕೋಪನಿಷತ್ತಿನಲ್ಲಿ "ಪರೀಕ್ಷ್ಯಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋನಿರ್ವೇದ ಮಾಯಾತ್ ನಾಸ್ತ್ಯಕೃತಃ ಕೃತೇನ. ತದ್ವಿಜ್ಞಾನಾರ್ಥಂಸ ಗುರುಯೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ" ಎನ್ನುವ ಮಂತ್ರವು ಪರೀಕ್ಷ್ಯ ಎನ್ನುವ ಪದದಿಂದ ವೇದದಲ್ಲಿ ಹೇಳಿರುವ ವಿಷಯವನ್ನು ಪ್ರಮಾಣವಾಗಿ ನಂಬಿ ಅದನ್ನು ಸ್ಥಾಪಿಸಲು ಆಶ್ರಯಿಸುವ ತರ್ಕಮಾರ್ಗವನ್ನು ತಿಳಿಸುತ್ತದೆ.

ಈ ಮೇಲೆ ಹೇಳಿರುವ ಮಂತ್ರಗಳಿಂದ, ತರ್ಕವು ಎರಡು ವಿಧದಲ್ಲಿ ಪ್ರಯೋಜಕವಾಗಿದ್ದುದು ಕಂಡುಬರುತ್ತದೆ. ಕೇವಲ ಪ್ರತ್ಯಕ್ಷದೃಷ್ಟಿ, ವಸ್ತುಗಳ ಆಧಾರದ ಮೇಲೆ ವ್ಯಾಪ್ತಿ ಜ್ಞಾನವನ್ನು ಹೊಂದಿ. ಅದರ ಸಹಾಯದಿಂದ ಒಂದು ನಿಷ್ಕರ್ಶಾತ್ಮಕಜ್ಞಾನ ಸಂಪಾದಿಸುವುದು ಒಂದು ವಿಧ. ವೇದದಲ್ಲಿ ಹೇಳಿರುವ ವಿಷಯವನ್ನು ಪ್ರಮಾಣವಾಗಿ ನಂಬಿ ಅದನ್ನು ಸ್ಥಾಪಿಸಲು ಆಶ್ರಯಿಸುವ ವಾದ ಕ್ರಮ ಮತ್ತೊಂದು. ಹೀಗೆ ಪ್ರವಾಹದಲ್ಲಿ ಬಂದಿದ್ದ ಎರಡು ಕ್ರಮಗಳಲ್ಲಿ ಶಾಸ್ತ್ರಾನುಗ್ರಹೀತ ತರ್ಕಕ್ಕೆ ಹೆಚ್ಚು ಮನ್ನಣೆ ಕೊಟ್ಟಿರುವುದು ಕಂಡುಬರುತ್ತದೆ. ಆದರೆ ಅದನ್ನು ತರ್ಕ ಎಂದು ಕರೆಯದೆ ಮೀಮಾಂಸಾ ಎನ್ನುವ ಪದದಿಂದ ವ್ಯವಹರಿಸುತ್ತಿದ್ದೇವೆ. ಬ್ರಾಹ್ಮಣ ಭಾಗದಲ್ಲಿರುವ ಕರ್ಮ ವಿಷಯವಾದರೆ ಕರ್ಮ ಮೀಮಾಂಸಾ. ಉಪನಿಷತ್ತುಗಳಲ್ಲಿರುವ ಆತ್ಮಾ ವಿಷಯವಾಗರೆ ಬ್ರಹ್ಮ ಮೀಮಾಂಸ ಒಟ್ಟಿನಲ್ಲಿ ಶಾಸ್ತ್ರವನ್ನು ಅವಲಂಬಿಸಿರುವ ತರ್ಕಕ್ಕೆ (collateral) ಮಾನ್ಯತೆ ಇತ್ತೆಂದು ಹೇಳಬಹುದು.

ವೇದಕಾಲವಾದ ಮೇಲೆ ಅವರ ರಕ್ಷಣೆಗಾಗಿ ಉದ್ಭವಿಸಿದ. ಇತಿಹಾಸ ಪುರಾಣ ಧರ್ಮಶಾಸ್ತ್ರ. ಮೊದಲಾದುವು ಶಾಸ್ತ್ರಾನು ಗೃಹೀತ ತರ್ಕವಾಗಿರುವ ಮೀಮಾಂಸವನ್ನೇ ಆಶ್ರಯಿಸಿದೆ. ಕ್ರಿ.ಪೂ.5ನೇ ಶತಮಾನದ ಬುದ್ಧನಿಗೆ ಮುಂಚೆ ನ್ಯಾಯವೆಂದರೆ ' ಮೀಮಾಂಸ' ಅಂದರೆ ಶಾಸ್ತ್ರಾನುಗ್ರಹೀತ ತರ್ಕ., ಎನ್ನುವ ಅರ್ಥವೇ ರೂಢವಾಗಿರುವಂತಿದೆ( playing second fiddle to scriptural authorities). ಪ್ರಾಚೀನ ಶಾಸನಕಾರರಾದ ಮನು. ಯಾಜ್ಞವಲ್ಕ್ಯ ಮೊದಲಾದವರು ಧರ್ಮನಿರ್ಣಯದಲ್ಲಿ ತರ್ಕವು ಅತ್ಯಾವಶ್ಯಕವೆಂದು ಹೇಳಿರುವರು. (ಮನು XII-105, 106-ಯಾಜ್ಞ.I. 3). ಧರ್ಮವೆಂದರೆ ವೇದಪ್ರೋಕ್ತ ಕರ್ಮಾಚರಣೆ. ಮೀಮಾಂಸ ಶಾಸ್ತ್ರವು ಧರ್ಮವನ್ನು ನಿಶ್ಚಯಿಸಿದರೆ ಧರ್ಮಶಾಸ್ತ್ರಗಳು ಅಧರ್ಮಗಳನ್ನು ನ್ಯಾಯದಿಂದ ಸಮರ್ಥಿಸುವುವು. ಮೀಮಾಂಸವು ಸಮನ್ವಯಾತ್ಮಕ (ಅಂದರೆ ಮೇಲೆ ಮೇಲೆ ಭಿನ್ನಾರ್ಥ ತೋರುವುದನ್ನು ಒಟ್ಟುಗೂಡಿಸಿ ಒಂದರ್ಥ ಹೇಳುವುದು) ವಾದರೆ. ನ್ಯಾಯವು ವಾದಾತ್ಮಕವಾಗಿ ಆ ಅರ್ಥವನ್ನು ನಿರ್ಣಯಿಸುವುದು. ಅಪಸ್ತಂಭ ಸೂತ್ರದಲ್ಲಿ ತರ್ಕ. ಎಂದರೆ ಮೀಮಾಂಸ ಎನ್ನುವ ಅರ್ಥವೇ ಇದೆ. ಇದು ಯಜ್ಞಯಾಗಾದಿಗಳ ವಿಷಯದಲ್ಲಿ ನಿರ್ಣಯಕೊಡುವುದಕ್ಕಾಗಿ ಆಶ್ರಯಿಸಲ್ಪಟ್ಟ ವಿಚಾರ ಮಾರ್ಗ. ಇದಕ್ಕೆ ಬ್ರಹ್ಮೋದ್ಯ ಎಂದು ಹೆಸರು ಇದೆ. bloomsfield-Religion of the pp 216 FF)- ಪಾಣಿನಿ. ಕಾತ್ಯಾಯನ ಮತ್ತು ಪತಂಜಲಿ ಈ ಮುನಿತ್ರಯರಿಗೆ (ಇವರು ವ್ಯಾಕರಣ ಶಾಸ್ತ್ರದ ಮೂಲಪುರುಷರು)ನ್ಯಾಯವೆಂದರೆ ನಿರ್ಣಯ (Conclusion). ಅದು ತರ್ಕವಲ್ಲ not a system) ಮಹಾಭಾರತದಲ್ಲಿ ನಾರದನಿಗೆ ನ್ಯಾಯಸ್ವರೂಪವು ಸಂಬಾವಯ ದೊಡನೆ ತಿಳಿದಿರುವುದು ಕಂಡುಬರುತ್ತದೆ. (Hopkins-Great epic of India II-97=-FF) ಗೌತಮಧರ್ಮ ಸೂತ್ರದಲ್ಲಿ ತಾಯೀ ಎನ್ನು ವವೇದಶಾಸ್ತ್ರದೊಡನೆ. ಅನ್ವೀಕ್ಷಕೀ. ತರ್ಕ (Reasoning) ಮತ್ತು ನ್ಯಾಯ (conclusion) ಇವು ರಾಜರು ಅಭ್ಯಾಸ ಮಾಡಬೇಕಾದವುಗಳೆಂದು ಹೇಳಿದೆ ಇದರ ಸಹಾಯದಿಂದಲೇ ವ್ಯಾಸರು ಉಪನಿಷತ್ತುಗಳನ್ನು ಜೋಡಿಸಿದರೆಂದು ಮಹಾಭಾರತದಲ್ಲಿ ಹೇಳಿದೆ ಎಂದು ವಿಶ್ವನಾಥನು ತನ್ನ ಗ್ರಂಥದಲ್ಲಿ ಹೇಳಿರುವನು. ವಿಶ್ವನಾಥನು 17ನೇ ಶತಮಾನದ ಪ್ರಸಿದ್ಧ ತಾರ್ಕಿಕನು ಅವಕಾಶಕೊಡುವುದೆಂದು ಹೇಳಿದೆ. (II. 100 36). ಹೇತುಶಾಸ್ತ್ರಬಲದಿಂದ ವೇದ ಮತ್ತು ಧರ್ಮಸೂತ್ರ ಗಳನ್ನು ಉಪೇಕ್ಷಿಸಿರುವರು. ಭ್ರಷ್ಟರೆಂದು ಮನುಸ್ಮೃತಿಯಲ್ಲಿ ಹೇಳಿದ್ದರೂ (ಮನುಸ್ಮೃತಿI-II) ಅನ್ವೀಕ್ಷಕೀ ಮತ್ತು ಆತ್ಮವಿದ್ಯೆಯು ರಾಜರಿಗೆ ಯೋಗ್ಯವಾದುದೆಂದು ಅದೇ ಸ್ಮೃತಿಯಲ್ಲಿ (V.II.43) ಹೇಳಿದೆ. ಕೌಟಿಲ್ಯನ ಅರ್ಥಶಾಸ್ತ್ರದ ರೀತಿಯಲ್ಲಿ ಅನ್ವೀಕ್ಷಕೀಯು ಯೋಗ. ಸಾಂಖ್ಯ ಮತ್ತು ಚಾರ್ವಾಕ ಅಂದರೆ ಲೋಕಾಯಿತ ದರ್ಶನಗಳನ್ನೊಳಗೊಂಡಿದೆ. ಮೊದಲು ಅನ್ವೀಕ್ಷಕೀಯ ಲೌಕಿಕವ್ಯವಹಾರದಲ್ಲಿ ತೀರ್ಪುಕೊಡಲು ಒಂದು ಕ್ರಮವಾಗಿ ಬೆಳೆದು . ಅನಂತರ ಮೀಮಾಂಸದ ಕ್ರಮವನ್ನು ಆಶ್ರಯಿಸಿ ನ್ಯಾಯದರ್ಶನವಾಗಿ ವೈಶೇಷಿಕ ಇವೆರಡೂ ಪರಸ್ಪರ ಹೊಂದಿಕೊಂಡಿರುವ ಶಾಸ್ತ್ರಗಳೆನ್ನುವ ಅಭಿಪ್ರಾಯವು ಕೊಡಲ್ಪಟ್ಟಿದೆ. ಆದರೆ ಅರ್ಥಶಾರ್ಥದ ಕಾಲವು ಕ್ರಿ. ಪೂ. 3ನೇ ಶತಮಾನವೆಂದು ಹೇಳಲಾದರೂ ಅದು ಇರುವ ರೀತಿಯಲ್ಲಿ ಕ್ರಿಸ್ತಶಕೆಗೆ ಸೇರಿರಬೇಕೆಂದು ತೋರುತ್ತದೆ. ಚರಕ ಸಂಹಿತೆ ಕಾಲವಂತೂ ಇನ್ನೂ ಅನಿರ್ದಿಷ್ಟವಾಗಿಯೇ ಇದೆ..

ಒಟ್ಟಿನಲ್ಲಿ ಬುದ್ಧನಿಗೆ ಹಿಂದೆಯೇ ಪ್ರತ್ಯಕ್ಷಾನುಗ್ರಹೀತ ತರ್ಕದ ಬಲದಿಂದ ಲೌಕಿಕ ವ್ಯವಹಾರದಲ್ಲಿ ತೀರ್ಪನ್ನು ಕೊಡುವ ಪದ್ಧತಿಯು ಚೆನ್ನಾಗಿ ಬೆಳೆದು ಆನ್ವೀಕ್ಷಕೀ ಹೇತುಶಾಸ್ತ್ರ ಮತ್ತು ತರ್ಕ ಎನ್ನುವ ಪದದಿಂದ ರೂಢವಾಗಿ ಇತ್ತೆಂದು ತೋರುತ್ತದೆ. ಆದರೆ ಪಾರಮಾರ್ಥಿಕ ದೃಷ್ಟಿಯಲ್ಲೇ ಬೆಳೆಯುತ್ತಿದ್ದ ಸಮಾಜದಲ್ಲಿ ಶಾಸ್ತ್ರಾನುಗ್ರಹೀತ ನ್ಯಾಯಕ್ಕೆ ಇಂತಹ ತರ್ಕದಿಂದ ವಿಹತಿಯು ಬರುವಂತಿರಲಿಲ್ಲವೆಂದು ಕಾಣುತ್ತದೆ. ನ್ಯಾಯವು ಜೈನ ಮತ್ತು ಬೌದ್ಧ ಮತದ ಮೂಲ ಪುರುಷರ ಕಾಲಕ್ಕೆ ಹಿಂದೆಯೇ ಸ್ವತಂತ್ರ ಆಕಾರವನ್ನು ಹೊಂದಿರಬೇಕು. ಅದನ್ನು ವೇದ ಪ್ರಾಮಾಣ್ಯ ಸ್ವೀಕಾರ ಮಾಡದೇ ಇರುವವರೂ ಉಪಯೋಗಿಸಿಕೊಳ್ಳುವಂತಾಯಿತು. ಬುದ್ಧನಿಗೆ ಹಿಂದೆ ಇಂತಹ ವೇದಪ್ರಮಾಣ್ಯಬಾಹುವಿನ ಸಾಂಖ್ಯದ ದರ್ಶನ ಮೂಲಕಾರವೂ ರೂಪಿಸಲ್ಪಟ್ಟಿರಬೇಕು ಹಾಗೆಯೇ ವೈಶೇಷಿಕ ದರ್ಶನವೂ ರೂಪುಗೊಂಡಿರಬೇಕು. ಈ ನಾಸ್ತಿಕ ಸಾಂಖ್ಯ ಮತ್ತು ವೈಶೇಷಿಕ ಮಾರ್ಗವನ್ನು ಅಳವಡಿಸಿಕೊಂಡೇ ಬೌದ್ಧ ಮತ್ತು ಜೈನ ಸಂಪ್ರದಾಯ ಗ್ರಂಥಗಳಲ್ಲಿ ಈ ಸಾಂಖ್ಯ ಮತ್ತು ವೈಶೇಷಿಕ ನ್ಯಾಯಕ್ಕೆ ಬೌದ್ಧ ದರ್ಶನಕ್ಕಿಂತಲೂ ಪ್ರಾಚೀನತೆಯು ಹೇಳಲ್ಪಟ್ಟಿದೆ.(U is Vaisheshika Philosoph-ypp 3-4).

ವೈಶೇಷಿಕ ನ್ಯಾಯವು ವೈದಿಕವೆಂದೂ, ನ್ಯಾಯವು ವೈದಿಕವೆಂದು ಹೇಳುವುದರಲ್ಲಿ ಒಂದು ಅರ್ಥ ವಿಶೇಷವಿದೆ . ಲೋಕವ್ಯವಹಾರಕ್ಕಾಗಿಯೇ ಮೀಸಲಾದ ವಾದ ಮಾರ್ಗ ವೈಶೇಷಿಕ. ಶಾಸ್ತ್ರಾರ್ಥ ನಿರ್ಣಯಕ್ಕಾಗಿ ನಿಶ್ಚಿತವಾದ ಮಾರ್ಗ ಎಂದು ತಿಳಿಯುವುದು ಉತ್ತಮ. ಆದವೈಶೇಷಿಕ ತರ್ಕವು ವೇದಗ್ರಂಥವನ್ನು ಸೂಸದಿದ್ದುದರಿಂದ ಅವದ ವೈದಿಕ ದರ್ಶನಗಳಿಗೆ ಅಂದರೆ ಬೌದ್ಧ ಮತ್ತು ಜೈನ ದರ್ಶನಗಳಿಗೆ ಬಹಳ ಪ್ರಯೋಜನವಾಗಿ ಪರಿಣಮಿಸಿರಬೇಕು. ಆದ್ದರಿಂದ ಬೌದ್ಧ ಮತ್ತು ಜೈನ ಸಂಪ್ರದಾಯದಲ್ಲಿ ಬೆಳೆಯುತಿರಿ ತರ್ಕ ಪದ್ಧತಿಗೆ ಬೇರೆ ಎಂದು ತರ್ಕ ಸಿದ್ಧಾಂತವೂ ಇತ್ತೆಂದು ಹೇಳುವುದು ಅಸಂಗತವಾಗುತ್ತದೆ. ಬೌದ್ಧಗ್ರಂಥಗಳಲ್ಲಿಯೂ ನ್ಯಾಯಶಾಸ್ತ್ರದ ಪ್ರಾಚೀನತೆಯನ್ನು ಕಾಣಬಹುದು ಈ ನ್ಯಾಯಶಾಸ್ತ್ರದೊಡನೆ ವ್ಯವಹಾರಕ್ಕಾಗಿ ವೈಶೇಷಿಕ ಶಾಸ್ತ್ರವು ರೂಪುಗೊಂಡಿರಬೇಕು ರಿಸ್ ಡೇವಿಡ್ಸ್(Rhys Dands) ಎನ್ನುವರು ತಮ್ಮ Buddlist psychology ಎನ್ನುವ ಗ್ರಂಥದಲ್ಲಿ (pp68 FF) ನ್ಯಾಯ ಮತ್ತು ವೈಶೇಷಿಕ ಇವೆರಡಕ್ಕು ಉಪನಿಷತ್ತುಗಳೇ ಆಧಾರವೆಂದು ಹೇಳಿರುವರು. ಪ್ರಾಚೀನ ಪಾಲೀ ಗ್ರಂಥಗಳಲ್ಲಿ ನ್ಯಾಯ ಮತ್ತು ವೈಶೇಷಿಕ ಪದಗಳ ಪರಿಚಯವಿದ್ದಂತಿಲ್ಲವೆಂದು ವಿದ್ಯಾಭೂಷಣನು ತನ್ನ Medical logic(pp 3F) ಗ್ರಂಥದಲ್ಲಿ ತಿಳಿಸಿದ್ದರೂ (ಬ್ರಹ್ಮಜಾಲಸುತ್ತದಲ್ಲಿ ತಕ್ಕ(ತರ್ಕ)ಅಂದರೆ ಪ್ರತ್ಯಕ್ಷಾನುಗೃಹೀತರಾದ ಪದ್ಧತಿ (sophisim) ಮತ್ತು ಮೀಮಾಂಸ (ಮೀಮಾಂಸ) ಪದಗಳಿವೆ)."ಉದಾನ"ವೆನ್ನುವ ಬೌದ್ಧರ ಗ್ರಂಥದಲ್ಲಿ ಪುರಾಣ ಇತಿಹಾಸಗಳಲ್ಲಿರುವಂತೆ 'ತಕ್ಕಿಕ' (ತಾರ್ಕಿಕ ತಾರ್ಕಿಕ)ಎನ್ನುವ ಪದವಿದೆ. ಕ್ರಿ.ಪೂ. 255ರಲ್ಲಿ ನಡೆದ ಬೌದ್ಧ ಸಭೆಗೆ ಹಿಂದಿನದಲ್ಲಿದ್ದ ಕಥಾವಸ್ತು ಪ್ರಕರಣ (ಕಥಾವಸ್ತು ಪ್ರಕರಣ) ಎನ್ನುವ ಗ್ರಂಥದಲ್ಲಿ ನ್ಯಾಯ ವೈಶೇಷಿಕ ಸೂತ್ರಗಳೂ ನಮೂದಿಸಲ್ಪಟ್ಟಿದ್ದರೂ . ತನ್ನ, ಪತಿನ್ನ (ಪ್ರತಿಜ್ಞಾproporition), ಉಪನಯ(ಪ್ರಕೃತ ವಿಷಯಕ್ಕೆ ವಾದನ್ವಯ)ಮತ್ತು ನಿಗ್ಗಹ (ನಿಗ್ರಹ) ಅಂದರೆ ಪರಪಕ್ಷ ನಿರಸನ ನ್ಯಾಯ ಇವು ಪ್ರಯೋಗಿಸಲ್ಪಟ್ಟಿವೆ. ಇವುಗಳ ಶಾಸ್ತ್ರರೂಪವು ಮಿಲಿಂದಪಹ್ನದಲ್ಲಿದೆ. ಆದರೆ ಈ ಗ್ರಂಥದ ಕಾಲವು ನಿಶ್ಚಿತವಾಗಿಲ್ಲ. ಕ್ರಿ.

ಶ.1 ಶತಮಾನದಲ್ಲಿ ನಡೆದ ಕಾನಿಷ್ಕನಿಂದ ಏರ್ಪಡಿಸಲ್ಪಟ್ಟಿದ್ದ ಬೌದ್ಧ ಸಂಪ್ರದಾಯ ಗ್ರಂಥರಚನೆಗಳಲ್ಲಿ ವೈಶೇಷಿಕ ದರ್ಶನವು ಹಿಂದೆಯೇ ಇದ್ದಂತೆ ಹೇಳಲ್ಪಟ್ಟಿದೆ.

ಜೈನ ಸಿದ್ಧಾಂತ ಗ್ರಂಥಗಳ ಆಧಾರವನ್ನು ತೆಗೆದುಕೊಂಡರೆ ನ್ಯಾಯ ವೈಶೇಶಿಕ ಸಿದ್ಧಾಂತಗಳಿಗೆ ಹಿಂದೆಯೇ ಜೈನರ ನ್ಯಾಯವು ರೂಪುಗೊಂಡಿತ್ತೆಂದು ಹೇಳಲವಕಾಶವಿಲ್ಲ. " ಆವಾಶ್ಯಕ" (ಆವಿರ್ತ್ಯಯ) ಎನ್ನುವ ಗ್ರಂಥದಲ್ಲಿ ವರ್ಧಮಾನನಿಗೆ ೫೪೪ ವರ್ಷಗಳ ದೆಯೇ ರೋಹಗುತ್ತನೆವಸಿದ್ಧಾಂತಿಯ ಯ ವದ್ಧತಿಯಿಂದ ವೈಶೇಷಿಕ ದರ್ಶನವು ಹುಟ್ಟಿತೆಂದು ಹೇಳಿದೆ. ಆದರೆ ಈ ಅಭಿಪ್ರಾಯವು ಪ್ರಕ್ಷಿಪ್ತವೆಂದು ನಂಬಲಾಗಿದೆ. ವಿದ್ಯಾಭೂಷಣನರೂ ತಮ್ಮ Medeiral logic (PP 3F) ಎನ್ನುವ ಗ್ರಂಥದಲ್ಲಿ ಜೈನ ಸಿದ್ಧಾಂತದ ಪ್ರಾಮಾಣ್ಯವಾದವು (vicus of knowledge)ಸ್ವಲ್ಪ ವಿಜಾತೀಯವಾಗಿದೆ ಎಂದಿರುವನು. ಸ್ಥಾನಾಂತ ಸೂತ್ರ ಗ್ರಂಥದ ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದವೆನ್ನುವ ನಾಲ್ಕು ಪ್ರಮಾಣಗಳು ಹೇಳಲ್ಪಟ್ಟಿವೆ. ಇಲ್ಲಿ ಜ್ಞಾನವನ್ನು ಪ್ರತ್ಯಕ್ಷ ಮತ್ತು ಪರೋಕ್ಷ ಎಂದು ವಿಂಗಡಿಸಿ ಅವುಗಳನ್ನು ಮೊದಲು ಸಾಮಾನ್ಯವಾಗಿ ಪ್ರತ್ಯಕ್ಷದಲ್ಲಿ 1. ಪ್ರತ್ಯಕ್ಷ ಎಂದರೆ ಇಂದ್ರಿಯಾತೀತ ಸಾಕ್ಷಾತ್ ಜ್ಞಾನ ( ಇದಕ್ಕೆ 'ಅವಧಿ' ಹೆಸರು)2. ಮನಃ ಪರ್ಯಾಯ ಎಂದರೆ ಮತ್ತೊಬ್ಬರ ಮನಸ್ಸಿನ ಮೂಲಕ ದೃಷ್ಟಿ ಮತ್ತು 3.ಕೇವಲ ಅಂದರೆ ಪೂರ್ಣಜ್ಞಾನ. ಇಷ್ಟು ಸೇರಿವೆ ಪರೋಕ್ಷಜ್ಞಾನದಲ್ಲಿ ಇಂದ್ರಿಯಾರ್ಥ ರ್ಷ ಜನ್ಯಜ್ಞಾನ, ತಜ್ಜನ ವ್ಯಾಪ್ತಿ ಜ್ಞಾನ ಮೊದಲಾದುವು(ಮತಿ) ಮತ್ತು ಶ್ರುತ ಜ್ಞಾನ -ಇವೆಲ್ಲವೂ ಸೇರಿಸಲ್ಪಟ್ಟಿದೆ. ಉಮಾಸ್ವಾತಿಯ ತತ್ತ್ವಾರ್ಥಾಧಿಗಮಸೂತ್ರ ಮತ್ತು ಸಿದ್ಧಸೇನ ವಿಲಾಕರರ ನ್ಯಾಯಾವತಾರ- ಈ ಎರಡು ಗ್ರಂಥಗಳನ್ನು ನೋಡಿದರೆ ನ್ಯಾಯ ವೈಶೇಷಿಕದಿಂದಲೇ ಜೈನ ತರ ಜೈನ ತರ್ಕ ಪದ್ಧತಿಯು ರೂಪುಗೊಂಡಿರುವುದು ಗೋಚರವಾಗುತ್ತದೆ. ಇವರ ವಾದ ವ್ಯಾಖ್ಯಾನ. ವಸ್ತು ಸ್ವರೂಪವು ಸತ್ಯವಾದ ಕ್ಷಣಕ್ಷಣಕ್ಕೂ ವ್ಯತ್ಯಾಸವಾಗುತ್ತಿರುವ ಅವರ ಗುಣಗಳಿಂದ ಆ ವಸ್ತುವು ಇದೇ ಎಂದು ಹೇಳುವುದಕ್ಕಾಗುವುದಿಲ್ಲ ಎನ್ನುವುದೇ ಇವರು ಹೇಳುವ ತತ್ತ್ವ. ಅವರ ಅಣುತತ್ತ್ವ ಸಿದ್ಧಾಂತದ ರೀತಿಯನ್ನು ನೋಡಿದರೂ ವೈಶೇಷಿಕರವೇ ಈ ಸಿದ್ಧಾಂತಕ್ಕೆ ಎಂದು ರೂಪವನ್ನು ಕೊಟ್ಟಿರುವಂತಿದೆ. ಪೃಥಿವಿ, ಅಪ್,ತೇಜಸಸುಪ ಮತ್ತು ಸ್ಪರ್ಶಗಳು ಸಂಗತವಾಗಿವೆ ಎಂದು ಇವರು ಹೇಳಿರುವುದು ಮಾತ್ರ)ವೈಶೇಷಿಕರಕ್ಕಿಂತ ಭಿನ್ನವಾಗಿದೆ..

ಪ್ರೊ. ಥಿಬೋ (Pro. Thibont) ತನ್ನ ಪಂಚಸಿದ್ಧಾಂತಿಕಾ ವಿಮರ್ಶನ ಗ್ರಂಥದಲ್ಲಿ ಹೇಳಿರುವುದನ್ನು ಪ್ರಮಾಣವಾಗಿ ತೆಗೆದುಕೊಂಡು A. B. ಕೀತ್ ವಿಮರ್ಶಕರು ಯವನ ಸಿದ್ಧಾಂತ ಸಂಬಂಧವು ನ್ಯಾಯವೈಶೇಷಿಕದಲ್ಲಿ ಚೆನ್ನಾಗಿ ಕಂಡು ಬರುತ್ತದೆ ಎಂದಿರುವರು. ಆದರೆ ಉಪಮಾನದಿಂದ ತರ್ಕವು ಬೆಳೆದಿದ್ದರೂ ವ್ಯಾಪ್ತಿ ಜ್ಞಾನ ಸಹಕೃತ ಅನುಮಾನ ಪ್ರಮಾಣ ಪರಿಷ್ಕಾರವು ಗೌತಮನ ಮತ್ತು ಕಣಾದರ ಪಾಲಿಗೆ ಸೇರಿದೆ. ದಿಙ್ನಾಗನಿಗೆ ಎರಡು ಶತಮಾನಗಳ ಹಿಂದೆ ಮಹಾಯಾನ ಬೌದ್ಧಸಿದ್ಧಾಂತದ ಪ್ರಧಾನಾಚಾರ್ಯನಾದ ಆರ್ಯದೇವನು ಯವನ ಪರಿಭಾಷಕಗಳನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ.ಇವನ ಕಾಲ 400 ಅಂದರೆ ಇವನ ಕಾಲಕ್ಕೆ ಭಾರತೀಯ ಮತ್ತು ಯವನ ಸಂಪರ್ಕವು ಪೂರ್ಣವಾಗಿತ್ತೆನ್ನಬಹುದು.

ಈ ವಿಷಯಗಳಲ್ಲಿ ಇವನನ್ನು ಗಮನಿಸಿದರೆ ಕ್ರಿ. ಪೂ. 5ನೇ ಶತಮಾನದ ಕಾಲಕ್ಕೆ ಈ ಸಾಂಖ್ಯ ಮತ್ತು ವೈಶೇಷಿಕ ವ್ಯಬಲದಿಂದ ದರ್ಶನನೆಂದು ಹೆಸರುಗಳಿಸುವಂತಾದ ಬೌದ್ಧ ಸಂಪ್ರದಾಯವು ಆಸ್ತಿಕರಲ್ಲಿ ಭಯವನ್ನು ಹುಟ್ಟಿಸಿ ಎಲ್ಲಿ ವೇದ ಸಂಪ್ರದಾಯವು ನಶಿಸಿಹೋಗುವುದೋ ಎಂದು ವೇದದ ಪೂರ್ಣಾವಲಂಬನವನ್ನು ಬಿಟ್ಟು, ನಿಂತ ನ್ಯಾಯಮಾರ್ಗವೂ ನಾಸ್ತಿಕ ದಾರಿಯಲ್ಲಿ ಪ್ರಚಂಡ ಪರಿಣಾಮಕಾರಿಯಾದ ವೈಶೇಸಿಕವೂ ಒಟ್ಟುಗೂಡಿ ತರ್ಕದಲ್ಲಿ ಲಂಡನ ಮತ್ತು ಮಾಡನ ವಾದವನ್ನು ರೂಪಿಸಿಕೊಂಡಿರಬೇಕೆಂದುಕಾಣುತ್ತದೆ. ಇದು ಸುಮಾರು ಕ್ರಿ. ಪೂ. 4ನೇ ಶತಮಾನ ಮಧ್ಯಭಾಗದಲ್ಲಿನ ಕಾಲದಲ್ಲಿ ಆಗಿರಬೇಕು. ಕ್ರಿ. ಪೂ. 357ರಲ್ಲಿ ಭದ್ರಬಾಹು ಎನ್ನುವ ಜೈನ ತಾರ್ಕಿಕನಿಗೆ ದಶಾಪಯನ ನ್ಯಾಯ ಮಾರ್ಗವೂ ತಿಳಿದಿತ್ತು. ಅದೇ ಶತಮಾನದ ಕಾತ್ಯಾಯನರಿಗೆ ನ್ಯಾಯ ಮಾರ್ಗವೂ ಪರಿಚಯವಿತ್ತೆಂದು ಗೋಲ್ಡ್‌ಸ್ಟಕರ್(Gold stucker) ತನ್ನ Panini and his place in Sanskrit Literture ಎನ್ನುವ ಗ್ರಂಥದಲ್ಲಿ ಹೇಳಿರುವನು. ಬಾದರಾಯಣ II.2.11-17 ಸೂತ್ರಗಳನ್ನು ಗಮನಿಸಿದರೆ ವೈಶೇಷಿಕವು ಅವರಿಗೆ ತಿಳಿದಂತಿದೆ. ಬೌದ್ಧರ ಲಲಿತಾ ತರ್ಕವೆನ್ನುವ ಅರ್ಥದಲ್ಲಿದೆ. ಕ್ರಿ. ಪೂ. 4ನೇ ಶತಮಾನದ ಮಧ್ಯಭಾಗಗಳನ್ನು ಅರ್ವಾಚೀನವೆಂದು ಹೇಳಲಾದ ವೈಶೇಷಿಕ ಸೂತ್ರಗಳು ಬೌದ್ಧದರ್ಶನವನ್ನು ಖಂಡಿಸದೇ ಇರುವುದೂ ಬೌದ್ಧ ಸಂಪ್ರದಾಯದಲ್ಲಿ ವೈಶೇಷಿಕ ಕ್ಕೆ ಪ್ರಾಚೀನತೆಯೂ ಸ್ವೀಕೃತವಾಗಿರುವುದು ಇದನ್ನು ಸಮರ್ಥಿಸುತ್ತದೆ.

6. ನ್ಯಾಯವೈಶೇಷಿಕ ಶಾಸ್ತ್ರದ ವ್ಯಾಪ್ತಿ ಮತ್ತು ಸ್ವರೂಪ ಈ ಶಾಸ್ತ್ರವು ಕ್ರಿ. ಪೂ. 4ನೇ ಶತಮಾನದಲ್ಲಿ ಸಿದ್ಧಾಂತದ ಆಕಾರವನ್ನು ಹೊಂದಿ, ಕ್ರಮೇಣ ಬೆಳೆದು ಕ್ರಿ. ಶ. 17ನೇ ಶತಮಾನದ ಉತ್ತರಾರ್ಧದ ಹೊತ್ತಿಗೆ ಪ್ರಚಂಡ ರೂಪ ತಾಳಿತು. ಅಲ್ಲಿಂದ ಮುಂದೆ ನ್ಯಾಯ ಮತ್ತು ವೈಶೇಷಿಕವೆನ್ನುವ ಬೇಧವು ತಪ್ಪಿಹೋಗಿ ಪ್ರಾಚೀಯ ಮತ್ತು ನವೀನವೆನ್ನುವ ಎರಡು ವಿಧ ನ್ಯಾಯ ಗ್ರಂಥಗಳ ಸಂಗ್ರಹಮಾಡಲು ಕುತೂಹಲವು ಜಾಸ್ತಿಯಾಯಿತು. ನ್ಯಾಯ ಮತ್ತು ವೈಶೇಷಿಕ ಸೂತ್ರಗಳು. ಅವುಗಳ ವ್ಯಾಖ್ಯಾನ ಮತ್ತು ಇವುಗಳ ಮೇಲೆ ಬೆಳೆದ ಗ್ರಂಥಗಳು ಪ್ರಾಚೀನ ನ್ಯಾಯ ಶಾಸ್ತ್ರದ ಅಧ್ಯಯನಕ್ಕೆ ಮೀಸಲಾದಿವು. ಕ್ರಿ. ಶ.1100ರಲ್ಲಿದ್ದ ವರದರಾಜನ ತಾರ್ಕಿಕ ರಕ್ಷಾ ಎನ್ನುವ ಗ್ರಂಥವೇ ಈ ಪ್ರಾಚೀನನ್ಯಾಯಕ್ಕೆ ಅಂತಿಮ ಮಂಗಳವೆನ್ನಬಹುದು. ಇವನಾದ ಮೇಲೆ ಕ್ರಿ. ಶ.12ನೇ ಶತಮಾನದ 2ನೇ ಭಾಗದಲ್ಲಿ ಗಂಗೇಶನು ತತ್ತ್ವ ಚಿಂತಾಮಣಿ ಎನ್ನುವ ಗ್ರಂಥವನ್ನು ಕೊಟ್ಟಿರುವನು. ಈ ಗ್ರಂಥವೇ ನವೀನ ನ್ಯಾಯಕ್ಕೆ ನಾಂದೀ ಎನ್ನಬಹುದು. ಈ ತತ್ತ್ವಚಿಂತಾಮಣಿಯ ಮೇಲೆ ವ್ಯಾಖ್ಯಾನ ಮತ್ತು ವಿಸ್ತರಣ ರೂಪದಲ್ಲಿ ಬೆಳೆದ ಗ್ರಂಥಗಳು ಈ ತರ್ಕಶಾಸ್ತ್ರಕ್ಕೆ ಒಂದು ಹೊಸರೂಪ ವನ್ನೇ ಕೊಟ್ಟಿದೆ. ಈ ತತ್ತ್ವ ಚಿಂತಾಮಣಿಗೆ ದಿಧಿತಿ ವ್ಯಾಖ್ಯಾನ. ಅದರ ವಿವರಣೆ ಜಾಗದೀಶ ಮತ್ತು ಗಾದಾದರೀ-ಇವು ನವೀನ ನ್ಯಾಯಾಧ್ಯಯನಕ್ಕೆ ಸೇರಿದವು. ಈಗ ಸಾಮಾನ್ಯ ವಾಗಿ ಪ್ರಾಚೀನ ಶಾಸ್ತ್ರವೆಂದರೆ 1. ಕಣಾದರ ವೈಶೇಷಿಕ ಸೂತ್ರಗಳು ಮತ್ತು ಅವುಗಳ ವ್ಯಾಖ್ಯಾನ 2.ಗೌತಮರ ನ್ಯಾಯ ಸೂತ್ರಗಳು ಮತ್ತು ಅವುಗಳ ವ್ಯಾಖ್ಯಾನ. 3. ಉದಯನಾಚಾರ್ಯರ ನ್ಯಾಯಕುಸುಮಾಂಜಲೀ ಮತ್ತು ಆತ್ಮ ತತ್ತ್ವವಿವೇಕ 4.ಶ್ರೀಧರನ ನ್ಯಾಯಕಂದಲೀತ. ಜಯಂತಭಟ್ಟನ ನ್ಯಾಯಮಂಜರಿ ಮತ್ತು ಇವುಗಳಿಗೆ ಸಂಬಂಧಪಟ್ಟ ಗ್ರಂಥಗಳು. ನವೀನ ನ್ಯಾಯಾಧ್ಯಯನದಲ್ಲಿ ದಿಧಿತಿ ಮತ್ತು ಜಾಗದೀಶಿ ವ್ಯಾಖ್ಯಾನಗಳೊಡನೆ ಗಂಗೇಶನ

ತತ್ವಚಿಂತಾಮಣಿಯೊಂದಿಗೆ ಗದಾಧರನಿಂದ ರಚಿತವಾದ ಗ್ರಂಥಗಳು ಅವುಗಳಲ್ಲಿ 1.ಪಕ್ಷತಾ. 2.ಅವಯವ. 3.ಪಂಚಲಕ್ಷಣೀ. 4. ಚತುರ್ದಶಲಕ್ಷಣೀ. 5.ಸಾಮಾನ್ಯನ ನಿರುಕ್ತಿ . 6.ಸವ್ಯೋಪಚಾರ. 7. ಸತ್ಪ್ರಕ್ಷ ಪಕ್ಷ 8. ವ್ಯುತ್ಪತ್ತಿ ವಾದ 9.ಶಕ್ತಿ ವಾದ ಮತ್ತು 10.ಪ್ರಾಮಣ್ಯವಾದ ಇವು ಅಧ್ಯಯನಕ್ಕೆ ಸೇರಿದವು..

ಈ ಪ್ರಾಚೀನ ನವೀನವೆನ್ನುವ ಹೆಸರು ಬರಲು ಕಾರಣವೂ ಇದೆ. ಹಿಂದೆ ಹೇಳಿದಂತೆ ಕಣಾದರೂ ಮತ್ತು ಗೌತಮರು ತಾವು ಋಷಿಗಳಾದ್ದರಿಂದ . ತಮ್ಮ ಧ್ಯಾನ ಯೋಗದಲ್ಲಿ ಸಾಕ್ಷಾತ್ಕೃತವಾದ ತತ್ವಗಳನ್ನು ಪದಾರ್ಥಗಳೆಂದು ಮೊದಲು ನಿರೂಪಣೆ ಮಾಡಿ ಆ ಪದಾರ್ಥಗಳಲ್ಲಿ ಅಂತರ್ಗತವಾದ ಬುದ್ಧಿ ತತ್ವವನ್ನು ವಿಮರ್ಶಿಸುವಾಗ ನ್ಯಾಯಮಾರ್ಗವವನ್ನು ಬಿಟ್ಟಿರುವರು. ಯೋಗಪ್ರಾಬಲ್ಯ ಮತ್ತು ಅದರ ಹಿನತ್ಯವು ಹಿಂದೂ ಸಂಸ್ಕೃತಿಯಲ್ಲಿ ಉಚ್ಛ್ರಾಯಾವಸ್ಥೆಯಲ್ಲಿ ಇರುವ ಪರ್ಯಂತವೂ ಜ್ಞಾನಿಗಳು ಮೊದಲು ಪದಾರ್ಥಗಳಲ್ಲಿ ನಿರೂಪಣೆ ಮಾಡಿ ಅವುಗಳಲ್ಲಿ ನಂಬಿಕೆ ಇಡಬೇಕು ಎನ್ನುವ ನಿಯಮದ ಆಧಾರದ ಮೇಲೆ ತರ್ಕಶಾಸ್ತ್ರವನ್ನು ಪ್ರಾರಂಭಿಸಿ ಬುದ್ಧೀ ತತ್ವದ ವಿವರಣೆ ಕಾಲದಲ್ಲಿ ಪ್ರಮಾಣಸ್ವರೂಪವನ್ನು ಹೇಳಿರುವರು ಕೇವಲ ಲೌಕಿಕರ ಅಂದರೆ ಪಾರಮಾರ್ಥಿಕ ದೃಷ್ಟಿ ಇಲ್ಲದವರಿಗೆ ಉಪಯುಕ್ತವಾಗಿರುವುದು ವೈಶೇಷಿಕ ಸೂತ್ರಗಳು ಕಂಡು ಬರುತ್ತದೆ. ಗೌತಮರ ನ್ಯಾಯಸೂತ್ರವು ಆಸ್ತಿಕರಿಗೆ ವಿಶೇಷ ವಿಶ್ವಾಸಕ್ಕಾಗಿ ಪ್ರಯೋಜನಕಾರಿಯಾಗಿದೆ. ಕಣಾದ ಮತ್ತು ಗೌತಮ ಇಬ್ಬರೂ ಆಸ್ತಿಕರೇ . ಅವರಿಬ್ಬರೂ ಸೇರಿದ ನಮ್ಮ ಸಂಸ್ಕೃತಿಯ ಎರಡು ತಕ್ಕಡಿಯ ತಟ್ಟೆಗಳು. ಸಂಸ್ಕೃತಿಗೆ ಏರುಪೇರಿಲ್ಲದೆ ಸಮವಾಗಿ ಟ್ಟಿರುವ ಗೌರವವ್ಯಕ್ತಿಗಳು ಕಣಾದರೂ ನಾಸ್ತಿಕರೆನ್ನುವುದು ತಪ್ಪು. ಅವರ ದೃಷ್ಟಿಯು ವೇದಾಂತಜ್ಞಾನಕ್ಕೆ ಅರ್ವಾಚೀನ ಸಂಗ್ರಹಣ ಮಾತ್ರವೆಂದು ಕಾಣುತ್ತದೆ. ಅದಕ್ಕಾಗಿಯೇ ಅವರು 10 ಅಧ್ಯಾಯವುಳ್ಳ ತಮ್ಮ ಸೂತ್ರ ಗ್ರಂಥದಲ್ಲಿ ಮೂರನೇ ಅಧ್ಯಾಯದಲ್ಲಿ . ಇಂದ್ರಿಯ. ವಿಷಯ. ಮನಸ್ಸು ಇವುಗಳೊಡನೆ ತನ್ನ 5 ಅಧ್ಯಾಯವುಳ್ಳ ಸೂತ್ರ ಗ್ರಂಥದಲ್ಲಿ ಜೀವನವನ್ನು ದೇಶ. ಇಂದ್ರಿಯ ಮತ್ತು ವಿಷಯಗಳೊಡನೆ ವಿಮರ್ಶಿಸುವುದಲ್ಲದೆ ನಾಲ್ಕನೇ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳಿರುವರು ಅಂದರೆ ಇವರಿಬ್ಬರ ದೃಷ್ಟಿಯೂ ಸ್ವತಃಸಿದ್ಧವಾದ ತತ್ವವನ್ನು ಪ್ರಮಾಣದಿದಂದ ಚೆನ್ನಾಗಿ ಅರಿಯುವುದೇ ಆಗಿದೆ.ಎಲ್ಲರೂ ಯೋಗಿಗಳಾಗಲೂ ಸಾಧ್ಯವಿಲ್ಲ. ಆದರೆ ಯೋಗದಿಂದ ಸಾಕ್ಷಾತ್ಕರಿಸಿಕೊಳ್ಳಲು ಆಗುವ ತತ್ವಗಳನ್ನು ಮೊದಲು ನಂಬಿ. ಆ ನಂಬಿಕೆಯು ದೃಢವಾಗುವುದಕ್ಕಾಗಿ ಪ್ರಮಾಣಗಳಿಂದ ಪರಿಷ್ಕರಿಸಿಕೊಂಡರೆ ಪಾರಮಾರ್ಥಿಕದಲ್ಲಿ ಪೂರ್ಣವಿಶ್ವಾಸವು ಉಳಿಯುವುದು ಎನ್ನುವುದೇ ಈ ಪ್ರಾಚೀನ ನ್ಯಾಯದ ಪರಮೋದ್ದೇಶವೆಂದು ತೋರುತ್ತದೆ. ಇದರಲ್ಲಿ ಶಬ್ದಾಡಂಬರವಿಲ್ಲ. ತತ್ವನಿರೂಪಣೆಯಿಲ್ಲ. ವೈಶದ್ಯವಿದೆ ಮತ್ತು ಸುಸ್ಪಷ್ಟತೆ ಇದೆ.

ಗಂಗೇಶನ ತತ್ವಚಿಂತಾಮಣಿಯಿಂದ ಪ್ರಾರಂಭವಾದ ನವೀನ ತರ್ಕದಲ್ಲಿ ಶಬ್ದಾಡಂಬರಕ್ಕೆ ಪ್ರಾಧಾನ್ಯತೆ ಇದೆ. ಈ ತತ್ವ ಚಿಂತಾಮಣಿಯ ಭಾಷೆಯೂ ಕೂಡ ಒಂದು ಹೊಸಮಾರ್ಗವನ್ನು ಕಲ್ಪಿಸಿಕೊಟ್ಟಿದೆ. ಇವನಿಂದಲೇ ತರ್ಕ ಶಾಸ್ತ್ರದಲ್ಲಿ ಪಾರಿಭಾಷಿಕ ಪದಗಳು ಜಾರಿಗೆ ತರಲ್ಪಟ್ಟವೆನ್ನಬಹುದು. ಈ ಪರಿಭಾಷಿಕೆಗಳ ಪ್ರಯೋಗದಿಂದ ನಿರ್ದಿಷ್ಟವಾದ . ದೋಷರಹಿತ ಮತ್ತು ವಿಶದ ಅಳನ್ನು (Defination) ಹೇಳಬಹುದು. ಈ ನವೀನ ನ್ಯಾಯದಲ್ಲಿ ಪ್ರಮಾಣಕ್ಕೆ ಪ್ರಥಮ ಸ್ಥಾನವಿದೆ.

ಇದರಿಂದ ಪದಾರ್ಥಗಳನ್ನು ನಿಷ್ಕರ್ಷಿಸಬಹುದು. ಅಂದರೆ ಪದಾರ್ಥಗಳು ಪ್ರಮೇಯಗಳು ಹೀಗೆ ಪ್ರಮಾಣ ಮತ್ತು ಪ್ರಮೇಯವೆನ್ನುವ 2 ವಿಶಾಲ ತಳಹದಿಯ ಮೇಲೆ ನವೀನ ನ್ಯಾಯವು ನಡೆಯುತ್ತಾರೆ.

7.ನ್ಯಾಯ ವೈಶೇಷಿಕ ಸೂತ್ರಗಳು-ಈ ನ್ಯಾಯ ಶಾಸ್ತ್ರದಲ್ಲಿರುವ ನಮಗೆ ಲಭ್ಯವಾಗಿರುವ ಪ್ರಪ್ರಥಮ ಗ್ರಂಥಗಳೆಂದರೆ ಗೌತಮರ ನ್ಯಾಯ ಸೂತ್ರ ಮತ್ತು ಕಣಾದ ವೈಶೇಷಿಕ ಸೂತ್ರ. ಗೌತಮರ ನ್ಯಾಯಸೂತ್ರಗಳು ಐದು ಅಧ್ಯಾಯಗಳಲ್ಲಿ ಅಡಕವಾಗಿವೆ. ಮೊದಲನೇ ಮತ್ತು ಎರಡನೇ ಅಧ್ಯಾಯಗಳಲ್ಲಿ ಪದಾರ್ಥಗಳು. ಸಂಶಯ. ಪ್ರಮಾಣಗಳು ನಿರೂಪಿಸಲ್ಪಟ್ಟಿವೆ. ಮೂರರಲ್ಲಿ ಜೀವ. ದೇಹ. ಇಂದ್ರಿಯ. ವಿಷಯಗಳು ಜ್ಞಾನ ಮತ್ತು ಮನಸ್ಸು, ನಾಲ್ಕರಲ್ಲಿ ಇಚ್ಛಾಸಕ್ತಿ, ದೋಷ (fault) ಪುನರ್ಜನ್ಮ. ಕರ್ಮಫಲ. ದುಃಖ ಮತ್ತು ಮೋಕ್ಷ;ಇದರಲ್ಲಿ ಅಸತ್ಯಪದಾರ್ಥಗಳು. ಜಾತಿ ನಿಗ್ರಹ ಸ್ಥಾನ ಇತ್ಯಾದಿಗಳು ಹೇಳಲ್ಪಟ್ಟಿವೆ. ಕಣಾದರ ವೈಶೇಷಿಕ ಸೂತ್ರ 10 ಅಧ್ಯಾಯಗಳಲ್ಲಿದೆ. ಪ್ರತಿ ಅಧ್ಯಾಯವಲ್ಲಿಯೂ ಎರಡು ಆಹ್ನೀಕಗಳಿವೆ.

| ಅಧ್ಯಾಯ | ಆಹ್ನೀಕ | ವಿಷಯ |
|---|---|---|
| 1 | 1 | ಮೊದಲಿನ ನಾಲ್ಕು ಸೂತ್ರಗಳು ಉಪಜೀವ್ಯಗಳು . ಸರ್ವಪದಾಪೂರ್ವಕವಾಗಿ ಅರ್ಥ ಮತ್ತು ಶಬ್ದಾಭಿಧೇಯಗಳ ಸಾಧರ್ಮ್ಯ ವೈಧರ್ಮ್ಯದೊನೆ ವ್ಯುತ್ಪಾದನ |
| 1 | 2 | ಅರ್ಥಾತಿರಿಕ್ತಗಳಾದ ಪದಾರ್ಥಗಳ ನಿರೂಪಣೆ. |
| 2 | 1 | ಭೂತಗಳ ಲಕ್ಷಣ |
| 2 | 2 | ಅವುಗಳ ಸಾಧಾರಣ ಗುಣ ;ಮತ್ತು ಪ್ರಸಂಗಾತ್ ಕಾಲ ಮತ್ತು ದಿಕ್ಕಿನ ಲಕ್ಷಣ |
| 3 | 1 | ಆತ್ಮ ಮತ್ತು ಸ್ಥಾಪನ. ಅದಕ್ಕೆ ಅಂಗವಾಗಿ ಹೇತ್ವಾಭ್ಯಾಸ ನಿರೂಪಣೆ ಮತ್ತು ಅನುಮಾನ ಪ್ರಮಾಣ ನಿರೂಪಣೆ. |
| 3 | 2 | ನಸ್ತತ್ವ ವಿವೇಚನೆ ಇತ್ಯಾದಿ |
| 4 | 1 | ಭೂತಗಳಲ್ಲಿ ನಿತ್ಯಾತ್ಯವಿವೇಕ: ಪರಮಾಣು ಸಾಧನ ವಿವರಣೆ |

| | | |
|---|---|---|
| 4 | 2 | ಕಾರ್ಯದ್ರವ್ಯಶರೀರ-ನಾನಾತ್ವ. ಅಯೋನಿಜ ಶರೀರ ನಿರೂಪಣೆ. |
| 5 | 1 | ಈ ಎರಡು ಅಧ್ಯಾಯಗಳೂ ಕರ್ಮನಿರೂಪಣಾಧ್ಯಾಯಗಳು. |
| 5 | 2 | ಮೋಕ್ಷಕ್ಕಾಗಿ ಮಾಡಬೇಕಾದ್ದು. ಲೌಕಿಕಕರ್ಮ |
| 6 | 1 | ವೈದಿಕ ಕರ್ಮ ನಿರೂಪಣೆ. ವೇದ ಪ್ರಮಾಣ್ಯ ಮತ್ತು |
| 6 | 2 | ಯಮೋದಿಯೋ ಗಾಂಗ ನಿರೂಪಣೆ ವರ್ಣಾಶ್ರಮಧರ್ಮ. |
| 7 | 1 | ಬಾಹ್ಯಗುಣ ನಿರೂಪಣ-ಅದು ಏಕದ್ರವ್ಯ ಸಾಕ್ಷೇಪವಾಗಿ |
| 7 | 2 | ಅನೇಕ ದ್ರವ್ಯನಿರೂಪ್ಯಗುಣ ನಿರೂಪಣೆ |
| 8 | 1 | ಪ್ರತ್ಯಕ್ಷ ನಿರೂಪಣೆ |
| 8 | 2 | ತತ್ಕಾರಣ ಭೂತ ವಿಷಯೇಂದ್ರೀಯ ನಿರೂಪಣೆ |
| 9 | 1 | ಅಭಾವ. ಲೌಕಿಕ-ಯೋಗಾದಿಜನ್ಯ ಅಲೌಕಿಕ ಪ್ರತ್ಯಕ್ಷ |
| 9 | 2 | ಪ್ರತ್ಯಕ್ಷ ಭಿನ್ನಲೈಂಗಿಕ. ಸ್ಮೃತಿ ಸ್ವಪ್ನಾದಿ ಜ್ಞಾನ ನಿರೂಪಣೆ |
| 10 | 1 | ಸುಖದುಃಖ ನಿರೂಪಣೆ. |
| 10 | 2 | ಶಾಸ್ತ್ರೋಪಸಂಹಾರ |

ಪ್ರೊ|| ಕೀತರು ಈ ನ್ಯಾಯ ಮತ್ತು ವೈಶೇಷಿಕ ಸೂತ್ರಗಳು ವ್ಯಾಖ್ಯಾನವಿಲ್ಲದೆ ಅರ್ಥವಾಗಿವುದಿಲ್ಲವೆಂದಿರುವನು. ಇದು ಈಗಿನ ಕಾಲಕ್ಕೆ ಸರಿಹೋದರೂ ಬರೆದಿದ್ದ ಕಾಲಕ್ಕೆ ಆಯಾ ಸಂಪ್ರಸಾಯಸ್ಥರು ಈ ಸಿದ್ಧಾಂತವನ್ನು ಜ್ಞಾಪಕದಲ್ಲಿಟ್ಟುಕೊಳ್ಳಲು ಈ ಸೂತ್ರ ಕ್ರಮವು ನಮ್ಮಲ್ಲಿ ಬಂದುದರಿಂದ-

ಅಲ್ಪಾಕ್ಷರಯ ಸಂದಿಗ್ಧಂ ಸಾರತಃ ಸರ್ವತೋಮುಖಂ
ಸೂತ್ರಂ ಸೂತ್ರವಿದೋವಿದುಃ

ಎನ್ನುವ ಸೂತ್ರ ಲಕ್ಷಣವು ಕೊಡಲ್ಪಟ್ಟಿದೆ. ಈ ಲಕ್ಷಣದಿಂದ ಪ್ರತಿ ಸಂಪ್ರದಾಯಕ್ಕೂ ಇರುವಂತೆ ಈ ನ್ಯಾಯ ವೈಶೇಷಿಕಕ್ಕೂ ಸೂತ್ರಕಾಲದ ಹಿಂದೆ ಸಂಪ್ರದಾಯವು ಚೆನ್ನಾಗಿ ಬೆಳೆದು ಬಂದಿತೆಂದೂ ಆಯಾ ಸಂಪ್ರದಾಯದಲ್ಲಿ ಬೆಳೆದವರಿಗೆ ಈ ಸೂತ್ರಗಳು ಸುಲಭವಾಗಿದ್ದುವು ಎಂದು ಅರಿಯಬೇಕು. ನ್ಯಾಯ ಸಂಪ್ರದಾಯವನ್ನು ಗೌತಮರೂ, ವೈಶೇಷಿಕ ಸಂಪ್ರದಾಯಸ್ಥರಿಗೆ ಸೂತ್ರ ರೂಪದಲ್ಲಿ ಕೊಟ್ಟಿರುವುದಲ್ಲದೆ, ಆಯಾ ಸಂಪ್ರದಾಯಕ್ಕೆ ಶಾಸ್ತ್ರವನ್ನು ಕೊಟ್ಟರು ಎಂದೂ, ಹಾಗೆಯೇ ಆಯಾ ಸಂಪ್ರದಾಯಗಳು ಶಿಲವಾಗುತ್ತಿರುವುದನ್ನು ಕಂಡು, ಅವು ಅಳಿಸಿ ಹೋಗದಿರಲು, ವ್ಯಾಖ್ಯಾನಗಳು ಬರೆಯಲ್ಪಟ್ಟವು ಎಂದು ತಿಳಿಯಬೇಕು.

ಸೂತ್ರಕಾರರ ಪರಿಚಯ-ನ್ಯಾಯಸೂತ್ರಕಾರರು ಗೌತಮರೆಂದೂ, ವೈಶೇಷಿಕ ಸೂತ್ರಕಾರರು ಕಣಾದರೆಂದೂ ಪ್ರಸಿದ್ಧಿ ಇದೆ. ಗೌತಮ ಎನ್ನುವುದು ಗೋತ್ರದ ಹೆಸರು. ಇವರ ರೂಢನಾಮ ಅಕ್ಷಪಾದ. ಹಾಗೆಯೇ ವೈಶೇಷಿಕ ಸೂತ್ರಕಾರರ ಗೋತ್ರದ ಹೆಸರು ಕಶ್ಯಪ ಮತ್ತು ರೂಢನಾಮ ಉಲೂಖಿ. ಇವರಿಗೆ ಕಣಾದರೆಂದು ಹೆಸರು ಬರಲು ಕಾರಣ ಇವರು ಪಾರಿವಾಳದಂತೆ ಗದ್ದೆಗಳಲ್ಲಿ ಕಣಗಳನ್ನು ಆರಿಸಿ ಅದರಿಂದ ಜೀವಿಸುತ್ತಿದ್ದರು ಎನ್ನುವ ಕಾರಣವನ್ನು ಶ್ರೀಧರನು ತನ್ನ ನ್ಯಾಯ ಕುಸುಮಾಂಜಲಿಯಲ್ಲಿ ಕೊಟ್ಟಿರುವನು. ಕಣಾದ ಎಂದರೆ ಕಾಗೆಯನ್ನು ತಿನ್ನುವ ಗೂಬೆ ಎಂದರೆ ಉಲೂಖಿ ಎಂದು ಮ್ಯಾಕ್ಸ್‌ಮುಲ್ಲರ್ ತನ್ನ Sacred Books of the East XLVXXXVVIIIರಲ್ಲಿ ಹೇಳಿರುವನು. ಹಿಂದೂ ಸಂಸ್ಕೃತಿಯಲ್ಲಿ ವಿರಕ್ತರಾದವರಿಗೆ ಎರಡು ವಿಧವಾದ ವೃತ್ತಿಯು ಕಲ್ಪಿತವಾಗಿದೆ. ಮನೆ ಮನೆಗೂ ತಿರುಗಿ ಅವರು ದಾನವಾಗಿ ಕೊಡುವುದರಲ್ಲಿ ಜೀವನ ಮಾಡುವುದು ಉಂಧವೃತ್ತಿ. ಇದಲ್ಲದೆ ಬಹಳ ವಿರಕ್ತರಾದವರು, ಗದ್ದೆಗಳ ಕುಯ್ಲುಕಾಲದಲ್ಲಿ ಅಲ್ಲಿ ಬಿದ್ದಿರುವ ಕಣಗಳನ್ನು ಸಂಗ್ರಹಿಸಿ ಜೀವನ ಮಾಡುವುದು ಸಿಲವೃತ್ತಿ. ಕಣಾದರು ಸಿಲವೃತ್ತಿಯಲ್ಲಿದ್ದು ತನ್ನ ಜೀವನವನ್ನು ಕಳೆದರೆಂದು ಊಹಿಸಬೇಕು. ವಿರಕ್ತರಾದ ಅವರಿಂದ ರಚಿತವಾದ ವೈಶೇಷಿಕ ಸೂತ್ರವು ನಾಸ್ತಿಕ ಪಾದವನ್ನು ಸೂಸುತ್ತದೆ ಎನ್ನುವುದು ತಪ್ಪಾಗುತ್ತದೆ. ಗೌತಮರ ರೂಢನಾಮವೆಂದು ಹೇಳಲಾದ ಅಕ್ಷಪಾದ ಎನ್ನುವುದಕ್ಕೆ ತನ್ನ ಕಾಲಿನ ಮೇಲೆಯೇ ಯಾವಾಗಲೂ ದೃಷ್ಟಿ ಇಟ್ಟವರು ಎನ್ನುವ ಅರ್ಥ ಮಾಡಿ, ಅವರೂ ವಿರಕ್ತರು ಲೋಕದಲ್ಲಿ ಬಾಹ್ಯದೃಷ್ಟಿಯಿಂದ ವಿಷಯ ಸುಖಾನುಭವಷ್ಟೇ ಬರುವುದೆಂದು ಅವರು ಯಾವಾಗಲೂ ತನ್ನ ಕಾಲನ್ನೇ ನೋಡುತ್ತಿದ್ದರು ಎಂದು ಸಂಪ್ರದಾಯಸ್ಥರು ಹೇಳುತ್ತಿರುವರು.

ವಾಯುಪುರಾಣದಲ್ಲಿ (ಪೂರ್ವ ಖಂಡ 23) ಅಕ್ಷಪಾದ, ಕಣಾದ , ವತ್ಸ ಮತ್ತು ಉಲೂಕ ಈ ನಾಲ್ವರೂ ಅವತಾರರಾದ ಸೋಮಶರ್ಮರ ಮಕ್ಕಳೆಂದು ಹೇಳಿದೆ. ಈ ಮಾತು ಸತ್ಯವೆಂದಾದರೆ ನ್ಯಾಯ ಮತ್ತು ವೈಶೇಷಿಕ ಸೂತ್ರಕಾರರು ಅಣ್ಣತಮ್ಮಂದಿರೆಂದೂ, ಉಲೂಖಿರು, ಬೇರೆ ಯಾರೊಬ್ಬರು ಎಂದು ಹೇಳಬೇಕಾಗುತ್ತದೆ. ಅತಾಧರ್ಮಶಾಸ್ತ್ರದ ಗೌತಮರು ನ್ಯಾಯ

ಸೂತ್ರಕಾರರಾತ ಗೌತಮರೂ ಬೇರೆ ಬೇರೆ ಎಂದು ಹೇಳು ವರೂ ಉಂಟು. (Pro. A.B. Keith)

· ಇಷ್ಟಲ್ಲದೆ ಈ ಇಬ್ಬರು ಈ ಗ್ರಂಥಕರ್ತೃಗಳ ವಿಷಯದಲ್ಲಿ ಮತ್ತಾವುದೂ ಚೆನ್ನಾಗಿ ತಿಳಿದಿಲ್ಲ.

9. ಸೂತ್ರ ಗ್ರಂಥಗಳೆರಡರ ಪರಸ್ಪರ ಹೊಂದಾಣಿಕೆ ಮತ್ತು ಪೌರ್ವಾಪರ್ಯವಿಮರ್ಶೆ ಪುರಾಣದ ಕಥೆಯಲ್ಲಿ ಹೇಳಿರುವಂತೆ ಗೌತಮರು ಕಣಾದರೂ ಸಹೋದರರಾದರೆ ಅವರಲ್ಲಿ ಭಿನ್ನಾಭಿಪ್ರಾಯವಿದ್ದರೂ ಒಂದೇ ಸಂಪ್ರದಾಯಕ್ಕೆ ಸೇರಿದವರು ಎಂದಾಗುತ್ತತೆ. ಎರಡು ಸೂತ್ರ ಗ್ರಂಥಗಳನ್ನು ವಿಮರ್ಶಿಸಿದರೆ ಈ ಅಭಿಪ್ರಾಯಕ್ಕೆ ಮಾನ್ಯತೆ ಸಿಗುವಂತಿದೆ 1.ವೈಶೇಷಿಕದಲ್ಲಿ ಹೇತ್ವಾ ಭಾಸದ (Fallacies) ವಿವರಣೆಯು ನ್ಯಾಯಾಸೂತ್ರ ) ದಲ್ಲಿದ:ವಂತಿಲ್ಲ. 2. ಅನ್ಯೆತಿಕಾಲವನ್ನು ವಿವರಣೆ ಇಲ್ಲದೆ ಕಣಾದರು ಹೇಳಿರುವರು 3. ಆತ್ಮಾಸ್ತಿತ್ವಕ್ಕೆ ಗೌತಮರು ಮಾನಸ ಪ್ರತಸ್ಷನ್ನು ಹೇಳಿದರೆ ಕಣಾದರು. ಪ್ರಾಣ. ಉಚ್ಛ್ವಾಸ. ವಿಶ್ವಾಸ. ಅಕ್ಷಿಸ್ಪಂದ. ಮನೋವ್ಯಾಪಾರ. ಇಂದ್ರಿಯ ವ್ಯಾಪಾರ ಮೊದಲಾದ ಬಾಹ್ಯಹೇತುಗಳನ್ನು ಕೊಟ್ಟಿರುವರು. ೪. ಗೌತಮರು ಶಬ್ದನಿತ್ಯತ್ವ ಆತ್ಮಸ್ವರೂಪ. ಅನುಮಾನ ಮತ್ತು ಹೇತ್ವಭಾಸ - ಇವುಗಳ ವಿಷಯದಲ್ಲಿ ವಿಸ್ತಾರ ಕೊಟ್ಟವರು. ಕಣಾದರು ಅವುಗಳನ್ನು ಸಾಮಾನ್ಯವಾಗಿ ನಮೂದಿಸಿರುವರು. ೫. ಈಶ್ವರ ಅಸ್ತಿತ್ವವನ್ನು ಗೌತಮರು ಇದ್ದುದರಲ್ಲಿ ವಿಶದವಾಗಿಯೇ ಹೇಳಿರುವರು. ಈ ಕಾರಣಗಳಿಂದ ಈ ಎರಡು ಸೀತ್ರ ಗ್ರಂಥಗಳು ಒಂದಕ್ಕೊಂದು ಹೊಂದಿಕೊಂಡಿವೆ ಎನ್ನುವುದನ್ನೂ ನ್ಯಾಯಸೂತ್ರವು ಪ್ರಾಚೀನವೆನ್ನುವುದನ್ನು ಊಹಿಸಬಹುದು. ಆದರೆ ವೈಶೇಷಿಕಸೂತ್ರವೇ ನ್ಯಾಯಸೂತ್ರಕ್ಕಿಂತ ಪ್ರಾಚೀನವೆನ್ನುವುದನ್ನು ಆಧುನಿಕರು ಸಮರ್ಥಿಸಲು ಪ್ರಯತ್ನಿಸಿರುವರು. 10 ನ್ಯಾಯವೈಶೇಷಿಕ ಸೂತ್ರಗಳ ಕಾಲ- ಈ ಎರಡು ಸೂತ್ರ ಗ್ರಂಥಗಳ ವಿಷಯದಲ್ಲಿ ನಾನಾ ಅಭಿಪ್ರಾಯಗಳಿವೆ. ಆದರೆ ಜಾಕೋಬಿ. ರಾಂಡೆಲ್ ಮತ್ತು ಕುಪ್ಪು ಸ್ವಾಮಿ ಶಾಸ್ತ್ರಿಗಳು ಇದರಲ್ಲಿ ಹೆಚ್ಚು ಪರಿಶ್ರಮ ಪಟ್ಟಿರುವುದರಿಂದ ಆ ಮೂವರ ಅಭಿಪ್ರಾಯಗಳನ್ನು ವಿಮರ್ಶಿಸಿ ಒಂದು ಇತ್ಯರ್ಥಕ್ಕೆ ಬಂದರೆ ಸಾಕು. ಜಾಕೊಬಿಯವರ ಮತ್ತು ಅದರ ಪೂರ್ಣತೆ ಇವರು 1911ರ Journal of the Americn Oriental societies xxxiಎನ್ನುವ ಸಂಚಿಕೆಯಲ್ಲಿ ಸೂತ್ರಗ್ರಂಥಗಳ ಕಾಲ ನಿರ್ಣಯ ಮಾಡುವಾಗ ಗ್ರಂಥಾತರ್ಗತ ಪ್ರಮಾಣಗಳ ಆಧಾರದ ಮೇಲೆ (Internal Evidences) ಈ ದರ್ಶನ ಸೂತ್ರಗಳಲ್ಲಿ ಕೆಲವೆಡೆ ಬೌದ್ಧ ಸಿದ್ಧಾಂತವು ಖಂಡಿಸಲ್ಪಟ್ಟಿದೆ ಎನ್ನುವ ಕಾರಣವನ್ನು ತೋರಿ

a. ನ್ಯಾಯ ಮತ್ತು ಬ್ರಹ್ಮ ಸೂತ್ರಗಳು ಕ್ರಿ.ಶ. 200 - 500ರ ಅಂತರದಲ್ಲಿ ಬರೆಯಲ್ಪಟ್ಟಿರಬೇಕೆಂದೂ

b ವೈಶೇಷಿಕ ಮತ್ತು ಮೀಮಾಂಸ ಸೂತ್ರಗಳು ಈ ಕಾಲಕ್ಕೆ ಹಿಂದಿನವನೆಂದೂ

c ಯೋಗ ಸೂತ್ರವು ಕ್ರಿ.ಶ 450 ಕಾಲದೆಂದೂ

d. ಸಾಂಖ್ಯ ಸೂತ್ರವು ಬಹಳ ಅರ್ವಾಚೀನ ಎಂದರೆ ಕ್ರಿ.ಶ. 14ನೇ ಶತಮಾನದ್ದೆಂದೂ ಹೇಳಿರುವರು

ಸಾಂಖ್ಯಸೂತ್ರಗಳ ಕಾಲವು ಕ್ರಿ.ಶ 14ನೇ ಶತಮಾನವೆನ್ನುವುದರಲ್ಲಿ ವಾದವೇ ಇಲ್ಲ. ಆದರೂ ಅದರ ಮೂಲ ತತ್ತ್ವಗಳನ್ನು ಪ್ರತಿಪಾದಿಸುವ ತತ್ತ್ವ ಸಮಾಸ ಎನ್ನುವ ಗ್ರಂಥವು, ಈಶ್ವರ ಕೃಷ್ಣನ ಕಾಲಕ್ಕೂ, ಕೈಸ್ತನ ಕಾಲಕ್ಕೂ, ಕ್ರಿ.ಶ. 7ನೇ ಶತಮಾನದ ದಹಿಂದಿನದಾದ ಭಗವದ್ದಜ್ಜುಕ ಎನ್ನುವ ಪ್ರಹಸನ ಕಾವ್ಯಕ್ಕೂ (farce) ಹಿಂದಿನದು ಎಂದು Journal of oriental reserach madras vol II F 145-147ರಲ್ಲಿ ನಿಶ್ಚಯಿಸಲ್ಪಟ್ಟಿದೆ.

ಬಾದರಾಯಣರ ಬ್ರಹ್ಮ ಸೂತ್ರದ ವಿಷಯದಲ್ಲಿ ಜೋಕೋಬಿಯವರ ಕಾಲ ನಿರ್ಣಯವನ್ನು ಒಪ್ಪುವುದಕ್ಕಾಗುವುದಿಲ್ಲ. ಪಾಣಿನಿಯ IV. 3. 110 ಸೂತ್ರದಲ್ಲಿ (ಪಾರಾಶರ್ಯ ಶಿಲಾಲಿಭ್ಯಾಂ ಭಿಕ್ಷುನಟ ಸೂತ್ರಯೋಃ) ನಮೂದಿಸಲ್ಪಟ್ಟಿರುವ ಪರಾಶರ ಮಕ್ಕಳಾದ ಬಾದರಾಯಣರೇಭಗವದ್ಗೀತಾ X.11.4ಶ್ಲೋಕದಲ್ಲಿ ಹೇಳಿರುವ ಬ್ರಹ್ಮ ಸೂತ್ರಕ್ಕೆ ಕರ್ತೃ ಎಂದಾದರೆ ಪಾಣಿನಿ ಮತ್ತು ಭಗವದ್ಗೀತೆಯ ಕಾಲಕ್ಕೆ ಹಿಂದಿನವರು ಇವರು ಎಂದು ಹೇಳಬೇಕಾಗುತ್ತದೆ. ವ್ಯಾಕರಣ ಮಹಾಭಾಷ್ಯ ಮತ್ತು ಯೋಗ ಸೂತ್ರ ಇವೆರಡನ್ನೂ ಬರೆದವರು ಒಬ್ಬರೇ ಎನ್ನುವುದಕ್ಕೆ ಹೆಚ್ಚು ಪ್ರಮಾಣವಿರುವುದರಿಂದ, ಯೋಗ ಸೂತ್ರದ ಕಾಲವು ಕ್ರಿ.ಪೂ. 2 ನೇ ಶತಮಾನವಾಗುವುದು.

ನ್ಯಾಯವೈಶೇಷಿಕ ಸೂತ್ರಗಳ ವಿಷಯದಲ್ಲಿ ಜಾಕೋಬಿಯವರ ಊಹೆಯು ಗ್ರಾಹ್ಯವಾಗಿ ತೋರುವುದಿಲ್ಲ. ಇವರ ಅಭಿಪ್ರಾಯದಲ್ಲಿ ನ್ಯಾಯ ಸೂತ್ರವು ಕ್ರಿ.ಶ. 3ನೇ ಶತಮಾನದ ನಾಗಾರ್ಜುನನ ಶೂನ್ಯವಾದವನ್ನು ಖಂಡಿಸಿಯೂ, ಕ್ರಿ.ಶ 4ನೇ ಶತಮಾನದ ದಅಸಂಗ ಮತ್ತು ವಸುಬಂಧವಿನ ವಿಜ್ಞಾನವಾದವನ್ನು ಖಂಡಿಸದೆಯೂ ಇದೆ. ನ್ಯಾಯಸೂತ್ರ IV. 2. 26ರಲ್ಲಿ ವಾತ್ಸ್ಯಾಯನರು ಮತ್ತು ವಾಚಸ್ಪತಿ ಮಿಶ್ರರು, ವಿಜ್ಞಾನ ವಾದವು ಖಂಡಿಸಲ್ಪಟ್ಟಿದೆ ಎಂದಿರುವನು. ಶೂನ್ಯವಾದವು ನಾಗಾರ್ಜುನನಿಂದಲೂ, ವಿಜ್ಞಾನವಾದವೂ ಅಸಂಗ ಮತ್ತು ವಸುಬಂಧುವಿನಿಂದಲೂ ಮೊದಲಾಯಿತೆನ್ನುವುದು ತಪ್ಪು. ಹಾಗೆ ಜಾಕೊಬಿಯವರ ವಾದವನ್ನು ನ್ಯಾಯಸೂತ್ರದ ವಿಷಯದಲ್ಲಿ ಒಪ್ಪುವುದಾದರೂ ವೈಶೇಷಿಕ ಸೂತ್ರ ವಿಷಯದಲ್ಲಿ ಅದನ್ನು ಒಪ್ಪುವುದಕ್ಕಾಗುವುದಿಲ್ಲ.

ರಾಂಡಲ ಅಭಿಪ್ರಾಯ -ಈಗ ಸಾಮಾನ್ಯವಾಗಿ ಎಲ್ಲಾ ಭಾರತ ಸಂಸ್ಕೃತಿ ಪ್ರವೀಣರು (Indologists) ಕೌಟಿಲ್ಯ ಅರ್ಥಶಾಸ್ತ್ರದ ಕಾಲ ಕ್ರಿ.ಪೂ. 304 ಎಂದು ನಿಶ್ಚಿತವಾಗಿದೆ. ಇಲ್ಲಿ ಸಂಖ್ಯಂ ಯೋಗೋ ಲೋಕಾಯಿಕಂ ಚೇತ್ಯಾನೀಕ್ಷಕೀ ಎನ್ನುವ ವಾಕ್ಯವನ್ನು ಆಧಾರವಾಗಿ ತೆಗೆದುಕೊಂಡರೆ ಇದರಲ್ಲಿ ನ್ಯಾಯ ಮತ್ತು ವೈಶೇಷಿಕ ಸೂತ್ರಗಳು ಹೇಳಲ್ಪಟ್ಟಿಲ್ಲ. ನ್ಯಾಯವೈಶೇಷಿಕ ಸೂತ್ರಗಳನ್ನೇ ತೆಗೆದುಕೊಂಡರೆ ಅನೇಕ ಕಡೆ ಸಮತ್ವವು (parallelism) ಕಂಡು ಬರುತ್ತದೆ. ಈ ಸಮತ್ವದಲ್ಲಿ ನ್ಯಾಯ ಸೂತ್ರವೇ ವೈಶೇಷಿಕ ಸೂತ್ರಕ್ಕೆ ಋಣಿಯಾಗಿರುವುದು ಕಾಣುತ್ತದೆ. Visheskika Philosophy Introduction R 16 note 1 and Randles Indian Logic in the early Schools Introduction p 7 note 1) ಕ್ರಿ. ಶ 18 ಕ್ಕೆ ಸೇರಿರುವ ಚೈರ 6ನೇ ಶಾಖೆಗೆ (Schism) ಹಿಂದೆಯೇ ವೈಶೇಷಿಕ ಸೂತ್ರವಿದ್ದುದಕ್ಕೆ

ಪ್ರಮಾಣ ಎನ್ನುವ ಬೌದ್ಧ ಸಿದ್ಧಾಂತಗಳವಾದವು ಖಂಡಿಸಲ್ಪಟ್ಟಿರುವಂತಿದೆ. ಅಂದರೆ ಇವರ ಕಾಲವಾದ ಮೇಲೆ ನ್ಯಾಯ ಸೂತ್ರವು ಬರೆಯಲ್ಪಟ್ಟಿರಬೇಕು. (Vis vaisheshirka Philosphy Intro P84-86) ಆದುದರಿಂದ ರಾಂಡಲ್ ಅವರು ವೈಶೇಷಿಕ ಮತ್ತು ನ್ಯಾಯ ಸೂತ್ರಗಳು ಕ್ರಿ. ಪೂ. 200 ಮತ್ತು ಕ್ರಿ. ಶ 300 ಇದರ ಮಧ್ಯವರ್ತಿಕಾಲದಲ್ಲಿ ರಚಿಸಲ್ಪಟ್ಟಿರಬೇಕೆಂದೂ. ಆದರಲ್ಲೂ ವೈಶೇಷಿಕ ಸೂತ್ರವು ಪೂರ್ವಭಾವಿ ಎಂದೂ ಅಭಿಪ್ರಾಯಪಟ್ಟಿರುವರು. ಇದೂ ಸರಿಯಲ್ಲ.

ಕುಪ್ಪುಸ್ವಾಮಿ ಶಾಸ್ತ್ರಿಯ ಅಭಿಪ್ರಾಯ -ರಾಂಡಲ್ ಅವರ ವಾದವು ಸಮಂಜಸವಾಗಿ ಕಂಡು ಬಂದರೂ ಅದು ಮತ್ತು ವಿಮರ್ಶಿಸಲ್ಪಡಲು ಯೋಗ್ಯವಾಗಿದೆ. ವೈಶೇಷಿಕ ಸೂತ್ರಗಳು ನ್ಯಾಯ ಸೂತ್ರಗಳಿಗಿಂತ ಪ್ರಾಚೀನವೆನ್ನುವ ವಾದವು ಕೊನೆ ಮುಟ್ಟಿದೆ. ಆದರೆ ವೈಶೇಷಿಕ ಸೂತ್ರವು ಕೌಟಿಲ್ಯ ಅರ್ಥಶಾಸ್ತ್ರಕ್ಕೆ ಅರ್ವಾಚೀನ ಕಾಲಕ್ಕೆ ಸೇರಿದೆ ಎನ್ನುವುದನ್ನು ಒಪ್ಪಲಾಗುವುದಿಲ್ಲ. ಸಾಂಖ್ಯಂ ಯೋಗೋ ಲೋಕಾಯಿತ ವಿತ್ಯಾನೀಕ್ಷಿಕೀ ಎನ್ನುವ ಅರ್ಥಶಾಸ್ತ್ರ ವಾಕ್ಯದಲ್ಲಿ ಯೋಗಾ ಶಬ್ದಕ್ಕೆ ವೈಶೇಷಿಕ ಎಂದು ವ್ಯಾತ್ಸ್ಯಾಯನರು ನ್ಯಾಯಸೂತ್ರ 1.1.29ರ ಭಾಷ್ಯದಲ್ಲಿ ಹೇಳಿರುವರು. ವಾಚಸ್ಪತಿ ಮಿಶ್ರರ ತಾತ್ಪರ್ಯ ಟೀಕಾ ಮತ್ತು ಭಾಷ್ಯದ ವ್ಯಾಖ್ಯಾನವಾದ ಭಾಷ್ಯ ಚಂದ್ರ ಇವೆರಡರ ಪ್ರಕಾರಯೋಗ ಪದವು ವೈಶೇಷಿಕವನ್ನು ಒಳಗೊಂಡ ನ್ಯಾಯ ಎನ್ನುವ ಅರ್ಥವನ್ನು ಕೊಡುತ್ತದೆ. (ಯೋಗೋಯುಕ್ತಿಃ ಪ್ರಧಾನತ್ರಯಾವಿದ್ಯತೇ ಯೇಷಾಂ-ಭಾಷ್ಯ ಚಂದ್ರ) ಅಲ್ಲದೆ ಕೌಟಿಲ್ಯ ಅರ್ಥಶಾಸ್ತ್ರದ 2ನೇ ಅಧ್ಯಾಯ ವಿದ್ಯಾಸ ಮುದ್ದೇಶ ಪ್ರಕರಣದಲ್ಲಿ 4 ವಿದ್ಯೆಗಳು ಹೇಳಲ್ಪಟ್ಟಿವೆ. 1. ಅನ್ವೀಕ್ಷಿಕಿ (Logic and Pholosophy) 2. ತ್ರಯೀ (Vedic Religion and Philosophy of dharma and adharama) 3. ವಾರ್ತಾ (The economic science and philosophy of weather) 4. ದಂಡನೀತಿ (The Science and philosophy of policy)ಈ ವಿದ್ಯೆಗಳನ್ನು ವಿಮರ್ಶಿಸುತ್ತಾ. ಮಾನವರ ಅಂದರೆ ಮನುಧರ್ಮಶಾಸ್ತ್ರಾನುಯಾಯಿಗಳ ಅಭಿಪ್ರಾಯದಲ್ಲಿ ಅನ್ವೀಕ್ಷಿಕಿಯು ತ್ರಯಿಯಲ್ಲಿ ಸೇರುವದೆಂದೂ ಚಾರ್ವಾಕರ ಅಭಿಪ್ರಾಯದಲ್ಲಿ ವಾರ್ತಾ ಮತ್ತು ದಂಡನೀತಿ ಇವೆರಡೇ ಗ್ರಾಹ್ಯ ಮತ್ತು ತ್ರಯೀಯು ಒಂದು ಆಡಂಬರವೆಂದೂ. ಅಸುರರ ಗುರು ಉಶನರ ಅಭಿಪ್ರಾಯದಲ್ಲಿ ದಂಡನೀತಿ ಒಂದೇ ಸಾಕೆಂದೂ. ಹೇಳಿ. ಕಡೆಯಲ್ಲಿ ಎರಡು ಅಭಿಪ್ರಾಯಗಳೂ ತನ್ನದೆಂದು ಕೊಟ್ಟಿರುವುದನ್ನು ಗಮನಿಸಬೇಕು.

ಸಾಂಖ್ಯಾಯೋಗೋ ಲೋಕಾಯಿತಂ ಚೇತ್ಯಾ
ನ್ವಿಕ್ಷಿಕೀ. ಧರ್ಮಾಧರ್ಮೌ ತ್ರಯ್ಯಾಂ
ಅರ್ಥಾನರ್ಥೌ ವಾರ್ತಾಯಾಂ. ಬಲಾಬಲೇಚೈತಾ

ಸಾಂಹೇತುಭರನ್ವೀಕ್ಷಮಾಣ ಅನ್ವೀಕ್ಷಕೀ ಲೋಕ ಸ್ಯೋಪಕರೋತಿ. ವ್ಯಸನೇ ಅಭ್ಯುದಯೋಚ ಬುದ್ಧಿ ಮವಸ್ಥಾಪಯತೀ. ಪ್ರಜ್ಞ. ವಾಕ್ಯಕ್ರಿಯಾ ವೈಶಾದರ್ಯ ಚ ಕರರೋತಿ

ಪ್ರದೀಪಃ ಸ್ವರ್ಪ ವಿದ್ಯಾನಾಂ ಉಪಾಯಸ್ಸರ್ಪ ಕರ್ಮಾಣಾಂ
ಆಶ್ರಯಸ್ಸರ್ಪಧರ್ಮಾಣಾಂ ಶಶ್ವದಾನ್ವೀಕ್ಷಿಕೀ ಮತಾ

ಇಲ್ಲಿ ಹೇತು ಭನ್ವೀಕ್ಷಮಣಾ ಅನ್ವೀಕ್ಷಕೀ ಎನ್ನುವ ವಾಕ್ಯವನ್ನು ಗಮನಿಸಿದರೆ (Logic which mesigates by means of rationalistic methods)ಅನ್ವೀಕ್ಷಿಕಿಯಲ್ಲಿ ವೈಶೇಷಿಕವು ಸೇರಿದೆ. ನ್ಯಾಯ ಭಾಷ್ಯದ ರೀತಿಯಲ್ಲಿ ಯೋಗ ಎಂದರೆ ವೈಶೇಷಿಕ ಪಾತಂಜಲಿ ಯೋಗವೇ ಯೋಗ ಶಬ್ದಾರ್ಥವೆಂದರೂ. ಲೋಕಾಯಿತ" ವೆನ್ನುವ ಪದವು ವೈಶೇಷಿಕ ಎಂದೇ ಅರ್ಥಬರುತ್ತದೆ.

ಹಿಂದೆ ಹೇಳಿರುವ ಕೌಟಿಲ್ಯ ಅರ್ಥಶಾಸ್ತ್ರದ ವಾಕ್ಯವನ್ನು I, 1,1ನ್ಯಾಯ ಸೂತ್ರದ ಮೇಲೆ ವಾತ್ಸ್ಯಾಯನ ಭಾಷ್ಯದ ಮಾತನ್ನು ತೋಲನ ಮಾಡಿದರೆ ನ್ಯಾಯ ಶಾಸ್ತ್ರ (systems of Logic) ಎನ್ನುವ ಅರ್ಥದಲ್ಲಿ ಅನ್ವೀಕ್ಷಿಕಿಯು ಕೌಟಿಲ್ಯರ ಗ್ರಂಥದಲ್ಲಿರುವಂತೆ ತಿಳಿಯಲಾಗುವುದಿಲ್ಲ. ಅಂದರೆ ಅವನ ಕಾಲಕ್ಕೆ ನ್ಯಾಯಶಾಸ್ತ್ರವು ಸೂತ್ರ ರೂಪದಲ್ಲಿ ಇದ್ದಂತೆ ಕಾಣುವುದಿಲ್ಲ. ಅಲ್ಲದೆ ನಾಗಾರ್ಜುನನ ವಿಗ್ರಹ ವ್ಯಾವರ್ತನೀ ಎನ್ನುವ ಭಾಗವನ್ನು ನ್ಯಾಯ ಸೂತ್ರ II, 2, 17, 19 ಸೂತ್ರಗಳೊಡನೆ ಹೋಲಿಸಿದರೆ ನಾಗಾರ್ಜುನನೇ ನ್ಯಾಯಸೂತ್ರಕ್ಕೆ ಋಣಿಯಾಗಿರುವಂತಿದೆ. ಅಂದರೆ ನಾಗಾರ್ಜುನನಿಗೆ ಹಿಂದೆಯೇ ನ್ಯಾಯ ಸೂತ್ರವು ಬರೆಯಲ್ಪಟ್ಟಿರಬೇಕು. ಅಂದರೆ ಕ್ರಿ. ಶ. 3ನೇ ಶತಮಾನಕ್ಕೆ ಹಿಂದೆಯೇ ಅವರು ಇದ್ದಿರಬೇಕು. ಇದಕ್ಕೂ ಹಿಂದೆ ಪಾಣಿನಿ III, 2, 123 ಸೂತ್ರಕ್ಕೆ ಪತಂಜಲಿ ಭಾಷ್ಯದಲ್ಲಿ " ಅಪರ ಆಹ -ನಾಸ್ತಿವರ್ತಮಾನ ಕಾಲಃ ಇತಿ ಎಂದೂ ಅಪರ ಆಹ ಅಸ್ತಿ ವರ್ತಮಾನಃ ಕಾಲಃ ಎಂದೂ ಬರೆದಿರುವುದನ್ನು ನ್ಯಾಯ ಸೂತ್ರದ III, 1, 40, 41 ರೊಡನೆ ಹೋಲಿಸಿದರೆ ಪತಂಜಲಿಗಳೇ ನ್ಯಾಯ ಸೂತ್ರವನ್ನು ಅನುಕರಿಸಿರುವರೆಂದು ಚೆನ್ನಾಗಿ ಊಹಿಸಬಹುದು. ಅಂದರೆ ಅವರಿಗೆ ಹಿಂದೆಯೇ -ಅರ್ಥಾತ್ ಕ್ರಿ. ಶ. 2ನೇ. ಶತಮಾನಕ್ಕೆ ಹಿಂದೆಯೇ ನ್ಯಾಯಸೂತ್ರವು ಬರೆಯಲ್ಪಟ್ಟಿರಬೇಕು.

ಇವೆಲ್ಲವನ್ನೂ ಕ್ರೋಢಿಕರಿಸಿದರೆ ವೈಶೇಷಿಕ ಸೂತ್ರಗಳೂ ಮತ್ತು ನ್ಯಾಯ ಸೂತ್ರಗಳೂ ಕ್ರಿ. ಪೂ. 4ನೇ ಶತಮಾನದ ಮಧ್ಯಭಾಗದಿಂದ ಕ್ರಿ. ಪೂ. 2 ನೇ ಶತಮಾನದದ ಕೊನೆಯ ಹೊತ್ತಿನಲ್ಲಿ ಬರೆಯಲ್ಪಟ್ಟಿರಬೇಕೆಂದು ಶಂಕೆ ಇಲ್ಲದೇ ಹೇಳಬಹುದು. ಸದ್ಯಕ್ಕೆ ಈ ಕುಪ್ಪುಸ್ವಾಮಿಶಾಸ್ತ್ರಿಯ ಮತಕ್ಕೆ ಮಾನ್ಯತೆ ಕೊಡಬಹುದು.

11. ನ್ಯಾಯ ವೈಶೇಷಿಕ ಸೂತ್ರಗಳ ಭೇದಾ ಭೇದದೃಷ್ಟಿ -ಈ ಎರಡು ಸೂತ್ರಗಳ ಹಿನ್ನಲೆಯಲ್ಲಿ ಇವುಗಳಿಗೆ ವೈದಿಕ ಸಂಪ್ರದಾಯವು ಜೀವನಾಳವಾಗಿರುವುದರಿಂದ ಇವೆರಡರ ಧ್ಯೇಯವೂ ಅಪರ ವರ್ಗವೇ ಆಗಿದೆ ನ್ಯಾಯ ಮಾರ್ಗವು ಶಾಸ್ತ್ರಾನು ಗೃಹೀತಿ ತರ್ಕವಾದರೆ ವೈಶೇಷಿಕವು ಪ್ರತ್ಯಾಕ್ಷಾನು ಗೃಹೀತ ತರ್ಕವನ್ನು ಆಶ್ರಯಿಸಿ ಲೌಕಿಕ ವ್ಯವಹಾರಗಳಲ್ಲಿಯೂ ಪ್ರಯೋಜನಕಾರಿಯಾಗಿ ಪರಿಣಮಿಸಿತು. ಕ್ರಿ. ಶ. 549-623ರಲ್ಲಿದ್ದ ಚಿಬ್ಬಾನ್ (Chiban), 632-682ರಲ್ಲಿದ್ದ ಕ್ವೈಯಿಚಿ (kweichi)ಇವರು ಹೇಳಿರುವ ಚೈನಾಬೌದ್ಧ ಸಂಪ್ರದಾಯದ ರೀತಿಯಲ್ಲಿ. ಕಣಾದರ ವೈಶೇಷಿಕಕ್ಕೆ ಆ ಹೆಸರು ಬರಲು ಆದರ್ಶನವು ಮಿಕ್ಕ

ದರ್ಶನಗಳಿಗಿಂತಲೂ. ಅದರಲ್ಲೂ ಸಾಂಖ್ಯಕ್ಕಿಂತಲೂ ಶ್ರೇಷ್ಠ ಮತ್ತು ಭಿನ್ನವಾಗಿರುವುದೇ ಕಾರಣವೆಂದೂ ಹೇಳಲಾಗಿದೆ. ಹಿಂದೂ ಸಂಪ್ರದಾಯದ ರೀತಿಯಲ್ಲಿ ಪದಾರ್ಥ ವಿಮರ್ಶೆಯಲ್ಲಿ ವಿಶೇಷವು ಬೇರೆ ಪದಾರ್ಥವಾಗಿ ವಿವೇಚಲ್ಪಟ್ಟಿರುವುದರಿಂದ. ಈ ಸಂಪ್ರದಾಯಕ್ಕೆ ವೈಶೇಷಿಕ ಎನ್ನುವ ಹೆಸರು ರೂಢವಾಯಿತು. I, I,4ರಿಂದ ಸರಿಯಾಗಿ ಪ್ರಾರಂಭವಾಗಿರುವ ಕಣಾದ ಸೂತ್ರಗಳಲ್ಲಿ ಯಾವುದೆಂದು ಪದಾರ್ಥಕ್ಕೂ (category)ಮಹತ್ವವನ್ನೂ ಕೊಡದೆ. ಸಾಮಾನ್ಯದಿಂದ ವಿಶೇಷ ಅಂದರೆ ಒಂದನ್ನು ಮಿಕ್ಕವುಗಳಿಂದ ವ್ಯಾವೃತ್ತಿ ಮಾಡಿಕೊಂಡು ತೋರಿಸುವುದು ಕಂಡುಬರುತ್ತದೆ. ಸೂತ್ರ ಧರ್ಮ. ವಿಶೇಷ ಪ್ರಸೂತಾತ್. ದ್ರವ್ಯ ಗುಣಕರ್ಮಸಾಮಾನ್ಯ ವಿಶೇಷ ಸಮವಾಯಾನಾಂ ಪದಾರ್ಥನಾಂ ಸಾಧರ್ಮ್ಯಂ ವೈಭರ್ಮಾಂಭ್ಯಂ ತತ್ವಜ್ಞಾನಾತ್ ನಿಶ್ರೇಯಸಂ ಸಾಧರ್ಮ್ಯ ವೈಧರ್ಮ್ಯಾಭ್ಯಂ ತತ್ವಜ್ಞಾನಾ ಎನ್ನುವ ಮಾತನ್ನು ಗಮನಿಸಿದರೆ ವೈಶೇಷಿಕದಲ್ಲಿ ಆಶ್ರಯಿಸಿರುವ ಕ್ರಮವು ವ್ಯಾವೃತ್ತಿ (differentiation) ಮತ್ತು ವಸ್ತು ವೈಭಿಸ್ಯ (analytic or inductime) ತೋರಿಸುವ ಮಾರ್ಗವೆಂದು ಕಂಡುಬರುತ್ತದೆ. ಹೀಗೆಯೇ ಗೌತಮರ ನ್ಯಾಯದರ್ಶನಕ್ಕೆ ಆ ಹೆಸರು ಬರಲು ಪಂಚಾವಯವಾತ್ಮಕ ಅನುಮಾನ ಅಂದರೆ ನ್ಯಾಯ ಅರ್ಥಾತ್ ಒಟ್ಟಾಗಿ ವಿಮರ್ಶಿಸುವುದು (synthetic or deductine process) ಎನ್ನುವುದೇ ಕಾರಣವಾಗಿರಬೇಕು-ಪ್ರಾರಂಭದಲ್ಲಿ ನ್ಯಾಯವೆಂದರೆ ಶಾಸ್ತ್ರಾನುಗೃಹೀತಿ ವಿಮರ್ಶನದೃಷ್ಟಿ (vedic exegess) ಎಂದು ಅರ್ಥವಿತ್ತು. ಕ್ರಮೇಣ ಅದು ಪಂಚಾವಯವಾತ್ಮಕ ಕ್ರಮವನ್ನು ಆಶ್ರಯಿಸಿ ಸ್ವತಂತ್ರವಾಗಿ ನಿಲ್ಲುವಂತಾಯಿತು (syllogistic reasoning) ಅಂದರೆ ಈ ಹೆಸರು ಬರಲು ಮೀಮಾಂಸ ಶಾಸ್ತ್ರದೊಡನೆ ಇದಕ್ಕೆ ಚಾರಿತ್ರಿಕ ಸಂಬಂಧವಿತ್ತು. ಆಗ ಈ ಶಾಸ್ತ್ರದಲ್ಲಿ ಅನುಸರಿಸುತ್ತಿದ್ದ ಸಮನ್ವಯ ಕ್ರಮವು ನ್ಯಾಯ ಎನ್ನುವ ಹೆಸರಿನಿಂದ ಬೇರ್ಪಟ್ಟು ಕೊನೆಗೆ ಅರ್ವಾಚೀನ ಕಾಲದಲ್ಲಿ ಸ್ವತಂತ್ರ ದರ್ಶನವಾಗಿ ನಿಂತಿತು.

ಒಟ್ಟಿನಲ್ಲಿ ವ್ಯಾವರ್ತಕ ಕ್ರಮವನ್ನು ಆಶ್ರಯಿಸಿ (analytic or inductive method)ವೈಶೇಷಿಕವೂ. ಸಮೂಹಾಲಸಂಬನ ದೃಷ್ಟಿಯಿಂದ (grap Co operation) ಪಂಚಾವಯ ವಾತ್ಮಕ ಕ್ರಮವನ್ನು ಆಶ್ರಯಿಸಿ (synthetic or deductive method) ನ್ಯಾಯವೂ ತಮ್ಮ ತಮ್ಮ ಅಸ್ತಿತ್ವವನ್ನೂ ಕಾಪಾಡಿಕೊಂಡರೂ ಕೊನೆಗೆ ನಾಸ್ತಿಕ ದರ್ಶನಗಳ ಪ್ರತಿಭಟನೆಯಲ್ಲಿ ಎರಡೂ ಒಂದಾಗಿ ನಿಲ್ಲುವಂತಾಯಿತು. ಹಾಗೆ ಒಂದಾಗಿರುವುದು ಕೇವಲ ವಾದ ಮಾರ್ಗದಲ್ಲಿ ಮಾತ್ರವೆಂದು ಮರೆಯಬೇಕು ಪಂಚಾವಯವ ಕ್ರಮಕ್ಕೆ ಊಹಾ ಎಂತಲೂ ವ್ಯಾವರ್ತಕ ಕ್ರಮಕ್ಕೆ ಅಪೋಹವೆಂತಲೂ. ಹೇಳಿ ಊಹಾಪೋಹಾತ್ಮಿಕಾ ಜ್ಞಾನ ಸಂಶಿಃ ಪಂಡಾ ಎಂದು ಹೇಳಿ. ಪಂಚಯಸ್ಯಾಸಸಃ ಪಂಡಿತಃ ಎಂದೂ ತಿಳಿಯಲಾಗಿದೆ. ಅಂದರೆ ಪಾಂಡಿತ್ಯಕ್ಕೆ ಎರಡು ಕ್ರಮವೂ ಬೇಕು. ಪ್ರಾಕೃತ ತತ್ವ ವಿಷಯದಲ್ಲಿ ಈ ಎರಡು ದರ್ಶನಕ್ಕೂ ವೈಭಿನ್ನವಿದ್ದೇ ಇದೆ (Differention onto logical doctrines) ಅಂದರೆ ಈ ಎರಡು ದರ್ಶನಗಳೂ ಅಕ್ಕ ತಂಗಿಯರೆನ್ನಬಹುದು. ಎರಡಕ್ಕೂ ಉದ್ದೇಶ ಅಪವರ್ಗ ಎಂದರೆ ಮೋಕ್ಷ ಆದರೆ ತಮ್ಮ ತಮ್ಮ ಸಿದ್ಧಾಂತವನ್ನೂ ಸಮರ್ಥನೆ ಮಾಡುವಾಗ ಎರಡು ಕ್ರಮವೂ ಒಟ್ಟುಗೂಡಿ ಕಾರ್ಯಕಾರಿಯಾಗುವಂತಾಯಿತು. ಅಂದರೆ ಬುದ್ಧನ ಕಾಲಕ್ಕೆ ಹಿಂದೆ ವೇದ ಪ್ರಾಮಾಣ್ಯಕ್ಕಾಗಿ

ಕ್ರಮಿಸಿದ ವಾದ ಮಾರ್ಗವು ಸಮನ್ವಯಾತ್ಮಕ ರೀತಿಯಿಂದ ಬೇರೆಯಾಗಿ ತನ್ನದೇ ಆದ ಒಂದು ವಾದ ಕ್ರಮವನ್ನು ಕಲ್ಪಿಸಿಕೊಂಡಿದ್ದು ನಾಸ್ತಿಕ ದರ್ಶನಗಳಿಗೆ ಪ್ರಯೋಜನವಾಗಿ ಪರಿಣಮಿಸಿದ್ದರಿಂದ ವಾದ ಕ್ರಮದಲ್ಲಿ ಸ್ವತಂತ್ರಾತ್ಮಕ ರೂಪದಲ್ಲಿ ಬೆಳೆದ ಮತ್ತೊಂದು ಶಾಖೆಯು ನ್ಯಾಯವೆನ್ನುವ ಹೆಸರಿನಿಂದಲೂ ಸಿದ್ಧಾಂತ ಸ್ಥಾಪನೆಗಾಗಿ ಅತ್ಯಾವಶ್ಯಕವಾದ ಪರಪಕ್ಷ ಖಂಡನ ಮತ್ತು ಸ್ವಪಕ್ಷ ಮಾಡುವ ಎನ್ನುವ ಎರಡು ಕ್ರಮದಲ್ಲಿ ಉಪಯೋಗವಾಗುವುದಕ್ಕಾಗಿ ವಾದದಲ್ಲಿ ಮಾತ್ರ ನ್ಯಾಯ ಮತ್ತು ವೈಶೇಷಿಕಗಳು ಒಂದಾಗಿ ನಡೆಯುವಂತಾಯಿತು. ವೈಶೇಷಿಕದ ಹಿನ್ನೆಲೆಯು ನಾಸ್ತಿಕವಾದವೆಂದು ಹೇಳಲಾದರೂ. ನ್ಯಾಯದ ಸಹಾಯದಿಂದ ಅದಕ್ಕೂ ಆಸ್ತಿಕತ್ವವೂ ದೊರೆಯುವಂತಾಯಿತು. ಮುಂದೆ ಬಂದ ಗೋಕುಲನಾಥನು (೧೭ನೆ ಶತಮಾನ) ತಾರ್ಕಿಕನಾದರೂ ತನ್ನ 'ಅಮೃತೋದಯ' ಎನ್ನುವ ನಾಟಕದಲ್ಲಿ ಮುಕ್ತಿ ಎನ್ನುವ ಚಕ್ರವರ್ತಿಗೆ ಆನ್ವೀಕ್ಷಿಕಿಯನ್ನು ಸೇನಾ ನಾಯಕಿಯನ್ನಾಗಿ ತೋರಿಸಿರುವುದು ಈ ಊಹೆಗೆ ಸಮರ್ಥನೆಯನ್ನು ಕೊಡುತ್ತದೆ

12 ನ್ಯಾಯ ವೈಶೇಷಿಕಗಳು ಸಮಾನತಂತ್ರಗಳೆಂದರೇನು? ಮೇಲೆ ಹೇಳಿದ ರೀತಿಯಲ್ಲಿ ಎರಡು ದರ್ಶನಗಳೂ ಚಾರಿತ್ರಿಕ ಬೆಳವಣಿಗೆಯಲ್ಲಿ ಒಂದಾದವು ಎಂದು ಕೀತ್ ವಿಮರ್ಶಕನು ತನ್ನ "Indian Logic and Atomision" ಎನ್ನುವ ಗ್ರಂಥದ ಎರಡನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳಿರುವನು. ಒಟ್ಟುಗೂಡುವುದು (svnerechism) ಎಂದರೆ ಮತ ಭೇದವನ್ನು ಕಡಿಮೆ ಮಾಡಿಕೊಂಡು ಎರಡು ಸಂಪ್ರದಾಯಗಳೂ ಸ್ನೇಹದಿಂದ ಬಾಳುವಂತಾಗುವುದು ಎಂದರ್ಥ. ಈ ಅರ್ಥದಲ್ಲಿ ನ್ಯಾಯ ವೈಶೇಷಿಕಗಳು ಕ್ರಮೇಣ ಸ್ನೇಹದಿಂದ ಬಾಳುವಂತಾಯಿತು ಎನ್ನಬಹುದು ಬುದ್ಧನ ಕಾಲಕ್ಕೆ ಹಿಂದೆ ನಾಸ್ತಿಕವಾಗಿ ವೈಶೇಷಿಕವೂ ಆಸ್ತಿಕವಾಗಿ ನ್ಯಾಯವೂ ಬೇರೆ ಬಂತೆಂದೂ ಎರಡು ದರ್ಶನಗಳ ಸೂತ್ರ ಗ್ರಂಥ ನಿರ್ಮಾಣ ಕಾಲಕ್ಕೆ ಪರಸ್ಪರ ಸೌಹಾರ್ದವನ್ನು ಬೆಳೆಸಿಕೊಂಡವೆಂದೂ ಹೇಳಬಹುದು ಆದರೆ ಈ ಸ್ನೇಹವು ತಮ್ಮ ಸಿದ್ಧಾಂತಗಳಿಗೆ ವಿರುದ್ಧವಾದ ದರ್ಶನಗಳನ್ನು ಖಂಡಿಸಿ ತಮ್ಮ ಸಿದ್ಧಾಂತವನ್ನು ಮಂಡನ ಮಾಡುವುದರಲ್ಲಿ ಮಾತ್ರ ಕಾರ್ಯಕಾರಿಯಾಗಿ ಮತ ಭೇದದಲ್ಲಿ ಮಾತ್ರ ವೈಭಿನ್ನವನ್ನು ಈಗಿನವರೆಗೂ ಎರಡು ಸಿದ್ಧಾಂತಗಳೂ ಇಟ್ಟುಕೊಂಡಿವೆ. ಅಕ್ಷಪಾದಗೌತಮರು ಉದಾಹರಣೆಯ ಆಧಾರದ ಮೇಲೆ ವೈಶೇಷಿಕದೊಡನೆ ಸ್ನೇಹ ಹಸ್ತವನ್ನು ನೀಡುತ್ತಿದ್ದರೂ. ಕ್ರಿ.ಶ. 17ನೇ ಶತಮಾನದಲ್ಲಿ ಗಂಗಾಧರ ಸೂರಿಯು ಕಣಾದ ಸಿದ್ಧಾಂತ ಚಂದ್ರಿಕಾ ಮೊದಲಾದ ಗ್ರಂಥಗಳಲ್ಲಿ ವೈಶೇಷಿಕ ದರ್ಶನವನ್ನು ಬೇರೆಯಾಗಿಯೇ ಇಡುವ ಕುತೂಹಲವು ಕಂಡುಬರುತ್ತದೆ ಈಗಲೂ ನ್ಯಾಯದ ನಾಲ್ಕು ಪ್ರಮಾಣಗಳ ಸ್ಥಾನದಲ್ಲಿ, ವೈಶೇಷಿಕವು ಪ್ರತ್ಯಕ್ಷ ಮತ್ತು ಅನುಮಾನ ಇವೆರಡನ್ನೂ ಮಾತ್ರ ಸ್ವೀಕರಿಸಿ ನಾಸ್ತಿಕವಾಗಿಯೇ ಉಳಿದಿದೆ. ಇಷ್ಟಾದರೂ ವಾತ್ಸ್ಯಾಯನರೂ ತಮ್ಮ ನ್ಯಾಯ ಸೂತ್ರ ಭಾಷ್ಯದಲ್ಲಿ (1.1.22) ಸಾಂಖ್ಯ, ಯೋಗ, ಮೀಮಾಂಸಾ, ವೇದಾಂತಗಳನ್ನು ಸಮಾನತಂತ್ರಗಳು ಎನ್ನುವಂತೆ ನ್ಯಾಯ ವೈಶೇಷಿಕರನ್ನು ಹೇಳಿರುವರು. ಅಂದರೆ ವಾದ ಮಾರ್ಗದಲ್ಲಿ ಮಾತ್ರ ಇವೆರಡೂ ಸಿದ್ಧಾಂತಗಳಿಗೂ ಒಮ್ಮತವಿದೆ ಎನ್ನಬೇಕು

13. ವೈಶೇಷಿಕ ಸೂತ್ರ ಮತ್ತು ಅದರ ವೃದ್ಧಿ-ಕಣಾದರ ವೈಶೇಷಿಕ ಸೂತ್ರಕ್ಕೆ ಪ್ರಶಸ್ತರಾದರು ಭಾಷ್ಯ ಬರೆದಿರುವರು. ಸರಿಯಾಗಿ ನೋಡಿದರೆ ಇದು ವ್ಯಾಖ್ಯಾನವಲ್ಲ. ಸೂತ್ರಾನುಕ್ರಮದಲ್ಲಾಗಲಿ. ಎಲ್ಲಾ ಸೂತ್ರಗಳನ್ನು ತೆಗೆದುಕೊಂಡಿರುವುದರಲ್ಲಾಗಲಿ. ಈ ಭಾಷ್ಯವು ಕ್ರಮಬದ್ಧವಾಗಿಲ್ಲ. ಕೊನೆಯಪಕ್ಷ 40 ಸೂತ್ರಗಳಿಗಾದರೂ ಭಾಷ್ಯವಿಲ್ಲ. ಅಲ್ಲದೆ ಸೂತ್ರದಲ್ಲಿರುವ ವಿಷಯಗಳು ಸೇರಿಸಲ್ಪಟ್ಟಿವೆ. ಕಣಾದರ 17 ಗುಣಗಳ ಸ್ಥಾನದಲ್ಲಿ ಇಲ್ಲಿ 21 ಗುಣಗಳಿವೆ. ಸಾಮಾನ್ಯ ವಿಶೇಷ ಮತ್ತು ತಸಮವಾಯ (Generality, Sartiarlarity and inherence) ಈ ಮೂರು ತಪಾರ್ಥ (category) ಸೂತ್ರದಲ್ಲಿರುವುದಕ್ಕಿಂತ ವಿಶೇಷವಾಗಿ ವರ್ಣಿಸಲ್ಪಟ್ಟಿವೆ. ಈಶ್ವರನ ಜಗತ್ಕರ್ತೃತ್ವಪಾದವು ಅಧಿಕಾಂಶ ಹೇತಾ ಭಾಸದ ವಿಮರ್ಶೆಯಲ್ಲಿ ಸೂತ್ರಾರ್ಥವು ವ್ಯತ್ಯಾಸಮಾಡಲ್ಪಟ್ಟಿದೆ. ಪ್ರಶಸ್ತಪಾದರಿಗೆ ಹಿಂದೆಯೇ ಸೂತ್ರಕ್ಕೆ ರಾವಣ ಭಾಷ್ಯವಿತ್ತೆಂದೂ. ಅದು ಬೌದ್ಧ ದರ್ಶನದ ಪ್ರಶ್ನವನ್ನು ಅವಲಂಬಿಸಿತ್ತೆಂದೂ. ಪ್ರಶಸ್ತ ಪಾದರೂ ಅರ್ಥ ವೈನಾಶಿಕವೆನಿಸಿಕೊಂಡಿದ್ದ ವೈಶೇಷಿಕ ಸಂಪ್ರದಾಯಕ್ಕೆ ಆಸ್ತಿಕ್ಯವನ್ನೂ ಕಲ್ಪಿಸಲು ಶ್ರಮಿಸಿರುವರೆಂದೂ ಹೇಳಲಾಗಿದೆ. ಕುಪ್ಪುಸ್ವಾಮಿಶಾಸ್ತ್ರಿಗಳು ತಮ್ಮ ಲೇಖನ ಒಂದರಲ್ಲಿ (Vol III- Journal of oriental Research, Madras) ರಾವಣ ಭಾಷ್ಯವು ನಾಸ್ತಿಕವಾದವಲ್ಲದೆ ಬೌದ್ಧದರ್ಶನ ಪಕ್ಷಪಾತಿ ಎಂದೂ ಸಮರ್ಥಿಸಿರುವರು. 10ನೇ ಶತಮಾನದ ಉದಯನಾಚಾರ್ಯರು ಕಿರಣಾವಳಿ ಎನ್ನುವ ವ್ಯಾಖ್ಯಾನವನ್ನು ಪ್ರಶಸ್ತ ಪಾದರ ಭಾಷ್ಯಕ್ಕೆ ಕೊಟ್ಟಿರುವರು. ಈ ಕಿರಣಾವಳಿಗೆ ಪದ್ಮನಾಭ ಮಿಶ್ರರು. "ಕಿರಣಾವಳಿ ಭಾಸ್ಕರ "ಎನ್ನುವ ವ್ಯಾಖ್ಯಾನವನ್ನೂ ಕೊಟ್ಟಿರುವರು. ಇದರಲ್ಲಿ ಪ್ರಶಸ್ತ ಪಾದರು ರಾವಣ ಭಾಷ್ಯಕ್ಕೆ ಋಣಿಯಾಗಿರುವರೆಂದು ಹೇಳಲಾಗಿದೆ. 9ನೇ ಶತಮಾನಕ್ಕೆ ಹಿಂದಿನದಾದ ಅನರ್ಘರಾಘವ ನಾಟಕದ ವಿಷ್ಕಂಭದಲ್ಲಿ ರಾವಣ ಭಾಷ್ಯ ಸಂಪ್ರದಾಯವು ಹೇಳಲ್ಪಟ್ಟಿದೆ. ಈ ರಾವಣ ಭಾಷ್ಯವು 13ನೇ ಶತಮಾನದ ಶಂಕರ ಬ್ರಹ್ಮಸೂತ್ರ ಭಾಷ್ಯಕ್ಕೆ ವಿವರಣೆಯಾದ ಪ್ರಕಟಾರ್ಥ ವಿವರಣ (ಶ್ರೀ ಚರಣ) ಎನ್ನುವ ಗ್ರಂಥದಲ್ಲಿ ನಮೂದಿಸಲ್ಪಟ್ಟಿದೆ. ಪ್ರಶಸ್ತಪಾದರ ಭಾಷ್ಯಕ್ಕೆ ಶ್ರೀಧರರು "ಕಂದಲಿ" ಎನ್ನುವ ವ್ಯಾಖ್ಯಾನವನ್ನು ಕೊಟ್ಟಿರುವರು. ಇವರ ಕಾಲವು ಕ್ರಿ ಶ. 981-984 ಎಂದು ನಿಶ್ಚಿತವಾಗಿದೆ. ಈ ಕೆಳಗಣ ಪಟ್ಟಿಯಲ್ಲಿ ವೈಶೇಷಿಕ ದರ್ಶನದ ವೃದ್ಧಿಯನ್ನು ನೋಡಬಹುದು.

ಕಣಾದರ ವೈಶೇಷಿಕ ಸೂತ್ರ (ಕಣಾದ ಸಿದ್ಧಾಂತ ಚಂದ್ರಿಕಾ ಗಂಗಾಧರ ಸೂರಿ 17ನೇ ಶತಮಾನ)

ರಾವಣ ಭಾಷ್ಯ (ನಾಸ್ತಿಕ)

ಪ್ರಶಸ್ತಪಾದ ಭಾಷ್ಯ (ಪದಾರ್ಥ ಧರ್ಮಸಂಗ್ರಹ)
ಕ್ರಿ.ಶ. 4ನೇ ಶತಮಾನಕ್ಕೆ ಹಿಂದೆ)

ಶ್ರೀಧರರ ಕಂದಲಿ (981-984)

ಉದಯನ ಕಿರಣಾವಳಿ (984)

ಪದ್ಮನಾಭರ ಕಿರಣಾವಳಿ ಭಾಸ್ಕರ

ಪ್ರಶಸ್ತ ಪಾದ ಮತ್ತು ಅವರ ಕಾಲ - ನಾಸ್ತಿಕವಾದದ ಕಡೆ ಹೊರಳಿರುವ ವೈಶೇಷಿಕ ಸೂತ್ರಕ್ಕೆ ವ್ಯಾಖ್ಯಾನ ಪಾದ ರಾವಣ ಭಾಷ್ಯವನ್ನು ಚೆನ್ನಾಗಿ ಪರಿಶೀಲಿಸಿ ಅದರವಾದ ಸರಣಿಯಲ್ಲೇ ವೈಶೇಷಿಕ ಸಿದ್ಧಾಂತಕ್ಕೆ ಆಸ್ತಿಕ್ಯವನ್ನೂ ಕಲ್ಪಿಸಿಕೊಟ್ಟಿರುವವರು ಎಂದು ಉದಯನಾಚಾರ್ಯರು ಮತ್ತು ಪದ್ಮನಾಭರು ಅಭಿಪ್ರಾಯಪಟ್ಟಿರುವವರು. ಇವರ ಭಾಷ್ಯವು ಸಿದ್ಧಾಂತವನ್ನು ವಿಸ್ತರಿಸಿದೆ. ಇವರ ಭಾಷ್ಯಕ್ಕೆ ಶ್ರೀಧರರ ಕಂದಲಿ ಮತ್ತು ಉದಯನರ ಕಿರಣಾವಳಿ ವ್ಯಾಖ್ಯಾನಗಳಿವೆ. ಆದುದರಿಂದ ಇವರೇ ಈ ಸಿದ್ಧಾಂತಕ್ಕೆ ಸ್ತಂಭದಂತಿರುವವರು. 6ನೇ ಶತಮಾನದ ಕೊನೆಯಲ್ಲಿದ್ದ ಉದ್ಯೋತಕಾರರು ಇವರನ್ನು ನಮೂದಿಸಿರುವರು. ಶಂಕರರು ತನ್ನ ಬ್ರಹ್ಮ ಸೂತ್ರಭಾಷ್ಯವನ್ನೂ ಬರೆಯುವಾಗ ಈ ಪ್ರಶಸ್ತಪಾದರ ಭಾಷ್ಯವನ್ನು ಎದುರಿಗೆ ಇಟ್ಟುಕೊಂಡಿರುವಂತಿದೆ ಎಂದು ಕೀತ್ ವಿಮರ್ಶಕನು ಅಭಿಪ್ರಾಯಪಟ್ಟಿರುವನು. ಉದಯನರು ಮತ್ತು ಇತರರು ವೈಶೇಷಿಕ ಸೂತ್ರ ಮತ್ತು ಪ್ರಶಸ್ತಪಾದ ಭಾಷ್ಯ ಇವೆರಡನ್ನೂ ಒಟ್ಟುಗೂಡಿಸಿ ಒಂದು ಗ್ರಂಥವನ್ನಾಗಿ ಪರಿಗಣಿಸಿರುವಂತಿದೆ.

ಪ್ರಶಸ್ತಪಾದರು ಪರಮಾರ್ಥ ಮತ್ತು ಧರ್ಮಪಾಲ ಎನ್ನುವ ಬೌದ್ಧ ತಾರ್ಕಿಕರಿಗಿಂತಲೂ ಹಿಂದಿನವರೆಂದು ಪ್ರೊ. ಯು ಇ (Ui) ಅವನು ತನ್ನ ಗ್ರಂಥದಲ್ಲಿ (vaisheshika Philosophy) ಸಮರ್ಥಿಸಿರುವನು. ಕೀತನು ಮಾತ್ರ ತನ್ನ ಗ್ರಂಥದಲ್ಲಿ (Indian Logic and atomision) ಪ್ರಶಸ್ತಪಾದರು ಕ್ರಿ. ಶ. 4ನೇ ಶತಮಾನದವನಾದ ದಿಙ್ನಾಗನಿಗೆ ಋಣಿಯಾಗಿರುವರೆಂದು ಹೇಳಿದರೂ ಈ ಅಭಿಪ್ರಾಯಕ್ಕೆ ಮಾನ್ಯತೆ ಇಲ್ಲ. ದಿಙ್ನಾಗನು ವಸುಬಂಧುವಿನ ಶಿಷ್ಯ. ವಸುಬಂಧುವಿನ ಕಾಲ ಕ್ರಿ. ಶ. 4ನೇ ಶತಮಾನವೆಂದು ನಿಶ್ಚಿತವಾಗಿದೆ. ಬೊಡಾಸ್ (Bodas) ಎನ್ನುವವನು ತನ್ನ ತರ್ಕಸಂಗ್ರಹ ಪ್ರಸ್ತಾವನೆಯಲ್ಲಿ ಹೇಳಿರುವುದನ್ನು ಸ್ವೀಕರಿಸಿದರೆ ಪ್ರಶಸ್ತಪಾದರು ವಾತ್ಸ್ಯಾಯನರಿಗೆ ಹಿಂದಿನವರು ವಾತ್ಸ್ಯಾಯನರು ಕ್ರಿ. ಶ. 4ನೇ ಶತಮಾನಕ್ಕೆ ಹಿಂದಿನವರು. ಆದ್ದರಿಂದ ದಿಙ್ನಾಗನೇ ಪ್ರಶಸ್ತ ಪಾದರಿಗೆ ಋಣಿಯಾಗಿರುವನೆಂದು ಹೇಳಬೇಕಾಗುತ್ತದೆ. ಅಂದರೆ ಪ್ರಶಸ್ತಪಾದರ ಕಾಲ ಉದ್ಯೋತರ ಕಾಲವಾದ 6ನೇ ಶತಮಾನಕ್ಕೆ ಹಿಂದಿರುವನಲ್ಲದೆ ವಾತ್ಸ್ಯಾಯನರಿಗೂ ಹಿಂದೆ ಎಂದು ಹೇಳಬೇಕಾಗುತ್ತದೆ.

14. ನ್ಯಾಯಸೂತ್ರ ಮತ್ತು ಅವರ ವೃದ್ಧಿ ಗೌತಮರ ನ್ಯಾಯ ಸೂತ್ರಕ್ಕೆ ವಾತ್ಸ್ಯಾಯನರು ಭಾಷ್ಯಕೊಟ್ಟಿರುವರು. ಉದ್ಯೋತಕಾರರು ಈ ಭಾಷ್ಯಕ್ಕೆ ವಾರ್ತಿಕವನ್ನು ಕೊಟ್ಟಿರುವರು. ಈ ವಾರ್ತಿಕಕ್ಕೆ ವಾಚಸ್ಪತಿ ಮಿಶ್ರರು ನ್ಯಾಯ ವಾರ್ತಿಕ ಟೀಕೆಯನ್ನು. ಅದಕ್ಕೆ ಉದಯನರು ನ್ಯಾಯವಾರ್ತಿಕ ತಾತ್ಪರ್ಯ ಟೀಕಾ ಪರಿಶುದ್ಧಿಯನ್ನೂ. ಅದಕ್ಕೆ ವರ್ಧಮಾನರು ನ್ಯಾಯನಿಬಂಧ ಸಾರವನ್ನೂ. ಅದಕ್ಕೆ ಪದ್ಮನಾಭಮಿಶ್ರರು ವರ್ಧಮಾನೇಂದುವನ್ನೂ. ಅದಕ್ಕೆ ಶಂಕರಮಿಶ್ರರು ನ್ಯಾಯತಾತ್ಪರ್ಯ ಮಂಡನವನ್ನು ಕೊಟ್ಟಿರುವರು. ಇವುಗಳ ವಿಚಾರವು ಮುಂದೆ ಬರುತ್ತದೆ. ಕೆಲವರು "ನ್ಯಾಯಭಾಷ್ಯದಲ್ಲಿ ಸೂತ್ರಗಳಿಗೆ ವ್ಯಾಖ್ಯಾನ ಭೇದಗಳನ್ನು ಕಾಣುತ್ತೇವೆ "ಅಂದರೆ ಸೂತ್ರಕ್ಕೂ ಭಾಷ್ಯಕ್ಕೂ ಬಹಳ ಕಾಲ ಕಳೆದು ಮೂಲಾಭಿಪ್ರಾಯವು ವ್ಯತ್ಯಾಸ ಹೊಂದಿರುವಂತಿದೆ ಎಂದಿರುವರು. ಮತ್ತೆ ಕೆಲವರು ಸೂತ್ರಗಳಂತಿರುವ ಕೆಲವು ಬಾಷೆವಾಕ್ಯಗಳ ಆಧಾರದ ಮೇಲೆ. ವಾತ್ಸ್ಯಾಯನರಿಗೆ ಹಿಂದೆ ಒಂದು ವ್ಯಾಖ್ಯಾನವಿದ್ದಿರಬೇಕು ಎಂದು ಅಭಿಪ್ರಾಯ ಪಟ್ಟಿರುವರು. ವಿಂಡಿಷ್ (windisch) ಮೊದಲಾದವರು ಈ ಅಭಿಪ್ರಾಯವನ್ನು ಹೊಂದಿರುವರು ಪ್ರೊ. ರಾಂಡೆಲ್ ಅವರು ತಮ್ಮ ಗ್ರಂಥದಲ್ಲಿ

(Indian Logic an the early schools) ಇಂತಹ ವಾಕ್ಯಗಳು ಸಂಪ್ರದಾಯದಲ್ಲಿ ಬಂದಿರಬೇಕೆಂದಿರುವರು. ಈ ಎರಡು ಅಭಿಪ್ರಾಯಗಳನ್ನು ತಳ್ಳಿಹಾಕಿ ಕುಪ್ಪುಸ್ವಾಮಿಶಾಸ್ತ್ರಿಗಳು ಈ ಊಹೆಯು ಸಮಂಜಸವಾಗಿಲ್ಲವೆಂದಿರುವರು. ಅವರ ಅಭಿಪ್ರಾಯದಲ್ಲಿ ಇಂತಹ ಸೂತ್ರದಂತಿರುವ ವಾಕ್ಯಪ್ರಯೋಗವು ಅನೇಕ ಭಾಷ್ಯ ಗ್ರಂಥಗಳಲ್ಲಿ ಕಾಣಬಹುದು. ಪತಂಜಲಿಗಳ ಮಹಾಭಾಷ್ಯ ಮತ್ತು ಶಂಕರರ ಬ್ರಹ್ಮಸೂತ್ರ ಭಾಷ್ಯ ಇದಕ್ಕೆ ನಿದರ್ಶನ. ಬ್ರಹ್ಮಸೂತ್ರದ 1.1.1ರ ಭಾಷ್ಯದಲ್ಲಿ ಶಂಕರರು "ಪಶ್ವಾದಿವದವಿಶೇಷಾತ್" ಎಂದು ಹೇಳಿ ಯಥಾ ಪಶ್ವಾದಯಃ ಇತ್ಯಾದಿಯಾಗಿ ತಾವೇ ಬಿಚ್ಚಿಕೊಂಡಿರುವರು. ಹೀಗೆಯೇ ವಾತ್ಸ್ಯಾಯನ ಭಾಷ್ಯದಲ್ಲಿದೆ. ಇವರೇ ನ್ಯಾಯಸೂತ್ರಕ್ಕೆ ಮೊದಲು ವ್ಯಾಖ್ಯಾನ ಬರೆದವರು ಎಂದು ಹೇಳಬಹುದು.

ವಾತ್ಸ್ಯಾಯನ ಮತ್ತು ಅವರ ಕಾಲ - ಇವರ ಮತ್ತೊಂದು ಹೆಸರು ಪಕ್ಷಿಲಸ್ವಾಮಿ ಇವರು ಪ್ರಶಸ್ತಪಾದರಂತೆ ಸೂತ್ರ ಬಿಟ್ಟು ಹೋಗಿಲ್ಲ. ವೈಶೇಷಿಕದ ಪದಾರ್ಥಗಳು ಇವರಿಗೆ ತಿಳಿದಿದೆ. ತರ್ಕದ ಎರಡು ಸಂಪ್ರದಾಯವನ್ನೂ ಒಟ್ಟುಗೂಡಿಸಲು ಪ್ರಯತ್ನಪಟ್ಟಿರುವರು. ತರ್ಕ ವಿಷಯದಲ್ಲಿ ಪ್ರಶಸ್ತಪಾದರಂತೆ ಮುಂದೆ ಹೋಗಿಲ್ಲ. ಉಪಮಾನದಿಂದ (anology) ನ್ಯಾಯಸರಣಿಯನ್ನೂ ಹೇಳಿರುವರು. ಆದರೆ ಪ್ರಶಸ್ತಪಾದರು ವ್ಯಾಪ್ತಿಜ್ಞಾನದಿಂದ ಅನುಮಾನವನ್ನು ಸಿದ್ಧಿಸಿರುವರು. ವಾತ್ಸ್ಯಾಯನನ ಭಾಷ್ಯವನ್ನು ದಿಙ್ನಾಗನು ಖಂಡಿಸಿರುವುದನ್ನು ಭಾರದ್ವಾಜ ಗೋತ್ರದ ಉದ್ಯೋತಕಾರನು ಖಂಡಿಸಿರುವನು ಎಂದು ವಾಚಸ್ಪತಿ ವ್ಯಾಖ್ಯಾನದಿಂದ ತಿಳಿದುಕೊಳ್ಳಬಹುದು.

ದಿಙ್ನಾಗನು ವಾತ್ಸ್ಯಾಯನ ಭಾಷ್ಯವನ್ನು ಖಂಡಿಸಿರುವನು ಎಂದು ವಾರ್ತಿಕದಲ್ಲಿ ಹೇಳಿದೆ. ಈ ದಿಙ್ನಾಗನ ಗುರು ವಸುಬಂಧು ನ್ಯಾಯಭಾಷ್ಯದಲ್ಲಿ ವಸುಬಂಧುವನ್ನು ನಮೂದಿಸಿಲ್ಲ. ಅಂದರೆ ಅವನನ್ನು ವಾತ್ಸ್ಯಾಯನರು ತಿಳಿದಿರಲಾರರು. ವಸುಬಂಧುವಿನ ಕಾಲ ಕ್ರಿ. ಶ. 4ನೇ ಶತಮಾನವಾಗಿರುವುದರಿಂದ ವಾತ್ಸ್ಯಾಯನರ ಕಾಲವು ಅದಕ್ಕೆ ಪೂರ್ವಭಾವಿಯಾಗಿರಬೇಕು.

ಉದ್ಯೋತಕಾರ - ಕಾಲ ಮತ್ತು ಕೀರ್ತಿ (6ನೇ ಶತಮಾನದ ಕೊನೆ) ಕೀರ್ತ್ ಮೊದಲಾದವರು ಇವರು ಬೌದ್ಧ ತಾರ್ಕಿಕ ಧರ್ಮಕೀರ್ತಿಯ ಸಮಕಾಲೀನರೆಂದಿರುವ. ಆದನ್ನು ಒಪ್ಪುವುದಕ್ಕಾಗುವುದಿಲ್ಲ. ಹುಯೆನ್‌ತ್ಸಾಂಗ್(Huicantsang)ನಿಗೆ ಧರ್ಮಕೀರ್ತಿಯು ತಿಳಿಯದು. ಆದರೆ ಇತ್ಸಿಂಗನಿಗೆ ಗೊತ್ತು. ಅಂದರೆ ಇವರಿಬ್ಬರ ಮಧ್ಯವರ್ತಿ ಕಾಲ ಧರ್ಮಕೀರ್ತಿಯ ಕಾಲವಾಗಿರಬೇಕು. ಹುಯೆನ್‌ತ್ಸಾಂಗ್ ಕಾಲ ಕ್ರಿ. ಶ. 629-645 ಇತ್ಸಿಂಗನದು ಕ್ರಿ. ಶ. 671-695 ನ್ಯಾಯವಾರ್ತಿಕದಲ್ಲಿ ವಾದವಿಧಿ ಗ್ರಂಥಗಳನ್ನು ಹೇಳಿರುವುದರಿಂದಲೂ ಈ ಗ್ರಂಥವು ಧರ್ಮ ಕೀರ್ತಿಯದು ಎನ್ನುವ ಅಭಿಪ್ರಾಯದಿಂದಲೂ ಧರ್ಮಕೀರ್ತಿಯಾದ ಮೇಲೆ ಉದ್ಯೋತಕಾರನಿದ್ದನೆಂದು ಕೆಲವರ ಅಭಿಪ್ರಾಯವಾಗಿದೆ. ಇದು ಸರಿಯಲ್ಲ. ಚೈನಾ ದೇಶದ ಸಂಪ್ರದಾಯದಂತೆ ವಾದ ವಿಧಿಯು ವಸುಬಂಧುವಿನ ಗ್ರಂಥ 1. 1.4ರ ವಾರ್ತಿಕದಲ್ಲಿ ವಿಜ್ಞಾನಗನ ಪ್ರತ್ಯಕ್ಷ ಲಕ್ಷಣದ ಖಂಡನವಿದೆ. ಬೌದ್ಧ ಮತ್ತು ಬ್ರಾಹ್ಮಣ ಸಂಪ್ರದಾಯಗಳಲ್ಲಿ ಪ್ರತ್ಯಕ್ಷದ ಲಕ್ಷಣ ಕೊಡುವಾಗ "ಅಭ್ರಾಂತ" ಎನ್ನುವ ಪದವು ಧರ್ಮಕೀರ್ತಿಯ ಸೃಷ್ಟಿ ಎಂದು ನಂಬಲಾಗಿದೆ. ಈ ಪದವನ್ನು ಪ್ರಯೋಗಿಸಿರುವುದು

ಉದ್ಯೋತಕಾರಗನ್ನು ಖಂಡಿಸುವುದಕ್ಕಾಗಿ ಎಂದೂ ಹೇಳಲಾಗಿದೆ. ಈ ಕಾರಣಗಳಿಂದ ಧರ್ಮಕೀರ್ತಿಯು ಉದ್ಯೋತಕಾರನಾದ ಮೇಲೆ 6ನೇ ಶತಮಾನದ ಕೊನೆಯಲ್ಲೇ ಇದ್ದಿರಬೇಕು. ಇದಕ್ಕೆ ಮತ್ತೊಂದು ಪ್ರಮಾಣವಿದೆ. ಸುಬಂಧುವು ತನ್ನ ವಾಸವದತ್ತ ನಾಟಕದಲ್ಲಿ ಉದ್ಯೋತಕಾರನನ್ನು ನಮೂದಿಸಿರುವನು. ಸುಬಂಧುವನ್ನು ಬಾಣವು ನಮೂದಿಸಿರುವನು. ಬಾಣನ ಕಾಲ 7ನೇ ಶತಮಾನದ ಮಧ್ಯಕಾಲವೆಂದೂ ನಿಶ್ಚಿತವಾಗಿದೆ. ಅಂದರೆ ಸುಬಂಧುವಿಗೆ ಹಿಂದಿನ ಕಾಲವಾದ 6ನೇ ಶತಮಾನದ ಕೊನೆಯ ಭಾಗವೇ ಉದ್ಯೋತಕಾರನದು. ಧರ್ಮಕೀರ್ತಿಯು 7ನೇ ಶತಮಾನದವನು.

ದಿಙ್ನಗನು ವಾತ್ಸ್ಯಾಯನ ಭಾಷ್ಯವನ್ನು ಖಂಡಿಸಿ ಕಳಂಕ ತಂದಿರುವುದನ್ನು ಹೋಗಲಾಡಿಸಿ ತರ್ಕಶಾಸ್ತ್ರಕ್ಕೆ ಆಸ್ತಿಕತ್ವ ಪ್ರತಿಷ್ಠೆಯನ್ನು ಕೊಟ್ಟು ಬೆಳಕು ತಂದಿದ್ದರಿಂದ ಇವರಿಗೆ ಹೆಸರು ಸಂದಿದೆ. ಇವರಾದ ಮೇಲೆಯೇ ವೈದಿಕ ಮತ್ತು ಅವೈದಿಕವಾದ ಸರಣಿಯು ಪ್ರಬಲವಾಗಿ ಬಂದಿರುವುದು ಕಂಡುಬರುತ್ತದೆ. ಬೌದ್ಧರಲ್ಲಿ ಧರ್ಮಕೀರ್ತಿ, ಧರ್ಮೋತ್ತರ ಮತ್ತು ರತ್ನ ಕೀರ್ತಿ ಇವರಂತೆ, ಆಸ್ತಿಕರಲ್ಲಿ ವಾಚಸ್ಪತಿ ಮಿಶ್ರ, ಜಯಂತ ಭಟ್ಟಭಾಸರ್ವಜ್ಞ, ಮತ್ತು ಉದಯನ, ಇವರು ತಮ್ಮ ಪ್ರಚಂಡ ಪ್ರಭಾವವನ್ನು ಬೀರಿರುವರು. ಇವರೆಲ್ಲರಿಗೂ ಉದ್ಯೋತಕಾರನೇ ಮಾರ್ಗದರ್ಶಿಕನಾಗಿರುವುನೆದು ನಂಬಲಾಗಿದೆ. ಇವರು ಸ್ಥಾನೇಶ್ವರದಲ್ಲಿ ಹರ್ಷನ ಆಸ್ಥಾನದಲ್ಲಿದ್ದಿರಬೇಕು. ಆದರೆ ಇವನ ಹುಟ್ಟು ಸ್ಥಳ ಪದ್ಮಾವತಿ (ಮಾಲ್ವದ ನಾರ್ವಾರ್ -Narwar)ಎಂದು ಹೇಳಲಾಗಿದೆ.

15. ನ್ಯಾಯವೈಶೇಶಿಕಗಳ ಒಟ್ಟುಗೂಡುವಿಕೆ-ನ್ಯಾಯ ಮತ್ತು ವೈಶೇಷಿಕ ಸೂತ್ರಗಳು ಅಸ್ತಿತ್ವಕ್ಕೆ ಬಂದ ಮೇಲೆ ಪರಸ್ಪರ ಸೌಹಾರ್ದದಿಂದ ನಡೆಯುತ್ತಿದ್ದರೂ, ಅವು ತಮ್ಮ ಪ್ರಥಕ್ತ್ವವನ್ನೂ ಉದ್ಯೋತಕಾರರ ಪರ್ಯಂತವೂ ಕಾಪಾಡಿಕೊಂಡು ಬಂದಿರುವುದು ಸ್ಪಷ್ಟವಾಗಿ ಕಾಣುತ್ತದೆ. ಇವರಾದ ಮೇಲೆ ಅಂದರೆ ಕ್ರಿ. ಶ. ೭ನೇ ಶತಮಾನವಾದ ಮೇಲೆ ಎರಡು ಶತಮಾನ ಕಾಲದಲ್ಲಿ ನ್ಯಾಯ ಮತ್ತು ವೈಶೇಷಿಕ ಗ್ರಂಥಗಳು ಬೆಳೆದಂತಿಲ್ಲ. ಸುಮಾರು 9ನೇ ಶತಮಾನದ ಮಧ್ಯಭಾಗದಿಂದ ಮತ್ತೆ ಸ್ಫೂರ್ತಿಯು ತಲೆದೋರಿ 11ನೇ ಶತಮಾನದ ಪರ್ಯಂತವೂ ಎರಡು ಸಂಪ್ರದಾಯಗಳು ಒಟ್ಟುಗೂಡಲು ಪ್ರಯತ್ನವು ನಡೆದಿದೆ. ಮೊದಲು ನ್ಯಾಯಸೂತ್ರದ ಕಡೆಗೆ ವಿಶೇಷ ದೃಷ್ಟಿಯನ್ನು ವಾಚಸ್ಪತಿ ಮಿಶ್ರ (ಕ್ರಿ. ಶ, 641)ಜಯಂತಭಟ್ಟ (9ನೇ ಶತಮಾನ) ಭಾಸರ್ವಜ್ಞ (10ನೇ ಶತಮಾನ ) ಇವರೇ ಮೊದಲಾದವರು ತಾಳಿದ್ದರೂ, ವೈಶೇಷಿಕರ ಸಹವಾಸವು ಚೆನ್ನಾಗಿ ಕಂಡು ಬರುತ್ತದೆ. 10ನೆ ಶತಮಾನದ ಉದಯನನು (ಕ್ರಿ.ಶ. 984) ಎರಡು ಸಂಪ್ರದಾಯವನ್ನೂ ಒಂದನ್ನಾಗಿ ಪರಿಗಣಿಸಿ ಎರಡು ಸಂಪ್ರದಾಯಗಳ ಸ್ಫೂರ್ತಿಯಿಂದ ಸ್ವತಂತ್ರ ಗ್ರಂಥಗಳನ್ನೂ ರಚಿಸಿರುವರು. 11ನೇ ಶತಮಾನದ ಶಿವಾದಿತ್ಯನು ಪ್ರಶಸ್ತಪಾದರ ಭಾಷ್ಯಕ್ಕೆ ವ್ಯಾಖ್ಯಾನವಾದ ಉದಯನರ ಕಿರಣಾವಳಿಯನ್ನು, ನ್ಯಾಯಸಿದ್ಧಾಂತ ಗ್ರಂಥವಾದ ಭಾಸರ್ವಜ್ಞದ ನ್ಯಾಯ ಸಾರವನ್ನೂ ಉಪಯೋಗಿಸಿಕೊಂಡು ಸಪ್ತಪದಾರ್ಥಿ ಎನ್ನುವ ಸಂಗ್ರಹ ಗ್ರಂಥವನ್ನು ಕೊಟ್ಟಿರುವರು. ಇದು ತೋರಿಕೊಟ್ಟ ದಾರಿಯನ್ನು ಚೆನ್ನಾಗಿ ವಿಸ್ತರಿಸಿ ಅಲ್ಲಿಯವರಿಗೂ ಪ್ರಾಚೀನತೆಯನ್ನು ಕಾಪಾಡಿಕೊಂಡು ಬಂದಿದ್ದ ತರ್ಕ ಸಂಪ್ರದಾಯಕ್ಕೆ ಒಂದು ನವೀನತೆಯನ್ನು ಮುಂದೆ

13ನೇ ಶತಮಾನದ ಪೂರ್ವಭಾಗದಲ್ಲಿ ಬಂದ ಗಂಗೇಶನು ತನ್ನ ಚಿಂತಾಮಣಿ ಗ್ರಂಥದಲ್ಲಿ ಕಲ್ಪಿಸಿಕೊಟ್ಟಿರುವನು.

ವಾಚಸ್ಪತಿ ಮಿಶ್ರ (ಕ್ರಿ. ಶ. ೮೪೧) ಇವರು ಪ್ರಸಿದ್ಧ ತಾರ್ಕಿಕರು ಮತ್ತು ವೇದಾಂತಿಗಳು. ಇವರ ವೈದುಷ್ಯವನ್ನು ಭಾಮತಿ ಎನ್ನುವ ಶಂಕರರ ಬ್ರಹ್ಮಸೂತ್ರ ಭಾಷ್ಯಕ್ಕೆ ಇವರು ಕೊಟ್ಟಿರುವ ವ್ಯಾಖ್ಯಾನದಲ್ಲಿ ಕಾಣಬಹುದು. ಇವರು ಮಿಥಿಲೆಯಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರು ಇವರ ನ್ಯಾಯಸೂಚೀ ಗ್ರಂಥದ ಕಾಲವು ಕ್ರಿ. ಶ 841 ಎಂದು ನಿಶ್ಚಿತವಾಗಿದೆ. ಇವರ ಭಾಮತಿಯು ಈ ಗ್ರಂಥವಾದ ಮೇಲೆ ಬರೆಯಲ್ಪಟ್ಟಿರಬೇಕು. ಈ ನ್ಯಾಯಸೂಚೀ ನಿಬಂಧ ಗ್ರಂಥವು ಗೌತಮರ ನ್ಯಾಯಕ್ಕೆ ಸೂಚೀಗ್ರಂಥವಾಗಿದೆ. ಇವರು ಕೊಟ್ಟಿರುವ ಗ್ರಂಥಗಳು -(1) ನ್ಯಾಯಶಾಸ್ತ್ರದ ಮೇಲೆ ನ್ಯಾಯ ಸೂಚೀನಿಬಂಧ (2) ಉದ್ಯೋತ ಕಾರನ ಗ್ರಂಥಕ್ಕೆ ವ್ಯಾಖ್ಯಾನ ವಾದ ನ್ಯಾಯವಾರ್ತಿಕ ತಾತ್ಪರ್ಯಟೀಕಾ. ಇದರಲ್ಲಿ ನ್ಯಾಯಭಾಷ್ಯ ಸೂತ್ರಗಳ ಸಂದಿಗ್ಧಾರ್ಥ ಭಾಗಗಳನ್ನೂ ತಮ್ಮ ಗುರು ತ್ರಿಲೋಚನಾ ಚಾರ್ಯರಿಂದ ತಿಳಿದು ಬಿಡಿಸಿ ಹೇಳಿರುವರು. ಇದರಿಂದ ಸಿದ್ಧಿಯಮೇಲೆ ಬ್ರಹ್ಮತತ್ತ್ವ ಸಮೀಕ್ಷಾ (4) ಶಂಕರರ ಬ್ರಹ್ಮಸೂತ್ರ ಭಾಷ್ಯಕ್ಕೆ ಭಾಮತೀ (5)ಸಾಂಖ್ಯದ ಮೇಲೆ ಸಾಂಖ್ಯ ತತ್ತ್ವಕೌಮುದೀ (6) ಯೋಗ ಸೂತ್ರಕ್ಕಿರುವ ವ್ಯಾಸ ಭಾಷ್ಯಕ್ಕೆ ಯೋಗಭಾಷ್ಯ ವೈಶಾರದೀ

ಜಯಂತ ಭಟ್ಟ -9ನೇ ಶತಮಾನದ ಉತ್ತರ ಭಾಗ.

ಇವನು 11ನೇ ಶತಮಾನದ ಆದಿಭಾಗದವನೆಂದು ಕೀತನು ಅಭಿಪ್ರಾಯಪಟ್ಟಿರುವನು ಧ್ವನ್ಯಾಲೋಕ (850) ಇವನಿಗೆ ತಿಳಿದಿದೆ. ಇವನ ಮಗ ಅಭಿನಂದನನೇ ಕಾದಂಬರೀ ಕಥಾಸಾರವನ್ನು ಬರೆದನವನು. ಆದ್ದರಿಂದ ಜಯಂತ ಭಟ್ಟನ ಕಾಲವನ್ನು 9ನೇ ಶತಮಾನದ ಉತ್ತರ ಭಾಗದಲ್ಲಿಡಬೇಕಾಗುತ್ತದೆ. ಇವನ ನ್ಯಾಯಗ್ರಂಥವೇ ನ್ಯಾಯ ಮಂಜರೀ. ಇದು ನ್ಯಾಯ ಸೂತ್ರಗಳಿಗೆ ವೃತ್ತಿ. ಇದರಿಂದಲೇ ಇವನಿಗೆ ವೃತ್ತಿಕಾರನೆಂದು ಹೆಸರು ಬಂದಿದೆ.

ಭಾಸರ್ವಜ್ಞ 10ನೇ ಶತಮಾನದ ಮೊದಲ ಭಾಗದಲ್ಲಿದ್ದವನು. ಇವನು ತನ್ನ ನ್ಯಾಯಸಾರವೆನ್ನುವ ಗ್ರಂಥದಲ್ಲಿ ನ್ಯಾಯಸೂತ್ರದ ಸಾರವನ್ನು ಎರಡು ಅಧ್ಯಾಯಗಳಲ್ಲಿ ಕೊಟ್ಟಿರುವನು. ಗೌತಮರ ಅಭಿಪ್ರಾಯಕ್ಕೆ ಪೂರ್ಣಸಹಕಾರವು ಇದರಲ್ಲಿದ್ದರೂ ಇದನ್ನು ಸ್ವತಂತ್ರ ಗ್ರಂಥವೆನ್ನಬಹುದು ಇದು ಬೌದ್ಧರ ಸಹವಾಸವನ್ನೂ ಹೊಂದಿರುವಂತಿದೆ. ಆದರೆ ಬೌದ್ಧರಂತೆ 16ಪದಾರ್ಥಗಳನ್ನು ಸ್ವೀಕರಿಸಿಲ್ಲ. ಪ್ರತ್ಯಕ್ಷ ಅನುಮಾನ ಮತ್ತು ಶಬ್ದವೆನ್ನುವ ಮೂರು ಪ್ರಮಾಣಗಳ ವಿಮರ್ಶೆ ನಡೆದಿದೆ. ಇವನು ಉಪಮಾನವನ್ನೂ ಪ್ರಮಾಣವನ್ನಾಗಿ ಸ್ವೀಕರಿಸಿಲ್ಲ. ಇದರಲ್ಲಿ ವೈಶೇಷಿಕರ ಸಹವಾಸವೂ ಕಾಣುತ್ತದೆ ಇವನು ಶೈವ ಸಂಪ್ರದಾಯಸ್ಥನಾದ ಕಾಶ್ಮೀರದವನು. ಅನಧ್ಯವಸ್ಥಿತವನ್ನು ಸೇರಿಸಿ ಆರು ಹೇತ್ವಾಭಾಸಗಳನ್ನು ಇವನು ಹೇಳಿರುವನು..

ಇವನ ನ್ಯಾಯಸಾರಕ್ಕೆ ನ್ಯಾಯಭೂಷಣವೆನ್ನುವ ವ್ಯಾಖ್ಯಾನವಿದೆ. ಇದರ ಕಾಲ ಕ್ರಿ. ಶ. 1252 ಎಂದು ನಿಶ್ಚಿತವಾಗಿದೆ. ಗಂಗೇಶನಾದ ಮೇಲೆ ಇದು ಬರೆಯಲ್ಪಟ್ಟಿರಬೇಕು

ಉದನಯ ಮತ್ತು ಶ್ರೀಧರ -ಕ್ರಿ. ಶ. 984

ನ್ಯಾಯ ವೈಶೇಷಿಕ ಸೂತ್ರಗಳು ಪರಸ್ಪರ ಉಪಕಾರಕಗಳು ಎನ್ನುವ ದೃಷ್ಟಿಯಿಂದ ಉದಯನರು ಎರಡು ಸಂಪ್ರದಾಯ ಗ್ರಂಥಗಳಿಗೂ ವ್ಯಾಖ್ಯಾನ ಬರೆದಿರುವನು. ಇವರು ತಮ್ಮ ಕಾಲವನ್ನು ಕ್ರಿ. ಶ. 984 ಎಂದು ತಾವೇ ಹೇಳಿಕೊಂಡಿರುವನು. ಕಂದಲಿ ಬರೆದಿರುವ ಶ್ರೀಧರರು ಇದೇ ಕಾಲದವರು ಉದಯನರ ಗ್ರಂಥಗಳು (1) ಪ್ರಶಸ್ತಪಾದ ಭಾಷ್ಯಕ್ಕೆ ಕಿರಣಾವಳಿ (2) ಉದ್ಯೋತಕಾರ ಗ್ರಂಥಕ್ಕೆ ವ್ಯಾಖ್ಯಾನವಾದ ವಾಚಸ್ಪತಿಯು ನ್ಯಾಯವಾರ್ತಿಕ ತಾತ್ಪರ್ಯ ಟೀಕೆಗೆ ನ್ಯಾಯವಾರ್ತಿಕ ತಾತ್ಪರ್ಯ ಪರಿಣದೀ (3) ಲಕ್ಷಣಾವಳಿ(4) ಪರಮಾತ್ಮಾಸ್ತಿತ್ವ ಸಮರ್ಥನೆಗಾಗಿ ಸ್ವತಂತ್ರ ಗ್ರಂಥವಾದ ನ್ಯಾಯಕುಸುಮಾಂಜಲಿ (5) ಬೌದ್ಧ ಮತ್ತು ಜೈನ ಸಿದ್ಧಾಂತಗಳು ನಾಸ್ತಿಕತ್ವವನ್ನು ಖಂಡಿಸಿರುವ ಆತ್ಮತತ್ತ್ವ ವಿವೇಕ ಅಥವಾ ಬೌದ್ಧಾಧಿಕಾರ ಮತ್ತೂ (6) ಪ್ರಬೋಧ ಸಿದ್ಧಿ ಎಂದು ಹೆಸರಿರುವ ಸ್ವತಂತ್ರ ಗ್ರಂಥವಾದ ನ್ಯಾಯ ಪರಿಶಿಷ್ಟದಲ್ಲಿ ಪ್ರಾಚೀನನ್ಯಾಯದ ವಿಗ್ರಹ ಸ್ಥಾನಗಳನ್ನು (vulerable points) ಜಾತೀವಾದದಲ್ಲಿ ಸೂಕ್ಷ್ಮಾರ್ಥಗಳನ್ನು ಪ್ರತಿಪಾದಿಸಿರುವದು. ಇದರ ಲಕ್ಷಣಾವಳೀ, ಕಿರಣಾವಳೀ ಮತ್ತು ನ್ಯಾಯಾವಾರ್ತಿಕ ತಾತ್ಪರ್ಯ ಕಾರ್ಯಪರಿಶುದ್ಧಿ-ಎನ್ನುವ ಮೂರು ಗ್ರಂಥಗಳಿಗೆ ಗಂಗೇಶನ ಮಗನಾದ ವರ್ಧಮಾನನ ವ್ಯಾಖ್ಯಾನಗಳಿವೆ ಉದಯನರ ಗ್ರಂಥಗಳಿಗೂ ಶ್ರೀಧರ ನ್ಯಾಯಕಂದಲಿಗೂ ಸಾಮರಸ್ಯವೂ ಚೆನ್ನಾಗಿ ಕಾಣುತ್ತದೆ. ಇಬ್ಬರೂ ಈಶ್ವರಾಸ್ತಿತ್ವವನ್ನೂ ಸಮರ್ಥಿಸಿರುವರು. ಉದಯನರು ಕುಸುಮಾಂಜಲಿಯಲ್ಲಿ ತನ್ನ ಪ್ರತಿಭೆಯನ್ನು ತೋರಿಸಿರುವರು. ಇದರಲ್ಲಿ ಪರಮಾತ್ಮಾತತ್ತ್ವವನ್ನೂ ಸ್ವೀಕಾರಮಾಡದೇ ಇರುವ ಸಾಂಖ್ಯ, ಶೂನ್ಯವಾದ, ಮತ್ತು ಚಾರ್ವಾಕವಾನ ಇವನ್ನು ಖಂಡಿಸಿರುವರು ನ್ಯಾಯಸಿದ್ಧಾಂತದ ರೀತಿಯಲ್ಲಿ ಪರಮಾತ್ಮಾಸ್ತಿತ್ವ ಸಮರ್ಥನೆಯಲ್ಲಿ ಸೃಷ್ಟಿ ಮತ್ತು ದೃಶ್ಯ ಪ್ರಪಂಚದಲ್ಲಿಎದ್ದು ಕಾಣುತ್ತಿರುವ ಪ್ರಯೋಜನ (value). ಅವುಗಳ ಆದರ್ಶ ಮತ್ತು ಕಾರಣ ವಸ್ತುವಿನ ಸಂಕಲ್ಪ ಪ್ರತೀತತ್ವ (Design) ಮತ್ತು ಕಾರಣತ್ವವನ್ನೂ ವಾದಿಸಿ ನಂತರ ಈ ಪ್ರಪಂಚದ ಬೆಲೆ, ಮೂಲರೂಪ, ಮತ್ತು ಕಾರಣತ್ವವು ಹೇಗೆ ಪರಮಾತ್ಮಾಸ್ತಿತ್ವ ವನ್ನು ಸಮರ್ಥಿಸುತ್ತದೆ ಎಂದು ಪ್ರತಿಭಾಪೂರಿತವಾಗಿ ಹೇಳಿರುವರು. ಮುಂದೆ ವೇದಾಂತ ಮಾರ್ಗದಲ್ಲಿ ದ್ವೈತಸಿದ್ಧಾಂತಕ್ಕೆ ಪೂರ್ಣಬೆಂಬಲ ಕೊಟ್ಟಿರುವುದೆಂದರೆ ಈ ಉದಯನರ ನ್ಯಾಯಕುಸುಮಾಂಜಲಿ ಗ್ರಂಥವಿದೆ ದ್ವೈತ ಸಿದ್ಧಾಂತದ ಟೀಕಾಚಾರ್ಯರು ಇವರಾದ ಸರಣಿಯಲ್ಲಿ ಪ್ರಸಿದ್ಧಿ ಹೊಂದಿ ಆ ಸಿದ್ಧಾಂತದ ಪ್ರಸಿದ್ಧ ಆಚಾರ್ಯರಾಗಿರುವರು.

16 ಪ್ರಾಚೀನ ಮತ್ತು ನವೀನ ನ್ಯಾಯದ ಮಧ್ಯವರ್ತಿ ನ್ಯಾಯ ಸ್ವರೂಪ

ಪ್ರಾಚೀನ ನ್ಯಾಯವು ನ್ಯಾಯವೈಶೇಷಿಕ ಸೂತ್ರಗಳಿಂದ ಪ್ರಾರಂಭವಾಗಿ ಭಾಷ್ಯಟೀಕೆ, ವಾರ್ತಿಕ ರೂಪದಲ್ಲಿ ವಿಸ್ತಾರ ಹೊಂದಿ ಕ್ರಿ. ಶ 10ನೇ ಶತಮಾನದ ಉದಯನಾಚಾರ್ಯನಿಂದ ಕೊನೆ ಮುಟ್ಟಿತೆಂದು ಹೇಳಬಹುದು. ಅಂದರೆ ಅಲ್ಲಿಂದ ಮುಂದೆ ದೃಷ್ಟಿ ಭೇದದಿಂದ ನ್ಯಾಯ ಶಾಸ್ತ್ರದ ಕ್ರಮವು ವ್ಯತ್ಯಾಸ ಹೊಂದಿತು. ಹೀಗೆ ಹೇಳುವುದೂ ಕೂಡ ಸ್ಥೂಲವೇ ಕಾರಣ, ಉದಯನರ ಗ್ರಂಥಗಳಿಗೆ ಮುಂದೆ ವ್ಯಾಖ್ಯಾನಗಳು ಬರೆಯಲ್ಪಟ್ಟವು. ಆದರೆ ಪ್ರಾಚೀನ ನ್ಯಾಯ ಬೆಳೆದ ಕಾಲದಲ್ಲೇ ಬೌದ್ಧ ಮತ್ತು ಜೈನ ತಾರ್ಕಿಕರು ಆಸ್ತಿಕದರ್ಶನಗಳನ್ನು ತರ್ಕಮಾರ್ಗದಲ್ಲೇ ಪ್ರತಿಭಟಿಸಲು

ವಾದ ಕ್ರಮವನ್ನು ಪರಿಷ್ಕರಿಸಿ ಕೊಂಡದ್ದಲ್ಲದೆ ಮಿಕ್ಕಸಿದ್ಧಾಂತಗಳನ್ನು ಖಂಡಿಸಲು ಹೊರಟರು. ನ್ಯಾಯವೈಶೇಷಿಕವೆನ್ನುವ ಎರಡುಸಿದ್ಧಾಂತಗಳನ್ನು ಖಂಡಿಸಲು ಹೊರಟರು. ನ್ಯಾಯ ವೈಶೇಷಿಕವೆನ್ನುವ ಎರಡು ಸಿದ್ಧಾಂತಗಳನ್ನೂ ಒಂದನ್ನಾಗಿ ಭಾವಿಸಿ, ವಾತ್ಸಾಯನನ ಭಾಷ್ಯದ ಮೇಲೆ ದಿಙ್ನಗನು ಖಂಡನವನ್ನು ಹೇಳಲು ಹೊರಟನು. ಅವನನ್ನು ಖಂಡಿಸಲು ಉದ್ಯೋತಕಾರನೆದ್ದನು. ಅವರಾದ ಮೇಲೆಯೂ ಧರ್ಮಕೀರ್ತಿ ಮೊದಲಾದವರು ಮತ್ತೆ ಪ್ರತಿಭಟಿಸಲು ಹೊರಟರು. ಇವರೆಲ್ಲರನ್ನೂ ಪ್ರಬಲವಾಗಿ ಪ್ರತಿಭಟಿಸಿ ಜೈನಬೌದ್ಧ ಸಿದ್ಧಾಂತದವರು ಸಮನಾಗಿ ನಿಲ್ಲದಂತೆ ಮಾಡಿದ ಕೀರ್ತಿಯು ಉದಯನರಿಗೆ ಸಂದಿದೆ. ಆದ್ದರಿಂದ ಪ್ರಾಚೀನ ನ್ಯಾಯಕ್ಕೆ ಮೂಲಭೂತ ಗ್ರಂಥಗಳಾದ ಸೂತ್ರ ಮತ್ತು ಭಾಷ್ಯ-ಇವೆರಡಕ್ಕೂ ಮತ್ತು ನವೀನ ನ್ಯಾಯಕ್ಕೆ ಅಂಕುರಾರ್ಪಣವನ್ನೂ ಮಾಡಿದ ಗಂಗೇಶನ ತತ್ವಚಿಂತಾಮಣಿ ಗ್ರಂಥಕ್ಕೂ ಮಧ್ಯವರ್ತಿ ಕಾಲದಲ್ಲೇ ಬೌದ್ಧ ಜೈನತಾರ್ಕಿಕರು ಉದಯಿಸಿದ್ದರಿಂದ ಅವರ ಕಾಲದಲ್ಲಿ ಅವರಿಂದ ವೃದ್ಧಿ ಹೊಂದಿದ ಗ್ರಂಥಗಳನ್ನೇ ಮಧ್ಯವರ್ತಿ ನ್ಯಾಯವೆಂದು ತಿಳಿಯಬೇಕು.

ಕ್ರಿ. ಪೂ. ೫ನೇ ಶತಮಾನದಲ್ಲಿ ಗೌತಮ ಬುದ್ಧ ಮತ್ತು ಮಹಾವೀರ ಇವರಿಬ್ಬರೂ ಬೌದ್ಧ ಮತ್ತು ಜೈನ ಸಿದ್ಧಾಂತಕ್ಕೆ ಮೂಲ ಪುರುಷರಾಗಿ ಉದಯಿಸಿದ ಮೇಲೆ ಸುಮಾರು 1000 ವರ್ಷ ಕಾಲದಲ್ಲಿ ಆಯಾ ಸಿದ್ಧಾಂತದ ಪ್ರಮೇಯವನ್ನೇ ಪ್ರಧಾನವಾಗಿ ಪ್ರತಿಪಾದಿಸುತ್ತಾ ಆಯಾ ಸಿದ್ಧಾಂತದ ಆಚಾರ್ಯರು ನಡೆದು ಬಂದರು. ಸಿದ್ಧಾಂತಕ್ಕೆ ಅವಶ್ಯಕವಾದ ಪ್ರಮಾಣ ಸ್ವರೂಪವು ಈ ಎರಡು ಸಿದ್ಧಾಂತಗಳಲ್ಲಿಯೂ ಬೇರೆ ಬೇರೆಯಾಗಿ ಬೆಳೆದು ಬರಲಿಲ್ಲ. ಮುಂದೆ ಕ್ರಿ.ಶ. 5 ನೇ ಶತಮಾನದಲ್ಲಿ ಬೌದ್ಧ ದರ್ಶನಕ್ಕೆ ದಿಙ್ನಾಗನೂ, ಜೈನದರ್ಶನಕ್ಕೆ ಆಚಾರ್ಯ ಸಿದ್ಧಸೇನದಿವಾಕರನೂ, ತಮ್ಮ ತಮ್ಮ ಸಿದ್ಧಾಂತಕ್ಕೆ ತರ್ಕ ಬಲವನ್ನೂ ಕೊಟ್ಟರು. ಈ ಮಾರ್ಗಕ್ಕೆ ಪೀಠಿಕೆಯು ಇವರಿಗೆ ಹಿಂದೆಯೇ ಪಡೆದಿತ್ತು. ಬೌದ್ಧ ದರ್ಶನದಲ್ಲಿ ನಾಗಾರ್ಜುನ, ಆರ್ಯದೇವ, ಅಸಂಗ ಮತ್ತು ವಸುಬಂಧು -ಇವರಿದ್ದರೆ, ಜೈನದರ್ಶನದಲ್ಲಿ ಉಮಾಸ್ವಾತಿ ಮೊದಲಾದವರಿದ್ದರು. ಆದರೆ ನ್ಯಾಯ ವೈಶೇಷಿಕದರ್ಶನವನ್ನು ಪ್ರಬಲವಾಗಿ ಪ್ರತಿಭಟಿಸಿದರೆಂದರೆ ಬೌದ್ಧ ದರ್ಶನದಲ್ಲಿ ದಿಙ್ನಾಗ ಮತ್ತು ಜೈನದರ್ಶನದಲ್ಲಿ ಸಿದ್ಧಸೇನ ದಿವಾಕರ ಬೌದ್ಧರಲ್ಲಿ ದಿಙ್ನಗನಿಂದ ಪ್ರಾರಂಭವಾಗಿ ಕ್ರಿ. ಶ. 1100ವರೆಗೂ 31 ಆಚಾರ್ಯರು ಅವರಿಗೆ ಅನುಕೂಲಿಸುವ ತರ್ಕ ಗ್ರಂಥಗಳನ್ನೂ, ಜೈನರಲ್ಲಿ ಸಿದ್ಧಸೇನ ದಿವಾಕರನಿಂದ ಪ್ರಾರಂಭವಾಗಿ ಕ್ರಿ. ಶ. 1688ರಲ್ಲಿದ್ದ ಯಶೋ ವಿಜಯಗಣೀ ಪರ್ಯಂತ 37 ತಾರ್ಕಿಕರು ಗ್ರಂಥಗಳನ್ನೂ ರಚಿಸಿರುವುದು ಕಂಡು ಬರುತ್ತದೆ. ಆದರೆ ಉದಯನಾಚಾರ್ಯರಾದ ಮೇಲೆ ಬೌದ್ಧರಿಗೆ ಮನ್ನಣೆ ಸಿಗದೇ ಟಿಬೆಟ್, ಬರ್ಮಾ ಮತ್ತು ಸಿಲೋನ್‌ಗಳಿಗೆ ವಲಸೆ ಹೋಗುವಂತಾಯಿತು. ಜೈನರು ಮಾತ್ರ ಇಲ್ಲೇ ಇದ್ದುಕೊಂಡು ಮಿಕ್ಕ ಸಿದ್ಧಾಂತಗಳನ್ನು ಪ್ರತಿಭಟಿಸಲು ಅಸಮರ್ಥರಾದರೂ, ತಮ್ಮತಮ್ಮಲ್ಲಿಯೇ ಸಿದ್ಧಾಂತವನ್ನು ಕಾಪಾಡಿಕೊಂಡು ಬರುತ್ತಿರುವರು.

ದಿಙ್ನಗ (ಕ್ರಿ.ಶ. 450-520) -ನ್ಯಾಯಸೂತ್ರಕ್ಕಿರುವ ವಾತ್ಸ್ಯಾಯನ ಭಾಷ್ಯವನ್ನು ಪ್ರತಿಭಟಿಸಲು ಹೊರಟ ಬೌದ್ಧ ತಾರ್ಕಿಕನಿವನು. ವಾತ್ಸ್ಯಾಯನರು ದಕ್ಷಿಣದೇಶದ ಕಾಂಚೀಪುರವಾಸೀ ಎಂದು ಹೇಳಲಾಗಿದೆ. ಅಲ್ಲೇ ದಿಙ್ನಾಗನು ಒಬ್ಬ ಶ್ರೇಷ್ಠ ಬ್ರಾಹ್ಮಣಕುಲದಲ್ಲಿ ಜನ್ಮತಾಳಿದನು. ಬೌದ್ಧರಲ್ಲಿ

"ವಾತ್ಸೀಪುತ್ರೀಯ "ವೆನ್ನುವ ಶಾಖಾನುಯಾಯಿಯಾದ ನಾಗದತ್ತನೆನ್ನುವನಿಂದ ಬೌದ್ಧ ದೀಕ್ಷೆಯನ್ನು ಹೊಂದಿದನು. ಅವನಿಂದ ಹೀನಾಯಾನದ ಸಂಪ್ರದಾಯದ ರೀತಿಯಲ್ಲಿ ತ್ರಿಪಿಟಕಗಳ ಅಧ್ಯಯನ ಮಾಡಿದನು. ಮತ್ತು ವಸುಬಂಧುವಿನಿಂದ ಹೀನಾಯಾನ ಮತ್ತು ಮಹಾಯಾನದ ಜೊತೆಯಲ್ಲಿ ತ್ರಿಪಿಟಕ ಮೊದಲಾದ ಗ್ರಂಥಗಳ ಅಧ್ಯಯನವನ್ನೂ ಮಾಡಿದನು. ಮತ್ತು ವಸುಬಂಧುವಿನಿಂದ ಹೀನಾಯಾನ ಮತ್ತು ಮಹಾಯಾನದ ಜೊತೆಯಲ್ಲಿ ತ್ರಿಪಿಟಕ ಮೊದಲಾದ ಗ್ರಂಥಗಳ ಅಧ್ಯಯನವನ್ನೂ. ಮಾಡಿದನು. ಇವನ ಪ್ರಚಂಡ ವಿದ್ವತ್ತನ್ನು ನೋಡಿ ಇವನಿಗೆ `ತರ್ಕಪುಂಗವ`ಎನ್ನುವ ಕೀರ್ತಿಯೂ ಕೊಡಲ್ಪಟ್ಟಿತು. ಆಗಿನ ಕಾಲದಲ್ಲಿ ಪ್ರಸಿದ್ಧವಾದ ನಳಂದಾ ವಿದ್ಯಾಪೀಠಕ್ಕೆ ಆಹ್ವಾನವು ಬಂತು. ಒರಿಸ್ಸಾ, ಮಹಾರಾಷ್ಟ್ರ ಮತ್ತು ದಕ್ಷಿಣಭಾರತದಲ್ಲಿ ಪರ್ಯಟನ ಮಾಡಿ ಕೊನೆಗೆ ತನ್ನ 70 ನೆಯ ವಯಸ್ಸಿನಲ್ಲಿ ಒರಿಸ್ಸಾದ ಒಂದು ವನಪ್ರದೇಶದಲ್ಲಿ ಶಾಂತರೀತಿಯಲ್ಲಿ ದೇಹ ತ್ಯಾಗಮಾಡಿದನು.

ಇವನು ಬರೆದ ಪ್ರಸಿದ್ಧ ಗ್ರಂಥವೇ "ಪ್ರಮಾಣ ಸಮುಚ್ಚಯ". ಇದು ಕಾರಿಕಾ ರೂಪದಲ್ಲಿವೆ. ಇದಕ್ಕೆ ಇವನು ತಾನೇ ವೃತ್ತಿಯನ್ನು ಬರೆದಿದ್ದನು. ಈಗ ಲುಪ್ತವಾಗಿದೆ. ಆದರೆ ಅದರ ಟಿಬೆಟ್ ಭಾಷೆಯಲ್ಲಿ ಇವರ ಪರಿವರ್ತನೆಯೂ ಇದೆ. ಈ ಪ್ರಮಾಣ ಸಮುಚ್ಚಯದಲ್ಲಿ ಆರು ಪರಿಚ್ಛೇದ (ಅಧ್ಯಾಯ)ಗಳಿವೆ. ೧. ಪ್ರತ್ಯಕ್ಷ. ೨. ಸ್ವಾರ್ಥಾನುಮಾನ ೩. ಪರಾರ್ಥಾನುಮಾನ. ೪. ಹೇತು ದೃಷ್ಟಾಂತ, ೫. ಅಪೋಹ. ೬ ಜಾತಿ ಇವೇ ಮೊದಲಾದ ಆ ಆರು ಪರಿಚ್ಛೇದಗಳ ವಿಷಯ. ಇದರಲ್ಲಿ ಪ್ರಥಮ ಪರಿಚ್ಛೇದಕ್ಕೆ ತಿಬೆಟ್ ಭಾಷೆಯಲ್ಲಿ ಪರಿವರ್ತನೆ ಇದೆ. ನಾಲ್ಕು ಪ್ರಮಾಣಗಳಲ್ಲಿ ಪ್ರತ್ಯಕ್ಷ ಮತ್ತು ಅನುಮಾನ -ಇವೆರಡನ್ನೇ ದಿಜ್ಞಗನು ಸ್ವೀಕರಿಸಿರುವನು. ಈ ಪ್ರಮಾಣ ಸಮುಚ್ಚಯವಲ್ಲದೆ ಇನ್ನೂ 6-7 ಗ್ರಂಥಗಳನ್ನೂ ಬರೆದಿರುವನು. ಅವುಗಳ ಹೆಸರುಗಳನ್ನು ಮುಂದೆ ಕೊಡಲಾಗಿದೆ.

ವಾತ್ಸ್ಯಾಯನರ್ಕೆ ಭಾಷ್ಯಕ್ಕೆ ವಾರ್ತಿಕ, ಟೀಕೆ, ಮೊದಲಾದವು ಬೆಳೆದಂತೆ, ಇವನ ಪ್ರಮಾಣ ಸಮುಚ್ಚಯಕ್ಕೂ ಅನೇಕ ವಿಸ್ತಾರವು ನಡೆದಿದೆ. ಅವು ಹೀಗಿವೆ. ೧. ಧರ್ಮಕೀರ್ತಿಯ (ಕ್ರಿ. ಶ.50) ಪ್ರಮಾಣ ವಾರ್ತಿಕ ಸಂಚಿಕಾ ೨. ಮತ್ತು ಪ್ರಮಾಣವಾರ್ತಿಕ ಪಂಚಿಕಾಟೀಕಾ ೩. ರವಿಗುಪ್ತನ (ಕ್ರಿ. ಶ. 775) ವಾತಿಕ ವೃತ್ತಿ, ೫. ಜಿನೇಂದ್ರ ಬೋಧಿಯ ವಿಶಾಲಮಲವತೀನಾಮಪ್ರಮಾಣ ಸಮುಚ್ಚಯ ಟೀಕಾ ೬. ಪ್ರಜ್ಞಾಕರಗುಪ್ತನ ಪ್ರಮಾಣವಾರ್ತಿಕಾಲಂಕಾರ ಸಿದ್ಧಸೇನ ದಿವಾಕರ -ಇವನ ಜೀವನ ವಿಷಯದಲ್ಲಿ ಏನೂ ಬೇಕಿಲ್ಲ ಇವನ ಕಾಲ ಕ್ರಿ ಶ. 480-550 ಎಂದು ನಿಶ್ಚಿತವಾಗಿದೆ. ಇವನ ಪ್ರಸಿದ್ಧ ತರ್ಕ ಗ್ರಂಥವೇ ನ್ಯಾಯಸಾರ ಇವನಿಗೆ ಹಿಂದೆಯೂ ಎರಡನೇ ಭದ್ರಬಾಹು ಮತ್ತು ಉಮಸ್ವಾತಿ ಮೊದಲಾದವರು ತರ್ಕಮಾರ್ಗದಲ್ಲಿ ನಡೆದಿದ್ದರು ಆದರೆ ಆ ಸಿದ್ಧಾಂತದಲ್ಲಿ ತರ್ಕಚಾರ್ಯಸ್ಥಾನವು ಸಿದ್ಧ ಸೇನನಿಗೆ ಸಂದಿದೆ

## ಬೌದ್ಧ ನ್ಯಾಯ ಗ್ರಂಥಗಳು ಮತ್ತು ಆಚಾರ್ಯರು

1. ದಿಙ್ನಾಗ (450-520) a) ಪ್ರಮಾಣ ಸಮುಚ್ಚಯ b) ಪ್ರಮಾಣ ಸಮುಚ್ಚಯವೃತ್ತಿ c) ನ್ಯಾಯ ಪ್ರವೇಶ d) ಪ್ರಮಾಣ ಶಾಸ್ತ್ರ ನ್ಯಾಯ ಪ್ರವೇಶ e) ಹೇತು ಚಕ್ರ f) ತ್ರಿಕಾಲ ಪರೀಕ್ಷಾ g) ಆಲಂಬನ ಪರೀಕ್ಷಾ h) ಆಲಂಬನ ಪರೀಕ್ಷಾ ವೃತ್ತಿ.

2. ಪರಮಾರ್ಥ (498-569) a) ವಸುಬಂಧುವಿನ ತರ್ಕಶಾಸ್ತ್ರಕ್ಕೆ ಚೀನೀ ಅನುವಾದ ಮಾಡಿ ಆದೇಶಕ್ಕೆ ಹೋದವನು b) ಇವನು ನ್ಯಾಯ ಸೂತ್ರಕ್ಕೂ ಭಾಷ್ಯ ಬರೆದಿರುವನು.

3) ಶಂಕರ ಸ್ವಾಮಿ 550 ಇವನು ದಿಙ್ನಾಗನ ಶಿಷ್ಯ. ಇವನ ಗ್ರಂಥ "ಹೇತು ವಿದ್ಯಾನ್ಯಾಯಪ್ರವೇಶ ಶಾಸ್ತ್ರ" ಅಥವಾ ನ್ಯಾಯ ಪ್ರವೇಶ ತರ್ಕ ಶಾಸ್ತ್ರ.

4) ಧರ್ಮಪಾಲ 600-635 a) ಆಲಂಬನ ಪ್ರತ್ಯಯ ಧ್ಯಾನ ಶಾಸ್ತ್ರ ವ್ಯಾಖ್ಯಾ b) ವಿದ್ಯಾ ಮಾತ್ರ ಸಿದ್ಧಿ ಶಾಸ್ತ್ರ ವ್ಯಾಖ್ಯಾ c) ಶತ್ಶಾಸ್ತ್ರ ವೈಪುಲ್ಯ ವ್ಯಾಖ್ಯಾ

5) ಆಚಾರ್ಯ ಶೀಲಭದ್ರ 635- ಇವನು ನಲಂದ ವಿಶ್ವವಿದ್ಯಾನಿಲಯದಲ್ಲಿ ಧರ್ಮಪಾಲನಲ್ಲಿ ಅಧ್ಯಯನ ಮಾಡಿ, ಅಲ್ಲೇ ಆಚಾರ್ಯನಾಗಿ, ಹೂಯಂತ್ಸಾಂಗ್‌ನಿಗೆ ಪಾಠಹೇಳಿಕೊಟ್ಟಿರುವನು.

6. ಧರ್ಮಕೀರ್ತಿ -560 (a) ತ್ರಮಾಣ ವಾರ್ತಿಕ *ಕಾರಿಕಾ (b) ಪ್ರಮಾಣವಾರ್ತಿಕ ವೃತ್ತಿ c) ಪ್ರಮಾಣ ನಿಶ್ಚಯ d) ನ್ಯಾಯ ಬಿಂದು e) ಹೇತು ಬಿಂದು ವಿವರಣ f)ತರ್ಕನ್ಯಾಯ ಅಥವಾ ವಾದನ್ಯಾಯ g) ಸಂತಾನಾಂತರ ಸಿದ್ಧಿ h)ಸಂಬಂಧ ಪರೀಕ್ಷಾ i) ಸಂಬಂಧ ಪರೀಕ್ಷಾವೃತ್ತಿ

7. ದೇವೇಂದ್ರ ಬೋಧಿ 650- ಪ್ರಮಾಣವಾರ್ತಿಕ ಪಂಚಿಕಾ

8. ಶಾಕ್ಯಬೋಧಿ 675 - ಪ್ರಮಾಣ ವಾರ್ತಿಕ ಪಂಚಿಕಾ ಟೀಕಾ

9. ವಿನೀತ ದೇವ 700 - a) ನ್ಯಾಯ ಬಿಂದು ಟೀಕಾ b) ಹೇತು ಬಿಂದು ಟೀಕಾ c) ವಾದಾನ್ಯಾಯ ವ್ಯಾಖ್ಯಾ d) ಸಂಬಂಧ ಪರೀಕ್ಷಾ ಟೀಕಾ e) ಆಲಂಬನ ಪರೀಕ್ಷಾ ಟೀಕಾ f) ಸಂತಾನಾಂತರ ಸಿದ್ಧಿ ಟೀಕಾ

10. ರವಿಗುಪ್ತ 725 - ಪ್ರಮಾಣ ವಾರ್ತಿಕ ವೃತ್ತಿ

11. ಜೀನೇಂದ್ರ ಬೋಧಿ 725 - ವಿಶಾಲಾಮಲವತೀ ನಾಮಪ್ರಮಾಣ ಸಮುಚ್ಚಯ ಟೀಕಾ

12. ಶಾಂತರಕ್ಷಿತ 749 (a) ತತ್ವ ಸಂಗ್ರಹಕಾರಿಕಾ b) ವಾದ ನ್ಯಾಯವೃತ್ತಿ ವಿಪಶ್ಚಿತಾರ್ಥ

13. ಕಮನಶೀಲ 750 - a) ನ್ಯಾಯ ಬಿಂದು ಪೂರ್ವ ಪಕ್ಷ ಸಂಕ್ಷಿಪ್ತ, b) ತತ್ವಸಂಗ್ರಹ ಪಂಚಿಕಾ

14. ಕಲ್ಯಾಣರಕ್ಷಿತ 829 - a) ಸರ್ವಜ್ಞ ಸಿದ್ಧಿಕಾರಿಕಾ b) ಬಾಹ್ಯಾರ್ಥ ಸಿದ್ಧಿಕಾರಿಕಾ c) ಅನ್ಯಾಪೋಹ ವಿಚಾರ ಕಾರಿಕಾ d) ಈಶ್ವರ ಭಂಗ ಕಾರಿಕಾ. e) ಶ್ರುತಿ ಪರೀಕ್ಷಾ.

15. ಧರ್ಮೋತ್ತರಾಚಾರ್ಯ 840 - (a) ನ್ಯಾಯ ಬಿಂದು ಟೀಕಾ b) ಪ್ರಮಾಣ ಪರೀಕ್ಷಾ c) ಅಪೋಹನಾಮಪ್ರಕರಣಂ d) ಪರಲೋಕ ಸಿದ್ಧಿ e) ಕ್ಷಣಭಂಗಸಿದ್ಧಿ f) ಪ್ರಮಾಣವಿನಿಶ್ಚಯ ಟೀಕಾ

16. ಮುಕ್ತಾಕುಂದ 900-ಕ್ಷಣಭಂಗ ಸಿದ್ಧಿವ್ಯಾಖ್ಯಾ

17. ಅರ್ಚಟ 900- ಹೇತು ಬಿಂದು ವಿವರಣ

18. ಅಶೋಕ 900- a) ಅವಯವಿನಿರಾಕರಣ b) ಸಾಮಾನ್ಯ ದೂಷಣದಿಕ್ಪ್ರಸಾರಿತಾ

19. ಚಂದ್ರಗೋಮಿನ್ 925- ನ್ಯಾಯಸಿದ್ಧ್ಯಾಲೋಕ

20. ಪ್ರಜ್ಞಾಕರ ಗುಪ್ತ -a) ಪ್ರಮಾಣವಾರ್ತಿಕಾಲಂಕಾರ b) ಸಹಾನ ಲಂಬನನಿಯಮ

21. ಆಚಾರ್ಯ ಚೇತಾರಿ 980 a) ಹೇತುತ್ತ್ವೋಪದೇಶ b) ಬಾಲಾವತಾರ ತರ್ಕ c) ಧರ್ಮಧರ್ಮಿ ವಿನಿಶ್ಚಯ

22 ಜಿನ 940- ಪ್ರಮಾಣ ವಾರ್ತಿಕಾಲಂಕಾರ ಟೀಕಾ

23. ರತ್ನಕೀರ್ತಿ 1000 a) ಅಪೋಹಸಿದ್ಧಿ b) ಕ್ಷಣಭಂಗ ಸಿದ್ಧಿ

24. ರತ್ನವಜ್ರ 1040 - ಯುಕ್ತಿ ಪ್ರಯೋಗ

25. ಜಿನಮಿತ್ರ 1024 - ನ್ಯಾಯಬಿಂದು ಪಿಂಡಿತಾರ್ಥ

26. ದಾನಶೀಲ 1024 - ಪುಸ್ತಕ ಪಾಠೋಪಾಯ

27. ಜ್ಞಾನ ಶ್ರೀಮಿತ್ರ 1040 - ಕಾರ್ಯಕಾರಣ ಭಾವಸಿದ್ಧಿ

28. ಜ್ಞಾನಶ್ರೀಭದ್ರ 1050 - ಪ್ರಮಾಣನಿಶ್ಚಿಯ ಟೀಕಾ

29. ರತ್ನಾಕರ ಶಾಂತಿ 1040 - a) ವಿಜ್ಞಾಪ್ತಿಮಾತ್ರ ಸಿದ್ಧಿ b) ಅಂತರ್ವ್ಯಾಪ್ತಿ

30. ಯಮಾರಿ 1050 - ಪ್ರಮಾಣವಾರ್ತಿಕಾಲಂಕಾರ ಟೀಕಾ

31. ಶಂಕರಾನಂದ 1050 -a) ಪ್ರಮಾಣ ವಾರ್ತಿಕ ಟೀಕಾ b) ಸಂಬಂಧ ಪರೀಕ್ಷಾನುಸಾರ c) ಅಪೋಹ ಸಿದ್ಧಿ d) ಪ್ರತಿಬಿಂಬಸಿದ್ಧಿ 32-ಶುಭಾಕರ ಗುಪ್ತ -1080 -1127ರ ಜೈನ ಹರಿಭದ್ರ ಸೂರಿಯು ಇವನನ್ನು ಉಲ್ಲೇಖಿಸಿರುವನು. ಗ್ರಂಥವಿಲ್ಲ.

33. ಮೋಕ್ಷಾಕರ ಗುಪ್ತ 1100 a) ತರ್ಕಭಾಷಾ ಇವರ ಟಿಬೆಟ್ ಭಾಷಾ ಪರಿವರ್ತನೆ ಮಾತ್ರವಿದೆ. ಸಂಸ್ಕೃತಿ ಗ್ರಂಥವು ಲುಪ್ತವಾಗಿದೆ.

**ಜೈನ ನ್ಯಾಯಗ್ರಂಥಗಳು ಮತ್ತು ಆಚಾರ್ಯರು**

1. ಸಿದ್ಧಸೇನ ದಿವಾಕರ 480-550 -ನ್ಯಾಯಸಾರ

2. ಜಿನಭದ್ರಗಣೀ 484 - 588 ವಿಶೇಷಾವಶ್ಯಕ ಭಾಷ್ಯ

3) ಸಿದ್ಧಸೇನಗಣೀ 600 ಉಮಾಸ್ವಾತಿಯ ತತ್ತ್ವಾಧಿಗಳು ಸೂತ್ರಕ್ಕೆ ತತ್ತ್ವಾರ್ಥಟೀಕಾ

4) ಸಮಂತ್ತಭದ್ರ 600- ೧. ಉಮಾಸ್ವಾತಿಯ ತತ್ತ್ವಾರ್ಥಗಾಮಸೂತ್ರಕ್ಕೆ -ಗಂಧ ಹಸ್ತೀ ಮಹಾ ಭಾಷ್ಯ 2) ಆಪ್ತ ಮೀಮಾಂಸಾ 3) ಮುಕ್ತ್ಯಯಾನುಶಾಸನ 4) ರತ್ನಕರಂಡಕ

5) ಅಕಲಂಕದೇವ 750- 1)ಆಪ್ತಮೀಮಾಂಸದ ಮೇಲೆ ಅಷ್ಟಶತೀ ಟೀಕಾ. 2) ನ್ಯಾಯವಿನಿಶ್ಚಯ 3) ಲಘೀಯತ್ರಯ 4) ತತ್ತ್ವಾರ್ಥವಾರ್ತಿಕ ವ್ಯಾಖ್ಯಾನಾಲಂಕಾರ 5)ಅಕಲಂಕ ಸ್ತೋತ್ರ 6) ಸ್ವರೂಪಸಂಬೋಧನ

6) ವಿದ್ಯಾವಂತ 800 -1) ಆಪ್ತಮೀಮಾಂಸಲಂಕೃತೀಯತ್ ಅಷ್ಟಸಾಹಸ್ತ 2) ಪ್ರಮಾಣ ಪರೀಕ್ಷಾ. 3) ಆಪ್ತ ಪರೀಕ್ಷಾ. 4) ತತ್ತ್ವಾರ್ಥಶ್ಲೋಕದಾರ್ತಿಕ.

7) ಮಾಣ್ಯಕನಂದೀ 800-ಪರೀಕ್ಷಾಮುಖಸೂತ್ರ

8) ಪ್ರಭಾಚಂದ್ರ 825 -ಪ್ರಮೇಯ ಕಮಲಮಾರ್ತಾಂಡನ್ಯಾಯಕುಮುದ ಚಂದ್ರೋದಯ

9. ಮಲ್ಲವಾದಿನ್ 827 - ನ್ಯಾಯ ಬಿಂದು ಟೀಕಾ

10. ರಭಸನಂದೀ 850- ಸಂಬಂಧೋದ್ಯೋತ

11. ಅಮೃತ ಚಂದ ಸೂರಿ 950 - 1) ತತ್ತ್ವಾರ್ಥಸಾರ 2) ಆತ್ಮಖ್ಯಾತಿ

12. ದೇವಸೇನ ಭಟ್ಟಾರಕ 899 - 950 - 1) ನ್ಯಾಯಚಕ್ರ 2) ದರ್ಶನಸಾರ

13. ಪ್ರದ್ಯುಮ್ನ ಸೂರಿ 980

14 ಅಭಯದೇವ ಸೂರಿ 1000-1) ವಾದಮಹಾರ್ಣವಂ 2) ಸಮ್ಮತಿ ತರ್ಕ ಸೂತ್ರದ ಮೇಲೆ ತತ್ತ್ವಾರ್ಥ ಬೋಧ ವಿದಾಯಿನೀ

15. ಲೀಮಸ ಮಂತ ಭದ್ರ 100 - ಅಷ್ಟ ಸಾಹಸ್ರೀ ವಿಷಯ ಪದ ತಾತ್ಪರ್ಯ ಟೀಕಾ

16. ಕಲ್ಯಾಣ ಚಂದ್ರ 1000 - ಪ್ರಮಾಣ ವಾರ್ತಿಕಾ ಟೀಕಾ

17. ಅನಂತವೀರ 1039 - a) ಪರೀಕ್ಷಾ ಮುಖಪಂಚಿಕಾ 2) ನ್ಯಾಯವಿನಿಶ್ಚಯ ವೃತ್ತಿ

18. ದೇವಸೂರಿ 1086-1) ಪ್ರಮಾಣನಯತತ್ತ್ವಲೋಕಾಲಂಕಾರ. 2) ಸ್ಯಾದ್ವಾದ ರತ್ನಾಕರ

19. ಚಂದ್ರಪ್ರಭಸೂರಿ 1102 - 1) ದರ್ಶನಶುದ್ಧಿ 2) ನ್ಯಾಯಾವತಾರ ವೃತ್ತಿ

20. ಹೇಮಚಂದ್ರಸೂರಿ - 1088 -1172- 1) ಪ್ರಮಾಣ ಮೀಮಾಂಸ 2) ಅಭಿಧಾನ ಚಿಂತಾಮಣಿ 3) ಕಾವ್ಯಾನುಶಾಸ್ತ್ರವೃತ್ತಿ 4) ಛಂದೋನುಶಾಸ್ತ್ರವೃತ್ತಿ 5) ಅನೇಕಾರ್ಥ ಸಂಗ್ರಹ 6) ದ್ವಾದಶ್ಯಮಹಾಕಾವ್ಯ 7) ತ್ರಿಷಷ್ಟಿಶಲಾಕಾಪುರುಷ ಚರಿತ 8) ಯೋಗ ಶಾಸ್ತ್ರ 9) ನಿಘಂಟುಶೇಷ.

21. ನೇಮಿಚಂದ್ರ ಕವಿ 1150 - ಪಾರ್ಶ್ವನಾಥ ಚರಿತ್ರದಲ್ಲಿ ಕಾಣಾಂದರ ಖಂಡನ.

22. ಆನಂದಸೂರಿ 1093-1165

23. ಅಮರಚಂದ್ರಸೂರಿ

24. ಹರಿಭದ್ರಸೂರೀ 1120 (1) ಷಡ್ದರ್ಶನ ಸಮುಚ್ಚಯ 2) ನ್ಯಾಯಪ್ರವೇಶಕ ಸೂತ್ರ 3) ನ್ಯಾಯಾವತಾರ ವೃತ್ತಿ 4) ದಶವೈಕಲಿಕಾ ನಿರ್ಯುಕ್ತಿ ಟೀಕಾ

25. ಪಾರ್ಶ್ವದೇವಗಣೀ 1133-ನ್ಯಾಯಪ್ರವೇಶ ಪಂಜಿಕಾ

26. ಶ್ರೀಚಂದ್ರ 1137 - ನ್ಯಾಯಪ್ರವೇಶ ಟಿಪ್ಪಣಿ

27. ದೇವಭದ್ರ 1150- ನ್ಯಾಯಾವತಾರ ಟಿಪ್ಪಣಿ

28. ಚಂದ್ರಸೇನಸೂರಿ 1150- ಉತ್ಪಾದಸಿದ್ಧಿ ಪ್ರಕರಣ

29. ರತ್ನಪ್ರಭಸೂರೀ 1181-ಸ್ಯಾದ್ವಾದ ರತ್ನಾಕರಾವತಾರಿಕಾ

30. ತಿಲಕಾಚಾರ್ಯ 1180 - 1240 (1) ಅವಶ್ಯಕಾಲಘುವೃತ್ತಿ (2) ಪ್ರತ್ಯೇಕ ಬುದ್ಧ ಚರಿತ

31. ಮಲ್ಲಿಸೇನಸೂರೀ 1292- ಸ್ಯಾದ್ವಾದ ಮಂಜರೀ

32. ರಾಜಶೇಖರಸೂರೀ 1348 - (1) ರತ್ನಾವತಾರಿಕಾ ಪಂಜಿಕಾ. (2) ನ್ಯಾಯಕಂದಲೀ ಪಂಜಿಕಾ

33. ಜ್ಞಾನಚಂದ್ರ 1650-ರತ್ನಾವತಾರಿಕಾ ಟಿಪ್ಪಣಿ

34. ಗುಣರತ್ನ 1409 - ಷಡ್ದರ್ಶನ ಸಮೂಚ್ಚಯದ ಮೇಲೆ ತರ್ಕ ರಹಸ್ಯ ದೀಪಿಕಾ ವೃತ್ತಿ

35. ಶ್ರುತಸಾಗರಗಣೀ 1493 - ತತ್ತ್ವಾರ್ಥದೀಪಿಕಾ

36. ಧರ್ಮಭೂಷಣ 1600 - ನ್ಯಾಯದೀಪಿಕಾ

37. ವಿನಯವಿಜಯ 1613 - 1681 -ನ್ಯಾಯಕರ್ಣಿಕಾ

38 ಯಶೋ ವಿಜಯಗಣೀ 1608 -1688 (1) ನ್ಯಾಯಪ್ರದೀಪ (2) ತರ್ಕ ಭಾಷಾ (3) ನ್ಯಾಯರಹಸ್ಯ (4) ನ್ಯಾಯಾಮೃತ ತರಂಗಿಣೀ (5) ನ್ಯಾಯ ಖಂಡ ಖಾದ್ಯ (6) ಅಷ್ಟ ಸಾಹಸ್ರೀ ವಿವರಣ (7) ನ್ಯಾಯಲೋಕ

ನವೀನ ನ್ಯಾಯಕ್ಕೆ ಅಂಕುರಾರ್ಪಣ ಬೌದ್ಧ ದರ್ಶನವು ತರ್ಕದ ಬಲಿದಿಂದ ತನ್ನ ಸಿದ್ಧಾಂತವನ್ನೂ ಸ್ಥಾಪಿಸಿ ನಿಲ್ಲಲು ಅಸಮರ್ಥವಾಗಿ ಹೊರದೇಶಕ್ಕೆ ವಲಸೆಹೋದ ಮೇಲೂ ಜೈನ ದರ್ಶನಾನುಯಾಯಿಗಳು ಇಲ್ಲೇ ಇದ್ದು, ಮಧ್ಯೇಮಧ್ಯೆ ಪ್ರತಿಭಟಿಸುತ್ತಿದ್ದುದರಿಂದ. ನಮ್ಮಲ್ಲಿ ವೈಶೇಷಿಕ ಮತ್ತು ನ್ಯಾಯ ಎನ್ನುವ ಎರಡು ಶಾಖೆಯನ್ನು ಬೇರೆ ಬೇರೆಯಾಗಿ ಇಟ್ಟಿರುವುದು ಅಪಾಯವೆಂದೂ ಅನವಶ್ಯಕವೆಂದೂ ಮೊದಲೇ ಮನಗಂಡ ಉದಯನಾಚಾರ್ಯರು ಸ್ವತಂತ್ರವಾದ ಕ್ರಮವನ್ನು ತಮ್ಮ ನ್ಯಾಯ ಕುಸುಮಾಂಜಲಿ ಮತ್ತು ಆತ್ಮತತ್ವವಿವೇಕದಲ್ಲಿ ತೋರಿಕೊಟ್ಟಿರುವರು. ಇವರ ಕಾಲದವನಾದ ಭಾಸರಜ್ಞನು ತನ್ನ ನ್ಯಾಯ ಸಾರದಲ್ಲಿ ಗೌತಮಹ ಅಭಿಪ್ರಾಯಕ್ಕೆ ಪೂರ್ಣ ಸಹಕಾರಗಳನ್ನೂ ತೋರಿಸಿದ್ದರೂ. ನ್ಯಾಯ ಮತ್ತು ವೈಶೇಷಿಕವೆನ್ನುವ ಎರಡು ಸಂಪ್ರದಾಯಗಳಿಗೂ ಒಪ್ಪುವ ವಾದ ಸರಣಿಯನ್ನು ಮುಂದಿಟ್ಟಿರುವರು. ಕ್ರಿ. ಶ 5 ಮತ್ತು 6ನೇ ಶತಮಾನದ ದಿಙ್ನಾಗಳು ವಾತ್ಸಾಯನ ಭಾಷ್ಯವನ್ನು ಖಂಡಿಸುವುದರಿಂದ ನ್ಯಾಯ ವೈಶೇಷಿಕವೆರಡೂ ವಿಹತಿಹೊಂದುತ್ತದೆಂದು ತಿಳಿದಿದ್ದರಿಂದ. ವಾತ್ಸಾಯನ ಭಾಷ್ಯಕಾಲದಿಂದಲೇ ವಿದ್ವಾಂಸರಲ್ಲಿ ಎರಡೂ ಸಂಪ್ರದಾಯಗಳೂ ಒಂದೇ ಧ್ಯೇಯವುಳ್ಳದ್ದು ಎನ್ನುವ ಅಭಿಪ್ರಾಯವು ಕೂಡಿ ಬಂದಿರುವಂತಿದೆ. ಆದರೂ ಸರಿಯಾದ ಏಕೀಕರಣ ಮತ್ತು ವಾದದ ನವೀನತೆಯು ಉದಯನಾಚಾರ್ಯರಾದ ಮೇಲೆಯೇ ನಿರ್ದಿಷ್ಟ ರೂಪವನ್ನೂ ತಾಳಿದೆ.

ನ್ಯಾಯ ವೈಶೇಷಿಕಗಳ ಏಕೀಕರಣಕ್ಕೆ ಮೂಲಪುರುಷರು ಮೂವರೆಂದು ನಾವು ನಿರ್ವಿವಾದವಾಗಿ ಹೇಳಬಹುದು- ಅವರು ಕ್ರಿ.ಶ. 11 ನೇ ಶತಮಾನದ ಶಿವಾದಿತ್ಯ, 12ನೇ ಶತಮಾನದ ಶ್ರೀವರದರಾಜ, 13ನೇ ಶತಮಾನದ ಕೇಶವ ಮಿಶ್ರ ಶಾಸ್ತ್ರೀಯವಾಗಿ ಏಕೀಕರಣಮಾಡುವುದರಲ್ಲಿ ಯಶಸ್ಸನ್ನು ಗಳಿಸಿದವನು ಗಂಗೇಶನು ಮಾತ್ರ.

ಈ ಏಕೀಕರಣವು ಮತ್ತು ನವೀನತೆಯು ಮೂರು ಕ್ರಮದಲ್ಲಿ ನಡೆದಿರುವುದು ಕಂಡು ಬರುತ್ತದೆ. ಪ್ರಾಚೀನ ನ್ಯಾಯಪದ್ಧತಿಯನ್ನು ಉಪೇಕ್ಷೆ ಮಾಡಿ ಸ್ವತಂತ್ರಾ ರೂಪದಲ್ಲಿ ಗ್ರಂಥ ನಿರ್ಮಾಣ ಮಾಡಿರುವುದು ಒಂದು -ಈ ಪದ್ಧತಿಯು ತರ್ಕ ಶಾಸ್ತ್ರಕ್ಕೆ ಮೀಸಲಾಗಿಲ್ಲದೆ. ಮಿಕ್ಕ ಶಾಸ್ತ್ರಾಧ್ಯಯನದಲ್ಲಿ ಉಪಕಾರಕವಾಯಿತು. ವ್ಯಾಕರಣ. ಮೀಮಾಂಸಾ. ಸಾಂಖ್ಯಯೋಗ ಮತ್ತು ವೇದಾಂತ ಈ ಸಿದ್ಧಾಂತಗಳೆಲ್ಲವೂ ಪೂರ್ವಪಕ್ಷಸಿದ್ಧಾಂತವೆನ್ನುವ ಎರಡು ಧಾಟಿಯನ್ನೂ ಅನುಸರಿಸಿ ಈ ಹೊಸ ಪೀಳಿಗೆಗೆ ತೇಜಸ್ಸನ್ನು ಕೊಟ್ಟಿದೆ. ಇಲ್ಲಿಯವರಿಗೂ ಅನುಸರಿಸಲಾಗಿದ್ದ ಪದಾರ್ಥ ನಿರೂಪಣೆ. ಮತ್ತು ಆ ಪದಾರ್ಥಗಳಲ್ಲಿ ಸೇರಿರುವ ಬುದ್ಧಿ ಎನ್ನುವ ತತ್ವವನ್ನು ವಿಮರ್ಶಿಸುವಾಗ ಪ್ರಮಾಣಕ್ಕೆ ರೂಪವನ್ನು ಚೆನ್ನಾಗಿ ವಿಮರ್ಶಿಸಿಕೊಂಡು ಅದರಿಂದ ಗೋಚರವಾಗುವುದನ್ನು ಪ್ರಮೇಯವೆಂದು ಹೇಳಿ. ಪ್ರಮಾಣ ನಿರೂಪಣೆಗೆ ಪ್ರಾಧಾನ್ಯತೆಯನ್ನು ಕೊಟ್ಟಿರುವುದು - ಎರಡು. ಸಿದ್ಧಾಂತದಲ್ಲಿ ಪ್ರಕರಣ ಗ್ರಂಥಗಳನ್ನು ಬೆಳೆಸಿದ್ದು ಮೂರು. ಪ್ರಕರಣ ಗ್ರಂಥ ಎನ್ನುವುದಕ್ಕೆ ಈ ಲಕ್ಷಣವಿದೆ.

ಶಾಸ್ತ್ರೈಕ ದೇಶ ಸಂಬಂದ್ಧಂ ಶಾಸ್ತ್ರಕಾರಾಂತರೇ ಸ್ಥಿತಂ
ಆಹುಃ ಪ್ರಕರಣಂ ನಾಮ ಗ್ರಂಥಭೇಧಂ ವಿಪಶ್ಚಿತಃ

ಅಂದರೆ ಒಂದು ಶಾಸ್ತ್ರದ ಒಂದು ಅಂಶಕ್ಕೆ ಸೇರಿ ಅದೇ ಅನ್ಯಶಾಸ್ತ್ರದಲ್ಲೂ ಬೇರೆ ರೀತಿಯಲ್ಲಿ ಇರುವುದೆನ್ನುವುದನ್ನು ಕಂಡು ಅದಕ್ಕೆ ಏಕಾಂತ ದೃಷ್ಟಿ ಕೊಟ್ಟು ರಚಿಸಿದ ಗ್ರಂಥವೇ ಪ್ರಕರಣ ಗ್ರಂಥ.

ಶಿವಾದಿತ್ಯ ಮೊದಲಾದ ಮೂವರು ನವೀನ ನ್ಯಾಯಕ್ಕೆ ನಾಂದಿಯನ್ನು ಮಾಡಿದರೂ, ನವ್ಯನ್ಯಾಯಕ್ಕೆ ತಂದೆಯಾದವನು ಗಂಗೇ ಶೋಪಾಧ್ಯಯನೇ. ನ್ಯಾಯಶಾಸ್ತ್ರದ ಇತಿಹಾಸವನ್ನೇ ಮಾರ್ಪಡಿಸಿದ್ದು ಇವನ ತತ್ವ ಚಿಂತಾಮಣಿ. ಇವನು ಮೈಥಿಲ ದೇಶದವನು. ಇವನ ಕಾಲವು ಕ್ರಿ. ಶ. 1200-1250 ಎಂದು ನಿಶ್ಚಿತವಾಗಿದೆ. ಇವನಾದ ಮೇಲೆ 16ನೇ ಶತಮಾನದಲ್ಲಿ ವಾಸುದೇವ ಸಾರ್ವಭೌಮನೆನ್ನುವ ಮಿಥಿಲಾ ದೇಶದ ವಿದ್ವಾಂಸನು ನವದ್ವೀಪವೆಂದು ಪ್ರಸಿದ್ಧವಾದ ಬಂಗಾಳ ದೇಶಕ್ಕೆ ಹೋಗಿ ಅಲ್ಲಿ ಅಧ್ಯಯನಕ್ಕೆ ಏರ್ಪಾಡು ಮಾಡಿದನು. ಅಲ್ಲಿಯ ವಿದ್ಯಾಪೀಠವು ಸ್ಥಾಪಿತವಾದ ಮೇಲೆ ಅವನ ಶಿಷ್ಯರಲ್ಲಿ ಒಬ್ಬನಾದ ರಘುನಾಥ ಶಿರೋಮಣಿಯು ಇಡೀ ಬಂಗಾಳಾ ದೇಶದಲ್ಲಿ ಈ ನವ್ಯ ನ್ಯಾಯವನ್ನು ಪ್ರಚಾರಮಾಡಿದನು. ಇದು ಕ್ರಮೇಣ ಮಹಾರಾಷ್ಟ್ರ, ಕಾಶ್ಮೀರ, ದಕ್ಷಿಣದೇಶಕ್ಕೆ ಹರಡಿ ಎಲ್ಲೆಲ್ಲೂ ಪ್ರಚಾರದಲ್ಲಿರುವಂತಾಯಿತು. ಕ್ರಿ. ಶ. 1503 ರಲ್ಲಿ ನವದ್ವೀಪದ ವಿದ್ಯಾಪೀಠವು ಸ್ಥಾಪಿತವಾಯಿತು. ಅದಕ್ಕೆ ಮುಂಚೆ ಮಿಥಿಲಾ ದೇಶದಲ್ಲಿ ಮಾತ್ರ ನವ್ಯನ್ಯಾಯವು ಅಭ್ಯಸಿಲ್ಪಡುತ್ತಿತ್ತು. ಈಗಲ್ಲೂ ಮಿಥಿಲಾ ಮತ್ತು ನವದ್ವೀಪ ಇವೆರಡೂ ತಮ್ಮ ತಮ್ಮ ಸಂಪ್ರದಾಯವನ್ನು ಕಾಪಾಡಿಕೊಂಡು ಬಂದಿರುತ್ತದೆ.

ಒಟ್ಟಿನಲ್ಲಿ ಶಿವಾದಿತ್ಯ, ವರದರಾಜ ಮತ್ತು ಕೇಶ ಮಿಶ್ರರಿಂದ ದೃಷ್ಟಿಕೋನವು ಪ್ರಾರಂಭವಾಗಿ, ಗಂಗೇಶನಿಂದ ನವೀನನ್ಯಾಯಕ್ಕೆ ಒಂದು ಮೂಲಗ್ರಂಥವೇ ಬರೆಯಲ್ಪಟ್ಟಿತು. ಇವನಿಗೆ ಸಹಾಯಕವಾಗಿ ವಲ್ಲಭಾಚಾರ್ಯನ (ಕ್ರಿ. ಶ. 12ನೇ ಶತಮಾನ) ನ್ಯಾಯ ಲೀಲಾವತಿಯೂ, ಅದಾದಮೇಲೆ ಶಶಿಧರನ ನ್ಯಾಯ ಸಿದ್ಧಾಂತ ದೀಪವು ಇದ್ದಿರಬೇಕು.

ಶಿವಾದಿತ್ಯ- (ಕ್ರಿ. ಶ. 11ನೇ ಶತಮಾನ) ವೈಶೇಷಿಕ ಸೂತ್ರಕ್ಕೆ ಇರುವ ಪ್ರಶಸ್ತಪಾದ ಭಾಷ್ಯಕ್ಕೆ ಉದ್ಯೋತಕಾರನ ಮತ್ತು ಉದಯನರ ವ್ಯಾಖ್ಯಾನವಲ್ಲದೆ "ಕ್ಷೇಮವತೀ" ಎನ್ನುವ ಮತ್ತೊಂದು ವ್ಯಾಖ್ಯಾನವನ್ನು ಕೊಟ್ಟಿರುವ ವ್ಯೋಮಶಿವನೇ ಇವನೆಂದು ಪ್ರೊ.ಕೀತನು ಹೇಳಿರುವನು. ಇದು ಸರಿ ಎಂದು ತೋರುವುದಿಲ್ಲ. ವರ್ಧಮಾನೋಪಾಧ್ಯಾಯನು ಹೇಳಿರುವುದನ್ನು ನಂಬಿದರೆ ವ್ಯೋಮಶಿವನು ಉದಯನರಿಗೆ ಹಿಂದಿನವನು. ಇದರ ಆಧಾರದ ಮೇಲೆ ಪ್ರಾಯಶಃ ಧರ್ಮೇಂದ್ರನಾಥ ಶಾಸ್ತ್ರಿಯು ತನ್ನ ಭಾರತೀಯ ದರ್ಶನಶಾಸ್ತ್ರದಲ್ಲಿ ಇವರಿಬ್ಬರೂ ಬೇರೆ ಎಂದು ಹೇಳಿರುವನು. ಶಿವಾದಿತ್ಯನು ಬರೆದಿರುವ " ಸಪ್ತಪದಾರ್ಥೀ"ಗ್ರಂಥವನ್ನು ನೋಡಿದರೆ, ಇವನು ಭಾಸ್ಕರರ್ವಜ್ಞನ ನ್ಯಾಯಸಾರವನ್ನೂ, ಉದಯನರ ಕಿರಣಾವಳಿಯನ್ನೂ ಉಪಯೋಗಿಸಿಕೊಂಡಿರುವಂತಿದೆ. ಅಂದರೆ ಕ್ರಿ. ಶ. ೧೧ನೇ ಶತಮಾನವಾದ ಮೇಲೆ ಇವನಿದ್ದಿರಬೇಕು. ಶ್ರೀಹರ್ಷನು (ಕ್ರಿ. ಶ. 1136)

ತನ್ನ ಖಂಡನ ಖಂಡಖಾದ್ಯದಲ್ಲೂ ಗಂಗೇಶನು ಕ್ರಿ. ಶ 1200-1250 ತನ್ನ ತತ್ತ್ವಚಿಂತಾ ಮಣಿಯಲ್ಲೂ ಇವನನ್ನು ನಮೂದಿಸಿರುವುದರಿಂದ ಶಿವಾದಿತ್ಯನ ಕಾಲ ಕ್ರಿ. ಶ. ೧೨ನೇ ಶತಮಾನಕ್ಕೆ ಹಿಂದಾಗುತ್ತದೆ. ಅಂದರೆ ಇವನ ಕಾಲ ಕ್ರಿ. ಶ ೧೧ನೇ ಶತಮಾನವಾಗಿರಬೇಕು. ಇವನು ಬರೆದ ಮತ್ತೊಂದು ಗ್ರಂಥ ಲಕ್ಷಣಮಾಲಾ. ಸಪ್ತಪದಾರ್ಥಿಗೆ ಮೂವರು ವ್ಯಾಖ್ಯಾನ ಕೊಟ್ಟಿರುವರು.

1.ಜಿನವರ್ಧನ ಸೂರಿ (1415) 2. ಮಾಧವ ಸರಸ್ವತೀ (1523ರ ಹಿಂದೆ) ಮತ್ತು ಶೇಷಾನಂತ (1608ಕ್ಕೆ ಹಿಂದೆ)

ಭಾಸರ್ವಜ್ಞನ ಆರು ಹೇತ್ವಾಭಾಸಗಳು ಇವನಿಗೂ ಗ್ರಾಹ್ಯವಾಗಿದೆ. ಆದರೆ ಅಸಾಧಾರಣವೆನ್ನುವ ಹೇತ್ವಾಭಾಸವನ್ನು ಅನಧ್ಯವಸಿತವೆಂದಿರುವನು. ತಮಸ್ಸು ಜಾತಿ. ಮತ್ತು ಲಕ್ಷಣ-ಇವುಗಳ ಲಕ್ಷಣಗಳನ್ನು ಹೇಳಿರುವಾಗ ಕಿರಣಾವಳಿಯು ನೆನಪಿಗೆ ಬರುತ್ತದೆ.

ಶ್ರೀವರದರಾಜ -(ಸುಮಾರು ೧೨ನೇ ಶತಮಾನ-ಕ್ರಿ. ಶ. 1150) ಇವನ ವಿಷಯದಲ್ಲಿ ನಮಗೆ ಏನೂ ತಿಳಿಯದು. ಆದರೆ ಇವನ 'ಕಾರ್ತಿಕರಕ್ಷಾ' ಗ್ರಂಥವನ್ನು ನೋಡಿದರೆ, ಪ್ರಾಚೀನ ನ್ಯಾಯಕ್ಕೂ , ನವೀನ ನ್ಯಾಯಕ್ಕೂ ಮಧ್ಯಕಾಲದಲ್ಲಿ ನ್ಯಾಯ ಮತ್ತು ವೈಶೇಷಿಕಗಳನ್ನು ಒಟ್ಟು ಗೂಡಿಸುವ ಪ್ರಯತ್ನವನ್ನು ತಡೆಗಟ್ಟಲು ಪ್ರಯತ್ನವು ನಡೆದು ವಿಫಲವಾದಂತೆ ತೋರುತ್ತದೆ. ವಾತ್ಸ್ಯಾಯನರು ತೋರಿಕೊಟ್ಟಿರುವ ಉದ್ದೇಶ ಮತ್ತು ವಿಭಾಗ (enumeration and classification),ಲಕ್ಷಣ. (definition)ಪರೀಕ್ಷಾ (Investigation and discussion) ಎಂದು ವಿಷಯಗಳನ್ನು ವಿಭಾಗಿಸಿಕೊಂಡು ಮಾಡಿರುವ ಕ್ರಮವು. ತಾರ್ಕಿಕ ರಕ್ಷಾದಲ್ಲಿ ಕೊನೆಯದಾಗಿ ಕಾಣುತ್ತದೆ

ಕೇಶವ ಮಿಶ್ರನ ಶ್ರ -ಕ್ರಿ. ಶ 1275. ಇವನ ತಂದೆ ಬಲಭದ್ರ, ಪದ್ಮನಾಭ ಮಿಶ್ರ ಮತ್ತು ವಿಶ್ವನಾಥ ಇವನ ಇಬ್ಬರು ಸಹೋದರರು. ಇವನ ಪ್ರಧಾನ ಶಿಷ್ಯ ಗೋವರ್ಧನ ಮಿಶ್ರ. ಇವನ ಗ್ರಂಥವೇ ತರ್ಕಭಾಷಾ. ಇದೇ ಹೆಸರಿನ ಗ್ರಂಥವನ್ನು ಇವನಿಂದ 175 ವರ್ಷಗಳಾದ ಮೇಲೆ ಬೌದ್ಧ ವಿದ್ವಾನ್ ಮೋಕ್ಷಾಕರ ಗುಪ್ತನೂ. ಕ್ರಿ. ಶ. 1688ರಲ್ಲಿದ್ದ ಜೈನ ವಿದ್ವಾಂಸ ಯಶೋವಿಜಯ ಗಣಿಯೂ ಕೊಟ್ಟಿರುವನು. ಆದರೆ ಕೇಶವಮಿಶ್ರನ ತರ್ಕ ಭಾಷಾ ಗ್ರಂಥಕ್ಕೆ ಗೋವರ್ಧನ "ತರ್ಕ ಭಾಷಾ ಪ್ರಕಾಶ"ವೆನ್ನುವ ಟೀಕೆಯು ಇದೆ.

ಕೇಶವ ಮಿಶ್ರನ ತರ್ಕಶಾಸ್ತ್ರಾಭ್ಯಾಸವು ಅವನ ಅಣ್ಣನಾದ ಪದ್ಮನಾಭನಲ್ಲಿ ನಡೆಯಿತು. ಅಧ್ಯಯನವಾದ ಮೇಲೆ ತನ್ನ ಸುಖಕ್ಕಾಗಿ 'ತರ್ಕಭಾಷಾ' ಗ್ರಂಥವನ್ನು ಬರೆದನು. ಪದ್ಮನಾಭನು ಉದಯನರ ಕಿರಣಾವಳಿಗೆ "ಕಿರಣಾವಳಿ ಪ್ರಕಾಶ" ವೆನ್ನುವ ಗ್ರಂಥವನ್ನು ಕೊಟ್ಟಿರುವನು. ಇದು ಅವನು ಕೊಟ್ಟಿರುವ ಒಂದು ಶ್ಲೋಕದಿಂದಲೆ, ವರ್ಧಮಾನೋಪಾಧ್ಯಾಯನು ಕೊಟ್ಟಿರುವ "ಕಿರಣಾವಳಿ ಪ್ರಕಾಶ"ಕ್ಕೆ ಭಿನ್ನ ಎಂದು ಸ್ಪಷ್ಟವಾಗುತ್ತದೆ. ಪದ್ಮನಾಭನ

" ಉಪದಿಷ್ಟಾಗುರುಚರಣೈಃ ಅಸ್ಪೃಷ್ಟಾವರ್ಧಮಾನೇನ
ಕಿರಣಾವಳ್ಯಾಮರ್ಥಾಃ ತನ್ಯಂತೇ ಪದ್ಮನಾಭೇನ

ಎನ್ನುವ ಶ್ಲೋಕದಿಂದ ವರ್ಧಮಾನೋಪಾಧ್ಯಾಯನಾದ ಮೇಲೆ ಬಂದವನು ಎಂದು ನಿಶ್ಚಿತವಾಗುತ್ತದೆ. ವರ್ಧಮಾನೋಪಾಧ್ಯಾಯನು ಗಂಗೇಶನ ಮಗ. ಗಂಗೇಶನ ಕಾಲ ಕ್ರಿ. ಶ. 1200-1250. ಆದರೆ ಕೇಶವ ಮಿಶ್ರನ ಕಾಲವು ಸುಮಾರು ಕ್ರಿ. ಶ. 1275 ಎಂದು ಹೇಳಬಹುದು. ಗಂಗೇಶ ಮತ್ತು ವರ್ಧಮಾನನು ಮೈಥಿಲ ದೇಶದವನಾದ್ದರಿಂದ, ಪ್ರಾಯಶಃ ಕೇಶವಮಿಶ್ರನೂ ಆ ಶಾಖೆಗೆ ಸೇರಿದವನಾಗಿರಬೇಕು.

ಇವನ "ತರ್ಕಭಾಷಾ" ಗ್ರಂಥವು, ತರ್ಕಶಾಸ್ತ್ರಾಧ್ಯಯನಕ್ಕೆ ಬಹಳ ಉಪಯುಕ್ತವಾಗಿತ್ತೆಂದೂ, ನವೀನ ನ್ಯಾಯವನ್ನು ಅಭ್ಯಾಸಮಾಡಲು ಇಚ್ಛಿಸುವ ವಿದ್ಯಾರ್ಥಿಗಳಿಗೆ ಮೂಲ ಗ್ರಂಥವಾಗಿತ್ತೆಂದೂ, ಅದಕ್ಕೆ ಇರುವ 14 ವ್ಯಾಖ್ಯಾನಗಳಿಂದ ನಾವು ಊಹಿಸಬಹುದು. ಆ ಕಾಲದಲ್ಲಿ ಇದು ಲೋಕ ಪ್ರಿಯವಾಗಿದ್ದಿರಬೇಕು. ಈಗಲೂ ಕೂಡ ಉತ್ತರ ದೇಶದಲ್ಲಿ ಅನ್ನಂಭಟ್ಟನ ತರ್ಕಸಂಗ್ರಹ ಮತ್ತು ಟೀಕೆಗೆ ಬದಲಾಗಿ ತರ್ಕಭಾಷಾಧ್ಯಯನವು ಪ್ರಚಾರದಲ್ಲಿದೆ.

ಗಂಗೇಶ (ಕ್ರಿ.ಶ. 1200-1250) ನವೀನ ನ್ಯಾಯಕ್ಕೆ ತನ್ನ "ತತ್ತ್ವ ಚಿಂತಾಮಣಿ" ಗ್ರಂಥವಾಗಿ ತಂದೆಯಾದವನೇ ಇವನು ಶ್ರೀಹರ್ಷನ "ಖಂಡನ ಖಂಡಖಾದ್ಯ" ದ ಮತವನ್ನು ಖಂಡಿಸಿರುವುದರಿಂದಲೂ, ತತ್ತ್ವಚಿಂತಾಮಣಿಗೆ "ಆಲೋಕ"ವನ್ನು ಕೊಟ್ಟಿರುವ ಪಕ್ಷಧರ ಮಿಶ್ರ ಅಥವಾ ಜಯದೇವನು ಪ್ರಸನ್ನ ರಾಘವ ಗ್ರಂ. ಬರೆದವನೇ ಎಂದು ಸಾಹಿತ್ಯದರ್ಪಣದಲ್ಲಿ ( ಕ್ರಿ. ಶ.1300) ಹೇಳಿರುವುದರಿಂದಲೂ ಗಂಗೇಶನು ನಿಸ್ಸಂಶಯವಾಗಿ 13ನೇ ಶತಮಾನದವನೆಂದು ಹೇಳಬಹುದು

ಇವನಿಗೆ ಗಂಗೇಶ್ವರನೆಂದು ಮತ್ತೊಂದು ಹೆಸರು. ಇವನು ಪೂರ್ವಬಂಗಾಳದವನೆಂದು ಕುಪ್ಪುಸ್ವಾಮಿ ಶಾಸ್ತ್ರಿಗಳು ಅಭಿಪ್ರಾಯಪಟ್ಟಿರುವರು. ಇವನು ಮಿಥಿಲ ಶಾಖೆಗೆ ಮೂಲ ಪುರುಷನೆನ್ನಬಹುದು. ನವೀನ ಕ್ರಮದಿಂದ ಶಾಸ್ತ್ರಜ್ಞಾನ ಬಂದಮೇಲೆ ವಿಶೇಷ ಪರಿಚಯಕ್ಕಾಗಿ ಇವನ ಗ್ರಂಥದಿಂದ ಮುಂದುವರಿಸಲ್ಪಡುತ್ತಿದೆ.

ವರ್ಧಮಾನೋಪಾಧ್ಯಾಯ- ಇವನು ಗಂಗೇಶನ ಮಗ. ತಂದೆಯಂತೆ ಇವನೂ ಪ್ರಸಿದ್ಧ ತಾರ್ಕಿಕ. ಇವನೂ ತಂದೆಯಂತೆ ಮಿಥಿಲೆಯಲ್ಲಿದ್ದನು. ತನ್ನ ತಂದೆಯ ಗ್ರಂಥಗಳಿಗಲ್ಲದೆ, ಉದಯನ ಗ್ರಂಥಗಳಿಗೂ ಮತ್ತು ವಲ್ಲಭಾಚಾರ್ಯರ ನ್ಯಾಯಲೀಲಾ ವೃತ್ತಿಗೂ ಪ್ರಕಾಶ ಎನ್ನುವ ಹೆಸರಿನಲ್ಲಿ ವ್ಯಾಖ್ಯಾನಗಳನ್ನೂ ಕೊಟ್ಟಿರುವನು. ಇವನು ಕೊಟ್ಟಿರುವ ಗ್ರಂಥಗಳು -(1) ತತ್ತ್ವಚಿಂತಾಮಣಿ ಪ್ರಕಾಶ (2) ನ್ಯಾಯನಿಬಂಧನ ಪ್ರಕಾಶ, (3) ಕಿರಣಾವಳಿ ಪ್ರಕಾಶ (4) ನ್ಯಾಯಕುಸುಮಾಂಜಲಿ ಪ್ರಕಾಶ (5) ಖಂಡನ ಖಂಡ ಖಾದ್ಯ ಪ್ರಕಾಶ

ಜಯದೇವ (ಕ್ರಿ. ಶ. 1278) ಗಂಗೇಶನ ತತ್ವ ಚಿಂತಾಮಣಿಗೆ ಪ್ರತ್ಯಕ್ಷಾಲೋಕವೆನ್ನುವ ವ್ಯಾಖ್ಯಾನವನ್ನು ಕೊಟ್ಟಿರುವನು. ಇವನು ಲಕ್ಷ್ಮಣಸೇನನ ಕಾಲದವನೆಂದು ಇದರಲ್ಲೇ ಹೇಳಿದೆ. ಇವನ ನಾಟಕವೇ ಪ್ರಸನ್ನ ರಾಘವ. ಇವನು ತನ್ನ ಚಿಕ್ಕಪ್ಪನಾದ ಹರಿಮಿಶ್ರನಲ್ಲಿ ಓದಿಕಲಿತವನು. ಭಾಸರ್ವಜ್ಞನ ಅನುಕರಣವು ಇವನಲ್ಲಿ ಕಂಡುಬರುತ್ತದೆ. ಬೌದ್ಧ ಮತ್ತು ಜೈನ ಸಿದ್ಧಾಂತಗಳನ್ನು ಖಂಡಿಸಿರುವನು. ಇವನ ಶಿಷ್ಯನೇ ವರ್ಧಮಾನನ ಪ್ರಕಾಶಗಳಿಗೆ ಮಕರಂದ ಎನ್ನುವ ವ್ಯಾಖ್ಯಾನಗಳನ್ನು ಕೊಟ್ಟಿರುವ ರುಚಿದತ್ತ.

18. ತರ್ಕಶಾಸ್ತ್ರದ ಉಚ್ಛ್ರಾಯ ಕಾಲ (Hay day)-ಜಯದೇವ ಮತ್ತು ಅವನ ಶಿಷ್ಯ ರುಚಿದತ್ತನಾದ ಮೇಲೆ ಸುಮಾರು ಎರಡು ಶತಮಾನ ಕಾಲದಲ್ಲಿ ಗಂಗೇಶನಿಂದ ಕಲ್ಪಿತವಾದ ಹೊಸಪೀಳಿಗೆಯಲ್ಲಿ ಶಾಸ್ತ್ರಾಧ್ಯಯನವು ಭರದಿಂದ ನಡೆದುರೂಢಮೂಲವಾಯಿತೆಂದು ಹೇಳಬಹುದು. ಈ ಕಾಲದಲ್ಲಿ ಯಾವ ಹೊಸ ಗ್ರಂಥವೂ ತಲೆದೋರಲಿಲ್ಲ. ಆದರೆ ತತ್ವಚಿಂತಾಮಣಿಯ ಆಧಾರದ ಮೇಲೆ ಮತ್ತು ಈ ನವ್ಯನ್ಯಾಯಕ್ಕೆ ಸಹಕಾರ ಕೊಡುವ ಉದಯನ ಮೊದಲಾದವರ ಗ್ರಂಥಗಳಿಗೆ ವ್ಯಾಖ್ಯಾನಗಳ ಪ್ರಕಾಶ ಆಲೋಕ ಮತ್ತು ಮಕರಂದ ಮೊದಲಾದವು ಬರೆಯಲ್ಪಟ್ಟವು. 15ನೇ ಶತಮಾನದ ಕೊನೆಯ ಭಾಗ (ಮತ್ತು 17ನೇ ಶತಮಾನಗಳು ಅಂದರೆ 200-300 ವರ್ಷ ಕಾಲದಲ್ಲಿ ತರ್ಕವು ಬಹಳ ಪುಷ್ಟವಾಗಿ ಬೆಳೆದಂತಿದೆ. ಎಲ್ಲಾ ಶಾಸ್ತ್ರಜ್ಞರೂ ವ್ಯಾಕರಣ ಶಾಸ್ತ್ರದಂತೆ ಇದನ್ನು ಆಶ್ರಯಿಸುವುದರಿಂದಲೆ ಶಾಸ್ತ್ರಜ್ಞರೆನ್ನುವ ಕೀರ್ತಿಯನ್ನು ಗಳಿಸಲು ಇದು ವೇದಿಕೆಯಾಗಿ ಪರಿಣಮಿಸಿತು. ಇದು ಬೆಳೆದದ್ದು ನವದ್ವೀಪವೆನ್ನುವ ಬಂಗಾಳ ದೇಶದಲ್ಲಿ. ವಾಸುದೇವ ಸಾರ್ವಭೌಮಃ 15ನೇ ಶತಮಾನದ ಕೊನೆ ಮತ್ತು 16ನೇ ಶತಮಾನದ ಮೊದಲು ಭಾಗದಲ್ಲಿ ವಾಸುದೇವ ಸಾರ್ವಭೌಮನೆನ್ನುವ ಪ್ರಸಿದ್ಧ ತಾರ್ಕಿಕನಿದ್ದನು. ಇವನು ಗಂಗೇಶನ ತತ್ವಚಿಂತಾಮಣಿಗೆ ತತ್ವಚಿಂತಾಮಣಿ ವ್ಯಾಖ್ಯಾ ಎನ್ನುವ ಗ್ರಂಥವನ್ನು ಕೊಟ್ಟಿರುವನು. ಆ ಕಾಲದಲ್ಲಿ ಪ್ರಸಿದ್ಧರಾದ ನಾಲ್ಕು ವ್ಯಕ್ತಿಗಳು ಇವನ ಶಿಷ್ಯರಾದರು.

1.ಚೈತನ್ಯ ಪ್ರಸಿದ್ಧವೈಷ್ಣವ ಭಕ್ತ. ಇವನ ಕಾಲವು ನಿಶ್ಚಿತವಾಗಿ ತಿಳಿದಿರುವುದರಿಂದಲೇ ವಾಸುದೇವ ಸಾರ್ವಭೌಮನ ಕಾಲವು ನಿಶ್ಚಿತವಾಗುತ್ತದೆ. (2) ಪ್ರಸಿದ್ಧ ನ್ಯಾಯಮೂರ್ತಿ (Lawyer) ರಘುನಂದನ. (3) ಪ್ರಸಿದ್ಧಶಾಕ್ತ ಮತ್ತು ತಾಂತ್ರಿಕ ಕೃಷ್ಣಾನಂದ. ಇವರಲ್ಲದೆ (4) ರಘುನಾಥ (16ನೇ ಶತಮಾನದ ಕೊನೆಯ ಭಾಗ) ಇವನೇ ತತ್ವಚಿಂತಾಮಣಿಯ ಮೊದಲಿನ ಎರಡು ಅಧ್ಯಾಯಗಳಿಗೆ ದೀಧಿತಿ ಎನ್ನುವ ಪ್ರಸಿದ್ಧ ವ್ಯಾಖ್ಯಾನವನ್ನೂ ಕೊಟ್ಟಿರುವನು. ಇದು ವಿವರಣಾತ್ಮಕ ಮತ್ತು ವಿಮರ್ಶಾತ್ಮಕ ವ್ಯಾಖ್ಯಾನ (Exporitory and critical commentary). ಇವರ ನಮೂನೆಯಲ್ಲಿಯೇ ವೈಶೇಷಿಕರ ಎಲ್ಲಾ ಪದಾರ್ಥಗಳ ಖಂಡನ ಗ್ರಂಥವಾದ "ಪದಾರ್ಥತತ್ವ ನಿರೂಪಣ"ವೂ ಬರೆಯಲ್ಪಟ್ಟಿದೆ. ಇವನ ಶಿಷ್ಯನೇ ಮಥುರನಾಥ. ಇವನು ಚಿಂತಾಮಣಿಗೂ ತನ್ನ ಗುರುವಿನ ಗ್ರಂಥಕ್ಕೂ ವ್ಯಾಖ್ಯಾನವನ್ನೂ ಬರೆದಿರುವನು. ಇವನ ಶಿಷ್ಯ ರಘುದೇವನೆಂದು ಹೇಳಲಾಗಿದೆ. ಅಂದರೆ ರಘುದೇವ ಮತ್ತು ಗದಾಧರ ಇವರಿಬ್ಬರಿಗೂ ಆಚಾರ್ಯರಾದ ಹರಿರಾಮ ತರ್ಕಾಲಂಕಾರ ಎನ್ನುವನು. ಮಥುರಾನಾಥನ ಸಮಕಾಲೀನನೆನ್ನಬಹುದು. ತರ್ಕಶಾಸ್ತ್ರದ ಪಾರಿಭಾಷಿಕ ವೈದುಷ್ಯದಲ್ಲಿ ರಘುನಾಥನ ಕೈಮೇಲಾಗಿದೆ

ಜಗದೀಶ (17ನೇ ಶತಮಾನದ ಮೊದಲು ಭಾಗ) ಮಧುರಾನಾಥನ ಸಮಕಾಲಿಕನಾದ ಈ ಜಗದೀಶನು ಭವಾನಂದನ ಮಗ, ವಿದ್ಯಾನಿವಾಸನ ಮೊಮ್ಮಗ ಮತ್ತು ವಿಶ್ವನಾಥನ ತಾತ. ಇವನು ದೀಧಿತಿಗೆ ಜಾಗದೀಶೀ ಎನ್ನುವ ವ್ಯಾಖ್ಯಾನವನ್ನು ಕೊಟ್ಟಿರುವನು. ಇದಲ್ಲದೆ ಶಬ್ದ ಶಕ್ತಿ ಪ್ರಕಾಶಿಕಾ, ತರ್ಕಾಮೃತ ಮತ್ತು ಪ್ರಶಸ್ತಪಾದ ಭಾಷ್ಯಕ್ಕೆ ಭಾಷ್ಯಸೂಕ್ತಿ ಎನ್ನುವ ಗ್ರಂಥಗಳನ್ನೂ ಕೊಟ್ಟಿರುವನು. ಜಾಗದೀಶಿಗೆ ರಘುದೇವನ ಶಿಷ್ಯಶಂಕರ ಮಿತ್ರನ ವ್ಯಾಖ್ಯಾನವಿದೆ. ಇವನ ಅಂದರೆ ಶಂಕರ ಮಿತ್ರನ ಪ್ರಸಿದ್ಧ ಗ್ರಂಥವೆಂದರೆ ಉಪಸ್ಕಾರ. ಇದು ವೈಶೇಷಿಕಸೂತ್ರಕ್ಕೆ ನವೀನ ವ್ಯಾಖ್ಯಾನ. ಎರಡೂ ಪ್ರವಾಹವಾಗಿ ರೂಪುಗೊಂಡ ತರ್ಕಶಾಸ್ತ್ರದ ಏಕೀಕರಣವು (syncretism) ಇವನಲ್ಲಿ ಸ್ಫುಟವಾಗಿ ಕಾಣುತ್ತದೆ.

ಗದಾಧರ (17ನೇ ಶತಮಾನದ ಕೊನೆಯ ಭಾಗ) -17ನೇ ಶತಮಾನದ ಮೊದಲು ಭಾಗದಲ್ಲಿ (1) ಮಧುರಾನಾಥ (2) ಹರಿರಾಮ ತರ್ಕಾಲಂಕಾರ ಮತ್ತು (3) ಜಗದೀಶರೆನ್ನುವ ಮೂರು ಪ್ರಸಿದ್ಧ ತಾರ್ಕಿಕರಿದ್ದರು. ಅವರಲ್ಲಿ ಹರಿರಾಮ ತರ್ಕಾಲಂಕಾರನ ಪ್ರಸಿದ್ಧ ಶಿಷ್ಯನೇ ಗದಾಧರ. ಇವನು ದೀಧಿತಿಗೆ ಗಾಧಾಧರಿಯನ್ನೂ, ತತ್ವ ಚಿಂತಾಮಣಿಯ ಕೆಲವು ಭಾಗಗಳಿಗೆ ಮೂಲಗಾದಾಧರಿಯನ್ನೂ, ಉದಯನರ ಆತ್ಮತತ್ತ್ವವಿವೇಕಕ್ಕೆ ವ್ಯಾಖ್ಯಾನವನ್ನೂ ಕೊಟ್ಟಿರುವುದಲ್ಲದೆ, ವ್ಯುತ್ಪತ್ತಿವಾದ ಮತ್ತು ಶಕ್ತಿವಾದ ಎನ್ನುವುದರಲ್ಲಿ ಅಡಗಿರುವ ೫೦ ವಾದಗಳನ್ನು ಕೊಟ್ಟಿರುವನು.

19 ನ್ಯಾಯ -ವೈಶೇಷಿಕ ಶಾಸ್ತ್ರಗಳ ಏಕೀಕರಣ-೧೧ನೇ ಶತಮಾನದ ಶಿವಾದಿತ್ಯನೇ ವೈಶೇಷಿಕ ಸಿದ್ಧಾಂತವನ್ನೂ ಆಧಾರವಾಗಿ ಹೊಂದಿರುವ " ಸಪ್ತಪದಾರ್ಥೀ"ಎನ್ನುವ ಗ್ರಂಥದಲ್ಲಿ ಈ ಏಕೀಕರಣಕ್ಕೆ ನಾಂದಿ ಮಾಡಿರುವನು. ಇದೇ ಕಾಲದ ವರದರಾಜನು ' ತಾರ್ಕಿಕರಕ್ಷಾ' ಎನ್ನುವ ಗ್ರಂಥವನ್ನು ಬರೆದು ಅದಕ್ಕೆ " ಸಾರಸಂಗ್ರಹ" ವೆನ್ನುವ ಮೂರು ಅಧ್ಯಾಯದ ವ್ಯಾಖ್ಯಾನವನ್ನೂ ಕೊಟ್ಟಿರುವನು. ನ್ಯಾಯಸಿದ್ಧಾಂತದ ರೀತಿಯು ಇಲ್ಲಿ ಪ್ರಧಾನವಾಗಿ ಕಾಣುತ್ತದೆ. ವಾಚಸ್ಪತಿಮಿಶ್ರ, ಉದಯನ, ಜಯಂತ, ನ್ಯಾಯಸಾರದ ವ್ಯಾಖ್ಯಾನಕಾರನಾದ ಭೂಷಣಕಾರ - ಇವರೆಲ್ಲರೂ ಇವನಿಗೆ ತಿಳಿದಿದೆ. ಸರ್ವದರ್ಶನ ಸಂಗ್ರಹದ ಚಾರ್ವಾಕ ಮತ್ತು ಗೌತಮ ದರ್ಶನಗಳ ವಿಮರ್ಶೆಯಲ್ಲಿ ಈ ತಾರ್ಕಿಕ ರಕ್ಷೆಯು ಸಹಾಯನೀಡಿದೆ. ಹರ್ಷನು ಇವನಿಗೆ ತಿಳಿದಂತಿಲ್ಲ. ಅಂದರೆ ಹರ್ಷನಿಗೆ ಹಿಂದೆ ಶಿವಾದಿತ್ಯನಾದ ಮೇಲೆ ಇವನು ಇದ್ದಿರಬೇಕು. ಇವನ ಗ್ರಂಥಕ್ಕೆ ಮಲ್ಲಿನಾಥನ (14ನೇ ಶತಮಾನ) ವ್ಯಾಖ್ಯಾನವಿದೆ. ಇವನಿಗೂ ಹಿಂದಿನವನಲ್ಲದ ಜಾನಕೀನಾಥ ಭಟ್ಟಾಚಾರ್ಯ ಚೂಡಾಮಣಿಯ ನ್ಯಾಯಸಿದ್ಧಾಂತ ಮಂಜರಿಯು 4 ಅಧ್ಯಾಯವುಳ್ಳದ್ದಾಗಿದೆ. ಇದರಲ್ಲಿ ಪ್ರಮಾಣಸ್ವರೂಪವು ವಿಸ್ತೃತವಾಗಿದೆ. ಇದಕ್ಕೆ ಲೋಕಾಕ್ಷಿ ಭಾಸ್ಕರ ಮತ್ತು ಯಾದವನ ಹನ್ನೊಂದು ವ್ಯಾಖ್ಯಾನಗಳಿವೆ.

ಈ ಹನ್ನೊಂದನೇ ಶತಮಾನದ ಮೇಲೆಯೂ ಈ ಏಕೀಕರಣ ಮನೋಧರ್ಮವು ಬೆಳೆದು ಬಂದಿದೆ. ಕೇಶವ ಮಿಶ್ರನು ತನ್ನ " ತರ್ಕಭಾಷಾ" ಎನ್ನುವ ಗ್ರಂಥದಲ್ಲಿ ನ್ಯಾಯಸಂಪ್ರದಾಯದ ರೀತಿಯನ್ನು ಅನುಸರಿಸಿದ್ದರೂ ವೈಶೇಷಿಕರ ಪ್ರಭಾವಕ್ಕೆ ಒಳಗಾಗಿರುವಂತಿದೆ. ಪದಾರ್ಥಗಳು, ಕಾರ್ಯಕಾರಣ ಭಾವ ಮತ್ತು ಪ್ರತ್ಯಕ್ಷ ಪ್ರಮಾಣ ಇವುಗಳನ್ನೂ ಹೇಳುವುದರಲ್ಲಿ ವೈಶೇಷಿಕ ಸಂಪ್ರದಾಯದ ಪ್ರಭಾವವು ಚೆನ್ನಾಗಿ ಕಾಣುತ್ತದೆ. ವಾದಿಸುವ ಕ್ರಮದಲ್ಲಿ ಗಂಗೇಶನು ಅನುಸರಣವೂ

ಕಾಣುತ್ತದೆ. ಉದಯನನು ನಮೂದಿಸಲ್ಪಟ್ಟಿರುವನು. ಅಂದರೆ ಇವನ ಕಾಲ, ೧೩ನೇ ಶತಮಾನದ ಕೊನೆಯ ಭಾಗವಾಗಿರಬೇಕು. ಇವನ 'ತರ್ಕಭಾಷಾ' ಗ್ರಂಥಕ್ಕೆ ಚಿನ್ನಭಟ್ಟನು ವ್ಯಾಖ್ಯಾನವನ್ನು ಬರೆದಿರುವನು. ಇವನು ಒಂದನೇ ಬುಕ್ಕನ ಸಹೋದರ ಹರಿಹರನ ಆಶ್ರಯದಲ್ಲಿ ತನ್ನ ಗ್ರಂಥವನ್ನು ಬರೆದಿರುವನು. ಅಂದರೆ ಇವನು 14ನೇ ಶತಮಾನದ ಪೂರ್ವಭಾಗದಲ್ಲಿದ್ದಿರಬೇಕು. ಇವನಲ್ಲದೆ ಗೋವರ್ಧನ (1578) ಗೌರೀಕಾಂತ ಮತ್ತು ಮಾಧವ ದೇವ (1681ಕ್ಕೆ ಹಿಂದೆ) ಇವರೂ ವ್ಯಾಖ್ಯಾನಗಳನ್ನೂ ಬರೆದಿರುವರು. 17ನೇ ಶತಮಾನದ ಪೂರ್ವಭಾಗದವನಾದ ಜಗದೀಶನು ನವೀನ ಸಂಪ್ರದಾಯಕ್ಕೆ ಸೇರಿದವನಾಗಿದ್ದರೂ, ಈ ಏಕೀಕರಣದಲ್ಲಿ ಭಾಗಿಯಾಗಿರುವನು.

ಆದರೂ ಸರಿಯಾದ ಏಕೀಕರಣವು 17ನೇ ಶತಮಾನದ ಉತ್ತರಾರ್ಧದಲ್ಲಿ ಚೆನ್ನಾಗಿ ರೂಪುಗೊಂಡಿತು. ಈ ಮಾರ್ಗದಲ್ಲಿ ಪ್ರಸಿದ್ಧ ಪಡೆದವರು ಮೂವರು (1) ಶಂಕರ ಮಿಶ್ರ - ಇವನು ಜಗದೀಶಗೆ ವ್ಯಾಖ್ಯಾನ ಬರೆದು ಕಾಣಾದ ಸೂತ್ರಕ್ಕೆ ಉಪಸ್ಕಾರ್‌ವೆನ್ನುವ ವ್ಯಾಖ್ಯಾನವನ್ನು ಕೊಟ್ಟಿರುವನು. ಅಲ್ಲದೆ ಪದ್ಮನಾಭಮಿಶ್ರನ "ವರ್ಧಮಾನೆಂದೂ"ಎನ್ನುವ ಗ್ರಂಥಕ್ಕೆ ನ್ಯಾಯ ತಾತ್ಪರ್ಯ ಮಾಂಡನವೆನ್ನುವ ವ್ಯಾಖ್ಯಾನವನ್ನು ಕೊಟ್ಟಿರುವನು.

2) ವಿಶ್ವನಾಥ ಪಂಚಾನವ- ಇವನು ನ್ಯಾಯಸೂತ್ರಕ್ಕೆ ವ್ಯಾಖ್ಯಾನವನ್ನು ಕೊಟ್ಟಿರುವುದರಲ್ಲದೆ ಭಾಷಾಪರಿಚ್ಛೇದ ಅಥವಾ ಕಾರಿಕಾವಳಿ ಎನ್ನುವ 168 ಶ್ಲೋಕಗಳುಳ್ಳ ನ್ಯಾಯವೇಶೇಷಿಕ ಸಂಗ್ರಹ ಗ್ರಂಥವನ್ನು ಕೊಟ್ಟು, ಅದಕ್ಕೆ ನ್ಯಾಯಸಿದ್ಧಾಂತಮುಕ್ತಾವಳಿ ಎನ್ನುವ ವ್ಯಾಖ್ಯಾನವನ್ನು ಬರೆದಿರುವನು.

(3) ಅನ್ನಂಭಟ್ಟ-ಇವನು ಆಂಧ್ರದೇಶದವನು. ಇವನ ನ್ಯಾಯ ವೈಶೇಷಿಕ ಸಂಗ್ರಹ ಗ್ರಂಥವೇ ಪ್ರಸಿದ್ಧವಾದ ತರ್ಕ ಸಂಗ್ರಹ ಇದಕ್ಕೆ ಬಾಲ ಗದಾಧರೀ ಎನ್ನುವ ಹೆಸರೂ ಉಂಟು. ಜಯದೇವನ ಆಲೋಕಕ್ಕೆ ಸಿದ್ಧಾಂಜನವೆನ್ನುವ ಗ್ರಂಥವನ್ನೂ, ತನ್ನ ತರ್ಕಸಂಗ್ರಹಕ್ಕೆ ದೀಪಿಕೆಯನ್ನೂ ಕೊಟ್ಟಿರುವನು. ಇವನು ಸಕಲ ಶಾಸ್ತ್ರಕೋವಿದನು(Polymath) ಮುಖ್ಯವಾಗಿ ಪೂರ್ವಮೀಮಾಂಸಾ ಮತ್ತು ವೇದಾಂತದಲ್ಲಿ ನಿಷ್ಣಾತನು. ರಾಣಕೋಜ್ಜೀವಿನೀ ಎನ್ನುವ ವ್ಯಾಖ್ಯಾನವನ್ನೂ ನ್ಯಾಯಸುಧಾಗ್ರಂಥಕ್ಕೂ ಬ್ರಹ್ಮಸೂತ್ರಕ್ಕೆ ಒಂದು ವ್ಯಾಖ್ಯಾನವನ್ನೂ, ವ್ಯಾಕರಣದ ಅಷ್ಟಾಧ್ಯಾಯಿಗೆ ಒಂದು ಲಘು ವ್ಯಾಖ್ಯಾನವನ್ನೂ ಕೈಯಟನ ಪ್ರದೀಪಕ್ಕೆ ಒಂದು ವಿಸ್ತಾರವಾದ ವ್ಯಾಖ್ಯಾನವನ್ನು ಕೊಟ್ಟಿರುವನು.

ಈಗಿನ ಕಾಲದಲ್ಲಿ, ಅದೂ ದಕ್ಷಿಣ ದೇಶದಲ್ಲಿ ತರ್ಕಶಾಸ್ತ್ರದ ಪ್ರವೇಶವು ಇವನ ತರ್ಕಸಂಗ್ರಹ ಮತ್ತು ದೀಪಿಕೆಯಿಂದ ಪ್ರಾರಂಭವಾಗಿ ವಿಶ್ವನಾಥನ ಕಾರಿಕೆ ಮತ್ತು ಮುಕ್ತಾವಳಿಯಿಂದ ವಿಕಾಸಗೊಂಡು ಮುಂದೆ ಸಾಗುತ್ತಿದೆ. ತರ್ಕ ಸಂಗ್ರಹ ಮತ್ತು ದೀಪಿಕೆಗೆ ಗೋವರ್ಧನನ ನ್ಯಾಯಬೋಧಿನೀ, ಕೃಷ್ಣಧೂರ್ಜಟಿಯ ಸಿದ್ಧಾಂತ ಚಂದ್ರೋದಯ, ನೀಲಕಂಠನ ನೀಲಕಂಠೀ (1840) ಮತ್ತು ಅವನ ಮಗ ಲಕ್ಷ್ಮೀನೃಸಿಂಹನ ಭಸ್ಕರೋದಯ -ಎನ್ನುವ ವ್ಯಾಖ್ಯಾನಗಳಿವೆ.

## ಮೂರನೇ ಭಾಗ -ತರ್ಕ ಶಾಸ್ತ್ರ -II ತರ್ಕಸಿದ್ಧಾಂತ

"ಪ್ರಾಮಾಣಿಕ ತ್ವೇನಾಭ್ಯುಗತೋರ್ಥಃ" ನ್ಯಾ.ಸೂ.

ಪ್ರಮಾಣದಿಂದ ನಿಶ್ಚಯಿಸಲ್ಪಟ್ಟ ವಿಷಯಕ್ಕೆ ಸಿದ್ಧಾಂತವೆಂದು ಹೆಸರು. ತರ್ಕಸಿದ್ಧಾಂತದಲ್ಲಿ ಏಳು ಪದಾರ್ಥಗಳನ್ನು ಸ್ವೀಕರಿಸಲಾಗಿದೆ. ಅವುಗಳ ವಿಷಯ ಇಲ್ಲಿ ಕೊಡಲಾಗಿದೆ.

## ಪೀಠಿಕೆ

ಹಿಂದೂ ದೇಶದ ಎಲ್ಲಾ ಆಸ್ತಿಕ ಶಾಸ್ತ್ರಗಳ ಅಧ್ಯನವು ಮೊದಲು ಕೆಲವು ತತ್ವಗಳ ನಿರೂಪಣೆಯಿಂದ ಪ್ರಾರಂಭವಾಗಿ ಅನಂತರ ಅವುಗಳ ಮೇಲೆ ಚರ್ಚೆ ಮತ್ತು ವಿಮರ್ಶೆಯಿಂದ ಕೊನೆಗಾಣುವುದು ಅನುಚಾನ ಪದ್ಧತಿಯಾಗಿದೆ. ಎಲ್ಲಾ ಶಾಸ್ತ್ರಗಳ ಪರಮೋದ್ದೇಶವೂ ಮುಕ್ತಿ ಎಂದೂ. ಆ ಮುಕ್ತಿಯು ಆತ್ಯಂತಿಕ ದುಃಖ ನಿವೃತ್ತಿ ಮತ್ತು ನಿತ್ಯ ಸುಖಪ್ರಾಪ್ತಿ ಎನ್ನುವ ಇಷ್ಟೊಂದು ಭಾವನಾ ವಿಶೇಷವೆಂದು ಪೂರ್ಣವಿಶ್ವಾಸದಿಂದ ನಂಬಲಾಗಿದೆ. ನಂಬಿಕೆಯಿಂದಲೇ ಎಲ್ಲಾ ಶಾಸ್ತ್ರಾಧ್ಯಯನವೂ ಪ್ರಾರಂಭವಾಗುತ್ತದೆ. ಆ ನಂಬಿಕೆಯನ್ನು ದೃಢಪಡಿಸಿಕೊಳ್ಳಲು ತರ್ಕ ಮತ್ತು ವಿಚಾರವು ಸಹಕಾರಿಯಾಗುತ್ತದೆ. ಅವುಗಳಿಂದಲೇ ವಸ್ತುವು ನಿಶ್ಚಿತವಾಗುವುದಿಲ್ಲ. ಈ ಕ್ರಮವು ತರ್ಕಶಾಸ್ತ್ರಕ್ಕೂ ಅನ್ವಯಿಸುತ್ತದೆ. ಅಂದರೆ-

"ಉದ್ದೇಶೋ ಲಕ್ಷಣಂ ಪರೀಕ್ಷಾ ಚೇತಿ ತ್ರಿ ವಿಧಾಸ್ಯ ಶಾಸ್ತ್ರಸ್ಯ ಪ್ರವೃತ್ತಿಃ" ಎನ್ನುವಂತೆ ಶಾಸ್ತ್ರಾಧ್ಯಯನವು ನಡೆಯುತ್ತದೆ. ಶಾಸ್ತ್ರದಲ್ಲಿ ಹೇಳುವ ವಿಷಯವಾವುದೆನ್ನುವುದೇ ಉದ್ದೇಶ. ಅದರಲ್ಲೂ ಕ್ರಮನಿಯಮವನ್ನು ಪರಿಪಾಲಿಸಬೇಕು. ಈ ಶಾಸ್ತ್ರದಲ್ಲಿ ಸ್ವೀಕೃತವಾಗಿರುವ ದ್ರವ್ಯಾದಿಗಳು ಪದಾರ್ಥಗಳು ನಿರೂಪಣ ಕ್ರಮವು (1) ದ್ರವ್ಯ (2) ಗುಣ. (3) ಕರ್ಮ (4) ಸಾಮಾನ್ಯ (5) ವಿಶೇಷ. (6) ಸಮವಾಯ ಮತ್ತು (7) ಅಭಾವ ಎನ್ನುವಂತೆಯೇ ಇರಬೇಕು. ಕಣಾದರ ಮೊದಲ ಸೂತ್ರದ ಪ್ರಕಾರ (ಅಥಾತೋಧರ್ಮಂ ವ್ಯಾಖ್ಯಾಸ್ಯಾಮಃ) ಮೊದಲು ಧರ್ಮಿಯು ಅಂದರೆ (1) ದ್ರವ್ಯವು ಹೇಳಲ್ಪಟ್ಟು ನಂತರ ಧರ್ಮವಾಗಿರುವ (2) ಗುಣವು ಹೇಳಲ್ಪಟ್ಟಿದೆ. ಗುಣಕ್ಕೆ ಭಿನ್ನವಾದದ್ದು ಕರ್ಮ (4) ಈ ದ್ರವ್ಯ ಗುಣ. ಕರ್ಮಗಳಲ್ಲಿ ಸಾಜಾತ್ಯ ತೋರಿಸುವುದೇ ಸಾಮಾನ್ಯ (5) ವೈಜಾತ್ಯ ತೋರಿಸುವುದೇ ಸಾಮಾನ್ಯಕ್ಕಿಂತಲೂ ಬೇರೆಯಾದದು ವಿಶೇಷ. ಅದಾದ ಮೇಲೆ (6) ಅಣುಗಳು ಮತ್ತು ಅವುಗಳ ವಿಶೇಷಗಳನ್ನೂ. ದ್ರವ್ಯ ಗುಣಗಳನ್ನೂ. ದ್ರವ್ಯ ಕರ್ಮಗಳನ್ನೂ. ಅವಯವಾ ವಯವಿಯನ್ನೂ. ಮತ್ತು ಜಾತಿ ವ್ಯಕ್ತಿಗಳನ್ನೂ ಕೂಡಿಸುವ ಸಂಬಂಧ ವಿಶೇಷ. ಸಮವಾಯ. ಕೊನೆಯದಾಗಿ (7) ಬುದ್ಧಿ ಸೂಕ್ಷ್ಮದಿಂದ ಅರ್ಥಮಾಡಿಕೊಳ್ಳಬೇಕಾಗಿರುವ ಅಭಾವ -ಹೀಗೆ ಅನುಕ್ರಮದಿಂದ ಪದಾರ್ಥಗಳನ್ನು ತಿಳಿದುಕೊಳ್ಳಬೇಕು. ಇದೇ ಈ ತರ್ಕಶಾಸ್ತ್ರದ ಉದ್ದೇಶ.

ಎರಡನೆಯದಾಗಿ. ಹೀಗೆ ತಿಳಿಯಲ್ಪಟ್ಟ ಪದಾರ್ಥಗಳ ಲಕ್ಷಣವನ್ನು ಆಯಾವಸ್ತುಗಳ ಅಸಾಧಾರಣ ಧರ್ಮಗಳಿಂದ ತಿಳಿದುಕೊಳ್ಳಬೇಕು.

ಮೂರನೆಯದಾಗಿ, ಈ ಲಕ್ಷಣವು ಸರಿಯೇ ಅಲ್ಲವೇ ಎಂದು ಪರೀಕ್ಷೆ ಮಾಡಲು, ಆಯಾ ಲಕ್ಷಣಗಳು, ವಸ್ತುವಿನ ಸ್ವರೂಪವನ್ನೂ ಎಳ್ಳಷ್ಟೂ ಬಿಡದೆ (ಅವ್ಯಾಪ್ತಿದೋಷರಹಿತವಾಗಿ)ಅನ್ಯಪದಾರ್ಥದ ಧರ್ಮದೊಡನೆ ಸಾಂಕರ್ಯ ಹೊಂದದೆ (ಅತಿವ್ಯಾಪ್ತಿ ದೋಷರಹಿತವಾಗಿ) ಮತ್ತು ತನ್ನ ಜಾತಿಗೆ ಸಮಾನವಾದರೂ ತನಗೇ ಮಾತ್ರ ಅನ್ವಯಿಸದಿರುವ (ಅಸಂಭವದೋಷರಹಿತವಾದ) ಧರ್ಮಗಳನ್ನು ಹೇಳುತ್ತವೆಯೋ ಎಂದು ವಿಮರ್ಶಿಸಿಕೊಳ್ಳಬೇಕು. ಈ ರೀತಿಯಲ್ಲಿ ಪ್ರತಿಪದಾರ್ಥದ ಲಕ್ಷಣವನ್ನು ಹೇಳುವುದರಲ್ಲಿಯೇ ಈ ಶಾಸ್ತ್ರವು ಮಾರ್ಗವನ್ನು ಚೆನ್ನಾಗಿ ಶೋಧಿಸಿಕೊಟ್ಟಿದೆ. ಈ ಲಕ್ಷಣದಲ್ಲಿ ಒಂದು ಅಥವಾ ಅನೇಕ ಉಪವಾಕ್ಯಗಳು (subordinate clauses) ಒಂದು ಪ್ರಧಾನ ವಾಕ್ಯವು (Main clause) [illegible] ಪ್ರತಿ ಉಪವಾಕ್ಯಕ್ಕೂ 'ದಳ' ಎಂದು ಹೆಸರಿಟ್ಟು, ಆ ದಳ ಪ್ರಯೋಜನವನ್ನು ಹೇಳುವಲ್ಲಿ ಬುದ್ಧಿಸೌಕ್ಷ್ಮ್ಯವನ್ನು ತೋರಿಸುವುದು ಈ ಶಾಸ್ತ್ರದ ಆಧಾರದ ಮೇಲೆಯೇ ಎಂದು ನಿಸ್ಸಂಶಯವಾಗಿ ಹೇಳಬಹುದು. ಈ ಕ್ರಮವನ್ನು ಅನುಸರಿಸಿಯೇ ಅಲಂಕಾರ, ವ್ಯಾಕರಣ ಮತ್ತು ವೇದಾಂತ ಶಾಸ್ತ್ರಗಳು, ಪ್ರಕರಣ (manual) ಪ್ರಮಾಣ, ಭಾಷ್ಯ ಟೀಕಾ, ವೃತ್ತಿ ಮೊದಲಾದ ಗ್ರಂಥಗಳಿಂದ ಪುಷ್ಟವಾಗಿ ಬೆಳೆಯುವಂತಿವೆ.

ನೈಯಾಯಿಕರು ಈ ಕ್ರಮದೊಡನೆ ಪ್ರತಿವಸ್ತುವಿನಲ್ಲಿರುವ ಜಾತಿಯ ಮೂಲಕ ಲಕ್ಷಣವನ್ನು ಹೇಳುವರು. ಇದನ್ನು ಜಾತಿಘಟಿತ ಲಕ್ಷಣ ಮತ್ತು ಲಕ್ಷ್ಯತಾವಚ್ಛೇದಕ ಧರ್ಮನಿರೂಪಣ ಎಂದು ಹೇಳುವುದುಂಟು. ಇವರ ರೀತಿಯಲ್ಲಿ ಭೇದ ಮತ್ತು ವ್ಯವಹಾರ ಸೌಕರ್ಯ -ಇವೆರಡೇ ಲಕ್ಷಣದ ಪ್ರಯೋಜನ (ವ್ಯಾವೃತ್ತಿರ್ವ್ಯವಹಾರೋ ವಾ ಲಕ್ಷಣಸ್ಯ ಪ್ರಯೋಜನಂ)

ಇಷ್ಟಾದಮೇಲೆ ಪದಾರ್ಥವೆಂದರೇನು? ಎನ್ನುವುದು ಮೊದಲನೇ ವಿಷಯ. ಕಣಾದರ ಸಂಪ್ರದಾಯದ ರೀತಿಯಲ್ಲಿ "ಸತ್ತಾ ವಿಶಿಷ್ಟವಸ್ತು ಪದಾರ್ಥಃ "ಎಂದಿದೆ. ಸತ್ತಾ ಎಂದರೆ ಇರುವಿಕೆ. ಪದಾರ್ಥವು ಇರಲು ನಾವು ಅದನ್ನು ನೋಡಿರಬೇಕು ಅಥವಾ ಅನುಭವಿಸಿರಬೇಕು ಎನ್ನುವ ನಿಯಮವಿಲ್ಲ. ಇರುವ ಪದಾರ್ಥವು ಇಷ್ಟೇ ಎಂದು ಹೇಳಿರುವರು ಮತ್ತು ಗೌತಮರು ಸಮರ್ಥಿಸಿ ಪುಷ್ಟೀಕರಿಸಿರುವರು. ಇವರಿಬ್ಬರೂ ಋಷಿಗಳೇ ತಮ್ಮ ಅಲೌಕಿಕ ದೃಷ್ಟಿಯಿಂದ ಪ್ರಪಂಚದಲ್ಲಿ ಇಷ್ಟೇ ಪದಾರ್ಥಗಳಿವೆಯೆಂದು ಸಾಕ್ಷಾತ್ಕರಿಸಿಕೊಂಡು ಅವುಗಳನ್ನು ಮೊದಲು ಕೊಟ್ಟು ಅನಂತರ, ಸಾಮಾನ್ಯ ವಿಮರ್ಶಾತ್ಮಕ ದೃಷ್ಟಿಗೆ ಗೋಚರವಾಗುವಂತೆ ಲಕ್ಷಣಗಳನ್ನು ಪರೀಕ್ಷೆ ಮಾಡಿಕೊಟ್ಟಿರುವರು. ಈ ಶಾಸ್ತ್ರದಲ್ಲಿ ವಿಶ್ವಾಸವಿರುವವರಿಗೆ ಪದಾರ್ಥಗಳು ಏಳು ಎಂದು ಮೊದಲು ತಿಳಿದುಕೊಳ್ಳುವುದು ಸಾಕು. ಆದರೆ ಆ ವಿಶ್ವಾಸವು ಅಳಿಯದೆ ದೃಢವಾಗಲು ಲಕ್ಷಣಗಳನ್ನು ಹೇಳುವಾಗ ಗೌತಮ ಸಂಪ್ರದಾಯದಲ್ಲಿ ವಿಶ್ವಾಸವಿಲ್ಲದವರಿಗೂ ಪ್ರಯೋಜನವಾಗಿ ವಿಶ್ವಾಸ ಹುಟ್ಟುವಂತೆ, "ಪದಸ್ಯ ಅರ್ಥಃ ಪದಾರ್ಥಃ" ಎನ್ನುವ ವ್ಯುತ್ಪತ್ತಿಯ ಬಲದಿಂದ "ಅಭಿಧೇಯಂ -ಜ್ಞೇಯಂ-ಪ್ರಮೇಯಂ -ವಸ್ತು-ಪದಾರ್ಥಃ" ಎನ್ನುವ ಲಕ್ಷಣವು ಹೇಳಲ್ಪಟ್ಟಿದೆ. ಈ ಲಕ್ಷಣದ ಬಲದಿಂದಲೇ ಕಣಾದರು ಹೇಳಿರುವ ಆರು ಭಾವ ಪದಾರ್ಥಗಳೊಡನೆ ಅಭಾವವೆನ್ನುವ ಏಳನೇ ಪದಾರ್ಥವೂ ಸೇರಿಸಲ್ಪಟ್ಟಿವೆ. "ಇರುವಿಕೆ" ಎನ್ನುವುದಕ್ಕಿಂತ ಜ್ಞಾನಗೋಚರವಾಗುವ ವಸ್ತು ಪದಾರ್ಥ" ಎಂದಮೇಲೆ, ಅಭಾವವು ಜ್ಞೇಯವಾಗಿ ಪದಾರ್ಥವಾಗಿದೆ.

ಈ ವಾದವನ್ನೇ ಮುಂದಿಟ್ಟು ಮೀಮಾಂಸಕರ ಎರಡು ಪಂಗಡಗಳಲ್ಲಿ ಒಬ್ಬರಾದ ಪ್ರಭಾಕರರು "ಶಕ್ತಿ" ಎನ್ನುವ ಪದಾರ್ಥವನ್ನು ಸ್ವೀಕಾರ ಮಾಡಿ "ಅಭಾವ"ವನ್ನೂ ಸ್ವೀಕಾರ ಮಾಡದೇ ಇರುವರು. ಬೆಂಕಿಯಲ್ಲಿ ಸುಡುವ ಶಕ್ತಿ ಇದೆ. ಇದಕ್ಕೆ ಕಾರಣತ್ವ ಎಂದು ಹೆಸರು ಯಾವ ಪ್ರತಿಬಂಧಕವೂ ಇಲ್ಲದಿದ್ದರೆ ಈ ಸುಡವು ಶಕ್ತಿಯು ಇದ್ದೇ ಇರುವುದು. ಆದರೆ ಮಾಯಮಾಣಿ ಮೊದಲಾದ ವಸ್ತುಗಳೊಡನೆ ಕೂಡಿದರೆ ಈ ಶಕ್ತಿಯು ಒಂದು ಪದಾರ್ಥ" ಎನ್ನುವುದು ಇವರ ವಾದ ಇದಕ್ಕೆ ನೈಯಾಯಿಕರು "ಕಾರಣ ಸಾಮಗ್ರಿಯಲ್ಲಿ ಪ್ರತಿಬಂಧಕಾ ಭಾವ ಎನ್ನುವ ಪದಾರ್ಥದಿಂದಲೇ ನಿರ್ವಾಹವಾಗುವ ಶಕ್ತಿಯನ್ನು ಅತಿರಿಕ್ತ ಪದಾರ್ಥವನ್ನಾಗಿ ಸ್ವೀಕಾರ ಮಾಡುವ ಪ್ರಸಂಗ ಮತ್ತು ಔಚಿತ್ಯ ಎರಡೂ ಇಲ್ಲ" ಎಂದಿರುವರು.

ಕಣಾದ ಸೂತ್ರದ ಪ್ರಕಾರ ದ್ರವ್ಯ ಗುಣ ಮತ್ತು ಕರ್ಮ-ಈ ಮೂರೇ ಪದಾರ್ಥಗಳು. ಆದರೆ ಸಾಮಾನ್ಯ ಮತ್ತು ವಿಶೇಷವೆನ್ನುವ ಮತ್ತೆರಡು. ಈ ದ್ರವ್ಯಾದಿಗಳು ವಿಮರ್ಶೆಯಲ್ಲಿ ಸ್ವತಃ ಸಿದ್ಧವಾಗುವುದರಿಂದ ಅವೂ ಪದಾರ್ಥಗಳೆನ್ನುವುದರಲ್ಲಿ ಅಭ್ಯಂತರವಿಲ್ಲ. ಮುಂದೆ ಬಂದ ನೈಯಾಯಿಕರು ಅಭಾವವನ್ನು ಪದಾರ್ಥವನ್ನಾಗಿ ಸೇರಿಸಿರುವರು. ದ್ರವ್ಯಗುಣ ಮತ್ತು ಕರ್ಮಗಳನ್ನು ಮಾತ್ರ ಪದಾರ್ಥಗಳೆಂದು ಹೇಳುವುದರಲ್ಲೂ ಒಂದು ಔಚಿತ್ಯವಿದೆ. ಇದರ ಲಕ್ಷಣಗಳನ್ನೂ ಹೇಳಬೇಕಾದರೆ ಅಂದರೆ ಅವುಗಳ ಸ್ವರೂಪವನ್ನು ತಿಳಿಯಬೇಕಾದರೆ, ಅವುಗಳಲ್ಲಿರುವ ಜಾತಿ ಅಂದರೆ ಸಾಮಾನ್ಯರ ಮೂಲಕವೇ ಸಾಧ್ಯವೆನ್ನುವ ಅಭಿಪ್ರಾಯವು ರೂಢವಾಗಿರುವುದರಿಂದಲೂ. ದ್ರವ್ಯಗಳಲ್ಲಿ ಪೃಥವೀ. ಅಪ್ಪು. ತೇಜಸ್ಸು ಮತ್ತು ವಾಯು ಎನ್ನುವ ನಾಲ್ಕರ ಮೂಲ ನಿತ್ಯಸ್ಥಿತಿಯು ಪರಮಾಣುವಾಗಿ ಆ ಪರಮಾಣುಗಳ ಭೇದವನ್ನು ತೋರಿಸುವುದೇ ವಿಶೇಷ" ಎನ್ನುವ ಪದಾರ್ಥ.

ಈ ಸಾಮಾನ್ಯ ಮತ್ತು ವಿಶೇಷಗಳು ಪದಾರ್ಥದಲ್ಲಿ ಸಮವಾಯುವೆನ್ನುವ ಸಂಬಂಧದಿಂದ ಇವೆ ಇದೂ ಪದಾರ್ಥ ಅಂದರೆ ಪದಾರ್ಥಗಳು -ಏಳು ಎಂದು ಸ್ವೀಕಾರ ಮಾಡಲೇಬೇಕು. ಅನಿತ್ಯತ್ವ ಮೊದಲಾದ ಲಕ್ಷಣಗಳನ್ನು ಹೇಳುವಾಗ ಅಭಾವ ಪದಾರ್ಥ ಜ್ಞಾನವು ಅತ್ಯಾವಶ್ಯಕವಾಗಿದೆ. ಆದ್ದರಿಂದ, ಸಾಮಾನ್ಯ.ವಿಶೇಷ, ಸಮವಾಯ ಮತ್ತು ಅಭಾವ ಎನ್ನುವ ಕೊನೆಯ ನಾಲ್ಕು ಪದಾರ್ಥಗಳ ಸ್ವರೂಪವನ್ನೂ ತಿಳಿದ ಮೇಲೆ ಮೊದಲಿನ ಮೂರು ಪದಾರ್ಥಗಳನ್ನು ತಿಳಿಯುವುದು ಕ್ರಮಬದ್ಧವಾಗಿದೆ.

## ಸಾಮಾನ್ಯ

ಸಾಮಾನ್ಯವೆಂದರೇನು? – ತರ್ಕಸಂಗ್ರಹದಲ್ಲಿ ಇದರ ಲಕ್ಷಣ –ಪರಂ ಅಪರಂ ಚೇತಿದ್ವಿವಿಧಂ ಸಾಮಾನ್ಯಂ ನಿತ್ಯಂ ಏಕಂ ಅನೇಕಾನುಗತಂ ಸಾಮಾನ್ಯಂ ದ್ರವ್ಯ ಗುಣಕರ್ಮ ವೃತ್ತಿ ಪರಂಸತ್ತಾ. ಅಪರಂದ್ರ. ವ್ಯತ್ವಾದಿ "ಸರ್ವದರ್ಶನ ಸಂಗ್ರಹದಲ್ಲಿ ಇದರ ಲಕ್ಷಣ "ಪ್ರಧ್ವಂಸ ಪ್ರತಿಯೋಗಿತ್ವ ರಹಿತಂ ಅನೇಕ ಸಮವೇತಂ. ಎಂದಿದೆ. ಆದರೆ ಪ್ರಧ್ವಂಸಸ್ಯ ವಿನಾಶಸ್ಯ, ಯಃ ಪ್ರತಿಯೋಗಿವಿನಾಶೀ ಪದಾರ್ಥಃ ತಸ್ಯ ಭವಃ ಪ್ರಧ್ವಂಸಪ್ರತಿಯೋಗಿತ್ವಂ ವಿನಾಶಿತ್ವಂ ತೇನರಹಿತಂ ಅವಿನಾಶಿ ಇತ್ಯರ್ಥಃ ತಥಾ ಅನೇಕೇಷು ಸಮವೇತಂ ಚಯತ್ ತತ್ ಸಾಮಾನ್ಯಂ."

ಒಂದೇ ರೀತಿಯಲ್ಲಿರುವ ವಸ್ತುಗಳಲ್ಲಿ ಒಂದು ಸಮಾನತೆ ಇದೆ. ಈ ಸಮಾನತೆಗೆ ಕಾರಣವಾದ ಪದಾರ್ಥವೇ ಸಾಮಾನ್ಯ ಎನ್ನುವುದು ಕಣಾದರೂ ತಮ್ಮ ಸೂತ್ರ ಗ್ರಂಥದಲ್ಲಿ 'ಪದಾರ್ಥ ' ಎಂದು ಹೇಳದ ಧರ್ಮ ಎಂದು ಹೇಳಿರುವರು. " ಅತೋ ಧರ್ಮಂ ವ್ಯಾಖ್ಯಾಸ್ಯಾಂ "ಎಂದು ಪ್ರಾರಂಭಿಸಿ . ಧರ್ಮ ಲಕ್ಷಣ ವನ್ನು "ಯತೋಭ್ಯುಧ್ಯಯ -ನಿಶ್ರೇಯಸ- "ಸಧರ್ಮಂ"ಎಂದಿರುವನು. ಅಭ್ಯುಧ್ಯಯ ಎಂದರೆ ವ್ಯವಹಾರ ಮತ್ತು ಜೀವನದಲ್ಲಿ ಸೌಖ್ಯ ಸಂಪತ್ತು ಮತ್ತು ನಿಶ್ರೇಯಸ ಎಂದರೆ ಮೋಕ್ಷ- ಇವೆರಡೂ ಯಾವುದರಿಂದ ಸಿದ್ಧಿಸುತ್ತದೆಯೋ ಅದೇ ಧರ್ಮ. ಈ ಅರ್ಥದಲ್ಲಿ ದ್ರವ್ಯ. ಗುಣ ಮತ್ತು ಕರ್ಮ–ಈ ಮೂರು ಪದಾರ್ಥಗಳಿಂದ. ದ್ರವ್ಯವು ಮಿಕ್ಕ ಎರಡಕ್ಕೂ ಆಧಾರವಾಗಿರುವುದರಿಂದ ಅದು ಧರ್ಮೀ ಎಂದೂ. ಇವೆರಡೂ ಮತ್ತು ಸಾಮಾನ್ಯ ಮತ್ತು ವಿಶೇಷ–ಇವೆರಡೂ ಧರ್ಮಗಳೆಂದೂ. ಈ ಧರ್ಮ–ಧರ್ಮಿಗಳನ್ನು ಒಟ್ಟುಗೂಡಿಸಲು ಇರುವ ಪದಾರ್ಥವೇ ಸಮುದಾಯವೆಂದೂ ಅರ್ಥವು ವಿವರಿಸಲ್ಪಟ್ಟಿದೆ. " ಧರ್ಮ ಧರ್ಮಿ ಪ್ರಬೇಧನ ಪದಾರ್ಥ ವಿಭಾಗಃ ಎಂದು ಸ್ಥಿರವಾಗಿ ಸಾಮಾನ್ಯವು ಪದಾರ್ಥವಾಗಿ ಸ್ವೀಕರಿಸಲ್ಪಟ್ಟಿದೆ. ಕಣಾದರೂ ದ್ರವ್ಯ ,ಗುಣ ಮತ್ತು ಕರ್ಮ–ಈ ಮೂರು ಪದಾರ್ಥಗಳಿಗೆ ಮಾತ್ರ ಬಾಹ್ಯಸತ್ತಾವನ್ನು ಹೇಳಿರುವರು. (Externally real) ಇವರ ಸೂತ್ರ ವ್ಯಾಖ್ಯಾತಾ ಪ್ರಶಸ್ತವಾದುದು ಸಾಮಾನ್ಯ, ವಿಶೇಷ ಮತ್ತು ಸಮ ವಾಯವೂ ಪದಾರ್ಥಗಳೆಂದು ಪರಿಗ್ರಹಿಸಿರುವರು. ವ್ಯಾಪಕ ಸಾಮಾನ್ಯವೇ ಸತ್ತ . ಇದೇ ಪರಿಸಾಮಾನ್ಯ. ಮಿಕ್ಕ ದ್ರವ್ಯತ್ವಾದಿಗಳು ಅಪರ ಸಾಮಾನ್ಯ ಅಂದರೆ ಅವ್ಯಾಪಕ ಸಾಮಾನ್ಯ ಅಥವಾ ವ್ಯವ್ಯಾ ಸಾಮಾನ್ಯ. ಕಣಾದರೂ ಸಾಮಾನ್ಯವನ್ನು ಪದಾರ್ಥವಾಗಿ ಹೇಳದಿದ್ದರೂ , ಹಾಗೆ ಪದಾರ್ಥವಾಗಿ ಪರಿಗ್ರಹಿಸಲು ಅಭ್ಯಂತರವಿಲ್ಲವೆನ್ನುವುದು ಪ್ರಶಸ್ತಸಾದರ ಅಭಿಪ್ರಾಯ. ಸಾಮಾನ್ಯದಂತೆ ವಿಶೇಷವೂ ಬುದ್ಧ್ಯಪೇಕ್ಷಿತ ವಸ್ತು "ಸಾಮಾನ್ಯವಾಗಿ ವಿಶೇಷ ಇತಿ ಬುದ್ಧ್ಯಪೇಕ್ಷಂ (I, 2,3), ಸಾಮಾನ್ಯವು ಬಾಹ್ಯದಲ್ಲಿ ದ್ರವ್ಯಗುಣಗಳಂತೆ ಸತ್ವವುಳ್ಳದ್ದು. "ಘಟ" ಎನ್ನಬೇಕಾದರೆ ಆ ಪ್ರತೀತಿಗೆ ಕಾರಣವಾದ ಘಟತ್ವ ಜಾತಿಯು ಇದ್ದರೇನೇ ಪ್ರತ್ಯಕ್ಷ ಪ್ರಮಾಣ ಎಂದರೆ ಸವಿಕಲ್ಪ ಪ್ರತ್ಯಕ್ಷವು ಸಿದ್ಧಿಸುತ್ತದೆ. ಎಲ್ಲವೂ ಅಪೇಕ್ಷಾ ಬುದ್ಧಿಯಿಂದ ಕಲ್ಪಿತವಾದುದ್ದು ಎಂದಾದರೆ. ಬೌದ್ಧತಾರ್ಕಿಕನಾದ ದಿಙ್ನಗನು "ಸವಿಕಲ್ಪ ಪ್ರತ್ಯಕ್ಷವು ಜ್ಞಾನವಲ್ಲ". ಎಂದು ವಾದಿಸುವುದನ್ನು ತಳ್ಳಿ ಹಾಕಲಾಗುವಂತಿಲ್ಲ. ಬಾಹ್ಯನ ವಸ್ತುವಿನ ಯಥಾರ್ಥತೆಯನ್ನು ಒಪ್ಪಬೇಕಾದರೆ , ಸವಿಕಲ್ಪ ಪ್ರತ್ಯಕ್ಷ ಜ್ಞಾನವು ಯಥಾರ್ಥವೆಂದು ಸ್ವೀಕಾರ ಮಾಡಲೇಬೇಕಾಗುತ್ತದೆ. ಕಣಾದರ "ಸಾಮಾನ್ಯ ವಿಶೇಷ ಇತಿ ಬುದ್ಧ್ಯಂಪೇಕ್ಷಂ" ಎನ್ನುವುದರಿಂದ ಸಾಮಾನ್ಯ ಮತ್ತು ವಿಶೇಷ ಪದಾರ್ಥಗಳು ಹೇಳಲ್ಪಟ್ಟಿದೆ ಎಂದರ್ಥ ಮಾಡುವುದು ಸರಿಯಲ್ಲ. ಅನೇಕ ವಸ್ತುಗಳಲ್ಲಿ ಅನುಗತವಾಗಿ ಸಮಾನತೆ ಮತ್ತು ವೈಭವವನ್ನು ತೋರಿಸುವ ಜಾತಿಯು ಸಜಾತಿಗಳಲ್ಲಿ ಸಾಮಾನ್ಯವಾಗಿಯೂ. ವಿಜಾತೀಯ ವಸ್ತುಕ್ಷೇಪಯಾ ವಿಶೇಷವಾಗಿಯೂ ಇವೆ. ಉದಾಹರಣೆಗಾಗಿ ದ್ರವ್ಯತ್ವವೂ ಒಂಭತ್ತು ದ್ರವ್ಯಗಳಲ್ಲಿಯೂ (ಅಂದರೆ ಪೃಥ್ವೀವೀ. ಅಪ್ ಇತ್ಯಾದೀದರ ವಿಸ್ತಾರವು ಮುಂದೆ ಬರಲಿದೆ-) ಇರುವ ಸಾಮಾನ್ಯವು ಜಾತಿ. ಆದರೆ ಈ ದ್ರವ್ಯತ್ವವು ಗುಣತ್ವ ಮತ್ತು ಕರ್ಮತ್ವ ಜಾತಿಗಳಿಗಿಂಲೂ ಭಿನ್ನವಾಗಿ ದ್ರವ್ಯದ ಸ್ವರೂಪ ನಿರೂಪ ಧರ್ಮವಾಗಿರುವುದರಿಂದ ಅದರಲ್ಲಿ ವಿಶೇಷವಾಗಿದೆ. ಎಂದರೆ ದ್ರವ್ಯದಲ್ಲಿಯೇ ದ್ರವ್ಯವು ಮೀಸಲು. ಇದೇ ಅವರ ಸೂತ್ರದ ಅರ್ಥ. ಸತ್ತಾ ಎನ್ನುವ ಜಾತಿಯ ಎಲ್ಲಾ ಪದಾರ್ಥಗಳಲ್ಲಿಯೂ ಇರುವುದರಿಂದ . "ಸತ್ತಾ ವಿಶಿಷ್ಟಂ ವಸ್ತು ಪದಾಥಃ" ಎನ್ನುವುದನ್ನು ಪರಿಗ್ರಹಿಸುತ್ತಾ

ಎನ್ನುವುದು ಒಂದು ಎಂದೂ, ಅದು ಅನೇಕಾನುಗತಃ" ಎಂದೂ ವಿಸ್ತಾರವನ್ನು ಎನ್ನಂ ಭಟ್ಟರು ಕೊಟ್ಟಿರುವರು. ಬಾಹ್ಯ ಸ್ಥಿತಿಯನ್ನು ಉಳ್ಳದ್ದು. ಅಂದರೆ ಯಾವುದು ಇಂದ್ರಿಯ ಗೋಚರವೂ ಅಥವಾ ತದಧೀನ ಪ್ರಮಾಣ ಅಂದರೆ ಅನುಮಾನ ಗೋಚರವೂ ಅದು ಸತ್ತಾ ವಿಶಿಷ್ಟ ವಸ್ತು. ಅದೇ ಪದಾರ್ಥ ಇದರಿಂದ ಸಾಮಾನ್ಯನು ಪದಾರ್ಥವಾಗಿ ನಿತ್ಯವೂ ಆಗಿಹೋಗಿದೆ. ಈ ಸ್ವರ ಸಾಮಾನ್ಯವಾದ ಸತ್ತಾವನ್ನು -ಬಿಟ್ಟು ಮಿಕ್ಕ ಜಾತಿಗಳ ಸಾಮಾನ್ಯವಾಗಿಯೂ ಇವೆ ಎನ್ನುವುದೇ ಕಣಾದ ಸೂತ್ರದ ಅರ್ಥ. ಒಂದು ಘಟವನ್ನು ತೆಗೆದುಕೊಂಡರೆ ಅದರಲ್ಲಿ (1) ಸತ್ತಾ, (2) ದ್ರವ್ಯತ್ವ, (3) ಪೃಥವೀತ್ವ ಮತ್ತು (4) ಘಟತ್ವ ಎನ್ನುವ ನಾಲ್ಕು ಜಾತಿಗಳಿವೆ. ಸತ್ತಾ ಎಂದನ್ನು ಬಿಟ್ಟರೆ ಮಿಕ್ಕವೂ ಸಾಮಾನ್ಯವೂ ಆಗಿವೆ ವಿಶೇಷವೂ ಆಗಿವೆ. ಅದಕ್ಕಾಗಿ ಸತ್ತಾ ಎನ್ನುವುದನ್ನು ಜಾತಿ ಎನ್ನುವುದಕ್ಕೆ ಬದಲಾಗಿ "ಸಾಮಾನ್ಯ"ಎನ್ನುವುದೇ ಸರಿ. ಮಿಕ್ಕವೂ ಜಾತಿಗಳು ಮೇಲೆ ಕೊಟ್ಟು ಉದಾಹರಣೆಯಲ್ಲಿ ಘಟತ್ವವು ಎಂತ್ಯಜಾತಿ (Infima glnus) ಅಂದರೆ ಅದಕ್ಕಿಂಲೂ ಕೆಳಗಿನ ಅಂದರೆ ಕೊನೆಯ ಜಾತಿ ಇಲ್ಲ. ಸತ್ತಾ ಅನ್ನುವುದು ಮೂಲ ಸಾಮಾನ್ಯ (Summumqenus); ಇದು ನಿತ್ಯ ಪದಾರ್ಥ. ಅದಕ್ಕಾಗಿಯೇ ನಿತ್ಯ ಎನ್ನುವುದಕ್ಕೆ ಬದಲಾಗಿ ಸರ್ವದರ್ಶನ ಸಂಗ್ರಹದಲ್ಲಿ " ಧ್ವಂಸ ಪ್ರತಿಯೋಗಿರ ಹಿತಂ" ಎಂದು ಮಾಧವಾಚಾರ್ಯರು ಹೇಳಿರುವರು.

3. ಉಪಾಧಿ ಎಂದರೇನು- ಜ್ಞಾನವೃದ್ಧಿಗಾಗಿ ನಾವು ಸಾಮಾನ್ಯವಲ್ಲದಿದ್ದರೂ ಸಾಮಾನ್ಯ ಧರ್ಮದ ಆಧಾರದ ಮೇಲೆ ವಸ್ತುಗಳನ್ನು ಮಾನಸಿಕವಾಗಿ ಕಲ್ಪನೆ ಮಾಡಿಕೊಳ್ಳುವೆವು. ಇಂತಹ ಸಾಮಾನ್ಯ ಧರ್ಮಗಳಿಗೆ ನಾವು ಜಾತಿ ಎಂದು ಕರೆಯಕೂಡದು.* ಮನುಷ್ಯನಲ್ಲಿ ಮನುಷ್ಯತ್ವ ಜಾತಿ ಇದೆ. ಆದರೆ 'ಭಾರತೀಯ ' ಎನ್ನುವ ಪದಾರ್ಥವು ಬೇರೆಯಾಗಿ ಬಾಹ್ಯಪ್ರಪಂಚದಲ್ಲಿಲ್ಲ. ಮನುಷ್ಯನಲ್ಲಿ ಭಾರತೀಯರು ಒಂದು ಪಂಗಡ. ನಾವು ವಿಭಜಿಸಿಕೊಂಡಿರುವ ಒಂದು ಜನಾಂಗ . ಆದ್ದರಿಂದ ಭಾರತೀಯತ್ವ ಎನ್ನುವುದು ಜಾತಿಯಲ್ಲ. ಇದನ್ನು 'ಉಪಾಧಿ' ಎಂದು ಕರೆಯುವರು. ನ್ಯಾಯವಾಗಿ ನೋಡಿದರೆ ಜಾತಿಗೂ ಉಪಾಧಿಗೂ ಅಷ್ಟು ವ್ಯತ್ಯಾಸವು ಕಾಣುವುದಿಲ್ಲ. ಅನೇಕ ಪದಾರ್ಥಗಳಲ್ಲಿ ಅನೂ ಪ್ರತೀತಿಗೆ ಕಾರಣವಾಗಿರುವ ಸಾಮಾನ್ಯ ಧರ್ಮಕ್ಕೆ ಜಾತಿ ಅಥವಾ ಉಪಾಧಿತ್ವಎಂದು ಹೇಳಬಹುದು. ಆದರೆ ಭಾರತೀಯತ್ವ - ಬೆಂಗಳೂರು ನಗರ ವಾಸಿತ್ವ ಇತ್ಯಾದಿಗಳು ದ್ರವ್ಯತ್ವ ಮೊದಲಾದ ಜಾತಿಯಂತೆಯೇ ಇದ್ದರೂ ಇವು ನಿತ್ಯವಲ್ಲ. ಅದಕ್ಕಾಗಿಯೇ ಅವು ಜಾತಿಯಲ್ಲ , ಉಪಾಧಿಗಳು.

ಸಾಮಾನ್ಯನು ಎಂದು ಪದಾರ್ಥ. ಅದಕ್ಕೆ ಬಾಹ್ಯ ಅಸ್ತಿತ್ವವಿದೆ. ಇದು ದ್ರವ್ಯಗುಣ, ಕರ್ಮಗಳಲ್ಲಿ "ಸಮುದಾಯ" ಎನ್ನುವ ಸಂಬಂಧದಿಂದ ಇದೆ. ಆದರೆ ಉಪಾಧಿಯು ಜಾತಾಯಂತಿ ಕಲ್ಪಿತತತ್ವಗಳಲ್ಲಿ ಸ್ವರೂಪ ಸಂಬಂಧವಿದೆ. ಕಲ್ಪಿತ ತತ್ವವನ್ನು ವಿಶ್ಲೇಷಿಸಿ ಹೇಳುವಾಗ ನಾವು ಅದನ್ನು ಜಾತಿವಾಚಕ ಶಬ್ದದಿಂದ ವ್ಯವಹರಿಸುತ್ತೇವೆ.

4. ಜಾತಿಬಾಧಕ ದೋಷಗಳಾವುವು - ಕಿರಣಾವಳಿಯಲ್ಲಿ ಉದಯನರು ಯಾವುದು ಜಾತಿ ಯಾವುದು ಅಲ್ಲ ಎಂದು ನಿಷ್ಕರ್ಷಿಸಲು ಆರು ಹೇತುಗಳನ್ನು ಕೊಟ್ಟಿರುವರು.

ವ್ಯಕ್ತೇರ ಭೇದಃ ತುಲ್ಯತ್ವಂ. ಸಂಕರಃ (ಅಥ) ಅನವಸ್ಥಿತಿಃ
ರೂಪಹಾನಿ. ಅಸಂಬಂಧಃ ಜಾತಿಬಾಧಕ ಸಂಗ್ರಹಃ

(i) ವ್ಯಕ್ತೇರ ಭೇದಃ-ವಸ್ತುವು ಒಂದೇ ಇದ್ದರೆ ಅದರಲ್ಲಿ ಜಾತಿಇಲ್ಲ. ಆಕಾಶ ಒಂದೇ . ಅದು ಅನೇಕವಿಲ್ಲ. ಆದ್ದರಿಂದ ಆಕಾಶತ್ವ ಜಾತಿಯಲ್ಲ.

(2) ತುಲ್ಯತ್ವಂ- ಪರ್ಯಾಯ ಪದದಿಂದ ಬೋಧ್ಯವಾಗುವ ಅನೇಕವಾಗಿರುವ ಪದಾರ್ಥಗಳು ತುಲ್ಯ ಪದಾರ್ಥಗಳು. ಘಟ ಅಂದರೂ ಒಂದೇ ಕಲಶ ಅಂದರೂ ಒಂದೇ ಆದ್ದರಿಂದ ಕಲಶತ್ವ ಬೇರೆ ಜಾತಿಯಲ್ಲ.

(3) ಸಂಕರಃ-ತೇಜೋದ್ರವ್ಯವು ಮೂರು ವಿಧ. ಶರೀರೇಂದ್ರಿಯ ವಿಷ ಭೇದಾತ್.

ಶರೀರಂ ಆದಿತ್ಯಲೋಕೇ ಇಂದ್ರಿಯಂ ರೂಪಗ್ರಾಹಕಂ ಚಕ್ಷು ಕೃಷ್ಣ ತಾಂಗ್ರವರ್ತಿ (ತರ್ಕ ಸಂಗ್ರಹ).

ಇಂದ್ರಿಯವು ಬೇರೆ ಪದಾರ್ಥವಲ್ಲ. ದ್ರವ್ಯದಲ್ಲಿ ಸೇರಿವೆ. ಚಕ್ಷುರಿಂದ್ರಯವು ತೇಜಸ್ಸಿನಲ್ಲಿ ಸೇರಿದೆ ಎಂದರೆ ಜಾತಿ ಸಾಂಕರ್ಯವು ಬಂದಂತಾಗುತ್ತದೆ.ಆದ್ದರಿಂದ ಭೂತತ್ವ ಮತ್ತು ಇಂದ್ರಯತ್ವ ಎರಡು ಜಾತಿಗಳಲ್ಲ.

(4) ಅನವ ಸ್ಥಿತಿಃ-ಜಾತಿಯಲ್ಲಿ ಜಾತಿ ಇಲ್ಲ. ಘಟತ್ವ ಜಾತಿಯಲ್ಲಿ ಘಟತ್ವತ್ವ ಎನ್ನುವ ದಾತಿ ಇಲ್ಲ.ಯ ಹಾಗೆ ಇದೆ ಎಂದು ವಾದಿಸಿದರೆ ಆಗ ಘಟತತ್ವಕ್ಕೆ ಮತ್ತೊಂದು ಘಟತತ್ವವೆನ್ನುವುದು ಇರಬೇಕಾಗುತ್ತದೆ.

ಹೀಗೆಯೇ ಹೋದರೆ ಕೊನೆಯೇ ಇಲ್ಲ. ಈ ದೋಷಕ್ಕೆ ಅನವ ಸ್ಥಾದೋಷ ಎಂದು ಹೆಸರು.

(5) ರೂಪಹಾನಿಃ- ಸ್ವರೂಪ ಹಾನಿ ಮಾಡುವ ಜಾತಿ ಜಾತಿ ಇಲ್ಲ. ವಿಶೇಷವು ನಿತ್ಯ ದ್ರವ್ಯ ಪರಮಾಣುಗಳಲ್ಲಿ ವ್ಯಾಲರ್ತಕ ಧರ್ಮವಾಗಿರುವುದರಿಂದ ಅದು ಪದಾರ್ಥವಾಗಿ ಪರಿಣಿತವಾಗಿದೆ. ಅದರಲ್ಲಿ ಒಂದು ಜಾತಿ ಇದೆ ಎಂದು ವಾದಿಸಿದರೆ ಆಗ ವಿಶೇಷಪದಾರ್ಥಕ್ಕೆ ಹಾನಿ ಬಂದು ಆ ಜಾತಿಯೇ ಪದಾರ್ಥವಾಗುತ್ತದೆ. ಅಂದರೆ ಸಾಮಾನ್ಯದಲ್ಲಿ ವಿಶೇಷ ಸೇರಿ ಹೋಗುತ್ತದೆ. ಅದಕ್ಕಾಗಿ ವಿಶೇಷತ್ವವವು ಜಾತಿಯಿಲ್ಲ.

(VI) ಅಸಂಬಂಧಃ- ಅಭಾವವು ಸ್ವರೂದತಃ ಒಂದು ಭಾವ ಪದಾರ್ಥವಾಗಿಲ್ಲದಿರುವುದರಿಂದ ಅಭಾವತ್ವಕ್ಕೆ ಅಸ್ತಿತ್ವವೇ ಇಲ್ಲ. ಅದು ಅಸಂಭವ ವಸ್ತು. ಆದ್ದರಿಂದ ಅಭಾವತ್ವ ಜಾತಿಯಲ್ಲ.

5. ಉಪಾದಿವೈವಿಧ್ಯ – ಮೇಲೆ ಹೇಳಿದ ಆರು ಕಾರಣಗಳಿಂದ . (1) ಒಂದೇ ಆಗಿರುವ ಪದಾರ್ಥದಲ್ಲಿ (2) ಪರ್ಯಾಯದ ಬೇಧ್ಯ ಸಮಾನ ಪದ ವಾಚ್ಯದಲ್ಲೂ. (3) ಸಾಂಕರ್ಯ ತರುವ ಜಾತಿ ಮದ್ವಸ್ತುಗಳಲ್ಲಿ (4) ವಿಶೇಷ ಮತ್ತು (5) ಅಭಾವ ಪದಾರ್ಥಗಳಲ್ಲೂ ಇರುವ ಜಾತಿಗಳು ಜಾತಿಗಳಲ್ಲ. ಅನವ ಸ್ಥಾನ ದೋಷದಿಂದ ಜಾತಿಯಲ್ಲಿ ನಾವು ಜಾತಿಯನ್ನು ಸ್ವೀಕಾರ ಮಾಡಲಾರದೇ ಇದ್ದರೂ ಈ 'ಜಾತಿ ಬೋಧಕ ಶಬ್ದದಿಂದ ನಾವು ಸಾಧಿಸುವುದು ಬಹಳವಿದೆ. ಉದಾಹರಣೆಗೆ- ವಿಷಯದಲ್ಲಿ ವಿಷಯತಾ ಎನ್ನುವ ಜಾತಿ ಇದೆ.. ಲಕ್ಷಣಗಳನ್ನು ಹೇಳುವಾಗ ನಾವು ವಿಷಯಾತತ್ವ ಎಂದು ಪ್ರಯೋಗಿಸುತೇವೆ. ಇದು ಜಾತಿಯಲ್ಲದೆ ಇದ್ದರೂ ಕಾಲ್ಪನಿಕ ವಸ್ತುಗಳಲ್ಲಿ ನಾವು ರೂಪಿಸಿಕೊಳ್ಳುವ ಉಪಾಧಿಯಂತೆ ಇದೂ ಒಂದು ಉಪಾಧಿ (1) ಕಲ್ಪಿತ ವಸ್ತುವಿನಲ್ಲಿ ನಾವು ಲಾಕ್ಷಣಿಕ ಪ್ರತೀತವಾಗಿ ನಾವು ರೂಪಿಸಿಕೊಳ್ಳುವ ಜಾತಿ ಮತ್ತು (2) ಜಾತಿಯಲ್ಲಿ ಪ್ರಯೋಗ ಸೌಕರ್ಯಕ್ಕಾಗಿ ರೂಪಿಸಿಕೊಳ್ಳುವ ಜಾತಿ ವಿಶೇಷ ಎನ್ನುವ ಇವೆರಡರಲ್ಲಿ ಮೊದಲನೆ ಉಪಾಧಿಗೆ ಸಖಂಡೋಪಾಧಿ ಎಂತಲೂ ಎರಡನೇ ಉಪಾಧಿಗೆ ಅಖಂಡೋಪಾಧಿ ಎಂದಲೂ ವ್ಯಾವಹಾರಿಕ ಹೆಸರಿದೆ.

"ಮೂರ್ತವಸ್ತು" ಎನ್ನುವಾಗ –ಮೂರ್ತತ್ವ . ಉಪಾಧಿ . ಮೂರ್ತವೆಂದರೆ ಕ್ರಿಯಾಶಯನ ವಸ್ತು. ಕ್ರಿಯೆ ಎನ್ನುವುದು ಒಂದು ದ್ರವ್ಯದಲ್ಲಿ ಸಮವಾಯ ಸಂಬಂಧದಿಂದ ಇದೆ. ಆ ದ್ರವ್ಯದಲ್ಲಿ ದ್ರವತ್ವ, ಪೃಥಿವೀತ್ವ ಮೊದಲಾದ ಜಾತಿಗಳು ಇವೆ. ಕ್ರಿಯಾತ್ವವು ಕ್ರಿಯಾ ಸಂಬಂಧದಿಂದ ಆ ವಸ್ತುವಿನಲ್ಲಿ ಇದೆ. ಇದು ಸಾಕ್ಷಾತ್ಸಂಬಂಧವಲ್ಲ. ಪರಂಪರಾ ಸಂಬಂಧದಿಂದ ವಸ್ತುವಿನಲ್ಲಿರುವ ಉಪಾಧಿಯು ಸಖಂಡೋಪಾಧಿ. ಇದೇ ಲಾಕ್ಷಣಿಕ ಅಂದರೆ ಲಕ್ಷಣಕ್ಕಾಗಿ ನಾವು ಕಲ್ಪಿಸಿಕೊಳ್ಳುವುದರಿಂದ ಇದು ನಿರ್ವಾಚನೀಯ . ವಿಷಯತಾತ್ವ, ಪ್ರಗತಿಯೋಗಿತಾತ್ವ ಮೊದಲಾದ ಉಪಾಧಿಗಳು ವ್ಯಕ್ತಿಗಳೊಡನೆ ಸಾಕ್ಷಾತ್ಸಂಬಂಧದಿಂದ ಇದೆ. ಈ ಉಪಾಧಿಗಳಿಗೆ ಅಖಂಡೋಪಾಧಿ ಎಂದು ಹೆಸರು– ಇವು ಅನಿರ್ವಚನೀಯಗಳು ಅಂದರೆ ಲಕ್ಷಣಕ್ಕಾಗಿ ಕಲ್ಪಿಸಿಕೊಳ್ಳಲ್ಪಡದೆ ಪ್ರಯೋಗ ಸೌಕರ್ಯಕ್ಕಾಗಿ ಅವಶ್ಯವಾದ ಉಪಾಧಿಗಳು ವ್ಯಕ್ತಿಗಳೊಡನೆ ಪ್ರತಿಯೋಗಿತಾ ಮೊದಲಾದುವು ಜಾತಿ ಮತ್ತು ಪ್ರತಿಯೋಗಿತಾತ್ವ ಮೊದಲಾದುವು ಅಖಂಡೋಪಾಧಿ. ಇವೆರಡೂ ವ್ಯಕ್ತಿಗಳಲ್ಲಿ ಸಂಬಂಧವಾಗಿದ್ದರೂ ಜಾತಿಯ ಸಮವಾಯ ಸಂಬಂಧದಿಂದಲೂ. ಉಪಾಧಿಯು ಸ್ವರೂಪ ಸಂಬಂಧದಿಂದಲೂ ಇವೆ. ಆದರೆ ಇವೆರಡೂ ಮತ್ತಿತರ ವಸ್ತುವಿನ ಅಪೇಕ್ಷೆ ಇಲ್ಲದೆ ನಮಗೆ ಜ್ಞಾನ ಗೋಚರವಾಗುತ್ತದೆ (ಸ್ವರೂಪತೋಭಾನುಯೋಗ್ಯ) ಮಿಕ್ಕವಲ್ಲಿ ಪದಾರ್ಥಗಳೂ ತಮ್ಮ ತಮ್ಮಲ್ಲಿರುವ ಒಂದು ವಿಶೇಷ ಧರ್ಮ ಪ್ರಕಾರ ದ್ವಾರಾ ಗೋಚರವಾಗುತ್ತದೆ.ಕಿಂಚಿತ್ಪ್ರಕಾರ ಪುರಸ್ಕಾರೇಣಭಾಸ ಯೋಗ್ಯ. ಜಾತಿ ಮತ್ತು ಅಖಂಡಸಾಮಾನ್ಯವು ಹಾಗಲ್ಲ. (6) ಸಾಮಾನ್ಯವೆಂದರೆ ಜಾತಿ ಮಾತ್ರವಲ್ಲ–ಮೇಲೆ ವಿವರಿ[illegible] ನೋಡಿದರೆ ಸಾಮಾನ್ಯವು ಎರಡು ವಿಧವೆಂದೂ, ಆದರಲ್ಲಿ ಜಾತಿಯ ಸಮವಾಯ ಸಂಬಂಧದಿಂದ ವ್ಯಕ್ತಿಯಲ್ಲಿರುವುದೆಂದೂ. ಅಖಂಡ ಸಾಮಾನ್ಯವು ಸ್ವರೂಪ ಸಂಬಂಧದಿಂದಿರುವುದೆಂದೂ. ಅರ್ಥವು ಸಿದ್ಧವಾದ ಮೇಲೆ , ಸಾಮಾನ್ಯವೆಂದರೆ ಜಾತಿ ಎಂದು ತಿಳಿಯುವುದು ಸ್ವಲ್ಪ ತಪ್ಪಾಗುವುದು. ಅಖಂಡ ಸಾಮಾನ್ಯ ಮತ್ತು ಜಾತಿ–ಇವೆರಡೂ ಸಾಮಾನ್ಯಪದಾರ್ಥದಲ್ಲಿ ಸೇರಿವೆ. ಅವೆರಡಕ್ಕೂ ಅಸ್ತಿತ್ವವಿದೆ. ಆದರೆ ಸಖಂಡೋಪಾಧಿಗೆ ಅಸ್ತಿತ್ವವಿಲ್ಲ.

ವಿಶೇಷ

7. ಒಂದೇ ರೀತಿಯಲ್ಲಿರುವ ಅನೇಕ ವಸ್ತುಗಳಲ್ಲಿ ಕಾಣುವ ಸಾಧಾರಣ ಧರ್ಮಕ್ಕೆ ಸಾಮಾನ್ಯವೆಂದು ಹೇಳಲಾಗಿದೆ. ಈ ದೃಷ್ಟಿಯಲ್ಲಿ ಅವಯವ ಗಳಿಗೆ ಅವಯವಿಯು ಸಾಮಾನ್ಯ ಧರ್ಮವಾಗಿದೆ ಪಟವನ್ನು ತಂತುಗಳಿಗೆ ಸಾಮಾನ್ಯಧರ್ಮವೆಂದು ಹೇಳುವೆವು. ಹೀಗೆಯೇ ಹಿಂದೂ ಹಿಂದಕ್ಕೆ ಹೋದರೆ ಪರಮಾಣುವರೆಗೂ ಹೋಗಿ ಮಾಡಿದರೆ ಪರಮಾಣುಗಳಿಗೆ ಯಾವ ಸಾಮಾನ್ಯವೂ ಇರುವುದಿಲ್ಲ. ಎಲ್ಲಾ ಪಟಗಳಲ್ಲೂ ಒಂದೇ ಜಾತಿಯು ಇರುತದೆ. ಆದರೆ ಅವುಗಳ ಅವಯವಗಳ ದ್ವಾರಾ ಪರಸ್ಪರ ಬೇಧವು ಕಂಡು ಬರುತ್ತದೆ ಆದರೆ ಪೃಥವೀ ಮೊದಲಾದುವುಗಳ ಪರಮಾಣುಗಳ ಬೇಧವನ್ನು ಯಾವ ಪ್ರಕಾರದಲ್ಲಿ ತಿಳಿಯಬಹುದು. ಎನ್ನುವುದನು ಯೋಚಿಸಿದರೆ, ಆಗ ವಿಶೇಷ ಎನ್ನುವ ಪದಾರ್ಥವನ್ನು ಪರಿಗ್ರಹಿಸುವ ಅವಶ್ಯಕತೆ ಬೀಳುತ್ತದೆ. ಸಾಮಾನ್ಯ ಪದಾರ್ಥವನ್ನು ವಿವರಿಸುವಾಗ ಜಾತಿಯು, ಸಾಮಾನ್ಯವಾಗಿಯೂ ವಿಶೇಷವಾಗಿಯೂ ಇದೆ ಎಂತಲೂ . ಸತ್ತಾ ಎನ್ನುವುದು ಪರಮ ಸಾಮಾನ್ಯವೆಂದೂ, ಘಟತ್ವ ಮೊದಲಾದುವು ಅಂತ್ಯಸಾಮಾನ್ಯವೆಂದೂ ತಿಳಿದಾಯಿತು. ಪರಮ ಸಾಮಾನ್ಯ ಮತ್ತು ಅಂತ್ಯ ಸಾಮಾನ್ಯದ ಮಧ್ಯೆ ಇರುವ ಎಲ್ಲಾ ಸಾಮಾನ್ಯಗಳು ಸಾಮಾನ್ಯಗಳಾಗಿಯೂ ವಿಶೇಷಗಳಾಗಿಯೂ ಇದೆ ಎಂದು ಹೇಳುವದಕಾಗಿಯೇ ಕಣಾದರೂ" . ಸಾಮಾನ್ಯಂ ವಿಶೇಷ ಇತಿ ಬುದ್ಧ್ಯಪೇಕ್ಷಂ" ಎಂದಿರುವರು. ಅಂತ್ಯ ಸಾಮಾನ್ಯವಿರುವಂತೆ ಪರಮಾಣು ಬೇಧವನ್ನು ತಿಳುಸುವ ಪಿಶೇಷವು ಅಂತ್ಯವಿಶೇಷವಾಗಿ ಇರಲೇಬೇಕು. ಅದನ್ನು ತಿಳಿಸುವುದಕ್ಕಾಗಿಯೇ "ಅನ್ಯತ್ರ ಅಂತ್ಯೇಭ್ಯೋ ವಿಶೇಷಭ್ಯಃ "(1,2,6) ಎನ್ನುವ ಸೂತ್ರದಲ್ಲಿ, ಸಾಮಾನ್ಯ ವಿಶೇಷಗಳಾಗಿರುವ ಸಾಮಾನ್ಯವು ಅಂತ್ಯ ವಿಶೇಷಕ್ಕಿಂತಲೂ ಭಿನ್ನ ಎಂದಿರುವರು. ಪರಮಾಣುಗಳೇ ದ್ರವ್ಯಗಳ ಅತೀಸೂಕ್ಷ್ಮ ರೂಪವೆನ್ನುವುದನ್ನು ಸಾಕ್ಷಾತ್ಕರಿಸಿಕೊಂಡು. ತಮ್ಮ ಸಿದ್ಧಾಂತಕ್ಕೆ ಸೂಕ್ಷ್ಮರೂಪವನ್ನು ಕೊಟ್ಟಿರುವ ಕಣಾದರಿಗೆ ಆ ಹೆಸರು ಅನ್ವರ್ಥವಾಗಿದೆ. ಕಣ ಎಂದರೆ ಅಣು. ಅದನ್ನು ತಿಂದು ಜೀವಿಸುವರು ಕಣಾದರು. ಇವರು ಈ ಕಣ ಅಥವಾ ಪರಮಾಣುಗಳಲ್ಲಿ ಪರಸ್ಪರ ಬೇಧ ತೋರಿಸುವ ಪದಾರ್ಥವು ಅಂತ್ಯ 'ವಿಶೇಷ' ಎನ್ನುವ ಬೇರೆ ಪದಾರ್ಥವನ್ನು ಸಿದ್ಧಾಂತಕ್ಕೆ ತೆಗೆದುಕೊಂಡಿರುವುದರಿಂದ ಈ ಸಂಪ್ರದಾಯಕ್ಕೆ ವೈಶೇಷಿಕ ಎನ್ನುವ ಹೆಸರೂ ಅನ್ವರ್ಥವಾಗಿದೆ. ಪೃಥವೀ ಮೊದಲಾದ ಪರಮಾಣುಗಳಲ್ಲಿ ಸತ್ತ ಎನ್ನುವ ಪರ ಸಾಮಾನ್ಯವು ಅವೆಲ್ಲರ ಒಂದು ಜಾತಿಯನ್ನು ತಿಳಿಸಿದರೆ . ಪ್ರತಿಪರಮಾಣುವಿನಲ್ಲಿ ಇರುವ "ವಿಶೇಷ"ವು, ಆ ಪರಮಾಣುಗಳ ಬೇಧವನ್ನು ತಿಳಿಸಿರುತ್ತದೆ. ಅದಕ್ಕಾಗಿಯೇ ' ಅನ್ಯೋನ್ಯಾಭಾವ ವಿರೋಧಿ ಸಾಮಾನ್ಯ ರಹಿತಃ ಸಯವೇತಃ ವಿಶೇಷಃ' ಎನ್ನುವುದು ಅದರ ಲಕ್ಷಣ. ಅವಯವರ ಹಿತಪರಮಾಣುಗಳಲ್ಲಿ ಬೇಧವನ್ನು ತೋರಿಸುವ 'ವಿಶೇಷ' ವು ಅವಯವವಿಲ್ಲದ ಕಾಲ, ದಿಕ್ಕು, ಆಕಾಶ ಮತ್ತು ಆತ್ಮ ಮೊದಲಾದ ನಿತ್ಯ ವಿಭು ಪದಾರ್ಥಗಳ ಮತ್ತು ಅನಂತವಾದ ಮನಸ್ಸು ಎನ್ನುವ ಪದಾರ್ಥದ ಕಾರಸ್ಥನ ಭೇದವನ್ನು ತೋರಿಸುತ್ತದೆ. ಆದ್ದರಿಂದ " ವಿಶೇಷ"ವು ಅನಂತವಾಗಿದೆ. ಹೀಗೆ ಅನಂತವಾಗಿರುವ ವಿಶೇಷಗಳಿಗೆ ಪರಸ್ಪರ ಬೇದವನ್ನು ತಿಳಿಸುವ ಮತ್ತೊಂದು ಪದಾರ್ಥವನ್ನು ಕಲ್ಪಿಸುವ ಪ್ರಸಂಗವನ್ನು ತಳ್ಳಿಹಾಕಲು 'ವಿಶೇಷವು ಸ್ವತೋವ್ಯಾವರ್ತಕ (self discriminating) ಮತ್ತು ಸ್ವತೋವ್ಯಾವೃತ್ತ (self disoniminated) ಎಂದು ಪರಿಗ್ರಹಿಸಲೇಬೇಕಾಗುತ್ತದೆ.

ಪ್ರತಿ ದ್ರವ್ಯಗಳ ಪ್ರತಿ ಪರಮಾಣುಗಳಲ್ಲಿ ಕಾಲ, ದಿಕ್ಕು, ಆಕಾಶ, ಆತ್ಮ ಮತ್ತು ಮನಸ್ಸು ಇವುಗಳಲ್ಲೂ ಒಂದೊಂದು ವಿಶೇಷವಿದೆ ಎನ್ನುವುದರಲ್ಲಿ ನೈಯಾಯಿಕರಲ್ಲೇ ಭಿನ್ನಾಭಿಪ್ರಾಯವಿದೆ. ಬದ್ಧಾತ್ಮದಲ್ಲಿ ಅವರವರ ಮನಸ್ಸುಗಳಲ್ಲಿ ಪರಸ್ಪರ ಬೇದವು ಕಾಣುವಂತೆ ಮುಕ್ತಾತ್ಮರುಗಳಲ್ಲೂ ವಿಶೇಷವನ್ನು ಸ್ವೀಕಾರ ಮಾಡಿದರೇನೇ ಮಾತ್ರ ಭೇದವು ಸಿದ್ಧವಾಗುವುದೆಂದು ಎಲ್ಲಾ ನೈಯಾಯಿಕರೂ ಒಪ್ಪಿರುವರು. ಆದರೆ ಆಕಾಶ ವಿಶೇಷದಲ್ಲಿ ಶಬ್ದ ಸಾಮಾವಾಯಿ ಕಾರಣತಾವ ಛೇದಕವನ್ನು ಕೆಲವರು ಸ್ವೀಕರಿಸಿರುವರು. ಮತ್ತೆ ಕೆಲವರು ಇಲ್ಲಿ ದಿಕ್ಕು ಮತ್ತು ಕಾಲವು ಭಿನ್ನದ್ರವ್ಯಗಳಾದರೆ ಅವೂ ಬೇರೆ ಬೇರೆ ವಿಶೇಷಗಳನ್ನು ಹೊಂದಿರಬೇಕು. ಆದರೆ ಪ್ರಾಚೀನರು ಇವೆರಡನ್ನೂ ಬೇರೆ ದ್ರವ್ಯವಾಗಿ ಸ್ವೀಕಾರ ಮಾಡಿದ್ದರೂ ರಘುನಾಥ ಶಿರೋಮಣಿ ಮೊದಲಾದವರು ಇವೆರಡನ್ನೂ ಈಶ್ವರನಲ್ಲಿ ಅಂತರ್ಗತ ಮಾಡಿರುವರು. ಸರ್ವಜ್ಞತಾದಿ ಗುಣಗಳೇ ಈಶ್ವರನ ಭೇದವನ್ನು ತಿಳಿಸುವಾಗ ಆ ಈಶ್ವರನಲ್ಲಿ ಒಂದು ವಿಶೇಷವನ್ನು ನೋಡುವುದು ಅನುಚಿತವೆಂದು ಹೇಳಿರುವರು.

(8) ಸಮದಾಯ– ಎರಡು ದ್ರವ್ಯಗಳು ಒಟ್ಟಿಗೆ ಸೇರಿದರೆ, ಅವೆರಡನ್ನು ಸೇರಿಸುವ ಗುಣವು ಸಂಯೋಗ ಎನಿಸಿಕೊಳ್ಳುತ್ತದೆ. ಈ ಸಂಬಂಧವು ಸನ್ನಿಹಿತವಾದ ಸಂಬಂಧವಲ್ಲ– ಅದು ಎರಡು ಪದಾರ್ಥಗಳನ್ನು ಬಹಳ ಸ್ವಲ್ಪ ಪ್ರಯತ್ನದಿಂದ ಬೇರೆ ಬೇರೆ ಮಾಡಬಹುದು. ಕೆಲವು ಪದಾರ್ಥಗಳು ಒಟ್ಟು ಸೇರಿ ಒಂದು ಎನ್ನುವ ಪ್ರತೀತಿಗೆ ಕಾರಣವಾಗಿದೆ. ಈ ಪದಾರ್ಥಗಳಿಗೆ ಅಯುತಸಿದ್ಧ ಪದಾರ್ಥಗಳು ಎನ್ನುವ ಹೆಸರಿದೆ. (1) ಅವಯವ ಮತ್ತು ಅವಯವಿ . (2) ದ್ರವ್ಯ ಮತ್ತು ಗುಣ .(3) ದ್ರವ್ಯ ಮತ್ತು ಕ್ರಿಯಾ.(4) ಜಾತಿ ಮತ್ತು ವ್ಯಕ್ತಿ ಮತ್ತು (5) ವಿಶೇಷ ಮತ್ತು ಪರಮಾಣುಗಳು–ಇವೆಲ್ಲವೂ ಆಯುತ ಸಿದ್ಧ ಪದಾರ್ಥಗಳು ಇವುಗಳ ಮಧ್ಯೆ ಬೇರೆಯಾಗಿದ್ದು ಎರಡನ್ನು ಸೇರಿಸುವ "ಸಮದಾಯ" ವೆನ್ನುವ ಪದಾರ್ಥವು ಸಂಬಂಧವನ್ನು ಕಲ್ಪಿಸುತ್ತದೆ. ಸಾಮಾನ್ಯ ಪದಾರ್ಥವನ್ನು ಹೇಳುವಾಗ ಪರಿಚಿತವಾಗಿರುವ 'ಸ್ವರೂಪ ಸಂಬಂಧ' ಎನ್ನುವುದನ್ನು ನೈಯಾಯಿಕರು ಪರಿಗ್ರಹಿಸಿರುವರು. ಸಂಯೋಗ ಮತ್ತು ಸಮದಾಯವಾಗಿರದೇ ಇರುವುದು ಸ್ವರೂಪ ಸಂಬಂಧ. ಘಟದಲ್ಲಿ ಘಟತ್ವ ಎನ್ನುವುದು ಒಂದು ವಿಜಾತೀಯ ಅನುಭವ ಇರುವ ಕಡೆ ಎಲ್ಲಾ ಸ್ವರೂಪ ಸಂಬಂಧವಿದೆ ಎನ್ನುವುದು ನೈಯಾಯಿಕರ ಮತ. ಇದಲ್ಲದೆ ಕಾಲವು ಪದಾರ್ಥಗಳೊಡನೆ ಸ್ವರೂಪ ಸಂಬಂಧದಿಂದ ಸೇರಿದೆ. ಇದಕ್ಕೆ ಸಂಬಂಧವೆಂದು ಹೆಸರು. ಕಾಲವೇ ಆಯಾ ಪದಾರ್ಥದೊಡನೆ ಸೇರಿ ಅದನ್ನು ತನ್ನದನ್ನಾಗಿ ತೋರಿಸುತ್ತದೆ. ವಿಶೇಷಣ ಮತ್ತು ವಿಶೇಷ್ಯಗಳು ಒಟ್ಟುಗೂಡಿಸುವ ಅನೇಕ ಕಡೆ ಈ ಸ್ವರೂಪ ಸಂಬಂಧವು ಕಾರ್ಯಕಾರಿಯಾಗಿದೆ. ಸಂಯೋಗ ಮತ್ತು ಸಮದಾಯ ಆಗಿರದೆ ವಿಶಿಷ್ಟ ಪ್ರತೀತಿಗೆ ಕಾರಣವಾಗಿರುವುದರಿಂದಲೂ ವಿಶೇಷ್ಯವೂ ತನ್ನ ಶಕ್ತಿ ಬಲದಿಂದ ವಿಶೇಷಣವನ್ನು ತನ್ನದನ್ನಾಗಿ ಮಾಡಿಕೊಂಡಿರುವುದರಿಂದಲೂ, ಈ ಸಂಬಂಧವನ್ನೂ ಪರಿಗ್ರಹಿಸಲೇಬೇಕು

ಅಂದರೆ ಮೂರು ವಿಧ ಸಂಬಂಧಗಳಲ್ಲಿ ಸಂಯೋಗವು ಒಂದು ಗುಣ; ಸಮದಾಯ ಒಂದು ಬೇರೆ ಪದಾರ್ಥ; ಮತ್ತು ಸ್ವರೂಪ ಸಂಬಂಧವು ದ್ರವ್ಯದ ಪ್ರಭಾವ. ಮೀಮಾಂಸಕರಲ್ಲಿ ಪ್ರಭಾಕರ ಸಂಪ್ರದಾಯಸ್ಥರು ಸಮದಾಯವನ್ನು ಸ್ವೀಕರಿಸಿದ್ದರೂ ಅದನ್ನು ನಿತ್ಯ ದ್ರವ್ಯವನ್ನಾಗಿ

ಸೂತ್ರ ಸ್ವೀಕರಿಸಿಲ್ಲ. ಆ ವನುತ ಸಿದ್ಧ ಪದಾರ್ಥಗಳಲ್ಲಿ ಎರಡು ನಿತ್ಯವಾಗಿದ್ದರೆ ಸಮುದಾಯವೂ ನಿತ್ಯ; ಇಲ್ಲದಿದ್ದರೆ ಇಲ್ಲ-ಎನ್ನುವ ವರು. ನೈಯಾಯಿಕರಾದರೋ ಲಾಘವ ನ್ಯಾಯ ಪರಿಶೀಲನೆಗಾಗಿ ಸಮುದಾಯವನ್ನು ನಿತ್ಯ ಪದಾರ್ಥವನ್ನಾಗಿ ಸ್ವೀಕಾರ ಮಾಡಬೇಕೆಂದೂ, ಅದು ಅಯುತ ಸಿದ್ಧ ಪದಾರ್ಥಗಳಲ್ಲಿ ವಿಶಿಷ್ಟ ಪ್ರತೀತಿಗೆ ಹೇತುವಾಗಿ ಗೋಚರವಾಗುವುದೆಂದೂ ಹೇಳುವರು. ಸಮುದಾಯವು ಎರಡು ಪದಾರ್ಥಗಳನ್ನು ಸೇರಿಸುವುದು. ಆದರೆ, ಅದರ ಲಕ್ಷಣವು "ಸಮುದಾಯ ರಹಿತಃ ಸಂಬಂಧಃ ಸಮುದಾಯಃ" ಎಂದು ಕೊಡಲಾಗಿದೆ.

ಪಾಶ್ಚಾತ್ಯದಲ್ಲಿ ಎರಡು ಅಥವಾ ಅನೇಕ ವಸ್ತುಗಳು ಒಟ್ಟುಗೂಡಿ ಒಂದಾದರೆ ಆಗ ಹಾಗೆ ಸೇರಿರುವುದು ಆಯಾ ವಸ್ತುಗಳ ಸ್ವರೂಪ ಶಕ್ತಿ ಎಂದೂ ಹಾಗೆ ಸೇರದಿದರೆ ಬಾಹ್ಯ ಸಂಬಂಧವಿದೆ ಎಂದು ಹೇಳುವರು. ವೇದಾಂತದಲ್ಲಿ ತಾ ದಾತ್ಮ್ಯವೆಂದರೆ ಅಂತಃ ಸಂಬಂಧ(difference cum identity), (ಸಾಂಖ್ಯ, ಭಾಟ್ಟ, ಮತ್ತು ಅದ್ವೈತ) ನೈಯಾಯಿಕರಿಗೆ ತಾದಾತ್ಮ್ಯವೆನ್ನುವುದೇ ಇಲ್ಲ.

(9) ಅಭಾವ-ಅಭಾವವು ನಾಲ್ಕು ವಿಧ-(1) ಪ್ರಾಗಭಾವ (2) ಪ್ರಧ್ವಂಸಾಭಾವ (3) ಅತ್ಯಂತಾಭಾವ (4) ಅನ್ಯೋನ್ಯಭಾವ. ಒಂದು ವಸ್ತುವು ಉತ್ಪನ್ನವಾಗಿರುವುದಕ್ಕೆ ಮುಂಚೆ ಮಾನಸಿಕವಾಗಿರುವ ಆ ವ್ಯಕ್ತಿಯು ಎದುರಿಗೆ ಇರಲಿಲ್ಲ ಎನ್ನುವುದು ಪ್ರಾಗಭಾವ. ವ್ಯಕ್ತಿಯು ಉತ್ಪನ್ನವಾದ ಈ ಪ್ರಾಗಭಾವವು ನಾಶಹೊಂದುತ್ತದೆ. ಹುಟ್ಟುವುದಕ್ಕೆ ಮುಂಚೆ ಯಾವಾಗಲೂ ಇರಲಿಲ್ಲ. ಅದಕ್ಕಾಗಿ ಇದರ ಲಕ್ಷಣ "ಅನಿತ್ಯಃ ವಿನಾಶೀ ಅನಾದಿಃಪ್ರಾಗಭಾವಃ".

ಅಭಾವ ಜ್ಞಾನದಲ್ಲಿ ಯಾವಾಗಲೂ ವಿಶಿಷ್ಟ ಬುದ್ಧಿಯೂ ಇದೆ. ಅಭಾವವೇ ವಿಶೇಷ್ಯ ಮಿಶ್ರವು ವಿಶೇಷ ಣ 'ಒಂದರಲ್ಲಿ ಐದು ಜ್ಞಾನಗಳು ಸೇರಿ ಒಂದಾಗಿವೆ. (1) ಪ್ರತಿಯೋಗಿಯು ಜ್ಞಾನ, (2) ಅನುಯೋಗಿಯ ಜ್ಞಾನ. (3) ಪ್ರತಿಯೋಗಿಯ ವ್ಯಾಪ್ತಿಯನ್ನು ನಿಷ್ಕರ್ಷಿಸುವ ವಿಶೇಷಣ ಅಂದರೆ ಪ್ರತಿಯೋಗಿ ತಾವಚ್ಛೇದಕ ಧರ್ಮ. (4) ಹಾಗೆಯೇ ಅನುಯೋಗಿತಾವಚ್ಛೇಕ ಧರ್ಮಮತ್ತು (5) ಪ್ರತಿಯೋಗಿತಾವಚ್ಛೇಕ ಸಂಬಂಧ. ಅತ್ರ ಭೂತವೇ ಘಟೋನಾಸ್ತಿಎನ್ನುವಾಗ- (1) ಘಟಪ್ರತಿಯೋಗಿ ಜ್ಞಾನ. (2) ಅನುಯೋಗಿಯಾದ ಭೂತ ಜ್ಞಾನ. (3) ಘಟತ್ವಾವಚ್ಛೇದಕ ಧರ್ಮ ಜ್ಞಾನ . (4 ಭೂತಲತ್ವಾವಚ್ಛೇದಕ ಧರ್ಮಜ್ಞಾನ (5) ಘಟದೊಡನೆ ಘಟತ್ವವೂ ಸೇರಿಲ್ಲೆನ್ನುವ ಜ್ಞಾನ ಇವೆಲ್ಲವೂ ಸೇರಿ 'ಅತ್ರ ಭೂತಲೇ ಘಟೋನಾಸ್ತಿ' ಎನ್ನುವ ಅಭಾವ ಜ್ಞಾನವು ಪ್ರಸಿದ್ಧವಾಗುತ್ತದೆ.

ಈ ನಾಲ್ಕು ಅಭಾವಗಳಲ್ಲಿ, ಪ್ರಗಭಾವ, ಪ್ರಧ್ವಂಸಾಭಾವ ಮತ್ತು ಅತ್ಯಂತಾಭಾವಗಳಗೆ ಸಂಸಾರಭಾವವೆಂದೂ ಹೇಳುವುದುಂಟು: ತಾದಾತ್ಮ್ಯ ಬಿಟ್ಟು ಸಂಯೋಗವೊ ಸಮುದಾಯವೋ ಆ ಅಭಾವಜ್ಞಾನದಲ್ಲಿ ಸೇರಿವೆ. ಅನ್ಯೋನ್ಯಭಾವದಲ್ಲಿ ಅಂದರೆ ಭೇದದಲ್ಲಿ (ಘಟಃ ಪಟೋನ ಮುಂತಾದುವುಗಳಲ್ಲಿ) ತಾದಾತ್ಮ್ಯ ಅಥವಾ ಐಕ್ಯತಾಭಾವವಿದೆ. ನೈಯಾಯಿಕದಲ್ಲಿ ತಾದಾತ್ಮ್ಯವೆಂದರೆ ಐಕ್ಯ. ಭಾಟ್ಟ ಮೀಮಾಂಸದಲ್ಲಿ ಭೇಧ ಭೇಧಕ್ಕೆ ತಾದಾತ್ಮ್ಯವೆನ್ನುವ ಹೆಸರಿದೆ. ಪ್ರಚೀನ ನೈಯಾಯಿಕರ

ಪ್ರಕಿಂವ ಧ್ವಂಸ ಪ್ರಗಭಾವ ಅಧಿಕರಣದಲ್ಲಿ ಅತ್ಯಂತಾಭಾವವು ಅಂಗೀಕೃತವಾಗಿಲ್ಲ, ಆದರೆ ನವೀನರು ಒಪ್ಪಿರುವರು. ಅತ್ಯಂತಭಾವವನ್ನು "ವ್ಯದ್ಧಿಕರಣ ಧರ್ಮಾವಚ್ಛಿನ್ನ ಪ್ರತಿಯೋಗಿತಾಭಾವ" ಎನ್ನುವುದುಂಟು.

ದಿಕ್ಕು-ಪ್ರಾಚ್ಯಾದಿ ವ್ಯವಹಾರ ಹೇತುಃ- ಸಾಚ ಏಕಾ ವಿಭ್ವೀ ನಿತ್ಯಾ ಚ-ಇದೂ ಕೂಡ ಸಕಲ ಕಾರ್ಯಕ್ಕೆ ನಿಮಿತ್ತ ಕಾರಣದಲ್ಲಿ ಒಂದು.

ಆತ್ಮ-ಜ್ಞಾನಕ್ಕೆ ಅಧಿಕರಣವಾಗಿರುವುದೇ ಆತ್ಮಾ: ಜೀವಾತ್ಮಾ ಪರಮಾತ್ಮಾ ಎಂದು ಎರಡು ಭೇದ: ಜೀವಗಳು ಅನಂತ. ವಿಭು ಮತ್ತು ನಿತ್ಯ : ಸುಖದುಃಖಾದಿಗಳಿಗೆ ಆಶ್ರಯವಾಗಿರುವುದೇ ಜೀವ:ಇದು ಶರೀರ ಮತ್ತು ಇಂದ್ರಿಯಗಳಿಗೆ ಭಿನ್ನವಾದ ದ್ರವ್ಯ : ಪರಮಾತ್ಮನು ಒಬ್ಬನೇ. ಇವನ ಜ್ಞಾನ ಕ್ರಿಯತ್ನವು ನಿತ್ಯವಾದುದ್ದು. ಮನಸ್ಸು-ಸುಖದುಃಖಾದಿಗಳ ಉಪಲಬ್ಧಿ ಅಂದರೆ ಸಾಕ್ಷಾತ್ಕಾರ ಕ್ಕೆ ಸಾಧನವಾಗಿರುವ ಇಂದ್ರಿಯ. ಇದರ ಲಕ್ಷಣವು ಸ್ಪರ್ಶರಹಿತತ್ವೇ ಸತಿ ಕ್ರಿಯಾವತ್ತ್ವಂ ಪ್ರತಿ ಒಂದು ಆತ್ಮಕ್ಕು ಒಂದೊಂದು ಮನಸ್ಸು ಇರುವುದರಿಂದ ಮನಸ್ಸು ಅನಂತವಾಗಿದೆ.. ಇದು ಪರಮಾಣು ರೂಪದಲ್ಲಿರುವ ನಿತ್ಯ ದ್ರವ್ಯ.

## 12. ಗುಣ

ಗುಣಗಳು 24-(ರೂಪ-ರಸ-ಗಂಧ-ಸ್ಪರ್ಶ)-ಸಂಖ್ಯಾ-ಪರಿಮಾಣ-ಪೃಥಕ್ತ್ವ-ಸಂಯೋಗ-ವಿಭಾಗ-ಪರತ್ವ-ಅಪರತ್ವ-ಗುರುತ್ವ-( ದ್ರವ್ಯತ್ವ-ಸ್ನೇಹ)-ಶಬ್ದ-(ಬುದ್ಧಿ-ಸುಖ-ದುಃಖ-ಇಚ್ಛಾ-ದ್ವೇಷ-ಪ್ರಯತ್ನ-ಧರ್ಮ-ಅಧರ್ಮ-ಸಂಸ್ಕಾರ) ಚತುರ್ವಿಂಶತಿಗುಣಾಃ

ವೈಯಾಕರಣರಿಗೂ ಮತ್ತು ತಾರ್ಕಿಕರಿಗೂ 'ಗುಣ' ಎಂದರೆ ಒಂದೇ ಅರ್ಥ. ಮಹಾಭಾಷ್ಯಕಾರರಾದ ಪತಂಜಲಿಗಳು ಗುಣಲಕ್ಷಣವನ್ನು ಹೀಗೆ ಹೇಳಿರುವರು.

ಸತ್ತ್ವೇ ನಿವಿಶತೇ ಪೈತಿ ಪೃಥಿಕ್ ಜಾತಿಷು ವರ್ತತೇ
ಅಧೇಯಶ್ಚಾಕ್ರಿಯಾದಶ್ಚ ಸೋ ಸತ್ತ್ವ ಪ್ರಕೃತಿ ರ್ಗುಣಾಃ

ದ್ರವ್ಯದಲ್ಲಿ (ಸತ್ತ್ವೇ) ಇದೆ ಮತ್ತು ಹೋಗುತ್ತದೆ. ಬೇರೆ ಬೇರೆ ಇದೆ. ಜಾತಿಗಳಲ್ಲದೆ ದ್ರವ್ಯವು ಆಧಾರವಾದರೆ ಇದು ಆಧೇಯ; ಇದು ಕ್ರಿಯೆಯಲ್ಲ. ನಿತ್ಯವಾಗಿಯೂ ಇದೆ. ಅಂದರೆ ಗುಣವು ದ್ರವ್ಯ ಮತ್ತು ಕರ್ಮ ಪದಾರ್ಥಗಳಿಗೆ ಭಿನ್ನವಾಗಿದೆ. ಕೆಲವು ನಿತ್ಯವಾಗಿಯೂ ಕೆಲವು ಅನಿತ್ಯವಾಗಿಯೂ ಇವೆ.

ಮೀಮಾಂಸಕರಿಗೆ ಗುಣವೆಂದರೆ ವಿಶೇಷಣ ಮತ್ತು ಆದ್ಯ ಭಾವವಸ್ತು. ಉತ್ತಮವಾದ ಸ್ವಭಾವಕ್ಕೂ ಗುಣವೆನ್ನುವುದುಂಟು. ಸಾಂಖ್ಯನನಿಗೆ ಪ್ರಕೃತಿಯ ಮೂಲಭೂತವಾದ ಸತ್ತ್ವ, ರಜಸ್ಸು ಮತ್ತು ತಮಸ್ಸು ಎನ್ನುವ ಮೂರು ತತ್ವಗಳು ಗುಣಗಳೆಂದು ತೋರಿವೆ. ವೇದಾಂತಿಗಳಿಗೆ ಗುಣ

ವೆಂದರೆ ಧರ್ಮ. ಆದ್ದರಿಂದ ಈ ಗುಣವೆನ್ನುವ ಶಬ್ದವನ್ನು ಪ್ರಯೋಗಿಸುವಾಗ ಆಯಾ ಸಂಪ್ರದಾಯಕ್ಕನುಗುಣವಾಗಿ ಅರ್ಥಮಾಡಿಕೊಳ್ಳಬೇಕು. ನೈಯಾಯಿಕರ ರೀತಿಯಲ್ಲಿ ಗುಣಗಳು 24 ಎಂದು ಪರಿಗಣಿಸಲ್ಪಟ್ಟರೂ ಪೃಥಕ್ತ್ವ, ವಿಭಾಗ, ಪರತ್ವ ಮತ್ತು ಅಪರತ್ವವನ್ನು ಗುಣಗಳೆಂದು ಹೇಳುವುದು ಅವರ ರೀತಿಯಲ್ಲೇ ಸಮಂಜಸವಾಗುವುದಿಲ್ಲ. ಪೃಥಕ್ತ್ವವೆಂದರೆ ಅನ್ಯೋನ್ಯಾಭಾವವೆನ್ನುವ ಪದಾರ್ಥವೇ. ಹಾಗೆಯೇ ಸಂಯೋಗನಾಶವೇ ವಿಭಾಗ. ದೇಶ ಮತ್ತು ಕಾಲಕೃತ ಸನ್ನಿಕೃಷತ್ವ ಮತ್ತು ವಿಪ್ರಕೃಷ್ಟತ್ವವೇ ಅಪರತ್ವ ಮತ್ತು ಪರತ್ವ. ಆದರೆ ಬಾಹ್ಯ ಪ್ರಪಂಚದ ಸತ್ಯತ್ವವನ್ನು ನಿಷ್ಕರ್ಷಿಸುವ ಕುತೂಹಲದಲ್ಲಿ, ಈ ನಾಲ್ಕು ಗುಣಗಳಾಗಿ ಅವರಿಗೆ ಕಂಡಿವೆ. ಈ ವಿಷಯವು ಅಷ್ಟು ಪ್ರಧಾನವಲ್ಲ.

ಈ ಗುಣಗಳಲ್ಲಿ 1.ರೂಪ 2.ರಸ 3. ಗಂಧ 4. ಸ್ಪರ್ಶ 5. ಸ್ವಾಭಾವಿಕ 6. ಸ್ನೇಹ 7. ಬುದ್ಧಿ 8. ಸುಖ 9. ದುಃಖ 10. ಇಚ್ಛಾ 11. ದ್ವೇಷ 12. ಪ್ರಯತ್ನ 13. ಧರ್ಮ 14. ಅಧರ್ಮಮತ್ತು 15. ಸಂಸ್ಕಾರ -ಇವು ವಿಶೇಷ ಗುಣಗಳು ಅಂದರೆ ಇವುಗಳಿಗೆ ಜಾತಿಗಳಿವೆ ಮತ್ತು ಪ್ರತಿಯೊಂದು ಗುಣವೂ ಒಂದೇ ದ್ರವ್ಯವದಲ್ಲಿದೆ. ಅಂದರೆ ಎರಡು ದ್ರವ್ಯವಗಳಲ್ಲಿರುವುದಿಲ್ಲ. ಮಿಕ್ಕ 9 ಗುಣಗಳು ಸಾಮಾನ್ಯ ಗುಣಗಳು ಅಂದರೆ ಇವುಗಳಿಗೆ ಜಾತಿ ಇಲ್ಲ ಮತ್ತು ಅನೇಕ ವಸ್ತುಗಳಲ್ಲಿದೆ.

ಈ ಗುಣಗಳ ಲಕ್ಷಣಗಳನ್ನು ತರ್ಕ ಸಂಗ್ರಹದಿಂದ ಸುಲಭವಾಗಿ ತಿಳಿದುಕೊಳ್ಳಬಹುದು.

ರೂಪ. ರಸ. ಗಂಧ. ಸ್ಪರ್ಶ. ಶಬ್ದ. ಸುಖ. ದುಃಖ. ಇಚ್ಛಾ.ದ್ವೇಷ. ಪ್ರಯತ್ನ. ಧರ್ಮ. ಅಧರ್ಮ. ಸಂಸ್ಕಾರ. ಇವು ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿದೆ. ಪೃಥಕ್ತ್ವ. ಸಂಯೋಗ. ವಿಭಾಗ .ಪರತ್ವ. ಮತ್ತುಅಪರತ್ವದ್ರವತ್ವಮತ್ತು ಗುರುತ್ವ( ಭಾರ) ಮತ್ತು ಸ್ನೇಹ. ಇವು ಸುಲಭವಾಗಿ ಅರ್ಥವಾಗುತ್ತದೆ. ಸಂಖ್ಯಾ ಎಂದರೆ ಲೆಕ್ಕ ಒಂದು. ಎರಡು ಇತ್ಯಾದಿ. ಇದು9 ದ್ರವ್ಯಗಳಲ್ಲಿಯೂ ಇದೆ. ಏಕತ್ವವು ನಿತ್ಯವೂ ಅನಿತ್ಯವೂ ಆಗಿದೆ. ನಿತ್ಯವಸ್ತುವಿನಲ್ಲಿ ನಿತ್ಯ ಅನಿತ್ಯ ವಸ್ತುವಿನಲ್ಲಿ ಅನಿತ್ಯ. ಎರಡು ಮೊದಲಾದ ಸಂಖ್ಯೆಯು ಯಾವಾಗಲೂ ಅನಿತ್ಯವಿದೆ. ಅಳತೆಗೆ ಕಾರಣವಾಗಿರುವುದು ಪರಿಮಾಣ.

## 13 . ಬುದ್ಧಿ

16ನೇ ಗುಣವಾಗಿ ಪರಿಗಣಿಸಲ್ಪಟ್ಟಿರುವುದು. ಬುದ್ಧಿ. ಈ ಗುಣವನ್ನು ವಿಮರ್ಶೆ ಮಾಡುವಾಗಲೆ ತರ್ಕಶಾಸ್ತ್ರಕ್ಕೆ ಕೀರ್ತಿ ಬಂದಿರುವುದು. ಇದನ್ನು ವಿಸ್ತಾರವಾಗಿ ಬೆಳೆದುಕೊಳ್ಳುವ ಅವಶ್ಯಕತೆಯಿದೆ. ಆತ್ಮಾ. ಮನಸ್ಸು. ಮತ್ತು ಬುದ್ಧಿ:ಈ ಮೂರೇ ವೇದಾಂತ ದೃಷ್ಟಿಗೆ ಆಧಾರವಾಗಿರುವುವು. ಇವುಗಳ ಭಾರಮ್ಯತ್ಯಾಸದಿಂದಲೇ ಸಂಪ್ರದಾಯ ಭೇದಗಳು ಎದ್ದಿವೆ.

ಸರ್ವವ್ಯವಹಾರಹೇತುಃಜ್ಞಾನಂ ಬುದ್ಧಿಃ
ಸಾದ್ವಿವಿಧಾಸ್ಮೃತಿಃಅನುಭವಶ್ಚ
ಸಂಸ್ಕಾರ ಮಾತ್ರಜನ್ಯಂ ಜ್ಞಾನಂ ಸ್ಮೃತಿಃ

ತದ್ಭಿನಂ ಜ್ಞಾನಂ ಅನುಭವಃ
ಸದ್ವಿವಿಧಃ. ಯಥಾರ್ಥಂ ಅಯಥಾರ್ಥಶ್ಚ
ತದ್ವತಿ ತತ್ಪ್ರಕಾರಕಃ ಅನುಭವಃ ಯಥಾರ್ಥಃ
ಸವವ ಪ್ರಮಾ ಇತ್ಯುಚ್ಯತೇ-

ತದಭಾವವತಿ ಸತ್ಪ್ರಕಾರಂಕಃ ಅನುಭವಃ ಅಯದಾರ್ಥಃ ಯಥಾರ್ಥಾನು ಭವಃ ಚತುರ್ವಿಧಃ-ಪ್ರತ್ಯಕ್ಷ-ಅನುಮತಿ-ಉಪಮಿತಿ- ಶಬ್ದಭೇದಾತ್ ತತ್ಕರಣಂಚತುರ್ವಿಧಂ-ಪ್ರತ್ಯಕ್ಷ-ಅನುಮಾನ -ಉಪಮಾನ ಶಬ್ದ ಭೇದಾತ್

B ಅಸಾಧಾರಣಂಕಾರಣಂ;ಕಾರ್ಯನಿಯತ ಪೂರ್ವ ವೃತ್ತಿಕಾರಣಂ. ಕಾರ್ಯಂ ಪ್ರಾಗಾಭಾವಪ್ರತಿಯೋಗಿ: ಕಾರಣಂತ್ರಿವಿಧಂ- ಸಮವಾಯಿ- ಅಸಮುದಾಯಿನಿಮಿತ್ತಭೇದಾತ್. ಮತ್ಸಮವೇತಂ ಕಾರ್ಯಮುತ್ಪದ್ಯನೇ ತತ್ ಸಮುದಾಯಿ ಕಾರಣಂ. ಯಥಾತಂತವಃ ಪಟಸ್ಯ ಪಟಶ್ಚವಗತರೂಪಾದೇಃ. ಕಾರ್ಯೇಣಕಾರಣೇನ ವಾಸಹವರಸ್ಮಿನ್ ಅರ್ಥೇ ಸಮವೇತಂ ಸತ್ ಕಾರಣ ಅಸಮುದಾಯಿ ಕಾರಣಂ. ಯಥಾತಂತು ಸಂಯೋಗಃಪಟಸ್ಯ. ತಂತು ರೂಪಂ ಪಟಸ್ಯ ತದಭಯಂ ಭಿನ್ನಂಕಾರಣಂ ನಿಮಿತ್ತಂ ಕಾರಣಂ ಯಥಾತು ನೀವೇಮಾದಿಕಂಪಟಸ್ಯ. ತದೇತತ್ತ್ರ ವಿಧಕಾರಣರೂ ಷ್ವೇಯದ ಸಾಧಾರಣಂ ಕಾರಣಂದೇವ ಕಾರಣಂ. ತತ್ರಪ್ರತ್ಯಕ್ಷ ಜ್ಞಾನಕರಣ ಪ್ರತ್ಯಕ್ಷಂ. ಅನುಮತಿಕರಣ ಅನುಮಾನಂ ಉಪನಿತಿಕರಣ ಉಪಮಾನಂ.

A ಭಾಗದಲ್ಲಿ ಬುದ್ಧಿ ಎಂದರೇನು? ಅದು ಎಷ್ಟು ವಿಧ? ಅದು ಹೇಗೆ ಹುಟ್ಟುತ್ತದೆ ಎಂದು ಹೇಳಿದೆ. ಇಂತಹ ಬುದ್ಧಿಯಲ್ಲಿ ಯಥಾರ್ಥಾನು ಭವಕ್ಕೆ ಪ್ರಮಾ ಎಂದು ಹೇಳಿ ಅಂತಹ ಪ್ರಮಾಣಕ್ಕೆ ಕರಣವಾಗಿರುವುದೇ ಪ್ರಮಾಣ ಎನ್ನುವುದರಿಂದ ಕೊನೆಗೊಂಡಿದೆ. ಕರಣವೆಂದರೆ ಅಸಾಧಾರಣ ಕಾರಣ ಎನ್ನುವುದರಿಂದ B ಭಾಗವು ಪ್ರಾರಂಭವಾಗಿ, ಪ್ರಮಾಣಸ್ವರೂಪ, ಕಾರ್ಯಾಕಾರಣಭಾವ ಇವೇ ಮೊದಲಾದುವುಗಳಿಂದ ಕೂಡಿದೆ. ಪ್ರತ್ಯಕ್ಷ ಜ್ಞಾನಕ್ಕೆ (ಪ್ರಮಾ)ಅಸಾಧಾರಣ ಕಾರಣವಾಗಿರುವುದು ಪ್ರತ್ಯಕ್ಷ ಅನುಮತಿ ಜ್ಞಾನಕ್ಕೆ ಅಸಾಧಾರಣಕಾರಣವಾಗಿರುವುದು ಉಪಮಿತಿ(ಪ್ರಮಾ) ಎನ್ನುವ ಜ್ಞಾನಕ್ಕೆ ಅಸಾಧಾರಣವಾಗಿರುವುದು ಉಪಮಾನ. ಈ ಮೂರು ಪ್ರಮಾಣಗಳೊಡನೆ ಶಬ್ದ ಎನ್ನುವ ಪ್ರಮಾಣವನ್ನು ತಾರ್ಕಿಕರು ಸ್ವೀಕರಿಸಿರುವರು. ಪ್ರಮಾಣವನ್ನು ಬೇರೆ ಹೇಳಲಾಗುತ್ತದೆ. ಕಾರ್ಯಕಾರಣಭಾವವನ್ನು ಈಗಾಗಲೇ ಹೇಳಿಯಾಗಿದೆ.

೧. ಸರ್ವ ವ್ಯವಹಾರ ಹೇತುಃ ಜ್ಞಾನ ಬುದ್ಧಿಃ-ಆತ್ಮ ದ್ರವ್ಯದ ಲಕ್ಷಣವನ್ನು "ಜ್ಞಾನಾಧಿಕರಣಂ ಆತ್ಮಾ"ಎಂದು ಹೇಳಲಾಗಿದೆ. ಅಧಿಕರಣ ಅಂದರೆ ಆಧಾರವಾಗಿರುವ ಆತ್ಮದಲ್ಲಿ ಜ್ಞಾನವು ಗುಣವಾಗಿದೆ.

ಅಭಿಧಾನವೇ ಬುದ್ಧಿ. ಪೃಥವೀ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶ ಎನ್ನುವ ಪಂಚಮಹಾಭೂತಗಳಿಗೆ ಭಿನ್ನವಾಗಿಯೂ ಮನಸ್ಸಿಗೆ ಭಿನ್ನವಾಗಿಯೂ ಆತ್ಮದಲ್ಲಿ ಮಾತ್ರವಿರುವುದು ಬುದ್ಧಿ. ಜ್ಞಾನವೆಂದರೆ ವ್ಯಪದೇಶ್ಯ, ಅಂದರೆ "ಇದು" ಎಂದು ನಿಷ್ಕೃಷ್ಟವಾಗಿ ಶಬ್ದ ಹೇಳಲಾಗುವ ಒಂದು ಆತ್ಮ ಗುಣ. "ವಿಷಯ ತಿಳಿಯಿತು, ಹೇಳಲಾಗುವುದಿಲ್ಲ. ಎಂದು ಹೇಳುತ್ತಿರುವುದನ್ನು ಕೇಳಿರುವೆವು. ಇದಕ್ಕೆ ಅವ್ಯಪದೇಶ್ಯವಾಗಿರುವುದು ಎಂದಿಗೂ ಜ್ಞಾನವಲ್ಲ ಅಂದರೆ ಬುದ್ಧಿ ಇಲ್ಲ. ಅದಕ್ಕಾಗಿಯೇ ಶಾಸ್ತ್ರಜ್ಞರು ಹೇಳುವುದು "ಅರ್ಥಂ ಬುದ್ಧ್ವಾಂ ಶಬ್ದ ರಚನಾ"ಪದಾರ್ಥದ ಜ್ಞಾನ ಬಂದ ಮೇಲೆಯೇ ಶಬ್ದರಚನೆ. ಅಂದರೆ ವ್ಯವಹಾರವು ಸಿದ್ಧಿಸುತ್ತದೆ. ವ್ಯವಹಾರಕ್ಕೆ ಕಾರಣವಾಗಿರುವುದು ಜ್ಞಾನ ಬುದ್ಧಿ. ಅದಕ್ಕಾಗಿಯೇ "ಸರ್ವವ್ಯವಹಾರಹೇತು ಜ್ಞಾನಂ ಬುದ್ಧಿಃ"ಎನ್ನುವುದು ಅದರ ಲಕ್ಷಣ (Definition).

ಘಟ ಪಟ ಮೊದಲಾದ ವಸ್ತುಗಳ ವ್ಯಪದೇಶ್ಯ ಜ್ಞಾನವು ಬಂದಮೇಲೆ, ಅದು ಮನಸ್ಸಿನಲ್ಲಿ ನೆಲೆಸುವಂತಾದರೆ, ಆ ಜ್ಞಾನವು ನಮ್ಮದಾಗಿ ಪ್ರಯೋಗಕ್ಕರೆ ಬರುತ್ತದೆ. ಮೊದಲಿನ ವ್ಯಪವೇ ದೇಶ್ಯ ಜ್ಞಾನಕ್ಕೆ 'ವ್ಯವಸಾಯ'ಎಂತಲೂ ಅದರ ಜಾತಿ ಜ್ಞಾನವೂ ನೆಲಯೂರಿದ ಮೇಲೆ ಅನು ವ್ಯವಸಾಯವೆಂತಲೂ ಹೇಳುವೆವು. ಇದನ್ನೇ ನಾವು ಸಾಮಾನ್ಯವಾಗಿ 'ಜ್ಞಾನ'ಎಂದು ಕರೆದರೂ, ವಿಶೇಷವಾಗಿ ಉಪಲಬ್ಧಿ'ಎನ್ನುವುದುಂಟು. ಅಂದರೆ ಬುದ್ಧಿ, ಜ್ಞಾನ, ಮತ್ತು ಉಪಲಬ್ಧಿಯಲ್ಲಿ ಎಲ್ಲಾ ಒಂದೇ ವಸ್ತು ಆತ್ಮಗುಣ. ಅದಕ್ಕಾಗಿಯೇ ಗೌತಮರು (ನ್ಯಾಯಸೂತ್ರಕಾರರು) ತಮ್ಮಾ 1.1.5ನೇ ಸಾಂಖ್ಯರು ಈ ಮೂರು ಬೇರೆ ಬೇರೆ ಎಂದಿರುವರು ಅವರನ್ನು ಖಂಡಿಸುವುದಕ್ಕಾಗಿಯೇ ಗೌತಮನು ಈ ಸೂತ್ರವನ್ನು ಕೊಟ್ಟಿರುವರು ಎಂದು ವಾತ್ಸಾಯನ, ವಾಚಸ್ಪತಿ ಮತ್ತು ಉದಯನರು ಹೇಳಿರುವರು.

ಸಾಂಖ್ಯಸಿಗೆ ಮೂಲ ಪ್ರಕೃತಿಯಿಂದ ಹುಟ್ಟುವ ಅಂದರೆ ಪ್ರಕಟವಾಗುವ ಮಹತ್ ತತ್ವವೇ ಬುದ್ಧಿ ಇದು ಶುದ್ಧ ಅಚೇತನ ವಸ್ತು. ಬುದ್- ಉದ್ಭುದ್ ಎನ್ನುವ ಧಾತುವಿನಿಂದ ಹುಟ್ಟಿರುವುದರಿಂದ ಮಹತ್ತೇ ಬುದ್ಧಿ. ಮುಂದೆ ಇದೇ ಅಹಂಕಾರ, ಮನಸ್ಸು . 10 ಇಂದ್ರಿಯಗಳು, 5 ಮಹಾಭೂತಗಳೂ, 5ವಿಷಯಗಳು ಹೀಗೆ ವಿಸ್ತಾರವಾಗುವುದರಿಂದ ಇದರ ಹೆಸರು ಮತ್ತು ಎಂದಾಗಿದೆ. ಇದು ಪುರುಷನ ಸಾನಿಧ್ಯದಿಂದ ಚೇತನ ಯುತವಾಗುತ್ತದೆ ಇದರ ಒಂದು ಆಕಾರವೇ ಅಧ್ಯವಸಾಯ ಅಂದರೆ ' ಇದು ಕರ್ತವ್ಯಂಮಯಾ'ಎನ್ನುವ ಆಕಾರ. ಈ ಅಧ್ಯವಸಾಯದಲ್ಲಿಮೂರು ಭಾಗಗಳಿವೆ.-1-ಮದಂಶ, 2.. ವ್ಯಾಪಾರಾಂಶ 3. ಇದಯವಂಶ ಮನಸ್ಸಿನಲ್ಲಿ ಪುರುಷನ ಪ್ರತಿಬಿಂಬವೇ ಮದಂಶ ಇದಕ್ಕೆ ಪುರುಷೋಪರಾಗ ಎನ್ನುವ ಹೆಸರಿದೆ. ಅಂದರೆ ಪುರುಷ ಮತ್ತು ಬುದ್ಧಿಯು ಏಕತಾಭ್ರಮೆಯಿಂದ ಅಹಂ ಎನ್ನುವ ಅಹಂಕಾರವು ಏಳುತ್ತದೆ. ಬಾಹ್ಯವಸ್ತು ಸಾನಿಧ್ಯದಿಂದ ಬುದ್ಧಿಯು ಆ ವಸ್ತುವಿನ ಆಕಾರವನ್ನು ಹೊಂದುತ್ತದೆ. ಅದೇ ಇದಮಂಶ ಈ ಇದ. ಮಂಶವೇ ಜ್ಞಾನ, ಇದು ಸತ್ಯವಾದುದ್ದು. ಇದನ್ನು ವಿಷಯೋಪರಾಗ ಎನ್ನುವರು ಈ ಪುರುಷೋಪರಾಗ ಮತ್ತು ವಿಷಯೋಪರಾಗ ಒಟ್ಟಿಗಾದರೆ ಆಗ ಜನಿಸುವ ಪ್ರಕಾಶಕ್ಕೆ ಉಪಲಬ್ಧಿ, ಜ್ಞಾನ ಎನ್ನುವುದು ಬೇರೆಬೇರೆ. ಇವನ್ನು ಖಂಡಿಸುವುದಕ್ಕಾಗಿಯೇ ಗೌತಮರು ಹಿಂದೆ ಹೇಳಿದ ಸೂತ್ರವನ್ನು ಕೊಟ್ಟಿರುವರು.

ಸಾಧ್ವಿವಿಧಾ. ಸ್ಮೃಟಿತಿ. ಅನುಭ್ವಶ್ಚ, ಸಂಸ್ಕಾರ ಮಾತ್ರ ಜನ್ಯಂ ಜ್ಞಾನಂ ಸ್ಮೃತಿಃ ತದ್ಭಿನ್ನಂ ಜ್ಞಾನಂ ಅನುಭವಃ

ಬುದ್ಧಿಯೇ ಜ್ಞಾನ . ಜ್ಞಾನವೇ ಬುದ್ಧಿ ಸ್ಮೃತಿ ಅಲ್ಲದ್ದು ಅನುಭವವಿದು. ಪ್ರತ್ಯಕ್ಷವೋ ಪರೋಕ್ಷವೋ ಆಗಿರಬಹುದು ಅಂದರೆ ಪ್ರತ್ಯಕ್ಷವೋ. ಅನುಮಾನಿಕವೋ ಅಥವಾ ಶಬ್ದವೋ ಆಗಿರಬಹುದು. ಸಾಕ್ಷಾತ್ಕಾರವೂ ಅನುಭವವೇ. ಇದರ ವ್ಯಾಪ್ತಿಯು ಜಾಸ್ತಿಯಾಗಿರುವುದರಿಂದ ಸ್ಮೃತಿ ಅಲ್ಲದ್ದು ಅನುಭವ ಎಂದು ಹೇಳಲಾಗಿದೆ. ಅನುಭವಿಕವಾದ ಜ್ಞಾನವು ಪ್ರಾಚೀನ ನೈಯಾಯಿಕರ ಮತ್ತು ವೈಶೇಷಿಕರ ರೀತಿಯಲ್ಲಿ ಮೂರು ಪ್ರಕಾರದಲ್ಲಿದೆ.-1.ಪಟುಪತ್ರವ ಅಂದರೆ ಸ್ಮೃತಿಯನ್ನು ಉಂಟುಮಾಡುವ ಸಂಸ್ಕಾರವನ್ನು ಹುಟ್ಟಿಸುವಷ್ಟು ಪ್ರಕಾಶವಾಗಿರುವ ಜ್ಞಾನ 2. ಅಭ್ಯಾಸಪ್ರತ್ಯಯ ಅಂದರೆ ಅನುಚಿಂತನ ಮತ್ತು ಅನುಸಂಧಾನದ ಬಲದಿಂದ ಮನಸ್ಸಿನಲ್ಲಿ ಧೃಡವಾಗಿ ನಿಂತಿರುವ ಜ್ಞಾನ ಮತ್ತು 3. ಅದರ ಪ್ರತ್ಯಯ ಅಂದರೆ ಆಶ್ಚರ್ಯ ಮತ್ತು ಅನ್ಯಾದೃಶ್ಯ ವಿಷಯದಲ್ಲಿ ಮನಸ್ಸು ನಿಂತು ಬಹಳ ಕಾಲ ಉದ್ಬುದ್ಧವಾಗಿಯೇ ಇರುವ ಜ್ಞಾನ. ಈ ಮೂರು ವಿಧ ಅನುಭವಗಳು ಆತ್ಮದಲ್ಲಿ ಭಾವನಾ ರೂಪ ಸಂಸ್ಕಾರವನ್ನು ಉಂಟು ಮಾಡುತ್ತದೆ. ಈ ಸಂಸ್ಕಾರಗಳೇ ಸ್ಮೃತಿಗೆ ಕಾರಣವಾಗುತ್ತದೆ. ಉಪೇಕ್ಷಾರೂಪದಲ್ಲಿರುವ ಅನುಭವಗಳು ಸಂಸ್ಕಾರಗಳಿಗೆ ಹೇತುವಾಗಲಾರವು. ತತ್ಕಾಲದಲ್ಲಿ ಮನಸ್ಸಿನಲ್ಲಿ ಅವು ನೆಲಸಿದರೂ ಬೇಗನೆ ಅಳಿಸಿಹೋಗುವುವು. ಅದಕ್ಕಾಗಿಯೇ ಪಟುಪ್ರತ್ಯಯ ಮೊದಲಾದ ಮೂರು ಜಾತಿಯ ಜ್ಞಾನವೇ ಸಂಸ್ಕಾರಜನಕಗಳು.

ಒಂದಾವರ್ತಿ ಯಾವ ಸಂಸ್ಕಾರವು ಸ್ಮೃತಿಗೆ ಹೇತುವಾಗುತ್ತದೆಯೋ ಅಂದರೆ ಯಾವ ಸಂಸ್ಕಾರದಿಂದ ಸ್ಮೃತಿಯು ಹುಟ್ಟುತ್ತದೆಯೊ ಅದು ಹಾಳಾಗುತ್ತದೆ ಆದರೆ ಹುಟ್ಟಿದ ಸ್ಮೃತಿಯಿಂದ ತಜ್ಜಾತೀಯ ಬೇರೆ ಸಂಸ್ಕಾರವು ಹುಟ್ಟಿ ಅದೇ ವಿಧವಾದ ಸ್ಮೃತಿಗೆ ಕಾರಣವಾಗುತ್ತದೆ ಎಂದು ಪ್ರಾಚೀನ ನೈಯಾಯಿಕರು ಹೇಳುವರು. ನವೀನರು ಮತ್ತು ಅದ್ವೈತಿಗಳು ಇದಕ್ಕೆ ಭಿನ್ನವಾಗಿ ಒಂದೇ ಸಂಸ್ಕಾರವು ಮುಂದಿನ ತಜ್ಜಾತೀಯ ಸ್ಮೃತಿಗಳಿಗೂ ಕಾರಣವಾಗುತ್ತದೆ ಎನ್ನುತ್ತಾರೆ.

ಆದರೆ ಸಂಸ್ಕಾರಮಾತ್ರದಿಂದಲೇ ಉತ್ಪನ್ನವಾಗುವ ಜ್ಞಾನವೇ ಸ್ಮೃತಿ ಎನ್ನುವುದು ಪ್ರಾಚೀನ ಮತ್ತು ನವೀನ ನೈಯಾಯಿಕರಿಗೆ ಸಮ್ಮತವಾಗಿರುವುದರಿಂದ 'ಮಾತ್ರ' ಎನ್ನುವ ಪದವನ್ನು ಹಾಕಿ ಅನ್ನಂಭಟ್ಟರು ಲಕ್ಷಣ ಹೇಳಿರುವರು. ಇದರಿಂದ 'ಪ್ರತ್ಯಭಿಜ್ಞೆ' ಎನ್ನುವ ಜ್ಞಾನವು ಸ್ಮೃತಿಯಿಲ್ಲವೆಂದು ಅವರು ಹೇಳಿದಂತಾಗುತ್ತದೆ. ಪ್ರತ್ಯಭಿಜ್ಞೆ ಎಂದರೆ ಒಂದು ವಿಜಾತೀಯ ಪ್ರತ್ಯಕ್ಷ ಜ್ಞಾನ ಎನ್ನುವುದು ಇವರ ಮತ. ಅದ್ವೈತಿಗಳಿಗೂ ಕುಮುದಿನಭಟ್ಟರಿಗೂ ಇದು ಸಮ್ಮತವಲ್ಲ. "ಇವನು ಅವನೇ ಮನುಷ್ಯ ಸೋಯಂಪುರುಷಃ" ಎನ್ನುವ ಜ್ಞಾನದಲ್ಲಿ "ಇವನು" ಎನ್ನುವುದರಿಂದ ಪ್ರತ್ಯಕ್ಷ ವಿಷಯವೂ "ಅವನೇ" ಎನ್ನುವುದರಿಂದ ಹಿಂದೆ ನೋಡಿದವನ ಜ್ಞಾಪಕವೂ ಒಟ್ಟುಗೂಡಿ ಒಂದು ವಿಜಾತೀಯ ಜ್ಞಾನವಾಗಿದೆ ಎಂದು ಅವರು ಹೇಳುವರು. ಇದು ಅವುಭವವಾದರೂ ಇಂದ್ರಿಯಾರ್ಥ ಸನ್ನಿಕರ್ಷಜನ್ಯವೂ ಮತ್ತು ಸ್ಮೃತವೂ ಆಗಿರುತ್ತದೆ. ವೇದಾಂತದಲ್ಲಿ ಈ ಪ್ರತಿಜ್ಞೆಗೆ ಪೂರ್ಣ

ಪ್ರಾಧಾನ್ಯತೆ ಇದೆ. ಅನುಭವ ಗುಪ್ತರು ಅದ್ವೈತವಾದವನ್ನು ಪ್ರತ್ಯಭಿಜ್ಞಾನರೂಪವೆಂದು ತನ್ನ 'ತಂತ್ರಾಲೋಕ'ದಲ್ಲಿ ಸಮರ್ಥಿಸಿಕೊಂಡಿರುವರು. ವಿಶಿಷ್ಟಾದ್ವೈತದಲ್ಲಿ ಇದಕ್ಕೆ ಊಹಳ ಪ್ರಾಮುಖ್ಯತೆ ಇದೆ. ಉಪದಿಷ್ಟಜ್ಞಾನದಿಂದ ಊರುವ ಸ್ಮೃತಿಯು ಶಾಸ್ತ್ರ ಸಮನ್ವಯ ಕಾಲದಲ್ಲಿ ಶಬ್ದದೊಡನೆ ಮಿಳಿತವಾಗಿ ಅಸ್ಪಷ್ಟವಾದ ಮತ್ತು ಯಾವಾಗಲೂ ಅವಹಿತವಾಗಿರುವ ಜ್ಞಾನವಾಗಿ ಉಳಿಯುತ್ತದೆ. ಹಾಗೆಯೇ ಅವಲಂಬಿಸಿರುವ ದೈವವು. ಧ್ಯಾನಯೋಗದಲ್ಲಿ ಸಾಕ್ಷಾತ್ಕೃತವಾಗುತ್ತದೆ. ಅಂದರೆ ಸ್ಮೃತಿಯು ಸ್ಮೃತಿಯಾಗಿಯೇ ಇರದೆ ನಿರಂತರ ಅನುಭವವಾಗಿ ಉಳಿಯುತ್ತದೆ. ಯಾವುದು ನೈಯಾಯಿಕರಿಗೆ ಆದರ ಪ್ರತ್ಯಕ್ಷ. ಪ್ರತ್ಯಯವಾಗಿರುವುದೊ ಅದು ಸಂಸ್ಕಾರದ ಅನುವ್ಯವಸಾಯ ದಿಂದ ಪ್ರತ್ಯಕ್ಷಸ್ಥಾನವನ್ನು ಗಳಿಸುತ್ತದೆ. ಅಂದರೆ ತೈಲದಾರವಾದ ವಿಚ್ಛಿನ್ನ ಸ್ಮೃತಿಸಂತತಿಃಭಕ್ತಿಃ ಅನುಭವ ವಿಶೇಷಃ ದರ್ಶನ ಸಮಾನಾಕಾರಃ" ಎನ್ನುವುದು ಅವರ ಸಿದ್ಧಾಂತ. ಅನುಭವಃ ದ್ವಿವಿದಃ ಅಯಥಾರ್ಥ ತದ್ವತಿ ತತ್ಪ್ರಕಾರಕಃ ಅನುಭವಃ ಯಥಾರ್ಥಃ. ಸೈವ ಪ್ರಮಾ ಇತ್ಯುಚ್ಯತೇಃ ತದಭಾವವತಿ ತತ್ಪ್ರಕಾರಃ ಅನುಭಅಯಥಾರ್ಥ (ಅನುಮಾದರ್ಥಃಭ್ರಮಃ)

ತದ್ವತಿ ಮತ್ತು ಅತದ್ವತಿ ಎನ್ನುವ ಸ್ಥಳದಲ್ಲಿ ತತ್. ಎಂದರೆ ವಸ್ತುವಿನಲ್ಲಿರುವ ವಿಶೇಷಣ ಅಂದರೆ ಅದರ ಜಾತಿ ರಜತದಲ್ಲಿ ರಜತತ್ವವನ್ನು ಕಂಡರೆ ಆಗ ಅಜ್ಞಾನವು ·ಯಥಾರ್ಥ. ರಜತದಲ್ಲಿ ಶುಕ್ತಿತ್ವವನ್ನು ಕಂಡರೆ ಅದು ಅಸತ್ ಅಜ್ಞಾನ ಅಯಥಾರ್ಥ. ಯಥಾರ್ಥ ಜ್ಞಾನಕ್ಕೆ ಪ್ರಮಾ ಎಂದು ಶಾಸ್ತ್ರದಲ್ಲಿ ಬಳಸುವ ಮತ್ತೊಂದು ಹೆಸರು. ಹಾಗೆಯೇ ಆ ಯಥಾರ್ಥ ಜ್ಞಾನಕ್ಕೆ ಭ್ರಮಃ ಎಂದು ಹೆಸರು. ಕೆಲವು ಪಾರಿಭಾಷಿಕ ಪದಗಳು ಇದನ್ನು ಚೆನ್ನಾಗಿ ತಿಳಿದುಕೊಳ್ಳುವುದರಿಂದ ಶಾಸ್ತ್ರಜ್ಞಾನವು ಬೆಳೆಯುತ್ತದೆ.. ಪ್ರತಿಯೊಂದು ವಸ್ತುವನ್ನೂ ಅದು ಇದೇ ಎಂದು ನಿಷ್ಕೃಷ್ಟವಾಗಿ ಶಬ್ದಗಳಿಂದ ತಿಳಿಸಿದರೆ ಆ ಶಬ್ದರಾಶಿಗೆ "ಲಕ್ಷಣ" (Defination)ಎನ್ನುವ ಹೆಸರಿದೆ ಲಕ್ಷಣವನ್ನು ಹೇಳುವಾಗ ಕೆಲವು ಪಾರಿಭಾಷಿಕ ಪದಗಳು ರೂಢಿಯಲ್ಲಿ ಬಂದಿದೆ. ಅವುಗಳನ್ನು ತಿಳಿಯದಿದ್ದರೆ ಶಾಸ್ತ್ರಜ್ಞಾನವೇ ಹುಟ್ಟುವುದಿಲ್ಲ. ನೈಯಾಯಿಕರಿಗೆ ಜ್ಞಾನ ಎನ್ನುವುದು ಒಂದು ಪದಾರ್ಥ. ಅಚೇತನವಲ್ಲ-ಸಾಂಖ್ಯರು ಹೇಳುವಂತೆ ಪರಿಣಾಮ ಹೊಂದುವ ಮಹತ್ವವಲ್ಲ ಎನ್ನುವುದನ್ನು ಜ್ಞಾಪಕದಲ್ಲಿಟ್ಟಿರಬೇಕು. ಈ ಜ್ಞಾನವು ಆತ್ಮಗುಣ ಒಳಗಿದೆ. ಇದಕ್ಕೆ ಗೋಚರವಾಗುವ ವಸ್ತುವು ಹೊರಗಿದೆ. ಬಾಹ್ಯವೆಂದರೆ ಜ್ಞಾನಕ್ಕೆ ಬಾಹ್ಯವೆಂದು ತಿಳಿದರೆ ಸಾಕು. ಪ್ರಪಂಚದಲ್ಲಿ ನಾವು ಹೇಳುವುದು ಮಾತ್ರ ಬಾಹ್ಯವಲ್ಲ. ಈ ಬಾಹ್ಯವಸ್ತುವಿಗೆ ವಿಷಯ ಎಂದು ಪಾರಿಭಾಷಿಕ ಪದ. ಜ್ಞಾನಕ್ಕೆ ವಿಷಯ ಎಂದು ಹೆಸರು. ಪ್ರತಿ ಒಂದರಲ್ಲಿ ಸ್ವರೂಪ ಸಂಬಂಧದಿಂದ ಇರುವ ಒಂದು ಜಾತಿಯು ಇದೆ. ಅದನ್ನು 'ತಾ' ಅಥವಾ 'ತ್ವ' ಎಂದು ಆಯಾ ಪದಕ್ಕೆ ಸೇರಿಸುವುದರಿಂದ ತಿಳಿಯಬೇಕು ವಿಷಯದಲ್ಲಿ ವಿಷಯತಾ. ವಿಷಯಾದಲ್ಲಿ ವಿಷವಿತಾ ವಿಷಯದಲ್ಲಿ ಒಂದು ವಿಶೇಷ್ಯ. ಒಂದು ಅಥವಾ ಅನೇಕ ವಿಶೇಷಣಗಳು ಮತ್ತು ಅವೆರಡಕ್ಕೂ ಇರುವ ಸಂಬಂಧ ಈ ಮೂರು ಸೇರಿವೆ. ಅಂದರೆ ವಿಷಯದಲ್ಲಿ ವಿಷಯತಾದಲ್ಲಿ ವಿಶೇಷ್ಯತಾ. ವಿಶೇಷಣತಾ ಅಥವಾ ಪ್ರಕಾರತಾ ಮತ್ತು ಸಂಸರ್ಗತಾ ಎನ್ನುವ ಮೂರು ಸೇರಿವೆ. ವಿಶೇಷಣ ಅಥವಾ ಪ್ರಕಾರತವನ್ನು ಅವಚ್ಛೆದಕವೆನ್ನುವ ಪದದಿಂದ ತಿಳಿಯಬೇಕು. ಅಂತಹ ಅವಚ್ಛೇದಕದಿಂದ ಕೂಡಿರುವುದು ಎನ್ನುವುದಕ್ಕೆ ಅವಿಚ್ಛಿನ್ನ ಎಂದು ಪ್ರಯೋಗವಿದೆ. ಪಟವು ಪಟತ್ವಾವ ಚ್ಛೇದಕಾವಿಚ್ಛಿನ್ನ. ಇದು ಪ್ರಕಾರವಾಗಿದ್ದರೆ. ಅದು ಜ್ಞಾನದ ಅಂದರೆ ವಿಷಯೀ ಎನ್ನುವುದಕ್ಕೆ ನಿರೂಪಕವಾಗುತ್ತದೆ. ಉದಾಹರಣೆಗೆ

ರಕ್ತಃ ಪಟಃ ಎನ್ನುವ ಜ್ಞಾನವನ್ನು 'ರಕ್ತತ್ವಾವಚ್ಛಿನ್ನ ಪ್ರಕಾರತಾ ನಿರೂಪಿತಾ ಪಟತ್ವಾವಚ್ಛೇದಕಾವಚ್ಛಿನ್ನ ವಿಶೇಷ್ಯತಾ ನಿರೂಪಂತಾ ಸಮವಾಯತ್ವಾವಚ್ಛಿನ್ನ ಸಂಸರ್ಗತೆನಿರೂಪಿತ-ವಿಷಯಿತಾಶಾಲಿ ಜ್ಞಾನಂ" ಎಂದು ವಿಸ್ತಾರವಾಗಿ ತಿಳಿಯಬೇಕು. ಇಷ್ಟರಿಂದಲೇ ಆ ಜ್ಞಾನವು ಪ್ರಮವೋಭ್ರಮಾವೋ ಎಂದು ಹೇಳಲು ಸಾಧ್ಯವಿಲ್ಲ. ರಜತದಲ್ಲಿ ಶುಕ್ತಿತ್ವ ಪ್ರಕಾರತಾ ಮತ್ತು ಶುಕ್ತಿಯಲ್ಲಿ ರಜತತ್ವ ಪ್ರಕಾರತಾ ಕಾಣಬಹುದು. ಆಗ ಭ್ರಮವಾಗುತ್ತದೆ. ಅಂದರೆ ರಜತತ್ವ ನಿಷ್ಠ ಪ್ರಕಾರತಾ ನಿರೂಪಿತಾ ಶುಕ್ತಿ ನಿಷ್ಠ ವಿಶೇಷ್ಯತಾ ನಿರೂಪಿತ ವಿಷಯಶಾಲಿ ಜ್ಞಾನವು ಭ್ರಮವಾಗುತ್ತದೆ. ಇದು ಪ್ರಮಾವಾಗಬೇಕಾದರೆ ರಜತತ್ವನಿಷ್ಠ ಪ್ರಕಾರತಾ ನಿರೂಪಿತ ರಜತ ವಿಶೇಷ್ಯತಾ ನಿರೂಪಿತ ವಿಷಯಶಾಲಿಯಾಗಿರಬೇಕು-ಅಂದರೆ ವಿಷಯಿಗೂ ವಿಷಯಕ್ಕೂ ಸಾಮ್ಯವಿರಬೇಕು. ನೈಯಾಯಿಕರು ಸರ್ವಾಸ್ತಿತ್ವವಾದಿಗಳಾಗಿರುವುದರಿಂದ ಜ್ಞಾನವೂ ಸತ್ಯ, ಜ್ಞೇಯವಾದ ವಿಷಯವೂ ಸತ್ಯ. ಆದರೆ ಯಥಾರ್ಥ ಜ್ಞಾನಕ್ಕೆ ಇಷ್ಟು ಸಾಲದು. ಪ್ರಕಾರತಾ ಜ್ಞಾನ, ವಿಶೇಷ್ಯತಾ ಜ್ಞಾನ, ಇವೆರಡಲ್ಲದೆ ಸಂಸರ್ಗತಾ ಜ್ಞಾನವೂ ಕೂಡಿರಬೇಕು. ಶುಕ್ತಿಯನ್ನು ನೋಡಿ ಇದು ರಜತ ಎನ್ನುವ ಕಡೆ ಈ ಮೂರು ಕೂಡಿ ಬರುವುದಿಲ್ಲ, ಅಂದರೆ ವಿಷಯತಾವೇ ಸಿದ್ಧಿಸುವುದಿಲ್ಲಯ ವಿಶೇಷ್ಯವಾದ ಶುಕ್ತಿ, ಪ್ರಕಾರವಾದ ರಜತತ್ವ, ಜಾತಿ ಇವು ಹೊರಗೆ ಇದ್ದ ಸಮುದಾಯ ಸಂಬಂಧಾವಚ್ಛಿನ್ನ ಸಂಸರ್ಗ ತಾನಿರೂಪಿತವಾಗಿ ಇಲ್ಲದೆ ಇರುವುದರಿಂದ ವಿಷಯ ಜ್ಞಾನವು ಏಳುವುದಿಲ್ಲ. ಆದ್ದರಿಂದ ಇದು ಭ್ರಮ. ಅಂದರೆ ವಿಷಯ ವಿಷಯಿ ಭಾವವೇ ಯಥಾರ್ಥ ಯಥಾರ್ಥಜ್ಞಾನಕ್ಕೆ ಮೂಲ. ಈ ಪರಸ್ಪರ ಭಾವವು ಇಲ್ಲದಿದ್ದರೆ ಜ್ಞಾನವುಅ ಯಥಾರ್ಥ ಅಥವಾ ಭ್ರಮವಾಗುತ್ತದೆ.

(14)ಭ್ರಮವಾದ-ಭ್ರಮವನ್ನು ನೈಯಾಯಿಕರು ಅನ್ಯತಾ ಖ್ಯಾತಿ ಎನ್ನುವರು. ಒಂದನ್ನು ಮತ್ತೊಂದನ್ನಾಗಿ ತಿಳಿದರೆ ಅದೇ ಭ್ರಮೆ ಇದಂ ರಜತಂ ಎಂದು ಶುಕ್ತಿಯನ್ನು ನೋಡಿ ಭ್ರಮಿಸುವಾಗ, ಅದಂ ಎನ್ನುವುದು ಕಣ್ಣಿಗೆ ಕಾಣುವ ಕೇವಲ ಒಂದು ಬಿಳೀ ವಸ್ತು. ಅದು ನಿಜವಾಗಿಯೂ ಶುಕ್ತಿಯಾಗಿದ್ದರೂ ಕಣ್ಣಿನ ದೋಷದಿಂದಲೊ ಮತ್ತಾವದಿಂದಲೋ ಶುಕ್ತಿತ್ವ ಪ್ರಕಾರತ್ವವು ಕಾಣದೆ, ಸ್ಮೃತಿಯಲ್ಲಿರುವ ರಜತತ್ವ ಪ್ರಕಾರತ್ವವು ಯಾವುದೋ ಅಲೌಕಿಕ ಸನ್ನಿಕರ್ಷವನ್ನು ಜ್ಞಾನ ಲಕ್ಷಣ ಪ್ರತ್ಯಾಸತ್ತಿ ಎಂದು ಪ್ರತ್ಯಕ್ಷ ಪ್ರಮಾಣವನ್ನು ಹೇಳುವಾಗ ಮುಂದೆ ವಿವರಿಸಲಾಗುವುದು. ಇದಂ ಎನ್ನುವುದು ಲೌಕಿಕ ಸನ್ನಿಕರ್ಷದಿಂದ ಒಂದು ವಿಶೇಷ್ಯವಾಗಿ ಮಾತ್ರ ಕಂಡು ಅದರಲ್ಲಿ ರಜತತ್ವವು ಅಲೌಕಿಕ ಚಾಕ್ಷುಷಪ್ರತ್ಯಕ್ಷದಿಂದ ಸೇರಿ ಭ್ರಮೆಯಿಂದ ರಜತ ಎಂದು ಜ್ಞಾನವು ಹುಟ್ಟುತ್ತದೆ. "ಅನ್ಯತ್ ಅನ್ಯಥಾಗೃಹ್ಯತೇ" ಎಂದು ಆಗುವುದರಿಂದ ಇದು ಅನ್ಯಥಾ ಖ್ಯಾತಿ. ಪ್ರಾಚೀನ ಇದನ್ನು "ಸದಂತರಂ ಸದಂತರತ್ಮನಾಗೃಹ್ಯತೇ" ಎನ್ನುವರು (ವಾಚಸ್ಪತೀ ಮಿಶ್ರ ಮೊದಲಾದವರು) ಗಂಗೇಶೋಪಾಧ್ಯಾಯ ಮೊದಲಾದ ನವೀನರು ಇದನ್ನು 'ತದಭಾವ ವದ್ವಸ್ತು ತದ್ವತ್ ಜ್ಞಯತೇ' ಎನ್ನುತ್ತಾರೆ.

ಈ ಖ್ಯಾತಿವಾದವನ್ನು ತಿಳಿಯಬೇಕಾದರೆ ಮಿಕ್ಕ ದರ್ಶನ ಸಂಪ್ರದಾಯದವರು ಹೇಳುವ ಖ್ಯಾತಿಯೊಡನೆ ಹೋಲಿಸಿದರೆ ತಿಳಿಯುವುದು. ಒಟ್ಟು ಐದು ಖ್ಯಾತಿ ವಾದಗಳು ಪ್ರಚಾರದಲ್ಲಿವೆ.

ಆತ್ಮಖ್ಯಾತಿ ರಸತ್ಖ್ಯಾತಿರ ಖ್ಯಾತಿಃ ಖ್ಯಾತಿರನ್ಯಥಾ
ತಥಾ ನಿರ್ವಚನ ಖ್ಯಾತಿರಾತ್ಯಾಪಿ ಖ್ಯಾತಿಪಂಚಕಂ

(1) ಆತ್ಮಖ್ಯಾತಿ-ಇದು ವಿಜ್ಞಾನವಾದಿಗಳು ಅಥವಾ ಯೋಗಾಚಾರ್ಯರು ಎಂದು ಪ್ರಸಿದ್ಧವಾಗಿರುವ ಬೌದ್ಧ ಸಂಪ್ರದಾಯ ಇವರ ರೀತಿಯಲ್ಲಿ ಜ್ಞಾನವೆಂದರೆ ಆತ್ಮ. ಈ ಆತ್ಮವು ವಿಷಯಾಕಾರದಲ್ಲಿ ಹೊರಬೀಳುವುದರಿಂದಲೂ ಅದು ಕ್ಷಣಿಕವಾಗಿರುವುದರಿಂದ ದ್ವಿತೀಯಕ್ಷಣಾನುಭೂತವಾದ ವಿಷಯವನ್ನು ಪ್ರಥಮಜ್ಞಾನವು ತಿಳಿಯಲಾಗದ್ದರಿಂದ ಎಲ್ಲಾ ಸವಿಕಲ್ಪಕಜ್ಞಾನವೂ ಭ್ರಮೆಯೇ ಎನ್ನುವರು. ಎಲ್ಲಾ ವಿಷಯವೂ ಕ್ಷಣಿಕವಾದ ಆತ್ಮದ ಪರಿಣಾಮವಾದ್ದರಿಂದ ಭ್ರಮೆಯೆನ್ನುವುದಕ್ಕಿಂತ ಸುಳ್ಳಾದ ಆತ್ಮದ ಖ್ಯಾತಿ ಎನ್ನುವುದು ಸರಿ.

(2) ಅಸತ್ ಖ್ಯಾತಿ - ಇದು ಬೌದ್ಧರಲ್ಲಿ ಮಾಧ್ಯಮಿಕ ಮತ. ಇವರು ಶೂನ್ಯವಾದಿಗಳು. ದ್ವಿತೀಯಕ್ಷಣದ ವಿಷಯವು ಪ್ರಥಮ ಕ್ಷಣದ ಜ್ಞಾನಕ್ಕೆ ಗೋಚರವಾಗಲಾರದು. ಅಂದರೆ ಜ್ಞಾನೋತ್ಪತ್ತಿ ಆಗುವಾಗ ಅದರ ವಿಷಯವೇ ಇರುವುದಿಲ್ಲ. ಅರ್ಥಾತ್ ವಿಷಯ ಜ್ಞಾನವಿಲ್ಲದ ಜ್ಞಾನ ಇದೇ ಅಸತ್ ಖ್ಯಾತಿ

(3) ಅಖ್ಯಾತಿ - ಇದು ಪ್ರಾಭಾಕರ ಮೀಮಾಂಸಕರ ಮತ-ಎಲ್ಲಾ ಜ್ಞಾನವು ಯಥಾರ್ಥವೇ. ಆದರೆ ಯಥಾರ್ಥವಾದ ಒಂದು ಅನುಭವ ಮತ್ತೊಂದು ಸ್ಮೃತಿ-ಒಟ್ಟಾಗಿ ಒಂದು ತಿಳಿಯಲ್ಪಟ್ಟರೆ, ಅಥವಾ ಎರಡು ಅನುಭವಗಳು ಬೇರೆ ಬೇರೆಯಾಗಿ ಯಥಾರ್ಥವಾಗಿ ಒಟ್ಟಾಗಿ ಒಂದು ಜ್ಞಾನವಾಗಿ ಕಂಡರೆ ಆಗ ಪ್ರವೃತ್ತಿವುಂಟಾಗುತ್ತದೆ. ಆ ಪ್ರವೃತ್ತಿಯ ನಿಷ್ಫಲತೆಯು ಕಂಡಾಗ ಅದು ಭ್ರಮೆ ಎಂದು ತಿಳಿಯಲ್ಪಡುತ್ತದೆ. ಉದಾ- ಶುಕ್ತಿಯನ್ನು ನೋಡಿ ರಜತ ಎನ್ನುವ ಕಡೆ ಶುಕ್ತಿ ಜ್ಞಾನವು ಪ್ರತ್ಯಕ್ಷದಲ್ಲಿ, ಸತ್ಯ; ರಜತ ಜ್ಞಾನವು ಸ್ಮೃತಿಯಿಂದ ಗೋಚರವಾಗಿ ಅದೂ ಸತ್ಯ ಆದರೆ ರಜತವು ಸ್ಮೃತವೆಂದು ತೋರದಿದ್ದರೆ ಆಗ ಅದು ಭ್ರಮೆ- ಇದನ್ನು ಪ್ರಮುಷ್ಟ ತತ್ತಾಕಸ್ಮರಣ ಎನ್ನುವರು ಮತ್ತೊಂದು ಉದಾ: ಪೀತ ಶ್ಶಂಖಃ ಎನ್ನುವ ಕಡೆ ಪೀತ ದ್ರವ್ಯವೂ ಪ್ರತ್ಯಕ್ಷ, ಅದು ಕಣ್ಣಿನಲ್ಲಿರುವುದು. ಶಂಖವೂ ಪ್ರತ್ಯಕ್ಷ ಅದು ಬಾಹ್ಯದಲ್ಲಿರುವುದು ಆದರೆ ಎರಡೂ ಒಂದೇ ಕಡೆ ಅಂದರೆ ಬಾಹ್ಯದಲ್ಲಿ ಎರಡು. ಆದರೆ ಇದೂ ಭ್ರಮೆ.

ವರ ಖ್ಯಾತಿವಾದವನ್ನೆ ವಿಶಿಷ್ಟಾದ್ವೈತಿಗಳು ಸ್ವೀಕರಿಸಿದರೂ ಸ್ವಲ್ಪ ವ್ಯತ್ಯಾಸವಾಗಿ ತಿಳಿದಿರುವುದು. ಪಂಚೀಕರಣ ನ್ಯಾಯವನ್ನೂ ಇವರು ಸ್ವೀಕರಿಸಿರುವುದರಿಂದ ಎಲ್ಲ ವಸ್ತುವಿನಲ್ಲಿಯೂ ಎಲ್ಲಾ ಭೂತಗಳೂ ಇವೆ. ಆದರೆ ವ್ಯಾವಹಾರಿಕವಾಗಿ ಯಾವುದರಲ್ಲಿ 1/2 ಅಂಶ ಮಣ್ಣು ಮಿಕ್ಕ 1/2 ಅಂಶದಲ್ಲಿ 1/8 ಭಾಗ ಅಪ್ಪು "ರಿಷ್ಟತೇಜಸ್ಸು, ವಾಯು ಮತ್ತು ಆಕಾಶ ಹೀಗೆ ಇರುವುದರಿಂದ ಮಣ್ಣನ್ನು ಹೇಗೆ ಕರೆದರೂ ತಪ್ಪಾಗಲಾರದು. ಶುಕ್ತಿಯನ್ನು ರಜತವೆಂದು ತಿಳಿದರೆ ಅದು ತಪ್ಪಲ್ಲ. ಆದರೆ ಶುಕ್ತಿ ರಜತವಾಗಿ ಪ್ರಯೋಜನವಾಗುವುದಿಲ್ಲ. ಆದರೆ ಭ್ರಮೆಗೆ ಅರ್ಥ ಕ್ರಿಯಾಕಾರಿತ್ವ ಬೇಕು. ಆದ್ದರಿಂದ ಇವರ ಸಂಪ್ರದಾಯ ರೀತಿಯಲ್ಲಿ ಈ ಖ್ಯಾತಿವಾದವು ಅ ಖ್ಯಾತಿ ಸಂವಲಿತ ಸತ್ಖ್ಯಾತಿಯಾಗಿದೆ ಎನ್ನಬಹುದು.

(4) ಅನ್ಯಥಾ ಖ್ಯಾತಿ-ಹಿಂದೆ ಹೇಳಿದಂತೆ ಇದು ನೈಯಾಯಿಕರವಾದ. ಇದನ್ನೆ ದ್ವೈತಿಗಳು ಸ್ವೀಕರಿಸಿದ್ದರೂ ಸ್ವಲ್ಪ ಭೇದವನ್ನೂ ಹೇಳುವರು. ಭ್ರಮದಲ್ಲಿ ಕಾಣುವ ರಜತವು ಅತ್ಯಂತಾಸತ್ ಅಂದರೆ ಬೇರೆ ಕಡೆ ಇದ್ದರೂ ಶುಕ್ತಿಯಲ್ಲಿ ಕಿಂಚಿತ್ತೂ ಇಲ್ಲ. ಮುಂದೆ ಬರುವ ಬಾಧಕ ಪ್ರತೀತಿಯೇ ಇದಕ್ಕೆ ಆಧಾರ. ಈ ಜ್ಞಾನವು 'ನಾತ್ರ ರಜತಯಾಸೀತ್, ಅಸ್ತಿ, ಭವಿಷ್ಯತಿ" ಎನ್ನುವ ರೂಪದಲ್ಲಿಯತ್ತದೆ.

(5) ಅನಿರ್ವಚನೀಯ ಖ್ಯಾತಿ- ಇದು ಅದ್ವೈತಿಗಳ ವಾದ. ಇವರಿಗೆ ಜ್ಞಾನವೆಂದರೆ ಅಂತಃಕರಣ ವೃತ್ತಿ ವಿಷಯವೆಂದರೆ ವಿಷಯಾಚ್ಛಿನ್ನ ಚೈತನ್ಯ. ಜೀವವೆಂದರೆ ಅಂತಃಕರಣಾವಚ್ಛಿನ್ನ ಚೈತನ್ಯ ಶುಕ್ತಿಯನ್ನು ನೋಡಿ ರಜತವೆನ್ನುವ ಕಡೆ -ಒಂದು ಅಂತಃಕರಣವೃತ್ತಿಯಾಗಿರುವ ರಜತಜ್ಞಾನ ಮತ್ತು ಇನ್ನೊಂದು ಅವಿದ್ಯಾವೃತ್ತಿಯಾಗಿರುವ 'ಇದಂ' ಎನ್ನುವ ಶುಕ್ತಿಯ ಜ್ಞಾನ-ಎರಡೂ ಒಂದಾಗಿ 'ಇದಂರಜತಂ' ಎನ್ನುವ ಭ್ರಮವು ಬರುತ್ತದೆ. ಶುಕ್ತ್ಯವಚ್ಛಿನ್ನ ಚೈತನ್ಯಾಧಿಷ್ಠಿತ್-ಅವಿದ್ಯಾ ರಜತರೂಪೇಣ ರಜತಾಕಾರ ರೂಪೇಣ ಚ ಪರಿಣಮತೇ ಎನ್ನುವುದು ಅದ್ವೈತದ ಮಾತು. ಪ್ರಮಾ ಮತ್ತು ಭ್ರಮಾ ಎರಡೂ ಪಾರಮಾರ್ಥಿಕತ್ವವಲ್ಲದೆ. ಅವಿದ್ಯಾಕಾರ್ಯವಾಗಿರುವುದರಿಂದಲೂ. ಅವಿದ್ಯಾ ಎನ್ನುವುದು ಸತ್ಯ-ಅಸತ್ಯ - ಉಭಯಾತ್ಮಕ ಎನ್ನುವ ಭಾವನೆಗೆ ಸಿಲುಕದೇ ಇರುವುದರಿಂದಲೂ ಇದು ಅನಿರ್ವಚನೀಯ ಖ್ಯಾತಿ (ಏವಮತಿ ನಿರ್ವಕ್ತು ಮಶಕ್ಯತ್ವಾತ್) ಒಂದು ರೀತಿಯಲ್ಲಿ ಬೌದ್ಧರ ವಿಜ್ಞಾನವಾದಿಗಳ ಮತವನ್ನು ಪರಿಷ್ಕಾರ ಮಾಡಿದರೆ ಆತ್ಮ ಖ್ಯಾತಿಯು ಪರಿಷ್ಕೃತವಾಗಿ ಅನಿರ್ವಚನೀಯ ಖ್ಯಾತಿಯಾಗುವುದು. ವಿಜ್ಞಾನವಾದಿಗಳು ಜ್ಞಾನವಾಗಿರುವ ಆತ್ಮವು ನಿಜವಾಗಿಯೂ ಶೂನ್ಯ ಎಂದರೆ ಅದ್ವೈತಿಗಳು. ಜ್ಞಾನವು ಮನೋವೃತ್ತಿ. ಆತ್ಮವು ಅಂತಃಕರಣದಲ್ಲಿ ಜೀವನಾಗಿ, ಬಾಹ್ಯದಲ್ಲಿ ವಿಷಯವಾಗಿ ಪ್ರಮಾ ಮತ್ತು ಭ್ರಮೆನ್ನುವ ಗೊಂದಲವನ್ನು ಮಾಡುತ್ತದೆ. ಅನುಭವವೇ ಒಂದು ಗೊಂದಲ. ಅದರಲ್ಲಿ ಪ್ರತ್ಯಕ್ಷ ಮತ್ತು ಸ್ಮೃತಿ ಒಟ್ಟು ಸೇರಿ ಒಂದು ಗೊಂದಲ. ಪ್ರತ್ಯಕ್ಷ. ಪ್ರತ್ಯಕ್ಷವಾಗಿಯೇ ಒಂದು ಗೊಂದಲ ಎಲ್ಲಾ ಮಿಥ್ಯಾ. ಅವಿದ್ಯಾಕಾರ್ಯ ಅರ್ಥಾತ್ ಅನಿರ್ವಚನೀಯ. ಸಂಗ್ರಹವಾಗಿ (1) ಆತ್ಮನಃ ವಿಷಯತ್ವೇನ ಖ್ಯಾತಿಃ ಆತ್ಮಖ್ಯಾತಿಃ (2) ಅಸತಃ ವಿಷಯಸ್ಯ ಖ್ಯಾತಿ -ಅಸಖ್ಯಾತಿ- (3) ಖ್ಯಾತೇ_ ಅಖ್ಯಾತಿತ್ವಂ ತಸ್ಯ ಉಭಯಖ್ಯಾತೇಃ ಸಂಮಿಶ್ರಿತ ರೂಪತ್ವಾತ್. ಸ್ಮೃತಿ ಪ್ರತ್ಯಕ್ಷಯೋಃ ವಿಭಿನ್ನ ದೇಶಸ್ಥ ಪ್ರತ್ಯಕ್ಷದ್ವಯೋರ್ವಾ-ಅಖ್ಯಾತಿ_ (4) ಲೌಕಿಕ ಅಲೌಕಿಕ ಸನ್ನಿಕರ್ಷ ಜನ್ಯ ಪ್ರತ್ಯಕ್ಷ ಜ್ಞಾನಯೋಃ ಸಂಮಿಶ್ರಿತತ್ವಾತ್ ಅನ್ಯಥಾಖ್ಯಾತಿಃ ಸದಂತರಂ ಸದಂತರಾತ್ಮನಾಗೃಹ್ಯತೇ (5) ಯಥಾಪ್ರಮಾತಥಾ ಭ್ರಮೋಽಪಿ-ಅನಿರ್ವಚನೀಯ

15. ಪ್ರಮಾಣ್ಯವಾದ -ಈ ಭ್ರಮವಾದಕ್ಕೇ ಶಾಸ್ತ್ರದಲ್ಲಿ "ಪ್ರಾಮಾಣ್ಯವಾದ "ಎನ್ನುವ ಹೆಸರಿದೆ. ಪ್ರಾಮಾಣ್ಯದಲ್ಲಿ ಎರಡು ವಿಧ (1) ಸ್ವತಃ ಪ್ರಾಮಾಣ್ಯ ಮತ್ತು (2) ಪರತಃ ಪ್ರಾಮಾಣ್ಯ. ನೈಯಾಯಿಕರು ಪರತಃ ಪ್ರಾಮಾಣ್ಯವಾದಿಗಳು. ಜ್ಞಾನವು ಸ್ವತಃ ಕ್ರಮವಾಗಲಿ ಅಪ್ರಮಾವಾಗಲಿ ಆಗಿರುವುದಿಲ್ಲ. ಅಂದರೆ ಪ್ರಮಾ ಮತ್ತು ಭ್ರಮೆ ಇವೆರಡೂ ಸ್ವತೋಗ್ರಾಹ್ಯವಲ್ಲ. ಅರ್ಥಾತ್ ಜ್ಞಾನವು ತಾನಾಗಿಯೇ ಪ್ರಮಾ ಅಥವಾ ಭ್ರಮವಾಗಿರುವುದಿಲ್ಲ. ಶಾಸ್ತ್ರೀಯವಾಗಿ ಹೇಳಿದರೆ " ಪ್ರಾಮಾಣ್ಯಸ್ಯಧರ್ಮಸ್ಯಸ್ವತಸ್ತ್ವಂ ತದ ಪ್ರಾಮಾಣ್ಯ ಅಗ್ರಾಹಕ. ಆದಜ್ಞಾನಗ್ರಾಹಕ

ಸಾಮಗ್ರೀ ಗ್ರಾಹ್ಯತ್ವಂ "ಎಂದಾಗುತ್ತದೆ. ಜ್ಞಾನಕ್ಕೂ ಬಾಹ್ಯವಸ್ತುವಿಗೂ ಪೂರ್ಣ ಸಾಮರಸ್ಯವಿರಬೇಕು. ಇದಕ್ಕೆ ಬಾಹ್ಯ ಸಾಮಗ್ರಿಯೇ ಕಾರಣ. ಆ ಸಾಮಗ್ರಿಯು ಸಾಮರಸ್ಯವನ್ನುಂಟುಮಾಡುವಂತಿದ್ದರೆ ಅದಕ್ಕೆ `ಗುಣ`ಎಂದು ಹೆಸರು. ಇಲ್ಲದಿದ್ದರೆ ಅದು `ದೋಷ" ಗುಣವೋ ದೋಷವೋ ಸಾಮಗ್ರಿಯಲ್ಲಿರುವುದೇ ವಿಪನಾಜ್ಞಾನದಲ್ಲಿಲ್ಲ. ಪ್ರಮಾ ಅಥವಾ ಭ್ರಮ ಎಂದು ಹೇಳಲಾಗದ ಜ್ಞಾನಕ್ಕೆ `ಭ್ರಾಂತಿ`ಎನ್ನುವರು. ಇದು ಪ್ರಮಾ ಆಗಿರಬೇಕಾದರೆ ಸಾಮಗ್ರಿ ಯಥಾರ್ಥವಾಗಿರಬೇಕು. ಪ್ರಾಮಣ್ಯ ಅಂದರೆ "ಪ್ರರೂಕರಣಂ ಪ್ರಮಾಣಂ. ಸಾಮಗ್ರಿ; ತಸ್ಯಭಾವಃ ಪ್ರಾಮಾಣ್ಯಂ"

ಒಂದು ವಸ್ತುವನ್ನು ಒಬ್ಬನು ಗ್ರಹಿಸುವಾಗ. ಮೊದಲೇ ಅದು ಭ್ರಮವಲ್ಲ ಎಂದು ತಿಳಿಯಲಾರ. ಅದು ಪ್ರಮಾ ಎಂದೇ ಅವನ ಜ್ಞಾನವಾಗಿರುವುದು. ಇದು ಸ್ವತಃ ಪ್ರಾಮಾಣ್ಯವಾದಿಗಳ ಕ್ರಮ. ಇದಕ್ಕೆ ನೈಯಾಯಿಕರು ಹೇಳುವುದು ಹೀಗೆ- ಇದಂ ರಜತಂ ಎನ್ನುವ ಸವಿಕಲ್ಪಿಕ ಜ್ಞಾನಕ್ಕೆ ವ್ಯವಸಾಯ ಎಂದು ಹೆಸರು ಇದು ಅನುವ್ಯವಸಾಯದಲ್ಲಿ `ಇದಂ ರಜತಂ ಜಾನಾಯಿ`ಎಂದು ಆಗುತ್ತದೆ. ವ್ಯವವಸಾಯದಲ್ಲಿ ಜ್ಞಾನದ ಪ್ರಮಾತ್ವವಿಲ್ಲ. ವ್ಯವಸಾಯ ಅನುವ್ಯವಸಾಯದಿಂದ ಸಾಮರಸ್ಯ ಹೊಂದಿದರೆ ಅಂದರೆ "ಇದು ಬೆಳ್ಳಿ" ಎನ್ನುವ ಜ್ಞಾನವನ್ನು ವ್ಯವಸಾಯದಲ್ಲಿ ಹೊಂದಿ. ಅನುವ್ಯವಸಾಯದಲ್ಲಿ ಇದು ನಿಜವಾಗಿಯೂ ಬೆಳ್ಳಿ. ಎಂದು ತಿಳಿಯುತ್ತೇನೆ ಎನ್ನಬೇಕಾದರೆ ವ್ಯವಸಾಯವು ಸಫಲ ಪ್ರವೃತ್ತಿ ಜನಕವಾಗಬೇಕು. ಆದ್ದರಿಂದ ಇದಂ ರಜತಂ ಸಫಲಪ್ರವೃತ್ತಿ ಜನಕತ್ವಾತ್. ಯದ್ಯತ್ ಸಫಲ ಪ್ರವೃತ್ತಿ ಜನಕಂ ತದ್ವಾನ್ನಂಪ್ರಮಾ. ಯಥಾ ಪ್ರಮಾಂತರಂ" ಎನ್ನುವ ಅನುಮಾನ ವಾಕ್ಯದಿಂದ ಸಿದ್ಧವಾಗುತ್ತದೆ. ಇದೇ ದಾರಿಯಲ್ಲಿ ಆಧುನಿಕ ವಿಜ್ಞಾನ ಪ್ರಪಂಚವು ನಡೆಯುತ್ತಿದೆ. ವಸ್ತುವು ಅನುಭವಕ್ಕೆ ದ ಮೇಲೆಯೇ ಅದರ ಜ್ಞಾನದ ಪ್ರಮಾತ್ವ ಭ್ರಮತ್ವ ನಿಷ್ಕರ್ಷೆಯಾಗುತ್ತದೆ. ಇದನ್ನು ಪಾಶ್ಚಾತ್ಯರು (pragmatism) ಎಂದು ಕರೆಯುವರು. ಅನುಸರಿಸುವ ನ್ಯಾಯವು Pragmatic argument ಫಲಸಿಗುವವರೆಗೂ ಜ್ಞಾನವು ಪ್ರಮಾ ಎಂದು ಹೇಳಲಾಗುವುದಿಲ್ಲ. ಆದರೂ ಪ್ರಮಾ ಎನ್ನುವ ಭಾವನೆಯಿಂದಲೇ ನಡೆಯುತ್ತೇವೆ. ಫಲ ಸಿದ್ಧಿಸಿದರೆ ಅದು ಯಥಾರ್ಥ. ಇಲ್ಲದಿದ್ದರೆ ಅನುತಾರ್ಥ. ಇದರಿಂದ ಅನುಮತಿ. ಯಾವತ್ತಿಗೂ ಯಥಾರ್ಥವಲ್ಲದೆ ಹೋಗುವುದು. ಅದಕ್ಕಾಗಿ ನೈಯಾಯಿಕರು ಹೇತುವನ್ನು "ನಿಷ್ಕಂಪ ಪ್ರವೃತ್ತಿಮತ್ವಾತ್"ಎಂದು ಪರಿಷ್ಕರಿಸಿಕೊಂಡು. ಸಾಮಗ್ರಿಯಿಂದ ಪ್ರಮಾತ್ವ ನಿಷ್ಕರ್ಶೆ ಮಾಡಿಕೊಂಡು ನಿಷ್ಕಂಪ ಅಂದರೆ ಹಿಂದೆ ಬೀಳದ ಪ್ರವೃತ್ತಿಯಲ್ಲಿ ತೊಡಗಿರುವುದೇ ಹೇತು ಎಂದೂ. ಹಾಗೆ ಮಾಡಬೇಕಾದರೆ, ಸಾಮಾಗ್ರಿಯು ಗುಣಯುತವಾಗಿ. ದೋಷರಹಿತವಾಗಿರಬೇಕು. -ಎನ್ನುವರು. ಇದೇ ಅವರ ಪರತಃ ಪ್ರಮಾಣ್ಯ.

ಸಾಂಖ್ಯರು ಸ್ವತಃ ಪ್ರಾಮಾಣ್ಯ ವಾದಿಗಳು. ಜ್ಞಾನವು ಮನೋವೃತಿಯಾಗಿರುವುದರಿಂದ. ಮನಸ್ಸಿನಲ್ಲಿ ಕಾಣುವ ಪ್ರತಿಬಿಂಬವು ಪ್ರಮಾವಾಗಬಹುದು ಅಥವಾ ಭ್ರಮವಾಗಬಹುದು. ಪ್ರಾಭಾಕರ ಮೀಮಾಂಸಕರಿಗೆ ವ್ಯವಸಾಯಕ್ಕೂ ಅನುವ್ಯವಸಾಯಕ್ಕೂ ವ್ಯತ್ಯಾಸವಿಲ್ಲ. ಜ್ಞಾತಾ. ಜ್ಞೇಯ ಮತ್ತು ಜ್ಞಾನದೊಡನೆಯೇ ಅದರ ಪ್ರಮಾತ್ವವು ಸಿದ್ಧವಾಗುತ್ತದೆ. ಅನುಭೂತಿಃ ಪ್ರಮಾ ಎನ್ನುವುದೇ ಅವರ ಮಾತು. ಭಾಟ್ಟ ಮೀಮಾಂಸಕರ ರೀತಿಯಲ್ಲಿ, ಕಾರ್ಯದಿಂದ ಕಾರಣರಾರ್ಥದ ಜ್ಞಾನವು ಅನುಮೇಯವಾಗಿದೆ. ಕಾರ್ಯವನ್ನು ಜ್ಞಾತ ತಾ. ಪ್ರಾಕಟ್ಯ ಮತ್ತು ಪ್ರಕಾಶ ಎಂದು ಕರೆಯುವರು.

ಸ್ವತಃ ಪ್ರಾಪ್ತವಾದ ಒಂದು ಪ್ರಮಾ, ಮತ್ತೊಂದು ಪ್ರಮಾದಿಂದ ವಿಹತಿಹೊಂದಿ ಅಪ್ರಮಾ ಅಥವಾ ಭ್ರಮವಾಗುತ್ತದೆ. ಅಂದರೆ ಪ್ರಮಾತ್ವವು ಸ್ವತಃ ಪ್ರಾಪ್ತ, ಅಪ್ರಮಾತ್ವವು ಪರತಃಪ್ರಾಪ್ತ. ಮುರಾರಿ ಮಿಶ್ರರು ಮೀಮಾಂಸಕರಾದರೂ ನೈಯಾಯಿಕರಂತೆ ವ್ಯವಸಾಯ. ಅನುವ್ಯವಸಾಯವಾಗುತ್ತದೆಂದೂ, ವ್ಯವಸಾಯದಲ್ಲಿ ಏಳುವ ಪ್ರಮಾವೇ ಅನುವ್ಯವಸಾಯದಲ್ಲಿ ಇರುತ್ತದೆ ಎಂದೂ ಹೇಳಿ ಸ್ವತಃ ಪ್ರಾಮಾಣ್ಯಕ್ಕೆ ಬೇರೆ ಆಕಾರವನ್ನು ಕೊಟ್ಟಿರುವರು. ಬೌದ್ಧರಿಗೆ ಎಲ್ಲಾ ಸವಿಕಲ್ಪ ಜ್ಞಾನವು ಸ್ವತಃ ಅಪ್ರಮಾವೇ ಆಗಿದೆ ಮತ್ತು ನಿರ್ವಿಕಲ್ಪ ಜ್ಞಾನದ ಪ್ರಮಾತ್ವವು ಅನುಮಾನದಿಂದ ಅಂದರೆ ಪರತಃ ಸಿದ್ಧವಾಗುತ್ತದೆ ಎನ್ನುವರು. ಅದ್ವೈತಿಗಳಿಗೆ ಸ್ವತಃ ಪ್ರಾಮಾಣ್ಯವೇ ಸಿದ್ಧಾಂತವಾದರೂ ಸಾಕ್ಷಿ ಚೈತನ್ಯವು ಮನೋವೃತ್ತಿಯನ್ನು ಪ್ರಕಾಶಗೊಳಿಸಿ ಪ್ರಮಾವನ್ನು ಉಂಟುಮಾಡುತ್ತದೆಂದೂ ಅಪ್ರಮಾತ್ವವು ಪರತಃ ಅಂದರೆ ನಿಷ್ಫಲ ಪ್ರಯತ್ನ ಹೇತುತ್ವದಿಂದ ಸಿದ್ಧಿಸುತ್ತದೆಂದೂ ಹೇಳುವರು. ಸಫಲ ಪ್ರಯತ್ನ ಹೇತುತ್ವ ನಿಷ್ಫಲ ಪ್ರಯತ್ನ ಹೇತುತ್ವದಿಂದ ಪ್ರಮಾತ್ವ ಭ್ರಮೆತ್ವ ನಿಶ್ಚಿತವಾದರೂ ಪಾರಮಾರ್ಥಿಕವಾಗಿ ಸತ್ಯವು ಪ್ರಮಾದೋಚರವೂ ಅಲ್ಲ, ಭ್ರಮಗೋಚರವೂ ಅಲ್ಲ. ಪ್ರಯೋಜನಕಾರಿ ವಿಶೇಷಣ ಅಥವಾ ಪ್ರಕಾರ ವಿಶಿಷ್ಟವಾಗಿದ್ದರೆ ಅದು ಪ್ರಮಾ ಹಾಗಿಲ್ಲದಿದ್ದರೆ ಭ್ರಮೆ. ಸ್ವಯಂಪೂರ್ಣವಾದ ಬ್ರಹ್ಮತತ್ವಕ್ಕೆ ಪ್ರಯೋಜನವೆನ್ನುವುದೇ ಬೇಡವಾದ್ದರಿಂದ, ಸತ್ಯಾಸತ್ಯ ವಿಮರ್ಶೆಯು ವ್ಯಾವಹಾರಿಕವಾಗಿ ಸಾರ್ಥಕವಾಗಿರದೆಯೋ ವಿನಾ ಪಾರಮಾರ್ಥಿವಾಗಿಲ್ಲ. ಆದ್ದರಿಂದ ಅನಿರ್ವಚನೀಯ ಖ್ಯಾತಿಯು ಭ್ರಮಕ್ಕೂ ಪ್ರಮಾಕ್ಕೂ ಸಾಮಾನ್ಯವಾದ ವಾದ ಕ್ರಮ. ಮಿಕ್ಕವರಲ್ಲಿ ಪ್ರಾಮಾಣ್ಯವಾದವೇ ಬೇರೆ ಖ್ಯಾತಿವಾದವೇ ಬೇರೆ ನೈಯಾಯಿಕರು ಭ್ರಮವನ್ನು ಅನ್ಯಥಾ ಖ್ಯಾತಿಯಿಂದಲೂ, ಪ್ರಮಾವನ್ನೂ ಸತ್ಖ್ಯಾತಿ ಎನ್ನುವ ಪ್ರಾಮಾಣ್ಯವಾದದಿಂದಲೂ ಸಿದ್ಧಪಡಿಸಿಕೊಳ್ಳುತ್ತಾರೆ.

16. ನಾಲ್ಕು ಪ್ರಮಾಣಗಳು-ಯಥಾರ್ಥಾನು ಭವಶ್ಚತುರ್ವಿಧಃ. ಪ್ರತ್ಯಕ್ಷ ಅನುಮತಿ -ಉಪಮಿತಿ-ಶಾಬ್ದ ಭೇದಾತ್, ತತ್ಕರಣಂ ಚತುರ್ವಿಧಂ, ಪ್ರತ್ಯಕ್ಷ ಅನುಮಾನ-ಉಪಮಾನ-ಶಬ್ದ ಭೇದಾತ್

ಯಥಾರ್ಥಾನುಭವ ಅಂದರೆ ಪ್ರಮಾ ನಾಲ್ಕೂ ವಿಧ ಪ್ರತ್ಯಕ್ಷ, ಅನುಮತಿ ಉಪಮಿತಿ, ಶಾಬ್ದ, ಈ ಜ್ಞಾನಗಳಿಗೆ ಅಸಾಧಾರಣ ಕಾರಣ ಅಂದರೆ ಕರಣವಾಗಿರುವುಗಳಿಗೆ ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಎನ್ನುವ ಹೆಸರುಗಳಿವೆ. ಇವುಗಳಿಗೆ ಪ್ರಮಾಣಗಳೆಂದು ಇವುಗಳಿಂದ ಹುಟ್ಟುವ ಜ್ಞಾನಕ್ಕೆ ಪ್ರಮಿತಿ ಎಂದು ಹೆಸರು.

ಚಾರ್ವಾಕರಿಗೆ-ಪ್ರತ್ಯಕ್ಷ ಒಂದೇ ಪ್ರಮಾಣ. ಬೌದ್ಧರಿಗೂ ಮತ್ತು ವೈಶೇಷಿಕರಿಗೂ ಪ್ರತ್ಯಕ್ಷ ಮತ್ತು ಅನುಮಾನ-ಎರಡೂ ಪ್ರಮಾಣ. ಸಾಂಖ್ಯರು ಇವೆರಡೊಡನೆ ಶಬ್ದವನ್ನು ಸ್ವೀಕರಿಸಿರುವರು. ನೈಯಾಯಿಕರಿಗೆ ಈ ಮೂರು ಮತ್ತು ಉಪಮಾನ ಪ್ರಮಾಣವಾಗಿದೆ. ಪ್ರಾಭಾಕರ ಮೀಮಾಂಸಕರು ಈ ನಾಲ್ಕರೊಡನೆ ಅರ್ಥಾಪತ್ತಿ ಎನ್ನುವ ಐದನೇ ಪ್ರಮಾಣವನ್ನು ಸ್ವೀಕರಿಸಿರುವರು. ಭಾಟ್ಟಮೀಮಾಂಸಕರು ಮತ್ತು ಅದ್ವೈತಿಗಳು ಈ ಐದರೊಡನೆ ಅನುಪಲಬ್ಧಿ ಎನ್ನುವ ಆರನೇ ಪ್ರಮಾಣವನ್ನು ಹೇಳುವರು. ಇದರ ವಿಷಯವು ಅಭಾವ ಪದಾರ್ಥದ ವಿಮರ್ಶೆಯಾಗುವಾಗ ಬಂದಿದೆ. ಪೌರಾಣಿಕರಿಗೆ ಈ ಆರರೊಡನೆ ಸಂಭವವೂ ಒಂದು ಪ್ರಮಾಣ. ನೂರರಲ್ಲಿ ಐವತ್ತು

ಸೇರಿದೆ ಎನ್ನುವುದೇ ಸಂಭವ. ಇದು ಅನುಮಾನದಲ್ಲೇ ಅಂತರ್ಗತವಾಗುತ್ತದೆ. ಇವರು ಐತೀಹ್ಯವೆನ್ನುವ ಎಂಟನೇ ಪ್ರಮಾಣವನ್ನೂ ಹೇಳುವರು. ಸ್ಮೃತಿ. ಪ್ರತ್ಯಕ್ಷ ಮೈತಿಹ್ಯ ಅನುಮಾದಿಶ್ಚತುಷ್ಟಯಂ. ಏತ್ಯರಾದಿತ್ಯಮಂಡಲಂ ಎನ್ನುವ ತೈತರೀಯ ಆರಣ್ಯಕ ಮಾತ್ರವನ್ನು ಅವರು ಆಧಾರವಾಗಿಕೊಡುವರು. ಮಂತ್ರದಲ್ಲಿ ಹೇಳಿರುವ ಐತಿಹ್ಯವು ಬೇರೆ ಪ್ರಮಾಣವಾಗಿಲ್ಲ. ಐತಿಹ್ಯವೆಂದರೆ 'ಇತಿಹ'ಅಸ್ಯಭಾವ" ಅಂದರೆ ಹೀಗಲ್ಲವೆ ಇದ್ದುದು ಎನ್ನುವ ಭಾವ. ಸಾಂಪ್ರದಾಯಿಕ ವಿಷಯದಲ್ಲಿ ನಂಬಿಕೆ ಎನ್ನಬಹುದು. ಇದನ್ನು ನಿಷ್ಕರ್ಷೆ ಮಾಡಲು ಹೊರಟರೆ ಶಬ್ದಲ್ಲೆ ಲೀನವಾಗುತ್ತದೆ. ಶಾಸ್ತ್ರಕಾರರು ಸ್ವೀಕಾರ ಮಾಡಿರುವುದು ಆರು ಮಾತ್ರ - ಪ್ರತ್ಯಕ್ಷ. ಅನುಮಾನ. ಉಪಮಾನ. ಶಬ್ದ. ಅರ್ಥಾಪತ್ತಿ. ಮತ್ತು ಅನುಪಲಬ್ಧಿ.

ನೈಯಾಯಿಕರು ಅನುಪಲಬ್ಧಿಯನ್ನು ಪ್ರತ್ಯಕ್ಷದಲ್ಲೇ ಸೇರಿಸಿರುವರು. ಅರ್ಥಪತ್ತಿ ಎಂದರೆ ಒಂದು ರೀತಿಯಲ್ಲಿ ಊಹೆ. ಆದ್ದರಿಂದ ಇದು ಅನುಮಾನದಲ್ಲಿ ಅಂತರ್ಗತವಾಗುವುದರಿಂದ. ಇದನ್ನು ಬೇರೆ ಪ್ರಮಾಣವನ್ನಾಗಿ ನೈಯಾಯಿಕರು ಸ್ವೀಕಾರ ಮಾಡಿಲ್ಲ. ಆದ್ದರಿಂದ ಇವರಿಗೆ ನಾಲ್ಕೇ ಪ್ರಮಾಣವಾಗಿದೆ.

ವೇದವನ್ನೆ ಸಾರ್ವಭೌಮಪ್ರಮಾಣವನ್ನಾಗಿ ಸ್ವೀಕಾರ ಮಾಡಿರುವ ಭಾಟ್ಟ ಮತ್ತು ಪ್ರಭಾಕರ ಮೀಮಾಂಸಕರಿಗೆ ಪ್ರತ್ಯಕ್ಷ. ಅನುಮಾನ. ಉಪಮಾನ ಮತ್ತು ಶಬ್ದವೆನ್ನುವ ಪ್ರಮಾಣಗಳು ಹೇಗೆ ಉಪಸೇಚನ (ಉಪ್ಪಿನಕಾಯಿ) ವಾಗಿರುವುದೊ ಹಾಗೆಯೆ ಅರ್ಥಾ ಪತ್ತಿಯು ಬೇರೆ ಪ್ರಮಾಣವಾಗಿರಬೇಕು. ಅದು ಮಿಕ್ಕ ನಾಲ್ಕರಲ್ಲಿ ಅಂತರ್ಗತವಾಗಲಾರದು ಎನ್ನುವರು.

ಇದು ಪ್ರತ್ಯಕ್ಷ ಮತ್ತು ಉಪಮಾನವಲ್ಲವೆನ್ನುವುದನ್ನು ಸುಲಭವಾಗಿ ಇರುವ ಕ್ರಮದಿಂದಲೇ ತಿಳಿಯಬಹುದು.

ಅನುಮಾನಕ್ಕೆ ವ್ಯಾಪ್ತಿ ಜ್ಞಾನವು ಕರಣವಾಗಿರುವಂತೆ. ಅರ್ಥಾಪತ್ತಿಗೆ ಉಪಸಾದ್ಯ ಜ್ಞಾನವು ಕರಣವಾಗಿದೆ.

ಈ ಉಪಪಾದ್ಯಜ್ಞಾನದಿಂದ ಬರುವ ಫಲವು ಅಂದರೆ ಉಪಪಾದಕ ಜ್ಞಾನವು ಬೇರೆ ಪ್ರಮಾಣಕ್ಕೆ ಅವಕಾಶ ಕಲ್ಪಿಸುತ್ತದೆ.

ಉದಾ -ದೇವದತ್ತನು ಜೀವಿಸಿರುವನು ಮತ್ತು ತನ್ನ ಮನೆಯಲ್ಲಿಲ್ಲ ಎನ್ನುವುದರಿಂದ ನಮಗೆ ಬರಬೇಕಾದ

ನಿಷ್ಕರ್ಷ ಜ್ಞಾನವು (ಉಪಪಾದ್ಯ) ತನ್ನ ಮನೆಯಲ್ಲಿಲ್ಲದ ಬೇರೆ ಕಡೆ ಇರಬೇಕು" ಎನ್ನುವ ಊಹೆಯಿಂದ

(ಉಪಪಾದಕ ಜ್ಞಾನಂ) ಮಾತ್ರ ಸಾಧ್ಯ. ಅರ್ಥಾಪತ್ತಿಯು ಪ್ರಮಾಣವಾಗಿಯೂ ಮತ್ತು ಪ್ರಮಾವಾಗಿಯೂ ಇದೆ. 'ಅರ್ಥಃ ಅಪದ್ಯತೇ ಅನೇನಎನ್ನುವದರಿಂದ ಪ್ರಮಾಣವಾಗಿಯೂ "ಅರ್ಥಃ ಆಪತವೆ" ಎನ್ನುವ್ಯುತ್ಪತ್ತಿಯಿಂದ ಪ್ರಮಾವಾಗಿಯೂ ಅರ್ಥಕೊಡಬಲ್ಲುದು ಅಂದರೆ ಅರ್ಥಸ್ಯ ಉಪಪಾದಕಸ್ಯ ಕಲ್ಪನಾಯಸ್ಯಾ ಅನ್ಯಥಾನುಪಪನ್ನಸ್ಯ ಉಪಪಾದ್ಯಸ್ಯ ಪ್ರತೀತಿಶ್ಚ ದೇವದತ್ತನು ಜೀವಿಸಿರುವನು. ಇನ್ನಾವುದೊ ಸ್ಥಳದಲ್ಲಿ ಇರಬೇಕು. ತನ್ನ ಮನೆಯಲ್ಲಿಲ್ಲ " ಸಾಧಾರಣ ಪ್ರಮಾಣದಿಂದ " ದೇವದತ್ತನು ಜೀವಿಸಿರುವನು. ಇನ್ನಾವುದೊ ಸ್ಥಳದಲ್ಲಿರಬೇಕು. ಎನ್ನುವುದೂ ಪರಸ್ಪರ ವೈಷಮ್ಯವನ್ನೂ ತೋರಿಸುತ್ತದೆ. ಇದು ಒಂದೇ ವಿಷಯದಲ್ಲಿ ಒಂದು ಸಾಮಾನ್ಯ ಪದವು ಒಂದು ವಿಶೇಷ ಪದವೂ ಇರುವಂತಿದೆ. ಯಾಗದಲ್ಲಿ ಪಶುನನ ಮಾಡಬೇಕು ಎಂದು ಒಂದೆಡೆ ಹೇಳಿದ್ದರೆ ಮತ್ತೊಂದೆಡೆ ಛಾಗ ಅಂದರೆ ಆಡನ್ನು ಹನನ ಮಾಡಬೇಕೆಂದು ಹೇಳಿದೆ. ಪಶುವನ್ನು ಸಾಮಾನ್ಯ ಪದ. ಛಾಗ ಎನ್ನುವುದು (ವಿಶೇಷಪದ)ದೇವದತ್ತನು ಜೀವಿಸಿರುವನು ಎನ್ನುವುದು ಸುಳ್ಳಾದರೆ ಇನ್ನಾವುದೊ ಸ್ಥಳದಲ್ಲಿರಬೇಕು ಎನ್ನುವುದು ಸಿದ್ಧಿಸುವುದಿಲ್ಲ. ಇದು ಸಿದ್ಧಿಸಬೇಕೆಂದರೆ ಅವನು ಬೇರೆ ಕಡೆ ಅವನನ್ನು ನೋಡಿರಬೇಕು. ಆಗ ಅರ್ಥಾಪತ್ತಿ ಪ್ರಮಾಣದ ಅವಶ್ಯಕತೆಯೇ ಇಲ್ಲ. ಮೀಮಾಂಸಕರು ಹೇಳುವುದು ಹೀಗಲ್ಲ. ಅವನು ಜೀವಿಸಿರುವನು ಎನ್ನುವ ಸಂಶಯವಿದೆ. ಇದು ವಾಕ್ಯದಿಂದಲೇ ತೋರುತ್ತದೆ. ಆದ್ದರಿಂದಲೇ ಇನ್ನಾವುದೇ ಸ್ಥಳದಲ್ಲಿರಬೇಕು ಎನ್ನುವುದು ಕಲ್ಪನೆ. ಅಂದರೆ ಸಂಶಯವೇ ಈ ಕಲ್ಪನೆಗೆ ಹೇತುವಾಗುತ್ತದೆ. ಇವರ ಸಂಪ್ರದಾಯದಲ್ಲಿ ಎಲ್ಲಾ ಜ್ಞಾನವು ಸ್ವತಃ ಪ್ರಮಾವಾಗಿರುವುದರಿಂದ ಸಂಶಯವೂ ಪ್ರಮಾ ಆಗಿಯೇ ಇದೆ. ಆದ್ದರಿಂದ ವ್ಯಾಪ್ತಿ ಜ್ಞಾನ ಭಿನ್ನ ಹೇತುವಿನಿಂದ ಬರುವ ಜ್ಞಾನವು ಸ್ವತಃ ಪ್ರಮಾವಾಗಿರುವುದರಿಂದ ಸಂಶಯವೂ ಪ್ರಮಾ ಆಗಿಯೇ ಇದೆ. ಆದ್ದರಿಂದ ವ್ಯಾಪ್ತಿ ಜ್ಞಾನ ಭಿನ್ನ ಹೇತುವಿನಿಂದ ಬರುವ ಜ್ಞಾನವು ಅನುಮತಿ ಆಗಲಾರದು. ಅದು ಅರ್ಥಾಪತ್ತಿ. ಭಾಟ್ಟಮೀಮಾಂಸಕರು ಇದನ್ನು ಬೇರೆ ರೀತಿಯಲ್ಲಿ ಸಮರ್ಥಿಸುವರು. ಅವರು ಹೇಳುವಂತೆ ವ್ಯತಿರೇಕವ್ಯಾಪ್ತಿಯಿಂದ ಅರ್ಥಾಪತ್ತಿ. ಅನ್ವಯವ್ಯಾಪ್ತಿಯಿಂದ ಅನುಮಾನ ಪ್ರಮಾಣವಾಗಿದೆ. (ವ್ಯಾಪ್ತಿ ಸ್ವರೂಪವನ್ನು ಮುಂದೆ ಅನುಮಾನ ಪ್ರಕರಣದಲ್ಲಿ ತಿಳಿಸಲಾಗುತ್ತದೆ.) ಹೀಗೆ ಹೇಳಿ ಅರ್ಥಾಪತ್ತಿಯನ್ನು ಶ್ರುತಾರ್ಥಾಪತ್ತಿ ಮತ್ತು ದೃಷ್ಟಾರ್ಥಾಪತ್ತಿ ಎಂದು 2 ವಿಧವಾಗಿ ಸಮರ್ಥಿಸಿಕೊಂಡಿರುವರು. ಅನ್ವಯವ್ಯಾಪ್ತಿಯದಾರ್ಢ್ಯಕ್ಕಾಗಿ ವ್ಯತಿರೇಕ ವ್ಯಾಪ್ತಿಯು ಅಪಯೋಗಿಸಲ್ಪಡುವುದರಿಂದ. ಅರ್ಥಾಪತ್ತಿಯನ್ನು ಬೇರೆ ಪ್ರಮಾಣವನ್ನಾಗಿ ನೈಯಾಯಿಕರು ಸ್ವೀಕರಿಸಿಲ್ಲ.

ಯಥಾರ್ಥಾನು ಭಾವವನ್ನು ಹೀಗೆ 4ಪ್ರಕಾರದಲ್ಲಿ ತಿಳಿದ ಮೇಲೆ ಈಗ ಕ್ರಮ ಪ್ರಾಪ್ತವಾದುದು ಪ್ರತ್ಯಕ್ಷ.

17. ಪ್ರತ್ಯಕ್ಷ ಪ್ರಮಾಣ-ಪ್ರತ್ಯಕ್ಷ ಜ್ಞಾನಕರಣಂ ಪ್ರತ್ಯಕ್ಷಂ. ಇಂದ್ರಿಯಾರ್ಥ ಸನ್ನಿಕರ್ಷಜನ್ಯಂ ಜ್ಞಾನಂ ಪ್ರತ್ಯಕ್ಷಂ. ತತ್‌ದ್ವಿವಿಧಂ. ನಿರ್ವಿಕಲ್ಪಕಸಂಸವಿಕಲ್ಪ ಕಂಚೇತಿ. ತತ್ರ ನಿಷ್ಪ್ರಕಾರಕಂಜ್ಞಾನಂನಿರ್ವಿಕಲ್ಪಕಂ. ಸಪ್ರಕಾರಕಂ ಜ್ಞಾನಂ ಸವಿಕಲ್ಪಕಂ. ಯಥಾಡಿತ್ಥಃ ಅಮಂ. ಬ್ರಾಹ್ಮಣಂ ಅನುಂ. ಪಾಚಕಃ ಅನುಂ ಇತಿ.

ಪ್ರತ್ಯಕ್ಷ ಜ್ಞಾನಕ್ಕೆ ಕರಣ ಅಂದರೆ ಅಸಾಧಾರಣ ಕಾರಣವಾಗಿರುವುದು ಪ್ರತ್ಯಕ್ಷ (ಪ್ರಮಾಣ)ಇಂದ್ರಿಯ ಮತ್ತು ಅರ್ಥ ಅಂದರೆ ವಿಷಯ. ಇವೆರಡರ ಸನ್ನಿಕರ್ಷ ಅಂದರೆ ಸಂಬಂಧದಿಂದ ಹುಟ್ಟುವ ಜ್ಞಾನವು ಪ್ರತ್ಯಕ್ಷ ಅದು 2 ವಿಧ ನಿರ್ವಿಕಲ್ಪಕ, ಸವಿಕಲ್ಪಕ. ಅವೆರಡರಲ್ಲಿ ವಿಶೇಷಣ ಅಂದರೆ ಪ್ರಕಾರಡೊದನೆ ಸೇರಿಲ್ಲದೆ ಇರುವ ಜ್ಞಾನವು ನಿರ್ವಿಕಲ್ಪಕ. ಪ್ರಕಾರದೊಡನೆ ಸೇರಿಲ್ಲದೆ ಇರುವ ಜ್ಞಾನವು ನಿರ್ವಿಕಲ್ಪಕ. ಪ್ರಾಕರದೊಡನೆ ಸೇರಿರುವುದು ಸವಿಕಲ್ಪಕ ಉದಾ. ಇವನು ಡಿತ್ಥ ಎಂದು ಹೆಸರಿರುವ ಮನುಷ್ಯ ಇವನು ಬ್ರಾಹ್ಮಣ. ಇವನು ಅಡಿಗೆ ಮಾಡುವವನು.

ಅನ್ನಂಭಟ್ಟನು ಪ್ರತ್ಯಕ್ಷ ಪ್ರಮಾಣದ ಲಕ್ಷಣವನ್ನು ಗೌತಮನ 1,1,4 ನ್ಯಾಯಸೂತ್ರದ ಆಧಾರದ ಮೇಲೆ ಬರೆದಿರುವನು (ಇಂದ್ರಿಯಾಥ ಸನ್ನಿಕರ್ಷೋತ್ಪನ್ನಂ ಜ್ಞಾನಂ ಅವ್ಯಪದೇಶ್ಯಂ ಅವ್ಯಭಿಚಾರಿ ವ್ಯವಸಾಯಾತ್ಮಕಂ ಪ್ರತ್ಯಕ್ಷಂ) ಅನ್ನಂಭಟ್ಟನು ಹೇಳಿರುವುದಕ್ಕಿಂತ ಸೂತ್ರದಲ್ಲಿ ಅವ್ಯಪದೇಶ್ಯಂ, ಅವ್ಯಭಿಚಾರಿ ಮತ್ತು ವ್ಯವಸಾಯಾತ್ಮಕಂ ಎನ್ನುವ 3 ಪದಗಳು ಜಾಸ್ತಿಯಾಗಿವೆ. "ಅವ್ಯಭಿಚಾರಿ" ಎನ್ನುವುದರಿಂದ ದಾರಿಬಿಟ್ಟು ಹೋಗದೇ ಇರುವ ಅಥವಾ ಭ್ರಮವಲ್ಲದ ಎನ್ನುವ ಅರ್ಥದಿಂದ ಪ್ರತ್ಯಕ್ಷವು ಪ್ರಮಾವಾಗಿರುವುದು ಎಂದು ಹೇಳಿದಂತಾಗುತ್ತದೆ. ಅವ್ಯಪದೇಶ್ಯಂ ಮತ್ತು ವ್ಯವಸಾಯಾತ್ಮಕಂ ಎನ್ನುವ 2 ಪದಗಳ ಅರ್ಥವನ್ನು ವ್ಯಾಖ್ಯಾನಕಾರರು ಬೇರೆ ಬೇರೆ ರೀತಿಯಲ್ಲಿ ಹೇಳಿದ್ದರೂ, ಈಗ ಎಲ್ಲರಿಗೂ ಪರಿಗ್ರಹೀತವಾದ ಅರ್ಥವೆಂದರೆ ನಿರ್ವಿಕಲ್ಪಕ ಮತ್ತು ಸವಿಕಲ್ಪಕ ಎಂದು. ಒಟ್ಟಿನಲ್ಲಿನಿರ್ವಿಕಲ್ಪಕ, ಸವಿಕಲ್ಪಕವೆಂದು ಎರಡು ವಿಧವಾಗಿ, ಭ್ರಮವಲ್ಲದೆ ಇರುವ, ಇಂದ್ರಿಯ ಮತ್ತು ವಿಷಯ ಸನ್ನಿಕರ್ಶದಿಂದ ಉತ್ಪನ್ನವಾದ, ಜ್ಞಾನವೇ ಪ್ರತ್ಯಕ್ಷ ಇದು ಸೂತ್ರಾರ್ಥವಾಗುತ್ತದೆ.

ಗಂಗೇಶನು ಹೇಳಿರುವುದನ್ನು ಅನುಸರಿಸುವ ಅನ್ನಂಭಟ್ಟನ ಅಭಿಪ್ರಾಯದಲ್ಲಿ ಸರಿಯಾಗಿ ನೋಡಿದರೆ ಸವಿಕಲ್ಪಕ ಒಂದೇ ಪ್ರತ್ಯಕ್ಷವೆನಿಸಿಕೊಳ್ಳಬಲ್ಲದು. ನಾವು ಮೊದಲು ಒಂದು ವಸ್ತುವನ್ನು ನೋಡುವಾಗ ಅದು ಸ್ಥೂಲವಾಗಿ ಕಂಡು, 'ಇದು ಇದೇ' ಎಂದು ಹೇಳಲು ಸಾಧ್ಯವಾಗುವುದಿಲ್ಲ. ಅಂದರೆ ವಿಶೇಷಣ ಜ್ಞಾನ ಮತ್ತು ಆ ವಿಶೇಷಣದಿಂದ ಕೂಡಿರುವ ಜ್ಞಾನ (ವಿಶೇಷಣ ಜ್ಞಾನಂ ಮತ್ತು ವಿಶಿಷ್ಟ ಜ್ಞಾನಂ) ಇವೆರಡೂ ಇರುವುದಿಲ್ಲ. ಪ್ರತಿಯೊಂದು ವಸ್ತುವನ್ನು ನಾವು ಗುರ್ತಿಸಬೇಕಾದರೆ ಆ ವಸ್ತುವಿನ ಅಸಾಧಾರಣ ವಿಶೇಷಣ ಜ್ಞಾನದಿಂದ ಮಾತ್ರ ಸಾಧ್ಯ. ಅಂತಹ ವಿಶೇಷಣ ಜ್ಞಾನವಿಲ್ಲದಿದ್ದರೆ ಅದೇ ನಿರ್ವಿಕಲ್ಪಕ ಜ್ಞಾನ. ಇದು ಅತೀಂದ್ರಿಯವಾದದ್ದು. ಸವಿಕಲ್ಪಕ ಜ್ಞಾನ ಬಂದಮೇಲೆ, ಮೊದಲು ಬಂದದ್ದು ನಿರ್ವಿಕಲ್ಪಕ ಎಂದು ಊಹೆ ಮಾಡುತ್ತೇವೆ. ಸವಿಕಲ್ಪಕ ಜ್ಞಾನದಲ್ಲಿ ಮಾತ್ರ ವಿಶೇಷತಾಜ್ಞಾನ ಪ್ರಕಾರತಾ ಜ್ಞಾನ ಮತ್ತು ಸಂಸರ್ಗತಾ ಜ್ಞಾನ -ಈ ಮೂರೂ ಸೇರಿವೆ. ಆದ್ದರಿಂದಲೇ " ಸಂಸರ್ಗಾವ ನಾಹಿ ಜ್ಞಾನಂ ಸವಿಕಲ್ಪಃ" ಎನ್ನುವ ಲಕ್ಷಣವು ಸರಿಯಾಗಿದೆ. ಸಂಸರ್ಗ ಜ್ಞಾನವಿದ್ದರೆ ಮಿಕ್ಕ ಎರಡು ಜ್ಞಾನಗಳೂ ಇದ್ದೇ ಇರಬೇಕು. ಆದ್ದರಿಂದ " ಸಂಸರ್ಗಾವಹಿಜ್ಞಾನಂ ಸರ್ವಿಕಲ್ಪಃ" ಎನ್ನುವುದು ಸಿದ್ಧವಾಗುತ್ತದೆ.

ನ್ಯಾಯವೈಶೇಷಿಕ ಸಿದ್ಧಾಂತದ ರೀತಿಯಲ್ಲಿ ಬಾಹ್ಯ ಸಂಸರ್ಗಕ್ಕೆ ಪ್ರತ್ಯಕ್ಷ ವಿಷಯದಲ್ಲಿ ಬಹಳ ಪ್ರಾಮುಖ್ಯತೆ ಇದೆ. ಒಂದು ಜ್ಞಾನದಿಂದ ಮತ್ತೊಂದು ಜ್ಞಾನ ಉತ್ಪನ್ನವಾದರೆ ಅದು ಯಾವತ್ತಿಗೂ ಪ್ರತ್ಯಕ್ಷ -ಜ್ಞಾನವಾಗಲಾರದು ಎನ್ನುವದು ಅದರ ಮತ. ಅಂದರೆ "ಇಂದ್ರಿಯಾರ್ಥ ಸನ್ನಿಕರ್ಷ ಜನ್ಯ ಜ್ಞಾನಾಂತರಾಕರಣಕಂ ಜ್ಞಾನಂಪ್ರತ್ಯಕ್ಷಂ"ಎನ್ನುವುದು ಪ್ರತ್ಯಕ್ಷದ ಪರಿಷ್ಕೃತ ವಾದ ಲಕ್ಷಣ. ಈ ಲಕ್ಷಣದಿಂದ ಪರಮಾತ್ಮನ ಸರ್ವಜ್ಞತ್ವ ಸೂಚಕವಾದ ನಿತ್ಯ ಪ್ರತ್ಯಕ್ಷವೂ ಸೇರಿರುತ್ತದೆ.

ಈಸವಿಕಲ್ಪ ಮತ್ತು ನಿರ್ವಿಕಲ್ಪ ಪ್ರತ್ಯಕ್ಷ ಜ್ಞಾನವಿಷಯದಲ್ಲಿ ಮಿಕ್ಕ ದರ್ಶನಕಾರರಲ್ಲಿ ಮತ ಭೇದವಿದೆ. ವೈಯಾಕರಣರಿಗೆ ಅಂದರೆ ಶಾಬ್ದಿಕರಿಗೆ ನಿರ್ವಿಕಲ್ಪ ಪ್ರತ್ಯಕ್ಷವೇ ಇಲ್ಲ. ವಾಚಕ ಶಬ್ದವಿಲ್ಲದೆ ವಾಚ್ಯವಸ್ತು ಜ್ಞಾನವಿರುವುದಿಲ್ಲ. ಅವರು ಹೇಳುವಂತೆ "ನಸೋಸ್ತಿ ಪ್ರತ್ಯಯೋಲೋಕೇಯತ್ರ ಶಬ್ದೋನವಿದ್ಯತೇ" ಬೌದ್ಧರಿಗೆ ನಿರ್ವಿಕಲ್ಪಕವೇ ಪ್ರಮಾ; ನಾಮ, ಜಾತಿ, ಗುಣ, ಕ್ರಿಯಾ, ಮತ್ತು ದ್ರವ್ಯತ್ವ-ಇವೆಲ್ಲ ಒಟ್ಟು ಸೇರಿ ಕಲ್ಪಿತವಾದ ಒಂದು ಭ್ರಮವಾದದ್ದೇಸವಿಕಲ್ಪಿಕ. ಇದನ್ನು ಹೇಳುವುದಕ್ಕಾಗಿಯೇ ಅವರು 'ಸರ್ವಸ್ವಲಕ್ಷಣಂ' ಎನ್ನುವರು. ಅಂದರೆ ಸ್ವಸ್ಯಸ್ವಯಮೇವ ಲಕ್ಷಣಂ. ಅದ್ವೈತದಲ್ಲಿ ನಿರ್ವಿಕಲ್ಪಕಕ್ಕೆ ಬಹಳ ಪ್ರಾಶಸ್ತ್ಯವಿದೆ. ಇದು ಪ್ರತ್ಯೇಜ್ಞೆಯಿಂದ ಗೋಚರವಾಗುವ ಜ್ಞಾನ. "ಸೋಽಯಂ ದೇವದತ್ತಃ" ಎನ್ನುವ ಜ್ಞಾನವನ್ನು ವಿಮರ್ಶಿಸಿದರೆ, ತಾತ್ಕಾಲಾವಚ್ಛಿನ್ನ, ತದ್ದೇಶಾವಚ್ಛಿನ್ನ ವ್ಯಕ್ತಿಯ ಸ್ಮೃತಿಯಿಂದ ಸಿದ್ಧವಾಗಿ, ಏತತ್ಕಾಲವಚ್ಛಿನ್ನ, ಏತದ್ದೇಶಾವಚ್ಛಿನ್ನ ವ್ಯಕ್ತಿಯು ಇಂದ್ರಿಯಾರ್ಥ ಸನ್ನಿಕರ್ಷದಿಂದ ಸಿದ್ಧವಾಗಿ ಉತ್ತರ ಕ್ಷಣದಲ್ಲಿ ತತ್ತದ್ವಿಶೇಷಣವಿರಹಿತವಾದ ವ್ಯಕ್ತಿಜ್ಞಾನ ಮಾತ್ರ ಉಳಿಯುತ್ತದೆ. ಇದೇ ಸತ್ಯ. ಹೀಗೆಯೇ "ತತ್ವಮಸಿ" ಇತ್ಯಾದಿ ವೇದ ವಾಕ್ಯಾರ್ಥವನ್ನು ತಿಳಿಯಬೇಕು. ಕ್ರಿ.ಶ. 9ನೇ ಶತಮಾನದವನಾದ ಜಯಂತಭಟ್ಟನು ತಾರ್ಕಿಕನಾದರೂ ತನ್ನ ನ್ಯಾಯಮಂಡಲಿಯಲ್ಲಿ ಸುಮಾರಾಗಿ ತನ್ನ ದಾರಿಯಲ್ಲೆ ನಡೆದು ಈ ಅಭಿಪ್ರಾಯಕ್ಕೆ ತಲೆದೂಗುವಂತಿದೆ. ಇವನ ರೀತಿಯಲ್ಲಿ ಸವಿಕಲ್ಪಕ ಮತ್ತು ನಿರ್ವಿಕಲ್ಪಕ ಎರಡರಲ್ಲಿಯೂ ಒಂದೇ ವಸ್ತುವು ಗೋಚರವಾದರೂ, ಸವಿಕಲ್ಪದಲ್ಲಿ ವಾಚ್ಯವಾಚಕ ಆಡಂಬರವಿದೆ. ಆದರೆ ನಿರ್ವಿಕಲ್ಪದಲ್ಲಿ ಅವಿಲ್ಲ. ಇವನ ಮಾತಿನಲ್ಲೇ ಹೇಳುವುದಾದರೆ,

ತಸ್ಮಾದ್ಯ ಏವ ವಸ್ತ್ವಾತ್ಮಾ ಸವಿಕಲ್ಪಸ್ಯಗೋಚರಃ
ಸ ಏವ ನಿರ್ವಿಕಲ್ಪಸ್ಯ ಶಬ್ದೋಲ್ಲೇಖವಿವರ್ಜಿತಃ
ಕಿಮಾತ್ಮ ಕೋಸಾ ಏತಿಚೇತ ಯುದ್ಯದಾ ಪ್ರತಿಭಾಸತೇ
ವಸ್ತು ಪ್ರಮಿತ ಯಶ್ಚೈವ ಪುಷ್ಟವ್ಯಾ ನ ತು ವಾದಿನಃ
ಕ್ವಚಿಜ್ಜಾತಿಃ ತ್ವಚಿದ್ರವ್ಯಂಕ್ವ ಚಿತ್ಕರ್ಮಕ್ವಚಿದ್ಗುಣಃ
ಯದೇವ ಸವಿಕಲ್ಪೇನ ತದೇವಾದೇನ ಗೃಹ್ಯತೇ
ಇಹಶಬ್ದಾನುಸಂಧಾನ ಮಾತ್ರ ಮಭ್ಯಧಿಕಂರಪರಂ

ನಿರ್ವಿಕಲ್ಪವನ್ನು ಹೇಳುವಾಗ ಪ್ರಶಸ್ತಪಾದರು ಆಲೋಚನ ಮಾತ್ರಂ ಎಂದಿರುವರು. ಮೀಮಾಂಸಕರಲ್ಲಿ ಕುಮಾರಿಲರು ನಿರ್ವಿಕಲ್ಪವನ್ನೂ ಅವ್ಯಪದೇಶ್ಯ ಮೂಕಾನುಭವಃ ಎಂದಿರುವರು. ಅಂದರೆ ಈ ಜ್ಞಾನವು ಅವರಿಗೆ ಅನುಮೇಯ ಪ್ರಾಭಾಕರರಿಗೆ ಹಾಗಲ್ಲ. ಈ ಜ್ಞಾನವು ಪ್ರತ್ಯಕ್ಷವೇ

ಅಂದರೆ ಜ್ಞಾತಾ ಮತ್ತು ಜ್ಞೇಯ ಇವೆರಡರೊಡನೆ ಗೋಚರವಾಗುವ ಜ್ಞಾನ. ಇವರ ವಾದವನ್ನೇ ವಿಶಿಷ್ಟಾದ್ವೈತ ಸಿದ್ಧಾಂತಗಳು ಸ್ವೀಕರಿಸಿರುವರು. ಸಾಮಾನ್ಯ ಮತ್ತು ವಿಶೇಷ ಧರ್ಮದೊಡನೆ ವಸ್ತುವು ಸವಿಕಲ್ಪ ಮತ್ತು ನಿರ್ವಿಕಲ್ಪ ಪ್ರತ್ಯಕ್ಷವೆರಡರಲ್ಲಿ ಗೋಚರವಾದರೂ ನಿರ್ವಿಕಲ್ಪದಲ್ಲಿ ವಿಶೇಷ ಧರ್ಮವು ಅನುವೃತ್ತಿಯಿಂದ ಅಲ್ಲಿ ಸಿದ್ಧಿಸುವುದಿಲ್ಲ.

ನೈಯಾಯಿಕರಿಗೆ ಇಂದ್ರಿಯಾರ್ಥ ಸನ್ನಿಕರ್ಷದಿಂದಲೇ ಪ್ರತ್ಯಕ್ಷ ಭಾಟ್ಟ ಮೀಮಾಂಸಕರಿಗೂ ಹಾಗೆಯೇ. ಆದರೆ ಪ್ರಾಭಾಕರರಿಗೆ ಪ್ರತ್ಯಕ್ಷವೆಂದರೆ ಸಾಕ್ಷಾತ್ಪ್ರತೀತಿ. ಅಂದರೆ ಸ್ಮೃತಿ. ಅನುಮತಿ ಮೊದಲಾದ ಜ್ಞಾನಗಳು ಒಂದು ರೀತಿಯಲ್ಲಿ ಪ್ರತ್ಯಕ್ಷವೇ. ' ಸ್ವಾಂಶೇ -ಜ್ಞಾತಂಶೇ' ಪ್ರತ್ಯಕ್ಷಂ. ವಿಷಯಂಶೇ. ಅಪ್ರತ್ಯಕ್ಷಂ. ಅದ್ವೈತಿಗಳಿಗೆ ಇಂದ್ರಿಯಾರ್ಥ ಸನ್ನಿಕರ್ಷವು ಕೆಲವು ಪ್ರತ್ಯಕ್ಷದಲ್ಲಿ ಅವಶ್ಯಕವಿದ್ದರೂ ಅಂದರೆ ಬಾಹ್ಯವಿಷಯಾಪೇಕ್ಷಯಾ ಅದು ಬೇಕಾದರೂ. ಪ್ರಮಾತ್ರ ಪೇಕ್ಷಯಾ ಅದು ಬೇಕಿಲ್ಲ ಜ್ಞಾನದ ಪ್ರತ್ಯಕ್ಷತ್ವಕ್ಕೂ ವಿಷಯದ ಪ್ರತ್ಯಕ್ಷತ್ವಕ್ಕೂ ಭೇದವಿದೆ. ಅಂದರೆ ಪ್ರಮಾಣ ಚೈತನ್ಯವು ಅರ್ಥಾತ್ ವೃತ್ತ ವಚ್ಛಿನ್ನ ಚೈತನ್ಯದೊಡನೆ ವಿಷಯ ಚೈತನ್ಯವು ಒಂದಾದರೆ ಅದೇ ಪ್ರತ್ಯಕ್ಷ. ಇದನ್ನು ಪ್ರತ್ಯಕ್ಷವೆನ್ನುವುದಕ್ಕಿಂತಲೂ ಅಪರೋಕ್ಷವೆನ್ನುವುದೇ ಸಾಧನವಾಗಿದೆ. ಪ್ರತ್ಯಕ್ಷ ಜ್ಞಾನಹೇತುಃ ಇಂದ್ರಿಯಾರ್ಥ ಸನ್ನಿಕರ್ಷಃ ಷಡ್ವಿದಃ ಸಂಯೋಗಃ ಸಂಯುಕ್ತ ಸಮವಾಯಃ. ಸಂಯುಕ್ತ ಸಮವೇತ ಸಮವಾಯುಃ. ಸಮವಾಯಃ. ವಿಶೇಷಣ ವಿಶೇಷ್ಯ ಭಾವಶ್ಚೇತಿ–

ಸನ್ನಿಕರ್ಷದಿಂದಲೇ ಪ್ರತ್ಯಕ್ಷ. ಅಸನ್ನಿಕರ್ಷವು ಆರು ವಿಧದಲ್ಲಿದೆ. 1) ಕಣ್ಣಿಗೂ ಮಡಕೆಗೂ ಸಂಬಂಧ. ಸಂಯೋಗ (2) ಕಣ್ಣಿಗೂ ಮಡಕೆಯ ರೂಪಕ್ಕೂ ಸಂಯುಕ್ತ ಸಮವಾಯ ಅಂದರೆ ಸಂಯುಕ್ತವಾದ ಮಡಕೆಯಲ್ಲಿ ರೂಪವು ಸಮವಾಯ ಸಂಬಂಧದಿಂದ ಇದೆ (3) ಕಣ್ಣಿಗೂ ' ರೂಪತ್ವ'ವೆನ್ನುವ ಜಾತಿಗೂ. ಸಂಯುಕ್ತ ಸಮವೇತ ಸಮವಾಯ ಅಂದರೆ ಮಡಕೆಯು ಸಂಯೋಗದಿಂದ. ರೂಪ. ಅದರೊಡನೆ ಸಮವೇತವಾಗಿರುವುದರಿಂದ. 'ರೂಪತ್ವವು'ರೂಪದೊಡನೆ ಸಮವಾಯ ಸಂಬಂಧದಿಂದ ಇರುವುದರಿಂದ. ಆದ್ದರಿಂದ ಸನ್ನಿಕರ್ಷವು ಸಂಯುಕ್ತ ಸಮವೇತ ಸಮವಾಯವಾಗಿರುತ್ತದೆ (4) ಶಬ್ದಕ್ಕೂ ಶ್ರೋತ್ರಕ್ಕೂ. ಸಮವಾಯಸಂಬಂಧ ಶ್ರೋತ್ರವೇ ಆಕಾಶ. ಆ ಆಕಾಶದಲ್ಲಿ ಶಬ್ದವು ಸಮವಾಯ ಸಂಬಂಧದಿಂದ ಗೋಚರವಾಗುತ್ತಿದೆ (5) ಹಿಂದಿನಂತೆ ತಿಳಿದುಕೊಂಡರೆ ಶಬ್ದತ್ವಕ್ಕೂ ಶ್ರೋತ್ರಕ್ಕೂ ಸಮವೇತ ಸಮವಾಯ (6) 'ಘಟಾಭಾವವತ್ ಭೂತಲಂ' ಎನ್ನುವ ಕಡೆ ಚಕ್ಷುಸ್ಸಿನೊಡನೆ ಸಂಯುಕ್ತವಾದ ಭೂತಲದಲ್ಲಿ ಘಟಾಭಾವವು ವಿಶೇಷಣವಾಗಿ ರುವುದರಿಂದ. ಈ ಸನ್ನಿಕರ್ಷ" ವಿಶೇಷಣ ವಿಶೇಷ್ಯ ಸನ್ನಿಕಷ" ಇಷ್ಟು ಹೇಳಿದನಂತರ

"ಏವಂ ಸನ್ನಿಕರ್ಷ ಜನ್ಯಂ ಜ್ಞಾನಂ ಪ್ರತ್ಯಕ್ಷಂ. ತತ್ಕ
ರಣಂ ಇಂದ್ರಿಯಂ. ತಸ್ಮಾತ್.
ಇಂದ್ರಿಯಂ ಪ್ರತ್ಯಕ್ಷ ಪ್ರಮಾಣಂ ಇತಿಸಿದ್ಧಂ "

ಎನ್ನುವ ವಾಕ್ಯದೊಡನೆಪ್ರತ್ಯಕ್ಷ ಪರಿಚ್ಛೇದವು ಕೊನೆಗಂಡಿದೆ.

ಸನಿಕರ್ಷವೆಂದರೆ ಬಾಹ್ಯ ಮತ್ತು ಅಂತರ ಸಂಬಂಧವೆಂದು ತಿಳಿಯಬೇಕು. ಅಂತರ ಸಂಬಂಧವಿಲ್ಲದೆ ಬಾಹ್ಯ ಸಂಬಂಧವು ಜ್ಞಾನವನ್ನು ಉಂಟುಮಾಡಲಾರದು. ಅಂದರೆ ಮನಸ್ಸು ಎಚ್ಚರವಾಗಿದ್ದು ಇಂದ್ರಿಯದೊಡನೆ ಸಹಕರಿಸಿದರೇನೆ ಜ್ಞಾನವು ಹುಟ್ಟುತ್ತದೆ. ಜ್ಞಾನಬರುವುದು ಆತ್ಮಕ್ಕೆ ಸಲ್ಲುತ್ತದೆ. ತ್ರ್ಯಣ್ಣುಕದಿಂದ ಮೇಲ್ಪಟ್ಟ ಅವಯವಿಯೊಡನೆಯೇ ಸನ್ನಿಕರ್ಷವು ಸಾಧ್ಯವಾಗುತ್ತದೆ. ಅದರಲ್ಲೂ ಉದ್ಭೂತ ರೂಪ ಮತ್ತು ಮಹತ್ವ ಎರಡೂ ವಿಷಯದ ಅವಚ್ಛೇದಕವಾಗಿರಬೇಕು. ಇಷ್ಟೋತಾರಿಕ ಸನ್ನಿಕರ್ಷದ ವಿಷಯ. ಒಟ್ಟಿನಲ್ಲಿ ಹೇಳುವುದಾದರೆ "ಆತ್ಮಾಮನಸಾ ಸಂಯುಜ್ಯತೇ ಮನಃ ಇಂದ್ರಿಯೇಣ ಇಂದ್ರಿಯ ಮರ್ಥೇನ ಇಷ್ಟವನ್ನು ಇಂದ್ರಿಯಾರ್ಥ ಸನ್ನಿಕರ್ಷ ಎನ್ನುವುದರಿಂದ ಅರ್ಥಮಾಡಿಕೊಳ್ಳಬೇಕು.

ಲೌಕಿಕ ಪ್ರತ್ಯಕ್ಷವಲ್ಲದೆ ನೈಯಾಯಿಕರು ಮೂರು ವಿಧವಾದ ಅಲೌಕಿಕ ಸನ್ನಿಕರ್ಷವನ್ನು ಹೇಳುವರು (1) ಸಾಮಾನ್ಯ ಲಕ್ಷಣ ಸನ್ನಿಕರ್ಷ (2) ಜ್ಞಾನ ಲಕ್ಷಣ ಸನ್ನಿಕರ್ಷ ಮತ್ತು (3) ಯೋಗ ಜಸನ್ನಿಕರ್ಷ. ಈ ಸಂದರ್ಭದಲ್ಲಿ ಇವರು ಸನ್ನಿಕರ್ಷ ಎನ್ನುವುದಕ್ಕೆ ಬದಲಾಗಿ ಪ್ರತ್ಯಾಸತ್ತಿ ಎನ್ನುವರು.

ಸಾಮಾನ್ಯಲಕ್ಷಣ ಸನ್ನಿಕರ್ಷ-ಒಂದು ವಸ್ತುವನ್ನು ನೋಡಿದರೆ ಅದರೊಡನೆ ಅದರ ಜಾತಿಯೂ ಗೋಚರವಾಗುವುದು. ಇದರಿಂದಲೇ ವ್ಯಾಪ್ತಿ ಜ್ಞಾನವು ನಮಗೆ ಬರುವಂತಾಗಿ ಅನುಮಾನವು ಪ್ರಮಾಣವಾಗಿದೆ. ಇದು ಒಂದು ವಿಧವಾದ ಅಲೌಕಿಕ ಸನ್ನಿಕರ್ಷ ಜಾತಿಯಿಲ್ಲದೆ ಅನೇಕ ವಸ್ತುಗಳಲ್ಲಿರುವ ಸಮಾನ ಧರ್ಮವೂ ಈ ಸನ್ನಿಕರ್ಷದಿಂದ ಗೋಚರವಾಗುತ್ತದೆ. ಅಂದರೆ ವಿಶೇಷದೊಡನೆ ಅದರ ಪ್ರಕಾರತಾ ಜ್ಞಾನವು ಅಲೌಕಿಕ ಸನ್ನಿಕರ್ಷದಿಂದ ಬರುತ್ತದೆ. ಹೀಗೆ ಹೇಳುವುದರಲ್ಲಿ ಸ್ವಲ್ಪ ದೋಷಬರುತ್ತದೆ. ಅದರ ಪರಿಹಾರ ಕ್ರಮವು ಇಲ್ಲಿ ಬೇಡ.

ಜ್ಞಾನಲಕ್ಷಣಸನ್ನಿಕರ್ಷ-ವಾಸನೆಯಿಂದ ಚಂದನದ ಜ್ಞಾನವು ಈ ಸನ್ನಿಕರ್ಷದಿಂದ ಬರುತ್ತದೆ. ಭ್ರಮೆ ಬರುವ ಕಡೆಯಲ್ಲಿ ಶುಕ್ತಿಯನ್ನು ರಜತವೆಂದು ತಿಳಿಯುವಾಗ ರಜತತ್ವವು ಸ್ಮೃತಿಯಿಂದ ಸಿದ್ಧವಾಗಿ ಜ್ಞಾನಲಕ್ಷಣ ಸನ್ನಿಕರ್ಷದಿಂದ ಗೋಚರವಾಗುತ್ತದೆ.

ಯೋಗಜಸನ್ನಿಕರ್ಷ-ಮನಸ್ಸಿನ ಒಂದೇ ಅಸಾಧಾರಣ ಶುಕ್ತಿಯಿಂದ ಭಾವನಾತ್ಮಕವಾದ ವಿಷಯಕ್ಕೂ ಮನಸ್ಸಿಗೂ ಸಂಬಂಧ ಇರುವುದು. ಇದನ್ನು ಸ್ವೀಕಾರ ಮಾಡಿರುವುದರಿಂದಲೇ ತರ್ಕಶಾಸ್ತ್ರಕ್ಕೆ 'ದರ್ಶನ'ಎನ್ನುವ ಹೆಸರು ಸಲ್ಲುತ್ತದೆ.

ಎಲ್ಲಾ ಜ್ಞಾನಕ್ಕೂ ಮನಸ್ಸು ಅವಹಿತವಾಗಿರಬೇಕಾಗಿರುವುದರಿಂದ, ಇವರು ಯೋಗದಿಂದ ಗೋಚರವಾಗುವ ಜ್ಞಾನವನ್ನೂ ಒಂದು ಸನ್ನಿಕರ್ಷದಿಂದಲೇ ಸಾಧಿಸುವರು.

18.ಅನುಮಾನಪ್ರಮಾಣ- 'ಅನುಮಾನ' ಎನ್ನುವ ಪದಕ್ಕೆ ಒಂದು ಮಾನವನ್ನು ಅನುಸರಿಸಿ ಬೆಳೆದಿರುವ ಮಾನ ಎಂದರ್ಥ ಮಾನವೆಂದರೆ ಅಳತೆ. ಇಲ್ಲಿ ಜ್ಞಾನದ ಅಳತೆಯೇ ಪ್ರಕೃತ.

ಪ್ರತ್ಯಕ್ಷ ಪ್ರಮಾಣದಿಂದ ಬಂದ ಜ್ಞಾನದ ಆಧಾರದ ಮೇಲೆ ನಮಗೆ ಲಭ್ಯವಾಗುವ ಜ್ಞಾನ. ಒಂದು ಪಾವು ಎನ್ನುವದನ್ನು ಅಳತೆಯಾಗಿಟ್ಟುಕೊಂಡರೆ ನಾಲ್ಕು ಪಾವು ಸೇರಿ ಒಂದು ಸೇರು ಎನ್ನುವತೆ ಪ್ರತ್ಯಕ್ಷ ಪ್ರಮಾಣದಿಂದ ಲಭ್ಯವಾದ ಅನೇಕ ಜ್ಞಾನಗಳನ್ನು ಒಟ್ಟು ಕೂಡಿಸುವುದರಿಂದ ಬರುವ ಪ್ರಮಾಣವೇ ಅನುಮಾನ. ಆ ವ್ಯಾಪ್ತಿ ಜ್ಞಾನದಿಂದ ಅನುಮತಿ ಜ್ಞಾನ ಬರುವುದೆಂದು ವಿವರಿಸಲಾಗುತ್ತದೆ. ಆ ವ್ಯಾಪ್ತಿ ಜ್ಞಾನದಲ್ಲಿ ಮೂರು ಜ್ಞಾನಗಳು ಸೇರಿರುತ್ತವೆ. "ಎಲ್ಲಿ ಹೊಗೆ ಇರುತ್ತದೋ ಅಲ್ಲೆಲ್ಲಾ ಬೆಂಕಿ ಇದೆ" ಎನ್ನುವುದೇ ವ್ಯಾಪ್ತಿ ಜ್ಞಾನ ಇದರಲ್ಲಿ (1) ಅಗ್ನಿ ಜ್ಞಾನ (2) ಧೂಮ ಜ್ಞಾನ (3) ಅಗ್ನಿ ಮತ್ತು ಧೂಮಸಂಬಂಧ ಜ್ಞಾನ. ಈ ಮೂರು ಒಂದು ಕ್ರಮದಲ್ಲಿ ಸೇರಿವೆ. ಧೂಮವಿರುವ ಕಡೆಯೆಲ್ಲಾ ಅಗ್ನಿ ಇರುತ್ತದೆ. ಆದರೆ ಅಗ್ನಿ ಇರುವ ಕಡೆಯೆಲ್ಲೆಲ್ಲಾ ಧೂವಿರುವುದಿಲ್ಲ. ಅಂದರೆ ಅಗ್ನಿವ್ಯಾಪಕ ವಸ್ತು, ಧೂಮ ವ್ಯಾಪ್ಯವಸ್ತು. ವ್ಯಾಪ್ಯವಸ್ತುವಿನಿಂದ ವ್ಯಾಪಕ ವಸ್ತುವನ್ನು ಊಹಿಸುವುದೇ ಅನುಮಾನ. ಪ್ರತ್ಯಕ್ಷದಿಂದ ವ್ಯಾಪ್ಯವ್ಯಾಪಕಗಳಾದ ಎರಡು ವಸ್ತುಗಳನ್ನು ತಿಳಿದುಕೊಳ್ಳುವುದೇ ವ್ಯಾಪ್ತಿ ಜ್ಞಾನ ಎನಿಸಿಕೊಳ್ಳುತ್ತದೆ. ಈ ವ್ಯಾಪ್ತಿ ಜ್ಞಾನವು ಸಂಸ್ಕಾರ ಬಲದಿಂದ ಆ ಲೋಚನಾತ್ಮಕ ದೃಷ್ಟಿ ಬೆಳೆದು ಮುಂದೆ ಹೊಗೆ ನೋಡುವ ಸ್ಥಳದಲ್ಲೆಲ್ಲಾ ಕಣ್ಣಿಗೆ ಕಾಣದಿದ್ದರೂ ಬೆಂಕಿ ಇದೆ ಎಂದು ತಿಳಿಯುವುದೇ ಅನುಮಾನ. ಸಂದರ್ಭದಲ್ಲಿ ಕೆಲವು ಪಾರಿಭಾಷಿಕ (Technical) ಪದಗಳನ್ನು ಪ್ರಯೋಗಿಸಲಾಗಿದೆ. ಅವುಗಳನ್ನು ತರ್ಕ ಸಂಗ್ರಹದಿಂದಲೇ ತಿಳಿಯಬೇಕು.

(1)ಅನುಮತಿ ಕರಣಂ ಅನುಮಾನಂ (2) ಪರಾಮಾರ್ಶಜನ್ಯಂ ಜ್ಞಾನಂ ಅನುಮತಿಃ (3) ವ್ಯಾಪ್ತವಿಶಿಷ್ಟ ಪಕ್ಷ ಧರ್ಮತಾಜ್ಞಾನಂ ಪರಾಮರ್ಶಃ (4) ಸಾಹಚರ್ಯನಿಯಮೋವ್ಯಾಪ್ತಿಃ (5) ವ್ಯಾಪ್ಯಸ್ಯ ಪರ್ವತಾದಿವೃತ್ತಿಂಪಕ್ಷಧರ್ಮತಾ (6) ಸಂದಿಗ್ಧ ಸಾಧ್ಯವಾನ್ ಪಕ್ಷಂ ಇಷ್ಟನ್ನು ಮೊದಲು ತಿಳಿದುಕೊಂಡರೆ ಸಾಕು. ಊಹೆಯಿಂದ ಬರುವ ಜ್ಞಾನವೇ ಅನುಮತಿ. ಊಹೆ ಅನ್ನುವುದಕ್ಕೆ ಬದಲಾಗಿ ಇಲ್ಲಿ ಪರಾಮರ್ಶ ಎಂದು ಹೇಳಲಾಗಿದೆ. ವ್ಯಾಪ್ತಿ ಜ್ಞಾನದಿಂದ ಸಂಸ್ಕೃತ ಮನಸ್ಸುಳ್ಳವನ್ನು ಮುಂಧೆ ಯಾವುದಾದರೂ ಒಂದು ಬೆಟ್ಟದಲ್ಲಿ ಹೊಗೆಯನ್ನು ಮಾತ್ರ ನೋಡಿದರೆ ಅಂದರೆ ಅಲ್ಲಿ ಬೆಂಕಿ ಕಾಣದಿದ್ದರೆ ಆ ಬೆಟ್ಟದಲ್ಲಿ ಬೆಂಕಿ ಇದೆ ಎಂದು ತಿಳಿಯುತ್ತಾನೆ. ತಿಳಿಯುವುದಕ್ಕೆ ಮುಂಚೆ ಅವನ ಯೋಚನಾತರಂಗವು ಹೀಗೆ ಆಗುತ್ತದೆ.

(1) ಬೆಟ್ಟದಲ್ಲಿ ಹೊಗೆ ಕಂಡಿದೆ (2) ಹೊಗೆ ಇರುವ ಕಡೆಯಲ್ಲಿ ಬೆಂಕಿ ಇದ್ದೆ ಇರಬೇಕು. (3) ಹೊಗೆ ವ್ಯಾಪ್ಯವಸ್ತು. ಅದು ಈಗ ಬೆಟ್ಟದಲ್ಲಿ ಕಂಡಿದೆ. ಅದರೊಡನೆ ನಮಗೆ ಈಗ ಕಾಣದಿದ್ದರೂ ಬೆಂಕಿ ಇದ್ದೇ ಇರಬೇಕು. ಒಳಗೆ ಅಡಗಿರುವ ಬೆಂಕಿಗೆ ಹೊಗೆಯು ಸೂಚಕ ಅಂದರೆ ಹೊಗೆ ಲಿಂಗವಾಗಿದೆ. (ಲೀನಂ ಗಮಯತಿ ಇತಿ ಲಿಂಗಾಂ) ಆದ್ದರಿಂದ ಬೆಟ್ಟದಲ್ಲಿ ಬೆಂಕಿ ಇದೆ. ಬೆಟ್ಟದಲ್ಲಿ ನಮಗೆ ಕಾಣುವುದು ಹೊಗೆ ಮಾತ್ರ ಅದೇ ಪಕ್ಷಧರ್ಮತಾ. ಪಕ್ಷವೆಂದರೆ ಯಾವುದರಲ್ಲಿ ನಾವು ಊಹೆ ಮಾಡುವ ವಸ್ತುವು ಪ್ರತ್ಯಕ್ಷವಾಗಿರದೆ ನಿಶ್ಚಿಸಲ್ಪಡಬೇಕಾಗಿರುವುದೊ ಅದಕ್ಕೆ ಆ ಹೆಸರು. ಬೆಟ್ಟದಲ್ಲಿ ಬೆಂಕಿಯನ್ನು ನಿಶ್ಚಯಿಸಬೇಕು. ಈಗ ಸಂದೇಹವಿದೆ. ಬೆಂಕಿಯೊ ಸಾಧ್ಯ. ಧೂಮವೇ ಸಾಧನ. ಸಂದಿಗ್ಧ ಸಾಧ್ಯವಾನ್ ಪಕ್ಷಃ. ವಹ್ನಿ ವ್ಯಾಪ್ಯ ಧೂಮವಾನಂ ಅದು.

ಪರ್ವತಃ ಎನ್ನುವುದೇ ಪರಮಾರ್ಶೆ. ಯತ್ರಧೂಮಃ ತತ್ರವಹ್ನಿಃ ಎನ್ನುವ ಸಾಹಚರ್ಯ ನಿಯಮವೇ ವ್ಯಾಪ್ತಿ ಜ್ಞಾನ ವ್ಯಾಪ್ಯವು ಪಕ್ಷದಲ್ಲಿರುವುದೇ ಪಕ್ಷ ಧರ್ಮತಾ.

ಇಂತಹ ಅನುಮಾನವು 2 ವಿಧ. ತಾವೇ ಸಂಪಾದಿಸುವುದು ಸ್ವಾರ್ಥಾನುಮಾನ. ಅದನ್ನು ಇನ್ನೊಬ್ಬರಿಗೆ ತಿಳಿಸುವುದು ಪರಾರ್ಥನುಮಾನ. ಅದರ ಪ್ರಯೋಗವು ಹೀಗಿರುತ್ತದೆ.

ಸ್ವಾರ್ಥಾನುಮಾನ-(1) ಮತ್ತೆ ಮತ್ತೆ ನೋಡಿ ವ್ಯಾಪ್ತಿ ಜ್ಞಾನವನ್ನೂ ಹೊಂದುವುದು-ಅಡಿಗೆ ಮನೆಯಲ್ಲಿ ಧೂಮಾಗ್ನಿಗಳ ವ್ಯಾಪ್ತಿ ಜ್ಞಾನದಂತೆ. (2) ಪರ್ವತದಲ್ಲಿ ಧೂಮವನ್ನು ನೋಡಿ ಪಕ್ಷ ಧರ್ಮತಾ ಜ್ಞಾನವನ್ನು ಹೊಂದುವುದು. (3) ವ್ಯಾಪ್ತಿ ಜ್ಞಾನದ ಸಂಸ್ಕಾರ ಬಲದಿಂದ "ವಹ್ನಿ ವ್ಯಾಪ್ಯ ಧೂಮವಾನ್ ಅಯಂಪರ್ವತಃ ಎನ್ನುವುದೇ ಲಿಂಗಪರಾಮರ್ಶೆ. (4) ಕೊನೆಗೆ ಪರ್ವತೋ ವಹ್ನಿಯಾನಂ ಎನ್ನುವ ನಿಶ್ಚಶಜ್ಞಾನವೇ ಅನುಮತಿ. ಈ ಅನುಮತಿ ಜ್ಞಾನವನ್ನು ಇನ್ನೊಬ್ಬನಿಗೆ ಕೊಡಬೇಕಾದರೆ ಆಗ 5 ವಾಕ್ಯದಿಂದ ಜ್ಞಾನ ಬರುತ್ತದೆ. ಆ 5 ವಾಕ್ಯಗಳು ಹೀಗಿವೆ- ಪರ್ವತೋವಹ್ನಿಮಾನ್ (2) ಧೂಮವ ತ್ವಾತ್ 93) ಯೋಧೂಮಾವಾನ್ ಸಸವಹ್ನಿಮಾನ್ ಯಥಾ ಮಹಾನಸೆ (ಅಡಿಗೆ ಮನೆ) (4)ತಥಾಚ ಅಮಂ (5) ತಸ್ಮಾತ್‌ಕಥಾ

ಈ ಐದು ಅವಯವಗಳಿಗೆ ಯಥಾಕ್ರಮವಾಗಿ (1)ಪ್ರತಿಜ್ಞಾ (2) ಹೇತು (3) ಉದಾಹರಣ (4) ಉಪನಯ ಮತ್ತು (5) ನಿಗಮನ ಎಂದು ಹೆಸರು. ಪ್ರಶಸ್ತಪಾದರು ಇವುಗಳನ್ನು ಹೀಗೆ ಕರೆದಿರುವರು.

ಎರಡು ವಿಧವಾದ ಅನುಮತಿಗೂ ಲಿಂಗಪರಾಮರ್ಶವೇ ಕಾರಣ. ಅಂದರೆ ಇಂದ್ರಿಯಗಳೇ ಪ್ರತ್ಯಕ್ಷ ಪ್ರಮಾಣವಾಗಿರುವಂತೆ ಲಿಂಗ ಪರಾಮರ್ಶವೆ ಅನುಮಾನ. ಈ ಲಿಂಗವು ಮೂರು ವಿಧ. (1) ಅನ್ವಯವ್ಯತಿರೇಕ. ಕೇವಲ ವ್ಯತಿರೇಕಿ. ಕೇವಲಾನ್ವಯಿ. ಲಿಂಗ . ಅಂದರೆ ಹೇತು. ಅದು ಯಾವಾಗಲೂ ಸಾಧನ ವಾಕ್ಯದಲ್ಲಿ ಪಂಚಮೀ ವಿಭಕ್ತಿಯಿಂದ ತೋರಿಸಲ್ಪಡುತ್ತದೆ.

ಹೇಗೆಂದರೆ ಪರ್ವತೋವಹ್ನಿ ಮಾನ್, ಧೂಮವತ್ವಾತ್ " ಇದು ವ್ಯಾಪ್ಯವೂ ಆಗಿದೆ. ವ್ಯಾಪ್ತಿ ವ್ಯಾಕ್ಯದಲ್ಲಿ ಇದು ಮೊದಲು ಬರುತ್ತದೆ. ಹೇಗೆಂದರೆ" ಯತ್ರ ಧೂಮಃ ತತ್ರ ವಹ್ನಿಃ ಇದಕ್ಕೆ ಅನ್ವಯ ವ್ಯಾಪ್ತಿ ಎಂದು ಹೆಸರು. ಇದನ್ನು ಬೇರೆ ರೀತಿಯಲ್ಲಿ ವ್ಯಾಪ್ತಿಯಾಗಿಯೇ ಳಬೇಕಾದರೆ ಆಗ ಯತ್ರವಹ್ನಿನಾಸ್ತಿತತ್ರ ಧೋಮೋಪನಾಸ್ತಿ" ಎಂದು ಅಲ್ಲಗಳೆಯುವಂತೆ ಹೇಳಬೇಕು. ಆಗ ವ್ಯಾಪಕವನ್ನು ಮೊದಲು ನಿಷೇದ ಪದದೊಡನೆ ಅಂದರೆ 'ನ'ಕಾರ ದೊಡನೆಯೂ. ಅದಾದನಂತರ ಅನಿಷೇಧ ಪದದೊಡನೆ ವ್ಯಾಪ್ಯವನ್ನೂ ಹೇಳುವೆವು. ಹೀಗೆ ಎರವಿಧವಾಗಿ ಹೇಳಿದರೂ ತಪ್ಪಿಲ್ಲದಿದ್ದರೆ . ಅವೆರಡಕ್ಕೆ ಅನ್ವಯ ವ್ಯತಿರೇಕ ವ್ಯಾಪ್ತಿ ಎನ್ನುವೆವು. ಆಗ ಅಲ್ಲಿರುವ ಲಿಂಗವು ಅನ್ವವ ವ್ಯತಿರೇಕ ಲಿಂಗ. ಕೆಲವು ವೇಳೇ ವ್ಯಾಪ್ತಿಯು ಕೇವಲಾನ್ವವಯಾಗಿಯೂ ಕೆಲವು ವೇಳೆ ಕೇವಲ ವ್ಯತಿರೇಕಿಯಾಗಿಯೂ ಇರುತ್ತದೆ.

ಉದಾ - ಘಟಃ ಅಭಿಧೇಃ ಪ್ರಮೇಯತ್ವಾತ್ ಇಲ್ಲಿ "ಪ್ರಮೋಯತ್ವ" ಎನ್ನುವುದು ಲಿಂಗ. ಯೋಯೋ ಪ್ರಮೇಯಃ ಸ ಸಅಭಿಧೇಯಃ ಎನ್ನುವ ವ್ಯಾಪ್ತಿಯೂ ಸರಿಹೊಗುತ್ತದೆ. ಆದರೆ ಎಲ್ಲಾ ವಸ್ತುಗಳು ಪ್ರಮೇಯಗಳು ಅಭಿಧೇಯಗಳೂ ಆಗಿರುವುದರಿಂದ "ಯೋನಾಭಿಧೇಯಃ ಸನ ಪ್ರಮೇಯಃ" ಎನ್ನುವ ವ್ಯಾಪ್ತಿಯೋ ಅಸಂಗತವಾಗುತ್ತದೆ. ಅಂದರೆ ವ್ಯತಿರೇಕ ವ್ಯಾಪ್ತಿಯು ಸರಿಹೋಗುವುದಿಲ್ಲ. ಹಾಗೆಯೇ ಪೃಥವೀ ಇತರೇ ಭ್ಯೂಭೋಧ್ಯತೇ ಗಂಧವತ್ವಾತ್ ಎನ್ನುವಾಗ ಅಧ್ಯಯ ವ್ಯಾಪ್ತಿ ಜ್ಞಾನಕ್ಕೆ ಅವಕಾಶವಿಲ್ಲ. ಗಂಧವತೀ ಪೃಥವೀ ಎನ್ನುವುದೇ ಪೃಥವೀಯ ಲಕ್ಷಣ.

ಐ ತಿಳಿಯುವಂತಾದರೆ "ಪರ್ವತೋವಹ್ನಿಮಾನ್"ಎನ್ನುವಾಗ ಪರ್ವತವು ಪಕ್ಷ, ವಹ್ನಿಯು ಸಾಧ್ಯ. ಮತ್ತು ಧೂಮವು ಸಾಧನ ವಹ್ನಿ ಧೂಮವ್ಯಾಪ್ತಿ, ಜ್ಞಾನದಲ್ಲಿ, ವಹ್ನಿ ವ್ಯಾಪಕ. ಧೂಮವ್ಯಾಪ್ಯ ವಹ್ನಿ ವ್ಯಾಪ್ಯ ಧೂಮವಾನಂ ಪರ್ವತಃ ಎನ್ನುವ ಕಡೆ ಧೂಮವು ಪಕ್ಷ ಧರ್ಮವಾಗಿದೆ. ಯಾವುದರಲ್ಲಿ ಸಾಧ್ಯವು ನಿಶ್ಚಿತವಾಗಿಲ್ಲದೇ ಸಂದೇಹಾಸ್ಪದವಾಗಿರುವುದೋ ಅದೇ ಪಕ್ಷ ಅಂದರೆ ಸಂದಿಗ್ಧಸಾಧ್ಯವಾನ್ ಪಕ್ಷಃ ಎಲ್ಲಿ ಸಾಧ್ಯವು ಸಿದ್ಧ ವೋ ಅದು ಸಪಕ್ಷ (ನಿಶ್ರಿತಸಾಧ್ಯವಾನ್ ಸಪಕ್ಷ)ಯಾವುದರಲ್ಲಿ ಸಾಧ್ಯವು ಇಲ್ಲವೆನ್ನುವುದು ಸಿದ್ಧವೋ ಅದು ವಿಪಕ್ಷ (ನಿಶ್ಚಿತ ಸಾಧ್ಯಾಭಿವನಾನ್ ವಿಪಕ್ಷಃ)ಯಾವುದರಲ್ಲಿ ಸಾಧ್ಯವು ಇಲ್ಲವೆನ್ನುವುದು ಸಿದ್ಧವೋ ಅದು ವಿಪಕ್ಷ (ನಿಶ್ಚಿತ ಸಾಧ್ಯಾಭಿವವಾನ್ ವಿಪಕ್ಷಃ) ಪಕ್ಷಕ್ಕೆ ಪರ್ವತಃ ಸಪಕ್ಷಕ್ಕೆ ಮಹಾನಸ. ವಿಪಕ್ಷಕ್ಕ ನೀರಿರುವ ಕುಂಟೆ. ಇವು ಉದಾಹರಣೆಗಳು.

ಸಾಧನಕ್ಕೆ - " ಹೇತು" ಮತ್ತೊಂದು ಹೆಸರು. ಸಾಧ್ಯವನ್ನು ತಿಳಿಯಲು ಇದು ಕಾರಣವಾಗಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಒಂದು ವಸ್ತುವಿನ ಕಾರಣತ್ವವು ಸರಿಯಾದ ಸಾಧ್ಯಕ್ಕೆ ಸಂಗತವಾಗಿಲ್ಲದಿದ್ದರೆ. ಆ ಹೇತುವು ಆಭಾಸವಾಗಿರುತ್ತದೆ. ಅಂದರೆ ಹೇತುವಂತೆ ಕಾಣುತ್ತದೆ. ಈ ರೀತಿಯಾದ ಹೇತ್ವಾಭಾಸಗಳು ಐದು ಇವೆ. ಅವುಗಳ ಹೆಸರು ಯಥಾಕ್ರಮವಾಗಿ .(1) ಸವ್ಯಭಿಚಾರ (2) ವಿರುದ್ಧ (3) ಸತ್ ಪ್ರತಿಪಕ್ಷ (4) ಅಸಿದ್ಧ ಮತ್ತು (5)ಬಾಧಿತ-ಎಂದು.

(1) ಸವ್ಯಭಿಚಾರ-ಇದಕ್ಕೆ ಅನ್ಯಕಾಂತಿಕ ಎನ್ನುವುದು ಮತ್ತೊಂದು ಹೆಸರು. ಹೇತುವು ಸಾಧ್ಯವನ್ನು ಬಿಟ್ಟು ಇಲ್ಲವೇ ಇಲ್ಲ ಎಂದಾದರೆ ಆಗ ಈ ದೋಷಬರುತ್ತದೆ. ಇದು 3 ವಿಧ (1) ಸಾಧಾರಣ ಪರ್ವತೋವಹ್ನಿಮಾನ್ ಪ್ರಮೇಯತ್ವಾತ್ -ಎನ್ನುವಾಗ ಪ್ರಮೇಯತ್ವವು ಬೆಂಕಿ ಇಲ್ಲದೇ ಇರುವ ನೀರಿನ ಕುಂಟೆಯಲ್ಲೂ ಇದೆ. (11) ಅಸಾಧಾರಣ ಶಬ್ದೋ ನಿತ್ಯಃ ಶಬ್ದತ್ವಾತ್ " ಎನ್ನುವಾಗ ಶಬ್ದತ್ವವು ಶಬ್ದದಲ್ಲಿ ಮಾತ್ರವಿದೆ ಮತ್ತೆಲ್ಲೂ ಇಲ್ಲ (III) ಅನುಪಸಂಹಾರ -ಸರ್ವಯ ನಿತ್ಯನ ಪ್ರಮೇಯ ತ್ವಾತ್ ಎನ್ನುವಾಗ ಉದಾಹರಣೆಯೇ ಇಲ್ಲ. ಎಲ್ಲಾ ವಸ್ತುಗಳು ಪಕ್ಷವಾಗುತ್ತವೆ.

(2) ವಿರುದ್ಧ -ಸಾಧ್ಯಾಭಾವವ್ಯಾಪ್ಯೋ ಹೇತು "ಶಬ್ದ.; : ನಿತ್ಯಃ ಕೃತಕತ್ವಾತ್" ಎನ್ನುವಾಗ ಕೃತಕತ್ವವು ನಿತ್ಯತ್ವದೊಡನೆ ಇರುವುದೇ ಇಲ್ಲ ಅನಿತ್ಯ ವಸ್ತು ಅಂದರೆ ನಿತ್ಯವಲ್ಲದ್ದು ಸಾಧ್ಯಾಭಾವದೊಡನೆಯೇ ಇರುತ್ತದೆ.

(3) ಸತ್ಪ್ರತಿ ಪಕ್ಷ -"ಸಾಧ್ಯಾಭಾವಸಾಧಕಂ ಹೇತ್ವಂತರಂ ವಿದ್ಯತೇ ಶಬ್ದೋ ನಿತ್ಯಃ ಶ್ರಾವಣತ್ವಾತ್" ಎನ್ನುವಾಗ ನಿತ್ಯತ್ವ ಸಾಧ್ಯವಾಗಿದೆ. ಇದಕ್ಕೆ ಹೇತು "ಶ್ರಾವಣತ್ವ" ಆದರೆ ಸಾಧ್ಯಾಭಾವ ಅಂದರೆ ಶಬ್ದದಲ್ಲಿ ನಿತ್ಯತ್ವಕ್ಕೂ ಒಂದು ಹೇತು ಇದೆ. ಅದು ಕಾರ್ಯತ್ವ. ಶಬ್ದಃ ಅನಿತ್ಯಃ ಕಾರ್ಯತ್ವಾತ್ ಎನ್ನುವುದೂ ಸರಿಯಾಗಿದೆ. ಇದರಿಂದ ಶಬ್ದವು ನಿತ್ಯವೋ ಅನಿತ್ಯವೋ ಎಂದು ಹೇಳಲಾಗುವುದಿಲ್ಲ.

(4) ಅಸಿದ್ಧ -ಇದು ಮೂರು ವಿಧ (1) ಆಶ್ರಯಾಸಿದ್ಧ (11) ಸ್ವರೂಪಾಸಿದ್ಧ (iii) ವ್ಯಾಪ್ಯಾತ್ವಾಸಿದ್ಧ

(1) ಆಶ್ರಯಾಸಿದ್ಧ -ಗಗನಾರವಿಂದಂಸುರಭಿ. ಅರವಿಂದತ್ವಾತ್ ಎನ್ನುವಾಗ ಆಕಾಶ ಹೂವೇ ಇಲ್ಲದಿರುವಾಗ ಅದರ ಸುರಭಿತ್ವವನ್ನೂ ಸಾಧಿಸುವ ಹೇತುವೇ ಇರುವುದಿಲ್ಲ.

(ii) ಸ್ವರೂಪಾಸಿದ್ಧ -" ಶಬ್ದೋ ಗುಣಃ ಚಾಕ್ಷು ಷೇತ್ವಾತ್" ಎನ್ನುವಾಗ ಶಬ್ದಲ್ಲಿ ಚಾಕ್ಷು ಷತ್ವವೇ ಇಲ್ಲ.

(iii) ವ್ಯಾಪ್ಯತ್ವಾಸಿದ್ಧ -"ಸೋಪಾದಿಕೋ ಹೇತು" ಎನ್ನುವುದು ಇದರ ಲಕ್ಷಣ. "ಉಪಾಧಿ" ಎಂದರೆ "ಸಾಧ್ಯವ್ಯಾಪಕತ್ವೇ "ಸತಿ ಸಾಧನಾ ಲಕ್ಷಣ. ವ್ಯಾಪಕತ್ವಂ "ಪರ್ವತೋ" ಧೂಮವಾನ್ ವಹ್ನಿಮಾತ್ವಾತ್"ಎನ್ನುವಾಗ ಧೂಮಸಾಧ್ಯವಹ್ನಿ ಹೇತು. ಈ ಹೇತುವು ಸಾಧ್ಯವಾದ ಧೂಮಕ್ಕೆ ವ್ಯಾಪಕವಾಗಿದೆ. ಮತ್ತು ಅದರಿಂದ ಅದಕ್ಕೆ ಹೇತುವಾಗಲಾರದು. ಆದರೆ ಹಸಿಕಟ್ಟಿಗೆಯೊಡನಿದ್ದರೆ ಹೇತುವಾಗಬಹುದು. "ಆರ್ದ್ರೇಂ ಧನ ಸಂಯೋಗ"ವನ್ನು ಅಗ್ನಿಯನ್ನು ಒಟ್ಟಿಗೆ ಚಿಂತಿಸಿದರೆ ಆಗ ಎಲ್ಲಿ ವ್ಯಾಪಕವಾದ ಧೂಮವಿದೆಯೋ ಅಲ್ಲಿ ವ್ಯಾಪ್ಯವಾದದ್ದು ಬರೀ ಅಗ್ನಿಯಲ್ಲ. ಹಸೀ ಕಟ್ಟಿಗೆಯೊಡನಿರುವ ಅಗ್ನಿ ಎನ್ನುವುದು ಸರಿಯಾಗುತ್ತದೆ. ಅಂದರೆ ಯತ್ರ ಧೂಮಃ ತತ್ರ ಆರ್ದ್ರೇ ಧನ ಸಂಯೋಗಃ ಎನ್ನುವುದು ಸರಿಯಾಗುತ್ತದೆ. ಆರ್ದ್ರೇಂಧನ ಸಂಯೋಗವು. ಧೂಮವೆನ್ನುವ ಸಾಧ್ಯಕ್ಕೆ ವ್ಯಾಪಕವಾಗಿರುತ್ತದೆ. ಹಾಗೆಯೇ ಯಂತ್ರವಹ್ನಿಃ ತತ್ರ ಆರ್ದ್ರೇಂಧನ ಸಕ್ಕಾಯೋಗಃ ನಾಸ್ತಿಃ ಎಂದು ಕೆಂಡವನ್ನು ನೋಡುವುದರಿಂದ ತಿಳಿಯುತ್ತದೆ. ಇಲ್ಲಿ 'ಆರ್ದ್ರೇಂಧನ ' ಸಂಯೋಗವು ಸಾಧನವಾದ ಅಗ್ನಿಗೆ ಅವ್ಯಾಪಕ. ಇಂತಹ ಉಪಾಧಿಯೊಡನೆ ಕೂಡಿರುವ ಹೇತುವೇ ವ್ಯಾಪ್ಯತ್ವಾಸಿದ್ಧ ಹೇತ್ವಾಭಾಸ.

(5) ಬಾಧಿತ - ಸಾಧ್ಯಾಭಾವವು ಬೇರೆ ಪ್ರಮಾಣದಿಂದ ನಿಶ್ಚಿತವಾದರೆ ಆಗ ಈ ದೋಷ ಬರುತ್ತದೆ.

"ವಹ್ನಿಃ ಅನುಷ್ಣಃ ದ್ರವ್ಯತ್ವಾತ್ " ಎನ್ನುವಾಗ ಸಾಧ್ಯವಾದ ಅನುಷ್ಣತ್ವದ ಅಭಾವವಾದ ಉಷ್ಣತ್ವವನ್ನು ಸ್ಪರ್ಶದಿಂದ ಸಿದ್ಧಿಸಿಕೊಳ್ಳಬಹುದು. ಅನುಮಾನ ಖಂಡದಲ್ಲಿ ಹೇತುವಿಗಿರುವ ಪ್ರಾಶಸ್ತ್ಯವು ಮತ್ತಾವುದಕ್ಕೂ ಇಲ್ಲ. ಹೇತುವು ಸರಿಯಾಗಿದ್ದರೆ ಸಾಧ್ಯವು ನಿಶ್ಚಿತವಾಗುವುದು. ಅಂತಹ ನಿಶ್ಚಯಕ್ಕೆ

ಎಡೆಕೊಡದೆ ಇರುವ ಹೇತುವೇ ಹೇತ್ವಾಭಾಸ ಅಂದರೆ ದುಷ್ಟಹೇತು. ಮುಂದೆ ಈ ಶಾಸ್ತ್ರದಲ್ಲಿ ಪೂರ್ಣ ಪಾಂಡಿತ್ಯವನ್ನೂ ಹೊಂದುವುದಕ್ಕಾಗಿ ಪಕ್ಷತಾ ಎನ್ನುವ ಒಂದು ಪ್ರತ್ಯೇಕ ಗ್ರಂಥದೊಡನೆ ಸವ್ಯಭಿಚಾರ ಮತ್ತು ಸತ್ಪ್ರತಿ ಪಕ್ಷ ಎನ್ನುವುದನ್ನೂ ವಿಸ್ತಾರವಾಗಿ ತಿಳಿದುಕೊಳ್ಳಲು ಬೇರೆ ಗ್ರಂಥಗಳೇ ಇವೆ.

19. ಉಪಮಾನ ಪ್ರಮಾಣ - ತಾರ್ಕಿಕರು ಮಾತ್ರ ಈ ಪ್ರಮಾಣಕ್ಕೆ ಪ್ರಾಶಸ್ತ್ಯ ಕೊಟ್ಟಿರುವರು. ಅನೇಕರು ಇದನ್ನು ಬೇರೆ ಪ್ರಮಾಣವನ್ನಾಗಿಯೇ ಸ್ವೀಕರಿಸುವುದಿಲ್ಲ. ಇದನ್ನು ಬೇರೆ ಪ್ರಮಾಣವನ್ನಾಗಿ ಸ್ವೀಕರಿಸುವುದರಿಂದ ಆಯುರ್ವೇದಕ್ಕೆ ಬಹಳ ಪ್ರಯೋಜನವಾಗುತ್ತದೆಂದು ವಾತ್ಸ್ಯಾಯನರು ತಮ್ಮ I. 1. 6 ಮತ್ತು II. 1. 44, 48 ಸೂತ್ರ ವ್ಯಾಖ್ಯಾನ ಸಂಬಂಧದಲ್ಲಿ ಹೇಳಿರುವರು ಆಯುರ್ವೇದದಲ್ಲಿ ಅನೇಕ ಮೂಲಿಕೆಗಳ ಹೆಸರುಗಳು ಪಾರಿಭಾಷಿಕವಾಗಿ ಕಾಣುತ್ತವೆ. ಆ ಮೂಲಿಕೆಗಳನ್ನು ಗುರ್ತಿಸಬೇಕಾದರೆ ಕೆಲವು ಸಾದೃಶ್ಯ ಮತ್ತು ವರ್ಣನೆಯನ್ನು ಕೊಡಲಾಗಿದೆ. ಇವುಗಳ ಬಲದಿಂದ ಆಯಾ ಮೂಲಿಕೆಗಳನ್ನೂ ಕಂಡು ಹಿಡಿಯಲು ಸಾಧ್ಯವಾಗುತ್ತದೆ ಯಥಾರ್ಥಜ್ಞಾನವನ್ನು ಕೊಡುವುದು ಪ್ರಮಾಣವಾದರೆ ಸಂಜ್ಞಾ ಸಂಜ್ಞಿ ಸಂಬಂಧ ಜ್ಞಾನವನ್ನು ಕೊಡುವುದು ಪ್ರಮಾಣವು ಇಲ್ಲಿ ಸಾದೃಶ್ಯವಾಗಿದೆ. ಇದನ್ನು ಅನುಮಾನದಲ್ಲಿ ಸೇರಿಸಲಾಗುವುದಿಲ್ಲ ಎನ್ನುವುದೇ ತಾರ್ಕಿಕರ ವಾದ. ಆದರೆ ಮೀಮಾಂಸಕರು " ಗೋಸದೃಶಃ ಗವಯಃ (ಅಂದರೆ ಹಸುವಿನಂತಿರುವುದು ಕಾಡು ಹಸು) ಎನ್ನುವಾಗ ಗವಯಃ ಗೋಜಾತೀಯಃ ಅಸ್ಮಾತ್ ಗೋಸದೃಶತ್ವಾತ್" ಎನ್ನುವ ಅನುಮಾನ ವಾಕ್ಯದಿಂದಲೇ ಸಾಧಿಸಬಹುದು ಎನ್ನುತ್ತಾರೆ. ಅದಕ್ಕೆ ತಾರ್ಕಿಕರು ಒಪ್ಪುವುದಿಲ್ಲ. ಅಂತಹ ಅನುಮಾನ ವಾಕ್ಯವು ಕಲ್ಪಿತವೇ ವಿನಾ ತಾತ್ವಿಕವಲ್ಲ. ಗೋಸದೃಶಃ ಗವಯಃ ಎನ್ನುವುದನ್ನೂ ಕೇಳಿ ಕಾಡಿನಲ್ಲಿ ಗವಯವನ್ನು ನೋಡಿ ಗುರ್ತಿಸುವಂತಾದರೆ ಇದು ಸಂಜ್ಞಾ ಸಂಜ್ಞಿ ಸಂಬಂಧ ಜ್ಞಾನವೇ ವಿನಾ ಅನುಮಿತಿಯಲ್ಲ. ಕಣ್ಣಿಗೆ ಕಾಣದ ವಸ್ತುವನ್ನು ಅನುಮಾನದಿಂದ ಸಾಧಿಸುತ್ತೇವೆ. ಇಲ್ಲಿ ಗವಯವು ಕಣ್ಣಿಗೆ ಕಾಣುತ್ತದೆ. ಇದು ಪ್ರತ್ಯಕ್ಷ. ಆದರೆ ಯಾವ ಪ್ರಾಣಿ ಎಂದು ತಿಳಿಯದು. ಇದು ಗೋಜಾತಿಯದು ಎಂದು ತಿಳಿದರೆ ಆಗ ಪ್ರಮಾಣವು ಉಪಮಾನವಾಗುತ್ತದೆ.

20 ಶಬ್ದ ಪ್ರಮಾಣ - ವೈಶೇಷಿಕರಿಗೆ ಈ ಪ್ರಮಾಣವು ಅನುಮಾನದಲ್ಲಿ ಸೇರಿರುತ್ತದೆ. ನೈಯಾಯಿಕರಿಗೆ ಇದು ಬೇರೆ ಪ್ರಮಾಣ " ಆಪ್ತ ವಾಕ್ಯಂ ಶಬ್ದಃ. ಆಪ್ತಸ್ತು ಯಥಾರ್ಥವಕ್ತಾ" ಎಂದು ಹೇಳಿ ಅವರು ಹೀಗೆ ಶಬ್ದ ಪ್ರಮಾಣವನ್ನು ಬೇರೆಯಾಗಿ ತಿಳಿದಿರುವರು ಆಪ್ತನ ವಾಕ್ಯವು ಒಂದು ಯಥಾರ್ಥಜ್ಞಾನಕ್ಕೆ ಕಾರಣವಾಗುತ್ತವೆ. ಆ ವಾಕ್ಯದಲ್ಲಿರುವ ಶಬ್ದವು ಪರತಃ ಉತ್ಪದ್ಯತೇ ಅಂದರೆ ಹೊರಗೆ ಉತ್ಪನ್ನವಾಗುತ್ತದೆ. ಅನುಮಾನದಲ್ಲಿರುವಂತೆ ವ್ಯಾಪ್ತಿ ಜ್ಞಾನ ಮೊದಲಾದ ಮಾನಸಿಕ ವ್ಯಾಪಾರವಿರುವುದಿಲ್ಲ. ಆದ್ದರಿಂದ ಶಬ್ದವು ಬೇರೆ ಪ್ರಮಾಣ. ಆದರೆ ಈ ಶಬ್ದವು ಆಪ್ತನದಾಗಿರಬೇಕು. ವೇದವೂ ಕೂಡ ಸರ್ವ ಶಕ್ತನೂ ಸರ್ವಜ್ಞನೂ ಆದ ಪರಮಾತ್ಮನ ವಾಕ್ಯವಾಗಿರುವುದರಿಂದ ಅದು ನಮಗೆ ಪ್ರಮಾಣವಾಗಿದೆ. ಶಬ್ದಕ್ಕೂ ಅದರ ಅರ್ಥಕ್ಕೂ ನಿತ್ಯ ಸಂಬಂಧಿದೆ. ಆದ್ದರಿಂದ ವೇದ ಸ್ವತಃ ಪ್ರಮಾಣವಾಗಿದೆ ಎಂದು ಮೀಮಾಂಸಕರು ಹೇಳುವುದನ್ನು ಇವರು ಒಪ್ಪುವುದಿಲ್ಲ. ಇವರ ರೀತಿಯಲ್ಲಿ ಶಕ್ತಿ ಬೇರೆ ಪದಾರ್ಥವಲ್ಲ. ಅದು ಈಶ್ವರ ಸಂಕಲ್ಪ ಅಂದರೆ ಒಂದು ಜ್ಞಾನದ ವಿಶೇಷ.

ವಾಕ್ಯಾರ್ಥ ಜ್ಞಾನಕ್ಕೆ ಹೇತುವಾಗಿರುವುದು (1) ಆಕಾಂಕ್ಷಾ (2) ಯೋಗ್ಯತಾ ಮತ್ತು (3) ಸನ್ನಿಧಿ. ಆಕಾಂಕ್ಷೆ ಎಂದರೆ ಒಂದು ಪದವು ಮತ್ತೊಂದು ಪದದ ಸಹಾಯವಿಲ್ಲದೆ ಪೂರ್ಣ ಜ್ಞಾನವನ್ನು ಕೊಡದೇ ಇರುವುದು. ಮತ್ತೊಂದು ಪದದಿಂದ ವಿಹತಿ ಹೊಂದದೇ ಇರುವಂತಾದರೆ ಅದೇ ಯೋಗ್ಯತಾ (ಅರ್ಥಾಭಾಧೋಯೋಗ್ಯತಾ) ವಿಲಂಬವಿಲ್ಲದೆ ಪದಗಳ ಒಟ್ಟು ಉಚ್ಚಾರ ಣೆಯೇ ಸನ್ನಿದಿ. ಉದಾ. ಆಕಾಂಕ್ಷೆಗೆ ರಾಮ ಕೃಷ್ಣ ಗೋಪಾಲ ಎಂದರೆ ಏನೂ ಅರ್ಥವಾಗುವುದಿಲ್ಲ. ರಾಮನು ಕೃಷ್ಣನನ್ನು ಅನುಸರಿಸಿದನು ಎಂದರೆ ಅರ್ಥವಾಗುತ್ತದೆ. ವಹ್ನಿನಾಸಿಂಚಿತ್ ಬೆಂಕಿಯಿಂದ ಚಿಮುಕಿಸಬೇಕು. ಎಂದರೆ ಅದು ಸರಿಯಲ್ಲ. ಯೋಗ್ಯತೆಗೆ ಅದ್ಭಿಃ ಸಿಂಚೇತ್ ಎಂದರೆ ಸರಿಯಾಗಿದೆ. ವಹ್ನಿಯಿಂದ ಸಿಂಚನವು ಅದರ ಯೋಗ್ಯತೆಗೆ ಸೇರಿಲ್ಲ. ನೀರಿನಿಂದ ಸೇಚನವು ಯೋಗ್ಯವಾಗಿದೆ

ಸನ್ನಿಧಿಗೆ -ಹಸವನ್ನು ಮನೆಯಿಂದ ಹೊರಡಿಸು ಎಂದು ಒಟ್ಟಿಗೆ ಹೇಳಿದರೆ ಅರ್ಥವಾಗುತ್ತದೆ ವಿಳಂಬಿತ ಕಾಲದಲ್ಲಿ ಈ ಶಬ್ದಗಳನ್ನು ಉಚ್ಚರಿಸಿದರೆ ಏನೂ ಜ್ಞಾನ ಬರುವುದಿಲ್ಲ. ಇಲ್ಲಿಯವರಿಗೂ ಯಥಾರ್ಥ ಜ್ಞಾನ ಮತ್ತು ಅದರ 4 ಪ್ರಮಾಣಗಳು ಹೇಳಲ್ಪಟ್ಟಿವೆ. ಯಥಾರ್ಥ ಜ್ಞಾನವಲ್ಲದ್ದು ಅಯಥಾರ್ಥ. ಈ ಅನುಥಾರ್ಥನು ಭವವು ಮೂರು ವಿಧ. (1) ಸಂಶಯ (2 ವಿಪರ್ಯಯ ಮತ್ತು (3) ತರ್ಕ ಎಂದು. ಒಂದು ಧರ್ಮಿಯಲ್ಲಿ ವಿರುದ್ಧವಾದ ನಾನಾ ಧರ್ಮಗಳು ಕಂಡು ಬಂದರೆ ಆ ವಸ್ತುವಿನ ಸ್ವರೂಪವು ಚೆನ್ನಾಗಿ ಗೋಚರವಾಗುವುದಿಲ್ಲ. ಹಾಗೆ ಆಗುವುದಕ್ಕೆ "ಸಂಶಯ "ಎಂದು ಹೆಸರು. ಒಂದು ವಸ್ತುವನ್ನು ಮತ್ತೊಂದನ್ನಾಗಿ ತಿಳಿದರೆ ಅದೇ ವಿಪರ್ಯಯ. ಮೂರನೆಯದು ತರ್ಕ. ಸಂಶಯವೂ ಅಲ್ಲ. ವಿಪರ್ಯಯವೂ ಅಲ್ಲ ಯಥಾರ್ಥಾನುಭವವದ ಆಕಾರವನ್ನು ಹೊಂದಿಲ್ಲ. ಮಧ್ಯಸ್ಥಜ್ಞಾನ ಅದು. ಬೆಂಕಿ ಇಲ್ಲದಿದ್ದರೆ ಹೊಗೆಯೂ ಇರುವುದಿಲ್ಲ ಎನ್ನುವ ಜ್ಞಾನವೇ ತರ್ಕ (ವ್ಯಾಪ್ಯಾರೋಪೇಣ ವ್ಯಾಪಾಕಾರೋಪಃತರ್ಕಃ)

ಇಲ್ಲಿಗೆ ಅನುಭವವು ಮುಗಿಯಿತು. ಇನ್ನು ಸ್ಮೃತಿಯ ವಿಚಾರ. ಇದೂ ಯಥಾರ್ಥ ಮತ್ತು ಅನುಥಾರ್ಥವಾಗಿದೆ. ಅನುಭವವನ್ನೂ ಅನುಸರಿಸಿ ಇದು ಬರುವುದರಿಂದ ಇದು ಎರಡು ವಿಧ (ಇದರ ಲಕ್ಷಣ "ಅನುಭೂತ ವಿಷಯ ಅಸಂಪ್ರಮೋಷಃಸ್ಮೃತಿಃ)

ಇಷ್ಟು ಬುದ್ಧಿ ಎನ್ನುವ 16ನೇ ಗುಣವನ್ನು ಹೇಳುವಾಗ ಹೇಳಿದ್ದಾಯಿತು.

17ನೇ ಗುಣ-ಸುಖ-ಅನುಕೂಲ ವೇದನೀಯ. 18 ನೇ ಗುಣ ದುಃಖ ಪ್ರತಿಕೂಲವೇದನೀಯ. 19ನೇ ಗುಣ ಇಚ್ಛಾ ಕಾಮ ೨೦ನೇ ಗುಣದ್ವೇಷ ಕ್ರೋಧ. 21ನವ ಗುಣ ಪ್ರಯತ್ನ ಕೃತಿ. 22ನೇ ಧರ್ಮ ವಿಹಿತ ಕರ್ಮದಿಂದ ಹುಟ್ಟುವುದು. 23 ಅಧರ್ಮ- ನಿಷಿದ್ಧ ಕರ್ಮ ಜನ್ಯ. ಬುದ್ಧಿಯಿಂದ ಅಧರ್ಮ. ಪೂರ್ತಿ ಒಟ್ಟು 8 ಗುಣಗಳು ಆತ್ಮದ ವಿಶೇಷ ಗುಣಗಳು. ಬುದ್ಧಿ ಇಚ್ಛಾ ಮತ್ತು ಪ್ರಯತ್ನ ಈ ಮೂರು ಈಶ್ವರನಲ್ಲಿ ನಿತ್ಯ ಜೀವನದಲ್ಲಿ ಅನಿತ್ಯಗಳಾಗಿವೆದ. 24. ಸಂಸ್ಕಾರ ಇದು ಮೂರು ವಿಧ. ವೇಗ. ಭಾವನಾ ಮತ್ತು ಸ್ಥಿತಿ ಸ್ಥಾಪಕ ಎಂದು. ವೇಗವು ಪೃಥವೀ. ಅಪ್ಪು ತೇಜಸ್ಸು ಮತ್ತು ವಾಯು ಇವುಗಳಿಗಿವೆ. ಭಾವನೆಯು ಆತ್ಮದಲ್ಲಿ ಮಾತ್ರವಿದೆ. ಅನುಭವ ಜನ್ಯವಾಗಿ ಸ್ಮೃತಿಯು ಹೇತುವಾಗಿದೆ. ಬೇರೆ

ಅವಸ್ಥೆಯನ್ನು ಹೊಂದಿಸಲ್ಪಟ್ಟು ಒಂದು ಪದಾರ್ಥವು ತನ್ನ ಸ್ವಾಭಾವಿಕ ಪೂರ್ವ ಸ್ಥಿತಿಯನ್ನು ಹೊಂದುವಂತಿದ್ದರೆ ಅದಕ್ಕೆ ಸ್ಥಿತ ಸ್ಥಾಪಕತ್ವ ಎಂದು ಹೆಸರು.

ಇಲ್ಲಿಗೆ ಗುಣ ವಿಮರ್ಶೆಯು ಮುಗಿಯಿತು.

ಕರ್ಮ ಚಲನಾತ್ಮಕರಾದದ್ದು ಕರ್ಮ. ಇದು 5 ವಿಧ

1) ಉತ್ಕ್ಷೇಪಣ -ಊರ್ಧ್ವ ದೇಶ ಸಂಯೋಗಕ್ಕೆ ಕಾರಣವಾಗಿವೆ. 2) ಅವಕ್ಷೇಪಣ- ಅಧೋದೇಶ ಸಂಯೋಗಕ್ಕೆ ಕಾರಣವಾಗಿರುವುದು. (3) ಆಕುಂಚನ ಶರೀರದ ಅವಯವಗಳು ಹತ್ತಿರ ಸೇರುವಿಕೆಗೆ ಹೇತು 4) ಪ್ರಸಾರಣ -ಅವಯವಗಳು ವಿಸ್ತಾರವಾಗಿ ಪ್ರಸರುವಿಕೆಗೆ ಹೇತು. 5) ಇವು ನಾಲ್ಕಲ್ಲದ್ದು -ಗಮನ.

ಇಲ್ಲಿಗೆ ಪದಾರ್ಥಗಳ ವಿಮರ್ಶೆಯು ಮುಗಿಯಿತು



ಕಳೆದ ಕೆಲವು ವರ್ಷಗಳಿಂದಲೂ ಸಂಸ್ಕೃತ ವಿದ್ವನ್ಮಧ್ಯಮ ಪರೀಕ್ಷೆಯಲ್ಲಿ ಪರೀಕ್ಷಕನಾಗಿ ನೋಡಿರುವಲ್ಲಿ ಕೇವಲ ಸಂಸ್ಕೃತವನ್ನೇ ಓದುತ್ತಿರುವ ವಿದ್ಯಾರ್ಥಿಗಳಲ್ಲಿ ಈ ಕಾಲದಲ್ಲೂ ಚಾರಿತ್ರಕ ದೃಷ್ಟಿಯು ಬೆಳೆಯದೆ ಸಂಸ್ಕೃತ ಸಾಹಿತ್ಯ ವಿಷಯದಲ್ಲಿ ಪ್ರಾಚೀನದಲ್ಲಿದ್ದು ನಾನು ವಿದ್ಯಾರ್ಥಿದೆಸೆಯಲ್ಲಿ ಕೇಳಿದ್ದ ಭಾವನೆಗಳ ಹೊರತಾಗಿ ಹೆಚ್ಚಾಗಿ ವಿಕಾಸವನ್ನು ಹೊಂದದೆ ಇರುವುದು ಕಂಡು ಬಂದಿತು. ಇದು ಅವರ ಮೌಢ್ಯವೆನ್ನುವುದಕ್ಕಿಂತಲೂ ಅವರಿಗೆ ತಿಳುವಳಿಕೆ ಕೊಡುವ ಗ್ರಂಥಗಳಿಲ್ಲದಿರುವುದೇ ಕಾರಣವೆಂದು ನಿಸ್ಸಂಶಯವಾಗಿ ಹೇಳಬಹುದು. ಇಂಗ್ಲೀಷು ಕಾಲೇಜುಗಳಲ್ಲಿ ಸಂಸ್ಕೃತವನ್ನು ಓದುವ ವಿದ್ಯಾರ್ಥಿಗಳಿಗೆ ಇಂಗ್ಲೀಷು ಭಾಷಾಜ್ಞಾನವಿದ್ದರೂ ಈಗಿರುವ ಇಂಗ್ಲೀಷ್ ಗ್ರಂಥಗಳಿಂದ ವಿಷಯ ಸಂಗ್ರಹಣಮಾಡಿ ಒಂದು ನಿರ್ದಿಷ್ಟ ಆಕಾರದಲ್ಲಿ ಜ್ಞಾನವನ್ನು ಸಂಪಾದಿಸುವುದು ಕಠಿಣವಾಗಿದೆ ಎಂದು ಕಂಡುಬಂದು ಡಾ. ಕುಮುದರಂಜನ್ ಎಂ.ಎ. ಅವರು 1958ರಲ್ಲಿ ಸಂಗ್ರಹವನ್ನು 'ಎ ಷಾರ್ಟ್ ಹಿಸ್‌ಟೊರಿ ಆಫ್ ಸಾನ್ಸ್‌ಕ್ರಿಟ್ ಲಿಟರೇಚರ್' ಎನ್ನುವ ಗ್ರಂಥದಲ್ಲಿ ಕೊಟ್ಟಿರುವರು. ಇದೂ ಕೂಡ ಪರೀಕ್ಷಾ ದೃಷ್ಟಿಯಿಂದ ಉಪಯುಕ್ತವಾಗಿ ಕಂಡು ಬಂದಿಲ್ಲ. ಆದ್ದರಿಂದ ಇದೇ ಪಾಠವನ್ನು ಹೇಳುತ್ತಿರುವ ನನಗೆ ಮಿತ್ರರಿಂದ ಸಲಹೆ ಬಂದುದರಿಂದ ವಿದ್ಯಾರ್ಥಿಗಳ ದೃಷ್ಟಿಯಿಂದಲೂ, ಸಂಸ್ಕೃತಾಭಿಮಾನಿಗಳಾಗಿ ಸಂಸ್ಕೃತ ಸಾಹಿತ್ಯದ ಇತಿಹಾಸವನ್ನು ತಿಳಿದುಕೊಳ್ಳಲು ಅಪೇಕ್ಷಿಸುವವರ ಪ್ರಯೋಜನ ದೃಷ್ಟಿಯಿಂದಲೂ, ಈ ಗ್ರಂಥವನ್ನು ಕೊಟ್ಟಿರುತ್ತೇನೆ.

ಇದು ಕೇವಲ ವಿದ್ವನ್ಮಧ್ಯಮ ಮತ್ತು ಅಲಂಕಾರ ಉತ್ತಮ ವಿದ್ಯಾರ್ಥಿಗಳಿಗೆ ಸೀಮಿತವಾಗಿಲ್ಲ. ಇತರರಿಗೂ ಪ್ರಯೋಜನವುಂಟು. ವ್ಯಾಕರಣ ಮತ್ತು ತರ್ಕ ಸಾಹಿತ್ಯಗಳ ವಿಮರ್ಶೆಯು ಎರಡನೇ ಮತ್ತು ಮೂರನೇ ಭಾಗದಲ್ಲಿ ಕೊಡಲಾಗಿದೆ.

ಇಲ್ಲಿ ಕೇವಲ ಸಂಸ್ಕೃತ ವಿದ್ಯಾರ್ಥಿಗಳಿಗೂ ಮತ್ತು ವಿದ್ವಾಂಸರಿಗೂ ಒಂದು ಮಾತು ಅವಶ್ಯವೆಂದು ಕಾಣುತ್ತದೆ. ಪ್ರಾಚೀನ ವಿದ್ಯಾಭ್ಯಾಸ ಕ್ರಮದಲ್ಲಿ ಆಳವಾದ ಜ್ಞಾನವನ್ನು ಸಂಪಾದಿಸಬಹುದು. ಆದರೆ ಅದಕ್ಕೆ ವೈಶಾಲ್ಯವು ಬಾರದಿದ್ದರೆ, ಕೆಲವು ಮೂಢಭಾವನೆಗಳು ಸಂಕುಚಿತ ಮನೋಧರ್ಮವು ಅದರೊಡನೆ ಬರುವುದು ಅನಿವಾರ್ಯವಾಗಿದೆ. ಇದನ್ನು ಅನೇಕ ಪಂಡಿತರು ಮನಗಂಡಂತೆ ತೋರುವುದಿಲ್ಲ. ನಮ್ಮಲ್ಲಿ ಚಾರಿತ್ರಿಕ ದೃಷ್ಟಿಯು ಬೆಳೆಯದಿರಲು ಅನೇಕ ಸತ್ಕಾರಣಗಳಿದ್ದರೂ, ಈಗ ಅಂತಹ ಜ್ಞಾನ ಸಂಪಾದನೆಗೆ ಅವಕಾಶವು ಸುಲಭವಾಗಿ ಸಿಗುವುದರಿಂದ ಅದರಿಂದ ನಮ್ಮ ಆಳವಾದ ಜ್ಞಾನವನ್ನು ಸರ್ವವ್ಯಾಪಿಯಾಗಿ ಮಾಡಿಕೊಳ್ಳಲು ಅವಕಾಶವಿದೆ. ನಮ್ಮ ಸಂಸ್ಕೃತಿಯು ಅತಿ ಪ್ರಾಚೀನ ಕಾಲದಿಂದಲೂ ಹೇಗೆ ಬೆಳೆದು ಬಂದಿದೆ ಎಂದು ತಿಳಿಯಲು ನಮ್ಮ ದೇಶದ ಚರಿತ್ರೆಯನ್ನು ಸ್ಥೂಲವಾಗಿಯಾದರೂ ತಿಳಿಯಲೇ ಬೇಕು.

(ಪ್ರಸ್ತಾವನೆಯಿಂದ)

---

**ಬೆಲೆ: ರೂ. 60–00**